# ಕರ್ನಾಟಕದ ಚರಿತ್ರೆ ಮತ್ತು ಸ್ತ್ರೀವಾದಿ ನೆಲೆಗಳು

(ಹಂಪಿ ಕನ್ನಡ ವಿಶ್ವವಿದ್ಯಾಲಯಕ್ಕೆ ಪಿಎಚ್.ಡಿ. ಪದವಿಗಾಗಿ ಸಲ್ಲಿಸಿದ ಪ್ರಬಂಧ)

ಅಭ್ಯರ್ಥಿ

**ಟಿ.ಕೆ. ವಾಣಿಶ್ರೀ**

ಬಾಹ್ಯ ಸಂಶೋಧನ ವಿದ್ಯಾರ್ಥಿನಿ

ಚರಿತ್ರೆ ವಿಭಾಗ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ ೫೮೩ ೨೭೬

ಮಾರ್ಗದರ್ಶಕರು

**ಡಾ. ಸಿ.ಆರ್.ಗೋವಿಂದರಾಜು**

ಪ್ರವಾಚಕರು, ಚರಿತ್ರೆ ವಿಭಾಗ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ ೫೮೩ ೨೭೬





ಸಮಾಜ ವಿಜ್ಞಾನಗಳ ನಿಕಾಯ

**ಚರಿತ್ರೆ ವಿಭಾಗ**

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ ೫೮೩ ೨೭೬

೨೦೦೩

# ಕರ್ನಾಟಕದ ಚರಿತ್ರೆ ಮತ್ತು ಸ್ತ್ರೀವಾದಿ ನೆಲೆಗಳು

(ಹಂಪಿ ಕನ್ನಡ ವಿಶ್ವವಿದ್ಯಾಲಯಕ್ಕೆ ಪಿಎಚ್.ಡಿ. ಪದವಿಗಾಗಿ ಸಲ್ಲಿಸಿದ ಪ್ರಬಂಧ)


ಅಭ್ಯರ್ಥಿ

**ಟಿ.ಕೆ. ವಾಣಿಶ್ರೀ**

ಬಾಹ್ಯ ಸಂಶೋಧನ ವಿದ್ಯಾರ್ಥಿನಿ

ಚರಿತ್ರೆ ವಿಭಾಗ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ ೫೮೩ ೨೭೬

ಮಾರ್ಗದರ್ಶಕರು

**ಡಾ. ಸಿ.ಆರ್.ಗೋವಿಂದರಾಜು**

ಪ್ರವಾಚಕರು, ಚರಿತ್ರೆ ವಿಭಾಗ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ ೫೮೩ ೨೭೬






ಸಮಾಜ ವಿಜ್ಞಾನಗಳ ನಿಕಾಯ

**ಚರಿತ್ರೆ ವಿಭಾಗ**

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ ೫೮೩ ೨೭೬

೨೦೦೩




# ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ ೫೮೩ ೨೭೬

**ಡಾ. ಸಿ.ಆರ್.ಗೋವಿಂದರಾಜು**

ಪ್ರವಾಚಕರು, ಚರಿತ್ರೆ ವಿಭಾಗ


## ದೃಢೀಕರಣ ಪತ್ರ

ಟಿ.ಕೆ. ವಾಣಿಶ್ರೀ ಇವರು ಕರ್ನಾಟಕದ ಚರಿತ್ರೆ ಮತ್ತು ಸ್ತ್ರೀವಾದಿ ನೆಲೆಗಳು ಎಂಬ ಪ್ರಬಂಧವನ್ನು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದಾರೆ. ಹಂಪಿಯ ಕನ್ನಡ ವಿಶ್ವವಿದ್ಯಾಲಯದ ಚರಿತ್ರೆ ವಿಭಾಗಕ್ಕೆ ಪಿಎಚ್.ಡಿ. ಪದವಿಗಾಗಿ ಸಲ್ಲಿಸುತ್ತಿರುವ ಪ್ರಸ್ತುತ ಪ್ರಬಂಧವನ್ನು ಈ ಮೊದಲು ಇವರು ಯಾವುದೇ ಪದವಿಗಳಿಗಾಗಿ ಸಲ್ಲಿಸಿರುವುದಿಲ್ಲವೆಂದು ದೃಢೀಕರಿಸುತ್ತೇನೆ.

ದಿನಾಂಕ : ೩೦ ಜೂನ್ ೨೦೦೩
ಸ್ಥಳ : ವಿದ್ಯಾರಣ್ಯ

(ಡಾ. ಸಿ.ಆರ್.ಗೋವಿಂದರಾಜು)
ಮಾರ್ಗದರ್ಶಕರು

# ಪ್ರಮಾಣ ಪತ್ರ

ಕರ್ನಾಟಕದ ಚರಿತ್ರೆ ಮತ್ತು ಸ್ತ್ರೀವಾದಿ ನೆಲೆಗಳು ಎಂಬ ಪ್ರಬಂಧವನ್ನು ಡಾ. ಸಿ.ಆರ್. ಗೋವಿಂದರಾಜು ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದೇನೆ. ಹಂಪಿಯ ಕನ್ನಡ ವಿಶ್ವವಿದ್ಯಾಲಯದ ಚರಿತ್ರೆ ವಿಭಾಗಕ್ಕೆ ಪಿಎಚ್.ಡಿ. ಪದವಿಗಾಗಿ ಸಲ್ಲಿಸುತ್ತಿರುವ ಪ್ರಸ್ತುತ ಪ್ರಬಂಧವನ್ನು ಈ ಮೊದಲು ನಾನು ಯಾವುದೇ ಪದವಿಗಳಿಗಾಗಿ ಸಲ್ಲಿಸಿರುವುದಿಲ್ಲವೆಂದು ಪ್ರಮಾಣೀಕರಿಸುತ್ತೇನೆ.

ಟಿ.ಕೆ. ವಾಣಿಶ್ರೀ

ದಿನಾಂಕ : ೩೦ ಜೂನ್ ೨೦೦೩ (ಟಿ.ಕೆ. ವಾಣಿಶ್ರೀ)

ಸ್ಥಳ : ವಿದ್ಯಾರಣ್ಯ ಅಭ್ಯರ್ಥಿ

# ಕೃತಜ್ಞತೆಗಳು

**ಕರ್ನಾಟಕ ಚರಿತ್ರೆ ಮತ್ತು ಸ್ತ್ರೀವಾದಿ ನೆಲೆಗಳು** ಎಂಬ ಪಿಎಚ್.ಡಿ. ಅಧ್ಯಯನದ ವಸ್ತುವಿಷಯವು ಚರಿತ್ರೆ ಮತ್ತು ಸ್ತ್ರೀವಾದಿ ಅಧ್ಯಯನದ ಎರಡು ಜ್ಞಾನಶಾಖೆಗಳಿಗೆ ಸಂಬಂಧಪಟ್ಟದ್ದು. ಈ ಅಂತರಶಿಸ್ತೀಯ ಅಧ್ಯಯನಕ್ಕೆ ಅನೇಕ ವಿದ್ವಾಂಸರು ಸಲಹೆ, ಸೂಚನೆಗಳನ್ನು ನೀಡಿ ಸಹಕರಿಸಿದ್ದಾರೆ. ಅವರೆಲ್ಲರನ್ನು ಇಲ್ಲಿ ಹೆಸರಿಸಲು ಸಾಧ್ಯವಾಗುತ್ತಿಲ್ಲ. ಆದರೆ ಅವರ ಸೂಕ್ತವಾದ ಸೂಚನೆಗಳನ್ನು ಈ ಅಧ್ಯಯನದಲ್ಲಿ ಬಳಸಿಕೊಳ್ಳಲಾಗಿದೆ. ಪಿಎಚ್.ಡಿ. ಅಧ್ಯಯನಕ್ಕೆ ಅವಕಾಶ ಮಾಡಿಕೊಟ್ಟ ಕನ್ನಡ ವಿಶ್ವವಿದ್ಯಾಲಯದ ಹಿಂದಿನ ಕುಲಪತಿಗಳು, ಕುಲಸಚಿವರು ಹಾಗೂ ಅಧ್ಯಯನಾಂಗದ ನಿರ್ದೇಶಕರನ್ನು ಮೊದಲಿಗೆ ಕೃತಜ್ಞತೆಗಳೊಂದಿಗೆ ಸ್ಮರಿಸುತ್ತೇನೆ. ಅಂತೆಯೇ ಹಾಲಿ ಕುಲಪತಿಗಳಾದ ಪ್ರೊ. ಎಚ್.ಜೆ.ಲಕ್ಕಪ್ಪಗೌಡ, ಕುಲಸಚಿವರಾದ ಡಾ. ಕೆ.ವಿ.ನಾರಾಯಣ ಹಾಗೂ ಅಧ್ಯಯನಾಂಗದ ನಿರ್ದೇಶಕರಾದ ಡಾ. ಕರೀಗೌಡ ಬೀಚನಹಳ್ಳಿ ಅವರ ಸಹಕಾರ ಪ್ರೋತ್ಸಾಹಗಳನ್ನು ವಂದನೆಗಳೊಂದಿಗೆ ಸ್ಮರಿಸುತ್ತೇನೆ.

ಹೊಸ ಅಧ್ಯಯನದ ವಸ್ತು ವಿಷಯವನ್ನು ನೀಡಿ ಈ ಅಧ್ಯಯನಕ್ಕೆ ಎಲ್ಲ ರೀತಿಯಿಂದಲೂ ಕೊನೆಯವರೆಗೆ ಸಹಕರಿಸಿ ಚರ್ಚಿಸಿದ ಮಾರ್ಗದರ್ಶಕರಾದ ಡಾ. ಸಿ.ಆರ್.ಗೋವಿಂದರಾಜು ಅವರಿಗೂ ವಂದನೆಗಳು. ಚರಿತ್ರೆ ವಿಭಾಗದ ಎಲ್ಲ ಅಧ್ಯಾಪಕ ವರ್ಗದವರಿಗೂ ಹಾಗೂ ವಿಶ್ವವಿದ್ಯಾಲಯದ ಅಧ್ಯಾಪಕ ವೃಂದಕ್ಕೂ ನಾನು ಕೃತಜ್ಞಳಾಗಿದ್ದೇನೆ. ಹಿರಿಯ ಪ್ರಾಧ್ಯಾಪಕರಾದ ಪ್ರೊ. ಲಕ್ಷ್ಮಣ್ ತೆಲಗಾವಿ ಹಾಗೂ ವಿಭಾಗದ ಮುಖ್ಯಸ್ಥರಾದ ಡಾ. ಟಿ.ಪಿ.ವಿಜಯ ಅವರ ಸಹಕಾರ, ಪ್ರೋತ್ಸಾಹಗಳನ್ನು ಹೃತ್ಪೂರ್ವಕ ನೆನೆಯುತ್ತೇನೆ.

ನಾಡಿನ ಎಲ್ಲ ವಿಶ್ವವಿದ್ಯಾಲಯಗಳಲ್ಲಿನ ಪರಿಚಿತ ಅಧ್ಯಾಪಕರೊಂದಿಗೆ ಚರ್ಚಿಸಿ ಸಲಹೆ ಸೂಚನೆಗಳನ್ನು ಪಡೆದಿರುತ್ತೇನೆ. ಅಂತೆಯೇ ಎಲ್ಲ ವಿ.ವಿ. ಗ್ರಂಥಾಲಯಗಳ, ಪತ್ರಾಗಾರ ಇಲಾಖೆಯ ಸಿಬ್ಬಂದಿವರ್ಗದವರು ನೆರವು ನೀಡಿದ್ದಾರೆ. ಇವರೆಲ್ಲರಿಗೆ ನನ್ನ ಕೃತಜ್ಞತೆಗಳು. ಅಧ್ಯಯನಕ್ಕೆ ಎಲ್ಲ ರೀತಿಯಿಂದ ಸಹಕರಿಸಿದ ಡಾ. ಎಚ್.ಎಸ್. ಶ್ರೀಮತಿ, ಡಾ. ಶೈಲಜಾ ಹಿರೇಮಠ, ಡಾ. ಎಂ. ಉಷಾ, ಡಾ. ಕೆ.ಜಿ. ಭಟ್‌ಸೂರಿ, ಡಾ. ಕೆ.ಎಲ್.ರಾಜಶೇಖರ್, ಡಾ. ಎಸ್.ವೈ.ಸೋಮಶೇಖರ್, ಶ್ರೀ ಜಾಜಿ ದೇವೇಂದ್ರಪ್ಪ ಮೊದಲಾದವರಿಗೆ ನನ್ನ ಧನ್ಯವಾದಗಳು.

ನನ್ನ ತಂದೆ, ತಾಯಿ, ತಮ್ಮ ಹಾಗೂ ತಂಗಿಯರ ಸಹಕಾರ ಪ್ರೋತ್ಸಾಹಗಳನ್ನು ಈ ಸಂದರ್ಭದಲ್ಲಿ ನೆನೆಯುತ್ತೇನೆ. ಡಿ.ಟಿ.ಪಿ. ಮಾಡಿಕೊಟ್ಟ ರಚನಾ ಗ್ರಾಫಿಕ್ಸ್, ಹೊಸಪೇಟೆ ಇವರಿಗೆ ಹಾಗೂ ಪ್ರತ್ಯಕ್ಷ ಹಾಗೂ ಪರೋಕ್ಷವಾಗಿ ಸಹಕರಿಸಿದ ಎಲ್ಲರಿಗೂ ಕೃತಜ್ಞತೆಗಳು.

**ಟಿ.ಕೆ. ವಾಣಿಶ್ರೀ**

# ಪರಿವಿಡಿ

ಅಧ್ಯಾಯ - ೧

# ಅಧ್ಯಯನದ ಜರೂರು, ಸ್ವರೂಪ, ವಿಧಿ-ವಿಧಾನಗಳು, ಮಿತಿಗಳು

೧. ಜರೂರು

೨. ಸ್ವರೂಪ

೩. ವಿಧಿ-ವಿಧಾನ

೪. ಮಿತಿಗಳು

ಅಧ್ಯಾಯ - ೧

# ಅಧ್ಯಯನದ ಜರೂರು, ಸ್ವರೂಪ, ವಿಧಿ-ವಿಧಾನಗಳು, ಮಿತಿಗಳು

ಇದೊಂದು ಚರಿತ್ರೆ ಹಾಗೂ ಸ್ತ್ರೀವಾದಿ ಅಧ್ಯಯನದ ಜ್ಞಾನಶಿಸ್ತುಗಳನ್ನು ಒಳಗೊಂಡ ಅಂತರಶಿಸ್ತೀಯ ಅಧ್ಯಯನ. ಇಲ್ಲಿಯವರೆಗೂ ರಚಿತವಾಗಿರುವ ಚರಿತ್ರೆಗಳಲ್ಲಿ ಪುರುಷನೇ ಕೇಂದ್ರಬಿಂದು. ಯಾವುದೇ ಬಗೆಯ ಚರಿತ್ರೆಗಳಲ್ಲಿಯೂ ಸ್ತ್ರೀ ನಗಣ್ಯಳು. ಈ ಮಾತು ಜಗತ್ತಿನ ಯಾವುದೇ ಪ್ರದೇಶದ ಚರಿತ್ರೆಗೂ ಅನ್ವಯವಾಗುವಂಥದ್ದು. ಹೀಗಾಗಿ ಇದುವರೆಗೂ ರಚನೆ ಆಗಿರುವ ಕನ್ನಡ ಅಥವಾ ಕರ್ನಾಟಕ ಸಂದರ್ಭದ ಚರಿತ್ರೆಗೂ ಈ ಮಾತು ಒಪ್ಪುತ್ತದೆ. ವಿಭಿನ್ನ ಕಾಲಘಟ್ಟದ ಚರಿತ್ರೆಯ ಪ್ರಕ್ರಿಯೆಗಳಲ್ಲಿ ಮಹಿಳೆಯ ಪಾಲು ಸಹ ಪುರುಷನಷ್ಟೇ ಸಮಾನವಾದುದು. ಆದರೆ ಈ ಬಗೆಯ ನೋಟದ ಚರಿತ್ರೆಗಳು ಇಲ್ಲ ಎನ್ನುವಷ್ಟು ಕಡಿಮೆ. ಇಂಥ ಕೊರತೆಗಳನ್ನು ನೀಗಿಸುವ ಮೊದಲ ಹಾಗೂ ಕಿರು ಪ್ರಯತ್ನದ ಆಶಯವೇ ಪ್ರಸ್ತುತ ಅಧ್ಯಯನದ್ದು. ಅಂದರೆ ಕರ್ನಾಟಕದ ಚರಿತ್ರೆಯಲ್ಲಿನ ಮಹಿಳಾ ಸ್ಥಾನಮಾನಗಳ, ಅಭಿವ್ಯಕ್ತಿ-ಅನುಭೂತಿಗಳ ಪ್ರಕ್ರಿಯೆಗಳನ್ನು ಗುರುತಿಸುವುದು ಪ್ರಧಾನವಾಗಿರುತ್ತದೆ. ಅಷ್ಟೇ ಅಲ್ಲದೆ ಸ್ತ್ರೀವಾದಿ ಅಧ್ಯಯನದ ಸಾಧ್ಯತೆಗಳನ್ನು ಸಹ ಪರಿಶೀಲಿಸುವುದು ನಮ್ಮ ಸಾಂಸ್ಕೃತಿಕ ಸನ್ನಿವೇಶದ ಅಗತ್ಯಗಳಲ್ಲಿ ಜರೂರಿನದಾಗಿರುತ್ತದೆ.

## ೧. ಅಧ್ಯಯನದ ಜರೂರು

ಸ್ತ್ರೀವಾದಿ ಚಿಂತನೆಯು ಮಹಿಳೆಯನ್ನು ಕುಟುಂಬದಿಂದ ಹಾಗೂ ಪುರುಷ ಪ್ರಧಾನ್ಯತೆಯ ಹಿಡಿತದಿಂದ ಮುಕ್ತ ಮಾಡುವ ಸ್ತ್ರೀ ಸ್ವಾತಂತ್ರ್ಯ ಚಳವಳಿಯ

ಭಾಗವಾಗಿಯೇ ರೂಪು ತಳೆದದ್ದು. ಮೇಲಿನ ಶೀರ್ಷಿಕೆಯೆ ಹೇಳುವಂತೆ ಪ್ರಸ್ತುತ ಅಧ್ಯಯನವು ಇಪ್ಪತ್ತನೆಯ ಶತಮಾನದ ಪರಿಕಲ್ಪನೆಯಾದ 'ಸ್ತ್ರೀವಾದಿ' ವಿಚಾರಧಾರೆಯನ್ನು ಕುರಿತದ್ದಾಗಿದೆ. ಈ ವಿಚಾರಧಾರೆ ಇಪ್ಪತ್ತನೆಯ ಶತಮಾನದಲ್ಲಿ ಹುಟ್ಟಿಕೊಂಡಿದೆಯಾದರೂ ಕಳೆದೆರಡು ದಶಕಗಳಿಂದೀಚೆಗೆ ವಿಸ್ತೃತವಾದ ಅಧ್ಯಯನದ ನೆಲೆಗಳನ್ನು ಗುರುತಿಸಿಕೊಳ್ಳುತ್ತಿದೆ. ಇಂಥ ಸ್ತ್ರೀವಾದಿ ಚಿಂತನೆಯನ್ನು ಚರಿತ್ರೆಯ ಶಿಸ್ತಿನೊಂದಿಗೆ ಮೇಳೈಸಿ ನೋಡುವ ನೋಟ ಹೊಸ ಸ್ವರೂಪದ್ದು. ಅದರಲ್ಲಿಯೂ ಕರ್ನಾಟಕದ ಚರಿತ್ರೆಯ ವಿವಿಧ ಕಾಲಘಟ್ಟಗಳನ್ನು ಸ್ತ್ರೀವಾದಿ ಚಿಂತನೆಯ ನೆಲೆಗಳಿಂದ ಗುರುತಿಸಲು ಹೊರಟಿರುವ ಕಿರು ಪ್ರಯತ್ನ ಈ ಅಧ್ಯಯನದ್ದು. ಇಲ್ಲಿ ಚರಿತ್ರೆ ಮತ್ತು ಸ್ತ್ರೀವಾದದ ಜ್ಞಾನ ಶಾಖೆಗಳೆರಡನ್ನು ಪರಿಗಣಿಸಬೇಕಾಗಿರುವುದರಿಂದ, ಇದೊಂದು ಅಂತರಶಿಸ್ತೀಯ ಅಧ್ಯಯನವೆ ಸರಿ. ಈ ಹಿನ್ನೆಲೆಯಲ್ಲಿಯೇ ಸಂಶೋಧನ ವಿಧಿ-ವಿಧಾನಗಳನ್ನು ಅಳವಡಿಸಿಕೊಳ್ಳಬೇಕಾಗಿದೆ. ಇದುವರೆಗಿನ 'ಚರಿತ್ರೆ' ಎಂದರೆ ಅದು ರಾಜ-ರಾಜರ ಆಡಳಿತ, ಅವರ ಮಂತ್ರಿಗಳು, ಯುದ್ಧ, ಬಿರುದು, ಸಾಧನೆಗಳನ್ನು ಮಾತ್ರ ಒಳಗೊಂಡಿರುವುದೆ ಆಗಿತ್ತು. ಅಲ್ಲದೆ ಇದುವರೆಗಿನ ಚರಿತ್ರೆಯು ಪುರುಷರಿಂದ, ಪುರುಷರಿಗಾಗಿ, ಪುರುಷರಿಗೋಸ್ಕರವಾಗಿಯೇ ಎಂಬಂತೆ ನಿರ್ಮಾಣವಾಗಿದೆ. ಚರಿತ್ರೆ (History)ಯು ಕೇವಲ 'His-Story' ಮಾತ್ರ ಆಗಿದೆ. ಆದರೆ ಅದು 'Her-Story' ಎಂದಿಗೂ ಆಗಲೇ ಇಲ್ಲ. ವಸಾಹತುಶಾಹಿ ಸಂದರ್ಭದಲ್ಲಿಯೂ 'ಓರಿಯಂಟಲಿಸ್ಟ್' ಹಾಗೂ 'ರಾಷ್ಟ್ರೀಯವಾದಿ' ಚರಿತ್ರೆಕಾರರು ಚರಿತ್ರೆಯನ್ನು ನೋಡಿದ್ದು ಸಹ ಈ ನೋಟದಿಂದಲೇ. ಇವರುಗಳ ದೃಷ್ಟಿಯಲ್ಲಿ ಚರಿತ್ರೆಯ ಆಗು-ಹೋಗುಗಳು, ಅರಸು ಮನೆತನಗಳು, ವಂಶಾವಳಿಗಳು, ಘಟನೆಗಳು ಉಳಿದ ಎಲ್ಲಾ ಪ್ರಕ್ರಿಯೆಗಳು ಪುರುಷ ಪ್ರಧಾನವಾದುವು. ಎಲ್ಲಿಯೂ ಸಹ ಸ್ತ್ರೀ ಕೇಂದ್ರಿತ ವಂಶಾವಳಿ, ಪ್ರತಿಕ್ರಿಯೆ, ಜನಸಾಮಾನ್ಯ ಮಹಿಳೆಯ ಪ್ರತಿಭಟನೆಗಳು, ಉಲ್ಲೇಖಗಳು, ಅಭಿವ್ಯಕ್ತಗೊಂಡ ವ್ಯಾಖ್ಯಾನ-ವಿಶ್ಲೇಷಣೆಗಳು ದೊರೆಯುವುದೇ ಇಲ್ಲ. ಇಂಥ ಕೊರತೆಗಳನ್ನು ಈ ಹೊತ್ತಿನ ಸ್ತ್ರೀವಾದಿ ಅಧ್ಯಯನಕಾರರು, ಚಿಂತಕರು ತುಂಬಿಕೊಡಲು ಪ್ರಯತ್ನಗಳನ್ನು ಮಾಡುತ್ತಿದ್ದಾರೆ. ಆದರೆ ಚರಿತ್ರೆಯ ಶಿಸ್ತಿನವರಿಗೆ ಸ್ತ್ರೀ ಪರವಾದ ನಿಲುವಿನಿಂದ ನೋಡಿದ ಚಾರಿತ್ರಿಕ ದೃಷ್ಟಿಕೋನದ ಅಧ್ಯಯನಗಳು ನಡೆದೇ ಇಲ್ಲ ಅನ್ನುವಷ್ಟು ಕಡಿಮೆ. ಈ ಹಿನ್ನೆಲೆಯಲ್ಲಿ ಭಾರತದ ಮಹಿಳಾ ಚಾರಿತ್ರಿಕ ಪ್ರಕ್ರಿಯೆಗಳನ್ನು ಕೆಲವರು ಮಾತ್ರ ಸಂಶೋಧನೆಗಳಿಗೆ ಒಳಪಡಿಸುವ ಪ್ರಯತ್ನಗಳನ್ನು ಮಾಡುತ್ತಿದ್ದಾರೆ. ಆದರೆ ಕನ್ನಡ ಅಥವಾ ಕರ್ನಾಟಕದ ಸನ್ನಿವೇಶದಲ್ಲಿ ವಿವಿಧ ಚಾರಿತ್ರಿಕ ಘಟ್ಟಗಳಲ್ಲಿನ ಸ್ತ್ರೀವಾದಿ ಚಿಂತನೆಯ ನೆಲೆಗಳನ್ನು ಹೆಕ್ಕಿ ತೆಗೆಯುವ ಪ್ರಯತ್ನಗಳು ನಡೆಯುತ್ತಿರುವುದು ತೀರಾ ಕಡಿಮೆ. ಅಲ್ಲದೆ ಕರ್ನಾಟಕದ ಚರಿತ್ರೆಯಲ್ಲಿ ಮಹಿಳಾ ಅಧ್ಯಯನದ ಸಾಧ್ಯತೆಗಳನ್ನು ಗುರುತಿಸುವ ಪ್ರಯತ್ನಗಳು ಸಹ ವಿರಳ. ಇಂಥ ಕೊರತೆಗಳನ್ನು ನೀಗಿಸುವ ಮೊದಲ ಹಾಗೂ ಕಿರು ಪ್ರಯತ್ನವೇ ಪ್ರಸ್ತುತ ಅಧ್ಯಯನದ ಆಶಯ.

## ೨. ಅಧ್ಯಯನದ ಸ್ವರೂಪ ಮತ್ತು ಅಧ್ಯಾಯಗಳ ಸಂಕ್ಷಿಪ್ತ ವಿವರಣೆ

'ಕರ್ನಾಟಕದ ಚರಿತ್ರೆ ಮತ್ತು ಸ್ತ್ರೀವಾದಿ ನೆಲೆಗಳು' ಎನ್ನುವುದು ಸ್ತ್ರೀವಾದಿ ಚಿಂತನಾ ಸ್ವರೂಪದ್ದಾಗಿದೆ. ಸ್ತ್ರೀವಾದಿ ಚಿಂತನೆ ಯಾವ ಹಂತದಲ್ಲಿ ಹುಟ್ಟಿಕೊಂಡಿತು? ಅದರ ಹಿಂದೆ ಇದ್ದ ಒತ್ತಡ, ತುಡಿತಗಳು ಯಾವುವು? ಆಯಾ ಚಾರಿತ್ರಿಕ ಘಟ್ಟದಲ್ಲಿ ಕಂಡುಬಂದ ಸಾಮಾಜಿಕ, ರಾಜಕೀಯ, ಆರ್ಥಿಕ, ಧಾರ್ಮಿಕ, ಸಾಹಿತ್ಯಕ

ಮೊದಲಾದ ನೆಲೆಗಳು ಯಾವ ಸ್ವರೂದವು? ಸಾಂಸ್ಕೃತಿಕವಾಗಿ ಮಹತ್ತ್ವ ಪಡೆಯುವ ಸಂಗತಿಗಳು ಯಾವುವು? ಎಂಬಂಥ ಅನೇಕ ಪ್ರಶ್ನೆಗಳಿಗೆ ಉತ್ತರಗಳನ್ನು ಕಂಡುಕೊಳ್ಳಲು ಈ ಅಧ್ಯಯನದಲ್ಲಿ ಪ್ರಯತ್ನಿಸಲಾಗಿದೆ. ಈ ಹಿನ್ನೆಲೆಯಲ್ಲಿ ಪ್ರಸ್ತುತ ಪ್ರಬಂಧವು ಏಳು ಪ್ರಮುಖ ಅಧ್ಯಾಯಗಳನ್ನು ಒಳಗೊಂಡಿದೆ. ಅವು -

**ಅಧ್ಯಾಯ : ಒಂದು**

### ಅಧ್ಯಯನದ ಜರೂರು, ಸ್ವರೂಪ, ವಿಧಿ-ವಿಧಾನ ಹಾಗೂ ಮಿತಿಗಳು

ಇದರಲ್ಲಿ ಪ್ರಸ್ತುತ ಅಧ್ಯಯನಕ್ಕೆ ಇರುವ ಮಹತ್ತ್ವ ಯಾವ ರೀತಿಯದು? ಇಡೀ ಅಧ್ಯಯನ ಯಾವ ರೀತಿಯ ಸ್ವರೂಪವನ್ನು ಹೊಂದಿದೆ? ಅದಕ್ಕಿರುವ ವ್ಯಾಪ್ತಿ ಮತ್ತು ಮಿತಿಗಳು ಯಾವ ಬಗೆಯವು? ಅಧ್ಯಯನಕ್ಕೆ ಅಳವಡಿಸಿಕೊಂಡಿರುವ ವಿಧಿ-ವಿಧಾನ ಎಂಥದ್ದು? ಎಂಬ ಪ್ರಶ್ನೆಗಳಿಗೆ ಉತ್ತರ ಮತ್ತು ವಿವರಣೆಗಳನ್ನು ನೀಡುವುದಾಗಿರುತ್ತದೆ. ಇದು ಪ್ರಬಂಧದ ಮೊದಲ ಅಧ್ಯಾಯದ ಚೌಕಟ್ಟು.

**ಅಧ್ಯಾಯ : ಎರಡು**

### ಸ್ತ್ರೀವಾದಿ ಅಧ್ಯಯನದ ಅರ್ಥ-ವ್ಯಾಖ್ಯೆ-ವಿವರಣೆಗಳು

ಈ ಅಧ್ಯಾಯದಲ್ಲಿ ಸ್ತ್ರೀವಾದಿ ಚಿಂತನೆಯ ಹಿನ್ನೆಲೆ, ಅದು ಹುಟ್ಟಿಕೊಳ್ಳಲು ಕಾರಣವಾದ ಅಂಶಗಳನ್ನು ಗಮನದಲ್ಲಿ ಇಟ್ಟುಕೊಂಡು ಪಾಶ್ಚಾತ್ಯರ ಯಾವ ಸಂದರ್ಭದಲ್ಲಿ ಈ ಪರಿಕಲ್ಪನೆ ಹುಟ್ಟಿತು, ಅದರ ಪ್ರಧಾನ ಚಿಂತಕರು ಮತ್ತು ಅವರ ಚಿಂತನೆ ಹಾಗೂ ವಿಭಿನ್ನ ಚಿಂತಕರಿಂದ ರೂಪಗೊಂಡ ಸ್ತ್ರೀವಾದಿ ಪಂಥಗಳನ್ನು ಗುರುತಿಸಲಾಗಿದೆ. ಅಲ್ಲದೆ ಭಾರತ ಹಾಗೂ ಕನ್ನಡದ ಯಾವ ಸಂದರ್ಭದಲ್ಲಿ ಈ ಪರಿಕಲ್ಪನೆ ಹುಟ್ಟಿಕೊಂಡಿತು ಎಂಬುದನ್ನು ಕಂಡುಕೊಂಡು, ಅದರ ಚಿಂತಕರು ಹಾಗೂ ಅಧ್ಯಯನದ ನೆಲೆಗಳನ್ನು ಅರಿಯಲು ಪ್ರಯತ್ನಿಸಲಾಗಿದೆ. ಅಂತೆಯೆ ಸ್ತ್ರೀವಾದಿ ಚಿಂತನೆಯ ಹುಟ್ಟನ್ನು ಚಾರಿತ್ರಿಕ ನೋಟದಿಂದ ಕಾಣಲು ಪ್ರಯತ್ನಿಸಲಾಗಿದೆ. ಸ್ತ್ರೀವಾದದ ಅರ್ಥ, ನಿರ್ವಚನೆ, ವಿವರಣೆ ಹಾಗೂ ಪ್ರಸ್ತುತ ಸಂದರ್ಭದಲ್ಲಿ ಸ್ತ್ರೀವಾದದ ಅಗತ್ಯತೆಗಳೊಂದಿಗೆ ವಿವರವಾಗಿ ಚರ್ಚಿಸಲಾಗಿದೆ.

ಸ್ತ್ರೀವಾದ ಎಂದರೇನು? ಎಂದು ತಿಳಿದುಕೊಳ್ಳಲು ವಿವಿಧ ಚಿಂತಕರು ನೀಡಿರುವ ವ್ಯಾಖ್ಯೆಗಳನ್ನು ಗಮನಿಸಲಾಗಿದೆ. ಅಲ್ಲದೆ ಸ್ತ್ರೀವಾದಿ ಚಿಂತನೆ ಪುರುಷ ದ್ವೇಷಿಯದ್ದಾಗಿರದೆ ಅದು ಭಾರತೀಯ ಚಿಂತನೆಯೆ ಆಗಿದ್ದು, ಪಾಶ್ಚಾತ್ಯರಿಂದ ಆಮದಾಗಿಲ್ಲ ಎಂಬುದನ್ನು ಕಂಡುಕೊಳ್ಳಲಾಗಿದೆ. ಕನ್ನಡದ ಸಂದರ್ಭದಲ್ಲಿ ಸ್ತ್ರೀವಾದಿ ಚಿಂತನೆ ಹಾಗೂ ಚರಿತ್ರೆ ಮತ್ತು ಸ್ತ್ರೀವಾದದ ಸ್ವರೂಪ ಯಾವ ತರಹದ್ದು ಎಂಬುದನ್ನು ಸಹ ಪರಿಗಣಿಸಲಾಗಿದೆ. ಈ ಅಧ್ಯಾಯದ ಉಪವಿಭಾಗ ಕ್ರಮಗಳು ಕೆಳಕಂಡಂತಿವೆ.

೨.೧. ಸ್ತ್ರೀವಾದದ ಹಿನ್ನೆಲೆ

೨.೨. ಸ್ತ್ರೀವಾದದ ಹುಟ್ಟು

೨.೩. ಸ್ತ್ರೀವಾದದ ಅರ್ಥ

೨.೪. ಸ್ತ್ರೀವಾದದ ವ್ಯಾಖ್ಯೆಗಳು

೨.೫. ಪಾಶ್ಚಿಮಾತ್ಯ ಸ್ತ್ರೀವಾದಿ ಚಿಂತನೆ

೨.೬. ಪಾಶ್ಚಿಮಾತ್ಯ ಸ್ತ್ರೀವಾದಿ ಪಂಥಗಳು

೨.೭. ಭಾರತದಲ್ಲಿ ಸ್ತ್ರೀವಾದಿ ಚಿಂತನೆ

೨.೮. ಕನ್ನಡದ ಸಂದರ್ಭದಲ್ಲಿ ಸ್ತ್ರೀವಾದಿ ಚಿಂತನೆ

೨.೯. ಚರಿತ್ರೆ ಮತ್ತು ಸ್ತ್ರೀವಾದದ ಸ್ವರೂಪ

**ಅಧ್ಯಾಯ : ಮೂರು**

## ಪ್ರಾಚೀನ ಕರ್ನಾಟಕ ಮತ್ತು ಮಹಿಳೆ

ಈ ಅಧ್ಯಾಯದ ಕಾಲಾವಧಿ ಕದಂಬರಿಂದ ರಾಷ್ಟ್ರಕೂಟರವರೆಗೆ. ಇದರಲ್ಲಿ ಮಹಿಳೆಯು ವಿವಿಧ ನೆಲೆಗಳಲ್ಲಿ ತಾನು ಮಾಡಿದ ಸಾಧನೆಗಳನ್ನು ಗುರುತಿಸಲಾಗಿದ್ದು, ರಾಣಿ-ಗೃಹಿಣಿ, ಸೂಳೆ, ತೊತ್ತುಗಳ ಸ್ಥಾನಮಾನಗಳನ್ನು ಕುರಿತಂತೆ ವಿಶ್ಲೇಷಿಸಲಾಗಿದೆ. ಸಾಮಾಜಿಕವಾಗಿ ಯಾವ ಬಗೆಯ ನಿರ್ಬಂಧಗಳಿದ್ದವು, ಅವು ಹೇಗೆ ಹೆಣ್ಣನ್ನು ಪುರುಷನಿಗೆ ಅಧೀನವಾಗಿಸಿದೆವು ಎಂಬುದನ್ನು ಪರಿಶೀಲಿಸಲಾಗಿದೆ. ರಾಜನಂತೆ ರಾಣಿಗೆ ಪ್ರತ್ಯೇಕ ಪಟ್ಟ ಕಟ್ಟುವ ಸಂಪ್ರದಾಯ, ಆಚಾರಗಳನ್ನು ಹೇಳಲಾಗಿದ್ದು, ಹಿರಿಯ ರಾಣಿಯೇ ಪಿರಿಯರಸಿ ಆಗಿರುತ್ತಿದ್ದಳು. ಆಕೆಗೆ ನಿರ್ದಿಷ್ಟ ಅರ್ಹತೆಗಳನ್ನು ಗೊತ್ತುಪಡಿಸಲಾಗಿತ್ತು. ಅಲ್ಲದೆ ರಾಣಿಯರೇ ಸ್ವಇಚ್ಛೆಯಿಂದ ಆಡಳಿತದ ಅಧಿಕಾರಿಗಳಾಗಿ ಆಳ್ವಿಕೆ ಮಾಡಿರುವುದುಂಟು. ಜೊತೆಗೆ ಅರಸನಿಗೆ ಸಹಾಯಕರೂ ಆಗಿದ್ದರು. ಯುದ್ಧದ ಸಂದರ್ಭದಲ್ಲಿ ರಾಣಿ, ಸೂಳೆಯರ ಪಾತ್ರವೇನು? ಎಂದು ಪರಿಶೀಲಿಸಲಾಗಿದೆ. ಧಾರ್ಮಿಕ ನೆಲೆಯಲ್ಲಿ ಅವರು ಪ್ರೋತ್ಸಾಹಿಸಿದ ಧರ್ಮ ಮತ್ತು ಇತರೆ ಧರ್ಮಗಳ ಬೆಳವಣಿಗೆ, ದಾನ-ದತ್ತಿಗಳಿಂದ ಆಕೆ ಪಡೆದ ಆರ್ಥಿಕ ಸ್ವಾತಂತ್ರ್ಯ ಮೊದಲಾದುವುಗಳ ಬಗೆಗೆ ವಿಶ್ಲೇಷಿಸಲಾಗಿದೆ. ವೇದ, ಉಪನಿಷತ್ತು, ಸ್ಮೃತಿಗಳು, ಮಹಾಕಾವ್ಯಗಳಲ್ಲಿ ಸ್ತ್ರೀಯನ್ನು ಹೇಗೆ ಅಭಿವ್ಯಕ್ತಿಸಲಾಗಿದೆ ಎಂಬುದನ್ನು ಸಹ ಗುರುತಿಸಲಾಗಿದೆ. ಪ್ರಾಚೀನ ಮಹಿಳಾ ಶಿಕ್ಷಣ ಕ್ರಮವನ್ನು ಗಮನಿಸಿದೆ. ವಿಜಯಮಹಾದೇವಿಯ 'ಕೌಮುದಿ ಮಹೋತ್ಸವ' ಕೃತಿಯೊಂದಿಗೆ ಆಕೆಯ ವ್ಯಕ್ತಿತ್ವವನ್ನು ಅರಿಯಲಾಗಿದೆ. ಸ್ತ್ರೀವಾದಿ ಚಿಂತಕಿಯರು ಈ ದಿಸೆಯಲ್ಲಿ ಅಧ್ಯಯನ ಕೈಗೊಳ್ಳುವ ಸಾಧ್ಯತೆಗಳು ಯಾವ ಬಗೆಯವು ಎಂಬುದನ್ನು ಗುರುತಿಸುವುದೇ ಈ ಅಧ್ಯಾಯದ ಆಶಯ.

ಈ ಅಧ್ಯಾಯದ ಉಪ ವಿಭಾಗಗಳು ಕೆಳಗಿನಂತಿವೆ.

೩.೧. ಹಿನ್ನೆಲೆ

೩.೨. ಪ್ರಾಚೀನ ಪಠ್ಯಗಳು ಮತ್ತು ಮಹಿಳೆ

ಅ. ೧. ವೇದಗಳು

೨. ಉಪನಿಷತ್ತುಗಳು

೩. ಸ್ಮೃತಿಗಳು

೪. ಮಹಾಕಾವ್ಯಗಳು

ಆ. ಶಿಕ್ಷಣ ಮತ್ತು ಮಹಿಳೆ

೩.೩. ಸಮಾಜ ಮತ್ತು ಮಹಿಳೆ

೧. ಕುಟುಂಬ ೨. ಜಾತಿ ೩. ವಿವಾಹ ೪. ವಧುಪರೀಕ್ಷೆ ೫. ಉಡುಗೊರೆ ೬. ಮಾಂಗಲ್ಯ ೭. ಬಹುಪತ್ನಿತ್ವ ೮. ಪಾತಿವ್ರತ್ಯ ೯. ಅತ್ತೆ-ಸೊಸೆಯರ ಸಂಬಂಧ ೧೦. ತಾಯಿತನ ೧೧. ವಿಚ್ಛೇದನ ೧೨. ವಿಧವೆಯರು ೧೩. ಸತಿ ಸಹಗಮನ ೧೪ ವೇಲವಾಳಿ ೧೫. ಸೂಳೆಯರು ೧೬. ತೊತ್ತುಗಳು

೩.೪. ರಾಜಕಾರಣ ಮತ್ತು ಮಹಿಳೆ

ಅ. ಪಿರಿಯರಸಿ-ಪಟ್ಟಮಹಾದೇವಿ

ಆ. ಆಡಳಿತ ಅಧಿಕಾರಿಗಳು

ಇ. ಯುದ್ಧ ಮತ್ತು ಮಹಿಳೆ

೩.೫. ಧರ್ಮ ಮತ್ತು ಮಹಿಳೆ

ಅ. ಬೌದ್ಧಧರ್ಮ

ಆ. ಜೈನ ಧರ್ಮ

ಇ. ವೈಷ್ಣವ ಮತ್ತು ಶೈವ ಧರ್ಮ

೩.೬. ಆರ್ಥಿಕತೆ ಮತ್ತು ಮಹಿಳೆ

ಅ. ದಾನ - ದತ್ತಿಗಳು

**ಅಧ್ಯಾಯ : ನಾಲ್ಕು**

## ಮಧ್ಯಕಾಲೀನ ಸಂದರ್ಭ ಮತ್ತು ಮಹಿಳೆ

ಈ ಅಧ್ಯಾಯದಲ್ಲಿ 'ಮಧ್ಯಕಾಲ' ಎನ್ನುವುದರ ಬಗ್ಗೆ ಚರ್ಚಿಸಲಾಗಿದೆ. ಇಲ್ಲಿಯು ಪ್ರಾಚೀನ ಕಾಲಘಟ್ಟದಂತೆ ಮಹಿಳೆಯು ವಿಭಿನ್ನ ಸ್ತರಗಳಲ್ಲಿ ಕೈಗೊಂಡ ಸಾಧನೆಗಳನ್ನು ಗುರುತಿಸುತ್ತಾ ಅವು ಹೇಗೆ ಮಧ್ಯಕಾಲೀನ ಸಂದರ್ಭಕ್ಕೆ ಸಾಂಸ್ಕೃತಿಕವಾಗಿ ಹಲವು ಬಗೆಯ ಸ್ಥಿತ್ಯಂತರಗಳಿಗೆ ಒಳಪಟ್ಟವು. ಈ ಸಾಂಸ್ಕೃತಿಕ ಪಲ್ಲಟಗಳನ್ನು ಆಯಾ ಕಾಲಘಟ್ಟದಲ್ಲಿಟ್ಟು ವಿಶ್ಲೇಷಿಸಲಾಗಿದೆ. ಅಂತೆಯೇ ಮಧ್ಯಕಾಲೀನ ಸನ್ನಿವೇಶದ ಪ್ರಧಾನವಾದ ಅಂಶಗಳು ಅಂದಿನ ಮಹಿಳೆಯನ್ನು ಹೇಗೆ ಅನಾವರಣಗೊಳಿಸಿವೆ ಎಂಬುದನ್ನು ಸ್ತ್ರೀವಾದಿ ಅಧ್ಯಯನದ ಹಿನ್ನೆಲೆಯಲ್ಲಿ ವಿಶ್ಲೇಷಿಸಿ, ಮುಂದಿನ ಅಧ್ಯಯನದ ಸಾಧ್ಯತೆಗಳನ್ನು ಕುರಿತಂತೆ ಗಮನ ಹರಿಸಲಾಗಿದೆ. ಇಲ್ಲಿ ಪ್ರಧಾನವಾಗಿ ವಚನಗಳ ಕಾಲಘಟ್ಟದೊಂದಿಗೆ ಮಹಿಳೆಯ ಅನುಭೂತಿ-ಅಭಿವ್ಯಕ್ತಿಗಳು ಹೆಚ್ಚು ಮಹತ್ತ್ವ ಪಡೆದದ್ದನ್ನು ಪರಿಶೀಲಿಸಲಾಗಿದೆ. ಇದರ ಉಪವಿಭಾಗಗಳು ಹೀಗಿವೆ.

೪.೧. ಮಧ್ಯಕಾಲೀನ ಸಂದರ್ಭ ಮತ್ತು ಮಹಿಳೆ

೪.೨. ಸಮಾಜ ಮತ್ತು ಮಹಿಳೆ

೧. ಕುಟುಂಬ ೨. ಜಾತಿಪದ್ಧತಿ ೩. ವಿವಾಹ-ಬಾಲ್ಯವಿವಾಹ ಹಾಗೂ ಅಂತರಜಾತಿಯ ವಿವಾಹ ೪. ಬಹುಪತ್ನಿತ್ವ ೫. ಉಡುಗೊರೆ ೬. ಮಾಂಗಲ್ಯ

೭. ತಾಯಿತನ ೮. ವಿಚ್ಛೇದನ ೯. ವಿಧವೆಯರು ೧೦. ಸತಿ ಸಹಗಮನ ೧೧. ಪಾತಿವ್ರತ್ಯ

೧೨. ಪರದಾ ಪದ್ಧತಿ ೧೩. ತೊತ್ತುಗಳು ೧೪. ಸೂಳೆಯರು

ಅ. ಆಸ್ಥಾನಿಕ ಸೂಳೆಯರು ಆ. ದೇವಾಲಯದ ಸೂಳೆಯರು

ಇ. ಸಮಾಜದ ಸೂಳೆಯರು

೧೫. ವೇಲವಾಳಿ ಪದ್ಧತಿ - ಇತ್ಯಾದಿ

೪.೩. ರಾಜಕಾರಣ ಮತ್ತು ಮಹಿಳೆ

ಅ. ಆಡಳಿತರೂಢ ಪಿರಿಯರಸಿಯರು ಮತ್ತು ರಾಣಿಯರು

ಆ. ಯುದ್ಧ ಮತ್ತು ಮಹಿಳೆ

೧. ರಾಣಿಯರು ೨. ವೈವಾಹಿಕ ಸಂಬಂಧಗಳು ೩. ಸೂಳೆಯರು

೪. ಶಿಲ್ಪಗಳಲ್ಲಿ ಮಹಿಳಾ ಸೈನಿಕರು

೪.೪. ಆರ್ಥಿಕತೆ, ಧಾರ್ಮಿಕತೆ ಮತ್ತು ಮಹಿಳೆ

ಅ. ಭೂಮಾಲೀಕತ್ವ

ಆ. ವ್ಯಾಪಾರ-ವಾಣಿಜ್ಯ

ಇ. ತೆರಿಗೆಗಳು

ಈ. ಲೋಕೋಪಯೋಗಿ ಕಾರ್ಯಗಳು

ಉ. ದಾನ-ದತ್ತಿಗಳು

೪.೫. ಸಾಹಿತ್ಯ, ಶಿಕ್ಷಣ ಮತ್ತು ಮಹಿಳೆ

ಅ. ವಚನಕಾರರ ಸ್ತ್ರೀಪರ ನಿಲುವು

ಆ. ವಚನಕಾರರ ಇತರೆ ಅಂಶಗಳ ಚಿಂತನೆ

ಇ. ವಚನಕಾರ್ತಿಯರು ಹಾಗೂ ಅವರ ಚಿಂತನೆಗಳು

ಈ. ವಚನಕಾರ್ತಿಯರು ವಚನಕಾರರ ಬಗೆಗೆ ತಳೆದ ಚಿಂತನೆ

ಉ. ಸಾಹಿತ್ಯ ಮತ್ತು ಮಹಿಳೆಯರು

೧. ಆಸ್ಥಾನಿಕ ಕವಿಯತ್ರಿಯರು

೨. ದಾಸ ಸಾಹಿತ್ಯದ ಕವಿಯತ್ರಿಯರು

ಊ. ಶಿಕ್ಷಣ ಮತ್ತು ಮಹಿಳೆ

ಅಧ್ಯಾಯ : ಐದು

**ವಸಾಹತುಶಾಹಿ ಕಾಲಘಟ್ಟ ಮತ್ತು ಸ್ತ್ರೀ**

ಈ ಅಧ್ಯಾಯದಲ್ಲಿ ಪಶ್ಚಿಮದ ಸಾಮ್ರಾಜ್ಯಶಾಹಿಗಳು ಭಾರತ ಹಾಗೂ ಕರ್ನಾಟಕದ ಪರಿಸರದಲ್ಲಿ ವಸಾಹತುಶಾಹಿಗಳಾಗಿ ನೆಲೆ ನಿಂತಿದ್ದನ್ನು ಪರಿಶೀಲಿಸಲಾಗಿದೆ. ಇಲ್ಲಿ ಬ್ರಿಟಿಷರನ್ನೇ ಪ್ರಧಾನವಾಗಿರಿಸಿಕೊಂಡು ಅವರ ಚಿಂತನೆ-ಚಟುವಟಿಕೆಗಳು ಸ್ತ್ರೀಯರ ಮೇಲೆ ಬೀರಿದ ಪ್ರಭಾವ-ಪರಿಣಾಮಗಳನ್ನು ಮಹಿಳಾ ದೃಷ್ಟಿಯಿಂದ

ನೋಡಲಾಗಿದೆ. ವಸಾಹತುಶಾಹಿ ಆಲೋಚನೆಗಳು ಭಾರತ ಹಾಗೂ ಕನ್ನಡದ ಪರಿಸರದ ಸಂದರ್ಭದಲ್ಲಿ ಮಹಿಳೆಯ ಮನೋಜೀವನದ ಮೇಲೆ ಹಲವು ಬಗೆಯ ಪ್ರಗತಿಪರ ಪರಿಣಾಮಗಳಿಗೆ ಕಾರಣವಾದವು. ಈ ಆಲೋಚನೆಗಳು ಸ್ವಾತಂತ್ರ್ಯ ಹೋರಾಟದ ಕಾಲಘಟ್ಟದಲ್ಲಿ ಮಹಿಳೆಯನ್ನು ಯಾವ ರೀತಿಯಲ್ಲಿ ಪ್ರತಿಕ್ರಿಯಿಸುವಂತೆ ಮಾಡಿದವು ಎಂಬುದು ಬಹಳ ಮಹತ್ತ್ವದ್ದು. ಅವಳ ಪ್ರತಿಕ್ರಿಯೆ, ಪ್ರತಿರೋಧಗಳ ನೆಲೆಯಲ್ಲಿ ಪ್ರಸ್ತುತ ಅಧ್ಯಾಯದಲ್ಲಿ ಸ್ತ್ರೀವಾದಿ ಅಧ್ಯಯನದ ಸಾಧ್ಯತೆಗಳನ್ನು ಕುರಿತು ಪರಿಶೀಲಿಸುವ ಕಿರು ಪ್ರಯತ್ನ ಮಾಡಲಾಗಿದೆ. ಕನ್ನಡ ಮಹಿಳೆಯರ ಪ್ರತಿರೋಧಗಳನ್ನು ಅಧ್ಯಯನದ ಅನುಕೂಲಕ್ಕಾಗಿ ಎರಡು ಭಾಗಗಳಾಗಿ ವಿಂಗಡಿಸಿಕೊಳ್ಳಲಾಗಿದೆ. ರಾಣಿಯರು, ಸ್ವಾತಂತ್ರ್ಯ ಪ್ರಿಯರು ನಡೆಸಿದ ಸಶಸ್ತ್ರ ಹೋರಾಟ ಎಂತಲೂ ಮತ್ತು ನಾಡಿನ ಐದು ಘಟಕಗಳಲ್ಲಿನ ಮಹಿಳೆಯರ ಪ್ರತಿಕ್ರಿಯೆ, ಸ್ಪಂದನೆ, ಪ್ರತಿರೋಧಗಳನ್ನು ಚರ್ಚಿಸಲಾಗಿದೆ. ಅಲ್ಲದೆ ಏಕೀಕರಣ ಚಳವಳಿಗೆ ಮಹಿಳೆಯರಿಂದ ಬಂದ ಪ್ರತಿಕ್ರಿಯೆಗಳನ್ನು ಗುರುತಿಸಲಾಗಿದೆ. ಈ ಕಾಲಘಟ್ಟದಲ್ಲಿನ ಮಹಿಳೆಯರು ಕುಟುಂಬ, ಸ್ಥಳೀಯ ಪುರುಷ ಪ್ರಧಾನ್ಯತೆ ಹಾಗೂ ಪರಕೀಯ ಪುರುಷ ಪ್ರಧಾನ್ಯತೆಗಳ ವಿರುದ್ಧ ಪ್ರತಿಕ್ರಿಯಿಸಬೇಕಿತ್ತು. ಇಂಥ ಮೊದಲಾದ ಅಂಶಗಳ ಬಗ್ಗೆ ವಿಶ್ಲೇಷಿಸಲಾಗಿದೆ. ಈ ಅಧ್ಯಾಯದ ಉಪಭಾಗಗಳು ಕೆಳಗಿನಂತೆ ಇವೆ.

೫.೦. ಹಿನ್ನೆಲೆ

೫.೧. ಭಾರತೀಯ ಪ್ರತಿಕ್ರಿಯೆ

೫.೨. ಕನ್ನಡ ಮಹಿಳೆಯರ ಪ್ರತಿರೋಧಗಳು

ಅ. ಕನ್ನಡದ ರಾಣಿಯರು ಮತ್ತು ಸ್ವಾತಂತ್ರ್ಯ ಪ್ರಿಯರು ನಡೆಸಿದ ಸಶಸ್ತ್ರ ಹೋರಾಟ

೧. ಕಿತ್ತೂರು ೨. ಹಲಗಲಿ ೩. ನರಗುಂದ

ಆ. ಭಾರತದ ರಾಷ್ಟ್ರೀಯ ಚಳವಳಿಗೆ ಕನ್ನಡತಿಯರು ತೋರಿದ ಪ್ರತಿಕ್ರಿಯೆ

೧. ಮುಂಬಯಿ ಕರ್ನಾಟಕದ ಮಹಿಳೆಯರ ಪ್ರತಿಕ್ರಿಯೆ

೨. ಮದ್ರಾಸ್ ಕರ್ನಾಟಕದ ಮಹಿಳಾ ಸ್ಪಂದನೆ

೩. ಮೈಸೂರು ಸಂಸ್ಥಾನದ ಮಹಿಳೆಯರ ಪ್ರತಿರೋಧಗಳು

೪. ಹೈದರಾಬಾದ್ ಸಂಸ್ಥಾನದಲ್ಲಿರುವ ಮಹಿಳೆಯರ ವಿರೋಧ

೫. ಕೊಡಗಿನ ಮಹಿಳೆಯರ ಪ್ರತಿಕ್ರಿಯೆ

೫.೩. ಏಕೀಕರಣ ಚಳವಳಿ ಮತ್ತು ಮಹಿಳೆ

೫.೪. ಉಪಸಂಹಾರ

**ಅಧ್ಯಾಯ : ಆರು**

**ಸಮಕಾಲೀನ ಸಂದರ್ಭ**

ಈ ಅಧ್ಯಾಯದಲ್ಲಿ ಸಮಕಾಲೀನ ಸಂದರ್ಭದ ಮಹಿಳಾ ಚಿಂತನೆ, ಮಹಿಳಾಪರ ಹೋರಾಟ ಮಾಡುತ್ತಿರುವ ಹಾಗೂ ಮಹಿಳೆಯರಿಗಾಗಿ ಶ್ರಮಿಸುತ್ತಿರುವ ವಿವಿಧ ಬಗೆಯ ಸಂಘಟನೆಗಳನ್ನು ಕುರಿತಂತೆ

ಪರಿಶೀಲಿಸಲಾಗಿದೆ. ಕೆಲವು ಸಂಘಟನೆಗಳು ಮಹಿಳೆಯರನ್ನು ಶೋಷಿಸುತ್ತಿರುವವರ ವಿರುದ್ಧ ಹೋರಾಟಗಳನ್ನು ಕೈಗೊಂಡಿರುವುದು ಗಮನಾರ್ಹವಾದುದು. ಅಲ್ಲದೆ ಇಂಥ ಮಹಿಳಾಪರ ಚಿಂತನೆ, ಹೋರಾಟಗಳು ನಡೆಯುತ್ತಿದ್ದಾಗಲೂ ಇಂದಿನ ಮಹಿಳೆ ಹಲವು ಸಮಸ್ಯೆ, ಸವಾಲುಗಳಿಂದ ಹೊರತಾಗಿಲ್ಲ. ಒಟ್ಟಾರೆ ಸಮಕಾಲೀನ ಸಂದರ್ಭದ ಪ್ರಮುಖ ಮಹಿಳಾ ಸಮಸ್ಯೆ, ಸವಾಲುಗಳು ಯಾವುವು ಎಂಬುದನ್ನು ಗುರುತಿಸಿ ವಿಶ್ಲೇಸುವುದೇ ಈ ಅಧ್ಯಾಯದ ಆಶಯ. ಇದರ ಉಪವಿಭಾಗಗಳು ಹೀಗಿವೆ.

೬.೧. ಮಹಿಳಾ ಸಂಘಟನೆಗಳು

೬.೨. ಮಹಿಳಾ ಹೋರಾಟಗಳು

೬.೩. ಮಹಿಳಾ ಸವಾಲುಗಳು

**ಅಧ್ಯಾಯ : ಏಳು**

## ತಳೆದ ನಿಲುವುಗಳು

ಪ್ರಬಂಧದಲ್ಲಿ ಕೊನೆಯ ಅಧ್ಯಾಯವೆ ಏಳನೆಯದು. ಇದರಲ್ಲಿ ಪ್ರಸ್ತುತ ಅಧ್ಯಯನದಲ್ಲಿ ಕಂಡುಕೊಳ್ಳಲಾದ ಅಥವಾ ತಳೆದಂಥ ನಿಲುವುಗಳನ್ನು ವ್ಯಕ್ತಪಡಿಸಲಾಗಿದೆ. ಇಲ್ಲಿ ವ್ಯಕ್ತಪಡಿಸಿದ ತೀರ್ಮಾನಗಳು ಆಧಾರ ಸಹಿತವಾದವುಗಳು.

**೩. ವಿಧಿ-ವಿಧಾನ**

/ಬಂಡವಾಳವಾದ, ಉದಾರವಾದ, ಪ್ರಜಾಪ್ರಭುತ್ವ, ಮಾರ್ಕ್ಸ್‌ವಾದ, ಕೋಮುವಾದ, ನವಚಾರಿತ್ರಿಕವಾದ ಮೊದಲಾದ ಹೊಸ ಪರಿಕಲ್ಪನೆಗಳಂತೆ 'ಸ್ತ್ರೀವಾದ'ವು ಸಹ ಇತ್ತೀಚಿನದು. ಈ ಪರಿಕಲ್ಪನೆ ಇತ್ತೀಚಿನದಾದರೂ ಚಿಂತನೆ, ತಾತ್ವಿಕತೆ, ಅಭಿವ್ಯಕ್ತಿ, ಅನುಭೂತಿಗಳು ಇತ್ತೀಚಿನವುಗಳಲ್ಲ. ಪುರುಷನ ಹುಟ್ಟಿನೊಂದಿಗೆ ಸ್ತ್ರೀವಾದದ ಅಭಿವ್ಯಕ್ತಿಯ ಹುಟ್ಟು ಸಹ ಆಗಿದೆ. ಆದರೆ ಅವುಗಳನ್ನು ಕ್ರಮಬದ್ಧ ಅಧ್ಯಯನದ ಪರಿಶೀಲನೆಗೆ ತಮ್ಮದೆಯಾದ ಜ್ಞಾನಶಾಖೆಗಳಲ್ಲಿ ಅಳವಡಿಸಿಕೊಳ್ಳಬೇಕಿದೆ/ ಸಾಹಿತ್ಯಕ ನೆಲೆಗಳಲ್ಲಿ ಅಧ್ಯಯನಗಳು ನಡೆದಿವೆಯಾದರೂ ಇತರೆ ಸಮಾಜ ವಿಜ್ಞಾನಗಳಲ್ಲಿ ಆಗಿಲ್ಲ. ಈ ಮಾತು ಭಾರತ ಅಥವಾ ಕನ್ನಡದ ಸಂದರ್ಭಕ್ಕೂ ಅನ್ವಯಿಸುತ್ತದೆ. ಅಂತೆಯೇ ಚರಿತ್ರೆಯ ಶಿಸ್ತಿಗೂ. ಚರಿತ್ರೆ ಎಂದ ತಕ್ಷಣ ಎಲ್ಲ ದೇಶಗಳ ವಿಭಿನ್ನ ಕಾಲಘಟ್ಟಗಳಲ್ಲಿನ ಪುರುಷ ಪ್ರಧಾನ್ಯತೆಯ ಚರಿತ್ರೆಯೆ ಆಗಿದೆ. ಇಂಥ ಕೊರತೆಯನ್ನು ನೀಗಲು ಕರ್ನಾಟಕದ ಚರಿತ್ರೆಯ ಅಧ್ಯಯನಕಾರರು ಪರಿಶೀಲಿಸಬಹುದಾದ ಸ್ತ್ರೀವಾದಿ ನೆಲೆಗಳು ಯಾವುವು ಎಂಬುದನ್ನು ಸೂಕ್ಷ್ಮವಾಗಿ, ಗಂಭೀರವಾಗಿ ಅಧ್ಯಯನಕ್ಕೆ ಒಳಪಡಿಸುವುದೇ ಇಲ್ಲಿನ ಪ್ರಧಾನ ಆಶಯ. ಹೀಗಾಗಿ ಇದರ ಅಧ್ಯಯನದ ಭಿತ್ತಿ ವ್ಯಾಪಕವಾಗಿದೆ. ಈ ಕುರಿತ ಆಕರ ಸಾಮಗ್ರಿಗಳು ಸಹ ವಿಪುಲವಾಗಿವೆ. ಇವುಗಳನ್ನು ಪರಿಶೀಲಿಸಲು ಚರಿತ್ರೆ ಶಿಸ್ತಿನ ವಿಧಿ-ವಿಧಾನದ ಜೊತೆಗೆ ಸಮಾಜ ವಿಜ್ಞಾನದ ವಿಧಿ-ವಿಧಾನಗಳನ್ನು ಸಹ ಅಳವಡಿಸಿಕೊಳ್ಳಲಾಗಿದೆ. ಇಲ್ಲಿ ಕರ್ನಾಟಕದ ಚರಿತ್ರೆಯನ್ನು ಸ್ತ್ರೀವಾದಿ ಚಿಂತನೆ, ಅಭಿವ್ಯಕ್ತಿಯ ನೆಲೆಗಳಿಂದ ಗುರುತಿಸುವುದರೊಂದಿಗೆ ಸಾಂಸ್ಕೃತಿಕ ಒಳನೋಟಗಳನ್ನು ಪಡೆಯುವುದು ಮುಖ್ಯವಾಗಿರುತ್ತದೆ. ಹೀಗಾಗಿ

ಪ್ರಾಥಮಿಕ ಹಾಗೂ ಇತರೆ ಆಕರಗಳ ಬಳಕೆ, ವಿಶ್ಲೇಷಣೆಯ ಜೊತೆಗೆ ಸಾಹಿತ್ಯಕ ಆಧಾರಗಳನ್ನು ಸಹ ಬಳಸಿಕೊಳ್ಳಲಾಗಿದೆ. ಸ್ತ್ರೀವಾದಿ ಅಧ್ಯಯನ ಶಿಸ್ತನ್ನು ಅಳವಡಿಸಿಕೊಂಡಿರುವುದರಿಂದ ಇದೊಂದು ಅಂತರಶಿಸ್ತೀಯ ಅಧ್ಯಯನವೇ ಸರಿ. ಮಹಿಳಾ ಸಂಘ-ಸಂಸ್ಥೆಗಳ ಬಗೆಗೆ ಮಾಹಿತಿ ವಿವರಗಳಿಗಾಗಿ ಕ್ಷೇತ್ರಕಾರ್ಯ ಕೈಗೊಂಡು ದೊರೆತ ಸಂಗತಿಗಳನ್ನು ಕ್ರಮಬದ್ಧವಾಗಿ ಸಂಯೋಜಿಸಿಕೊಳ್ಳಲಾಗಿದೆ. ಅಂತೆಯೆ ವಿಶ್ಲೇಷಣೆ-ವಿಮರ್ಶೆ-ವ್ಯಾಖ್ಯಾನಗಳನ್ನು ಮಾಡುವುದರೊಂದಿಗೆ ಚರಿತ್ರೆಯನ್ನು ಪುನರ್‌ನಿರ್ಮಿಸುವ ಕಿರು ಪ್ರಯತ್ನ ಮಾಡುವುದು ಇಲ್ಲಿನ ಉದ್ದೇಶ.

### ೪. ಮಿತಿಗಳು

ಈಗಾಗಲೇ ಅಧ್ಯಯನದ ಸ್ವರೂಪ, ಹಿನ್ನೆಲೆಗಳಲ್ಲಿ ವಿವರಿಸಿದಂತೆ ಪ್ರಸ್ತುತ ಅಧ್ಯಯನವು ತನ್ನದೇ ಆದ ಕೆಲವು ಮಿತಿಗಳಿಗೆ ಒಳಗಾಗಿದೆ. ಅಂದರೆ 'ಕರ್ನಾಟಕ ಚರಿತ್ರೆ' ಎಂದ ಕ್ಷಣ ಈಗ ಕಟ್ಟಿಲ್ಪಟ್ಟಿರುವ ಅಥವಾ ದೊರೆಯುವ ಕರ್ನಾಟಕದ ವಂಶಾವಳಿ ಚರಿತ್ರೆಯ ಪುರುಷ ನೆಲೆಗಳಿಗೆ ಪರ್ಯಾಯವಾಗಿ 'ಸ್ತ್ರೀ' ವಂಶಾವಳಿಯ ಚರಿತ್ರೆಯನ್ನು ಬರೆಯುವುದಲ್ಲ. ಬದಲಾಗಿ ಆಯಾ ಕಾಲಘಟ್ಟದ 'ಸ್ತ್ರೀ' ಚಿಂತನೆ, ಅಭಿವ್ಯಕ್ತಿ, ತಾತ್ವಿಕತೆಗಳ ಹರವುಗಳನ್ನು ಗುರುತಿಸುವ ಒಂದು ಕಿರು ಪ್ರಯತ್ನ. ಅಧ್ಯಯನದ ವ್ಯಾಪ್ತಿಯ ಅನುಕೂಲಕ್ಕಾಗಿ ಪ್ರಾಚೀನ, ಮಧ್ಯಕಾಲೀನ ಹಾಗೂ ಆಧುನಿಕ ಕಾಲಘಟ್ಟದ ವಿಂಗಡನೆಗಳನ್ನು ಮಾಡಿಕೊಳ್ಳಲಾಗಿದೆ. ಈ ಕಾಲಘಟ್ಟಗಳಲ್ಲಿ ಮಹಿಳೆಯ ಸಮಾಜ, ರಾಜಕಾರಣ, ಆರ್ಥಿಕ, ಧಾರ್ಮಿಕ ಹಾಗೂ ಇನ್ನಿತರೆ ಸಾಂಸ್ಕೃತಿಕ ಅಂಶಗಳನ್ನು ಅಧ್ಯಯನಕ್ಕೆ ಒಳಪಡಿಸಲಾಗಿದೆ.

ಇಲ್ಲಿ ಮಹಿಳೆಯ ಸ್ಥಿತಿ-ಗತಿಗಳಲ್ಲಿ ಆದ ಬದಲಾವಣೆಗಳ ಚರಿತ್ರೆಯನ್ನು ಗಮನಿಸುವುದರೊಂದಿಗೆ ಇನ್ನಷ್ಟು ಆಳವಾದ ವಿಸ್ತೃತವಾದ ಸ್ತ್ರೀವಾದಿ ಅಧ್ಯಯನಕ್ಕೆ ಸಂಶೋಧನಾ ಸಾಧ್ಯತೆಯ ನೆಲೆಗಳನ್ನು ಹುಡುಕ ಹೊರಟಿರುವುದು ಮುಖ್ಯವಾಗಿರುತ್ತದೆ. ದಾಖಲೆಗಳ ಹಿನ್ನೆಲೆಯಲ್ಲಿ ಲಭ್ಯವಿರುವ ಎಲ್ಲಾ ಪ್ರಕಾರದ ಆಕರ ಸಾಮಾಗ್ರಿಗಳನ್ನು ಪರಿಗಣಿಸುವುದರೊಂದಿಗೆ ಈಗಿರುವ ಮಹಿಳಾ ಹಿನ್ನೆಲೆಯ ಎಲ್ಲ ಅಧ್ಯಯನ, ಆಕರ ಕೃತಿ, ಲೇಖನ, ಚಿಂತನೆಗಳನ್ನು ವಿಶ್ಲೇಷಿಸುವ ಪ್ರಯತ್ನವನ್ನೂ ಮಾಡಲಾಗಿದೆ. ಇಂಥ ಕಿರು ಪ್ರಯತ್ನಕ್ಕೆ ತನ್ನದೇ ಆದ ಮಿತಿಗಳು ಇರುವುದು ಸಹಜ. ವ್ಯಾಪಕವಾದ ಅಧ್ಯಯನದ ಬಿತ್ತಿಯನ್ನೇ ಹೊಂದಿರುವ ಈ ಮಹಾಪ್ರಬಂಧವು ಎಲ್ಲ ಅಂಶಗಳನ್ನು ಪರಿಶೀಲಿಸುವ ಸಾಧ್ಯ-ಸಾಧ್ಯತೆಗಳ ಮಿತಿಗಳಿಗೂ ಸಹ ಒಳಪಟ್ಟಿದೆ. ಹೀಗಾಗಿ ಇದೊಂದು ಕರ್ನಾಟಕದ ಮಹಿಳಾ ಚರಿತ್ರೆಯ ಮೊದಲ ಹಾಗೂ ಕಿರು ಪ್ರಯತ್ನವಷ್ಟೇ.

ಅಧ್ಯಾಯ - ೨

# ಸ್ತ್ರೀವಾದಿ ಅಧ್ಯಯನದ ಅರ್ಥ-ವ್ಯಾಖ್ಯೆ-ವಿವರಣೆಗಳು

೨.೧. ಸ್ತ್ರೀವಾದದ ಹಿನ್ನೆಲೆ

೨.೨. ಸ್ತ್ರೀವಾದದ ಹುಟ್ಟು

೨.೩. ಸ್ತ್ರೀವಾದದ ಅರ್ಥ

೨.೪. ಸ್ತ್ರೀವಾದದ ವ್ಯಾಖ್ಯೆಗಳು

೨.೫. ಪಾಶ್ಚಿಮಾತ್ಯ ಪ್ರಧಾನ ಸ್ತ್ರೀವಾದಿ ಚಿಂತಕರು

೨.೬. ಪಾಶ್ಚಿಮಾತ್ಯ ಸ್ತ್ರೀವಾದಿ ಪಂಥಗಳು

೨.೭. ಭಾರತೀಯ ಸ್ತ್ರೀವಾದಿ ಚಿಂತನೆ

೨.೮. ಕನ್ನಡದ ಸಂದರ್ಭದಲ್ಲಿ ಸ್ತ್ರೀವಾದಿ ಚಿಂತನೆ

೨.೯ ಚರಿತ್ರೆ ಮತ್ತು ಸ್ತ್ರೀವಾದದ ಸ್ವರೂಪ

ಅಧ್ಯಾಯ - ೨

# ಸ್ತ್ರೀವಾದಿ ಅಧ್ಯಯನದ ಅರ್ಥ-ವ್ಯಾಖ್ಯೆ-ವಿವರಣೆಗಳು

## ೨.೧. ಸ್ತ್ರೀವಾದದ ಹಿನ್ನೆಲೆ

ಒಂದು ಕಾಲಕ್ಕೆ ಜರೂರು ಅನ್ನಿಸಿದ್ದ ನಡೆನುಡಿ, ಆಚರಣೆ, ನಂಬಿಕೆ, ಸಂಪ್ರದಾಯಗಳು ಮಾನವನನ್ನು ಭಿನ್ನವಾಗಿಯೇ ರೂಪು ತಳೆಯುವಂತೆ ಮಾಡಿದ್ದವು. ಅಷ್ಟೇ ಅಲ್ಲದೆ ಅವೇ ಮಾನವನ ಸಮಸ್ಯೆಗಳ ಸೃಷ್ಟಿಗೂ ಕಾರಣವಾದವು. ಇಂಥ ಸಮಸ್ಯೆಗಳಲ್ಲಿ ಲಿಂಗಾಧಾರಿತ ನೆಲೆಯೂ ಒಂದು. ವಿಶ್ವದ ಎಲ್ಲ ಸಮಾಜಗಳಲ್ಲಿಯೂ ಲಿಂಗಾಧಾರಿತ ಹೆಣ್ಣಿನ ಶೋಷಣೆ ನಡೆದೇ ಇರುತ್ತದೆ. ಆದರೆ ಶೋಷಣೆಯ ಪರಿ ಮಾತ್ರ ಸಮಾಜದಿಂದ ಸಮಾಜಕ್ಕೆ ಭಿನ್ನ. ಲಿಂಗಾಧಾರಿತವಾಗಿ ಪುರುಷ ಸಮಾಜವು ಮೇಲ್ತುದಿಯಲ್ಲಿ ನಿಂತರೆ, ಹೆಣ್ಣು ಕೆಳಸ್ತರದಲ್ಲಿ ನಿಲ್ಲಬೇಕಾಗಿದೆ. ಇವರಿಬ್ಬರ ನಡುವಿನ ಅಂತರ ಪುರುಷ ದನಿಯನ್ನು ಎತ್ತರಿಸಿ ಹೆಣ್ಣಿನ ದನಿಯನ್ನು ಕೇಳಿಸಂತೆ ಮಾಡಿದೆ. ಮಾತೃಪ್ರಧಾನ ಕುಟುಂಬಗಳ ನಾಶ ಮತ್ತು ಸಮುದಾಯದ ಆಸ್ತಿಯ ಬದಲಾವಣೆಗಳೇ ಮಹಿಳೆಯ ಶೋಷಣೆಗೆ ಪ್ರಧಾನ ಕಾರಣಗಳಾಗಿರುತ್ತವೆ. ಮನೆಯ ಒಳಗಿನ ಹೆಣ್ಣಿನ ಕೆಲಸಕಾರ್ಯಗಳು ಅನುತ್ಪಾದಕವೆಂದೂ, ಗಂಡಿನ ಕುಟುಂಬದಾಚೆಯ ಕೆಲಸ ಕಾರ್ಯಗಳು ಉತ್ಪಾದಕವು ಎಂಬ ಗ್ರಹಿಕೆ ಬೆಳೆದು ಬಂದಿದ್ದು, ಪಿತೃಪ್ರಧಾನ ಸಮಾಜದ ಅಸ್ತಿತ್ವಕ್ಕೆ ನಾಂದಿಯಾಯಿತು ಎನ್ನಬಹುದು. ಹೀಗೆ ರೂಪುಗೊಂಡ ಪುರುಷಪ್ರಧಾನ ಸಮಾಜವು ತನ್ನ ಜನಾಂಗದ ಹಿತವನ್ನು ಗಮನಿಸಿ, ತನಗೆ ಬೇಕಾದ ಸಕಲ ವ್ಯವಸ್ಥೆಗಳನ್ನು ನಿರ್ಮಿಸಿಕೊಂಡಿತು. ಜೊತೆಗೆ ಎಲ್ಲವನ್ನು ತಾನೇ ತಿಳಿಯಲು ಪ್ರಯತ್ನಿಸಿದ್ದು, ತಾನೇ ಉತ್ತರಿಸುತ್ತ ಸ್ವತಂತ್ರ ನಿರ್ಧಾರ ಕೈಗೊಳ್ಳಲು ಮುಂದಾಯಿತು. ಹೆಣ್ಣನ್ನು ತನ್ನ ಸೇವೆಗೆ ಪರಿಕರ ಎನ್ನುವಂತೆ ನಿರ್ವಚಿಸಿ,

ವ್ಯಾಖ್ಯಾನಿಸಿ ನಿರ್ದೇಶಿಸಿದೆ. ಇದೇ ಸಂದರ್ಭದಲ್ಲಿಯೆ ಹೆಣ್ಣಿನ ಯೋಗಕ್ಷೇಮ, ಅಭಿವೃದ್ಧಿ, ಸ್ಥಾನಮಾನ ಮುಂತಾದವುಗಳನ್ನು ನಿರ್ಲಕ್ಷಿಸಿರುವುದು. ಹಾಗೂ ನಿರ್ದಿಷ್ಟ ಪಾತ್ರ-ಗುಣಗಳು ತಿಳಿಸಿ, ಅವುಗಳನ್ನು ಆಚರಿಸುವಂತೆ ನೀತಿ ನಿಯಮ, ಕಟ್ಟುಪಾಡುಗಳನ್ನು ಹೇರಿರುತ್ತದೆ. ಈ ಹೇರಿಕೆಗಳೇ ಮಹಿಳೆಯನ್ನು ನಾಲ್ಕು ಗೋಡೆಗಳ ನಡುವೆ ಬಂಧಿತಳನ್ನಾಗಿ ಮಾಡಿದ್ದು. ಇವೆಲ್ಲವುಗಳಿಂದಾಗಿ ಮಹಿಳೆಗೆ ಆಕೆಯದೇ ಆದ ಅಸ್ತಿತ್ವವೂ ಇಲ್ಲವಾಗಿ ಆಕೆ ತನ್ನನ್ನು ಪುರುಷಪ್ರಧಾನ ಮೌಲ್ಯಗಳಿಂದ ಸಮಾಜದಲ್ಲಿ ಗುರುತಿಸಿಕೊಳ್ಳುವ ಅನಿವಾರ್ಯತೆ ಉಂಟಾಯಿತು. ಪುರುಷ ಪ್ರಧಾನ ಸಮಾಜವು ಹೆಣ್ಣಿನ ಬದುಕನ್ನು ಅಧೀನವಾಗಿಸಿಕೊಂಡಿತು. ಪುರುಷಪ್ರಧಾನ ಸಮಾಜದ ಎಲ್ಲ ಹೇರಿಕೆ, ನಿರ್ಬಂಧಗಳಿಂದ ಮಹಿಳೆಯರಿಗೂ ಅಸಹನೆ ಉಂಟಾಗಿದ್ದು, ಅದನ್ನು ವ್ಯಕ್ತಪಡಿಸಲು ಆಗದೆ ಅಸಹಾಯಕರಾದರು. ಹೀಗಾಗಿ ಆಕೆ ಪ್ರತಿಕ್ರಿಯೆ ನೀಡದೆ, ಒಪ್ಪಿ-ಅಪ್ಪಿಕೊಂಡಿರುವುದನ್ನು ಬಳಸಿಕೊಂಡ ಪಿತೃಪ್ರಧಾನ್ಯತೆ 'ಹೆಣ್ಣು' ಹೆರುವವಳು, ಪುರುಷನ ಭೋಗಕ್ಕೆ ಮೀಸಲು, ಅಡುಗೆ ಮನೆಯ ಆಳಾಗಿ ದುಡಿಯಲು ಹುಟ್ಟಿದವಳು ಎಂಬ ಭಾವನೆಯನ್ನು ಮೂಡಿಸಿಕೊಂಡಿತು. ಇದು ಹೆಣ್ಣಿನ ಬಗ್ಗೆ ಕೀಳು ಅಭಿಪ್ರಾಯ ರೂಢಿಸಿಕೊಳ್ಳಲು ಸಹಾಯಕವಾಯಿತು. ಹೆಣ್ಣಿನ ಪ್ರಪಂಚ ನಾಲ್ಕು ಗೋಡೆಗಳಾಗಿದ್ದು, ಆಕೆಗೆ ಹೊರ ಜಗತ್ತು ಕಾಣದಾಯಿತು. ಇಂಥ ಹೇರಿಕೆಗಳಿಂದ ಮಹಿಳೆ ಏನಾದರೂ ಚಿಂತಿಸುವುದು ಎಂದರೆ "ನಾಯಿ ತನ್ನ ಹಿಂಗಾಲುಗಳ ಮೇಲೆ ನಡೆದಂತೆ" ಎಂದೂ, ಹೆಣ್ಣಿನ ವೈಚಾರಿಕತೆಯನ್ನು ನಾಯಿಯ ಹಿನ್ನಡಿಗೆಗೆ ಹೋಲಿಸಲಾಯಿತು. ವಿಶ್ವಕ್ಕೆ 'ಪಾಪ' ತಂದಿರುವವಳೇ ಹೆಣ್ಣು ಎಂಬ ರೂಢಿಯು ಪ್ರಚಲಿತವಾಯಿತು. ಇಂಥ ಪುರುಷಪ್ರಧಾನ ಸಮಾಜದಿಂದ ಮಹಿಳೆಯ ವ್ಯಕ್ತಿತ್ವವು ವಿಕಾಸವಾಗದೆ ಉಳಿದು ಆಕೆ ತಾನು ನಿಂತ ಸ್ಥಳದಲ್ಲಿಯೇ ನಿಲ್ಲಬೇಕಾದ ಸಂದರ್ಭ ಬಂದಿತು. ಮತ್ತು ಬದಲಾಗುತ್ತಿರುವ ಪುರುಷಪ್ರಧಾನ ಸಮಾಜದ ಜಗತ್ತನ್ನು ಮೂಕಪ್ರಾಣಿಗಳಂತೆ ನೋಡುವ ಸನ್ನಿವೇಶವು ಬಂದು ಒದಗಿತು. ಆದರೆ ಇತ್ತೀಚಿನ ದಿನಗಳಲ್ಲಿ ಬದಲಾವಣೆ ಆಗುತ್ತಿರುವುದು ಸಮಾಧಾನದ ವಿಷಯ ಅಷ್ಟೇ.

### ೨.೨. ಸ್ತ್ರೀವಾದದ ಹುಟ್ಟು

ಹಲವು ಬಗೆಯ ನಿರ್ದಿಷ್ಟ, ಕಾರಣ, ಅನಿವಾರ್ಯತೆಯ ಅವಶ್ಯಕತೆಗಳಿಂದಾಗಿ ಈಗಾಗಲೇ ಸಮಾಜವಾದ, ಮಾರ್ಕ್ಸ್‌ವಾದ, ಲೋಹಿಯವಾದ ಮೊದಲಾದವು ಉದಯವಾಗಿದ್ದು, ಅಂತೆಯೇ ಸ್ತ್ರೀವಾದವು ಈ ಕೆಳಗಿನ ಕಾರಣಗಳಿಗಾಗಿ ಹುಟ್ಟಿಕೊಂಡಿದೆ ಎಂದರೆ ತಪ್ಪಲ್ಲ.

೧. ಹೆಣ್ಣು ಹೆರುವುದಕ್ಕೆ ಮಾತ್ರ ಸೀಮಿತ ಎನ್ನುವುದಕ್ಕೆ ಪ್ರತಿಕ್ರಿಯಿಸಲು
೨. ವಿಶ್ವದ ಎಲ್ಲ ಜನಾಂಗಗಳಲ್ಲಿ ಮಹಿಳೆಯು ತೀವ್ರವಾಗಿ ಶೋಷಣೆಗೆ ಒಳಗಾಗಿದಕ್ಕೆ
೩. ಪುರುಷ ಪ್ರಧಾನ ಸಮಾಜ ಹೆಣ್ಣಿಗೆ ನೀಡಿದ ನಿರ್ದಿಷ್ಟ ಪಾತ್ರ, ಗುಣಗಳ ವಿರುದ್ಧ ಪ್ರತಿಭಟಿಸಲು
೪. ಕೌಟುಂಬಿಕ ಮತ್ತು ಲೈಂಗಿಕ ವ್ಯವಹಾರಗಳಲ್ಲಿ ಸ್ತ್ರೀಯರಿಗೆ ಯಾವ ಪ್ರಾಶಸ್ತ್ಯ ಸಿಗದದ್ದು
೫. ಹೆಣ್ಣು ಎಂದರೆ 'ದುಡ್ಡು-ಖರ್ಚು' ಎಂಬ ಸಮೀಕರಣದ ವಿರುದ್ಧವಾಗಿಯೂ
೬. ಸಮಾಜದ ವಿವಿಧ ಕ್ಷೇತ್ರಗಳು ಮಹಿಳೆಯರ ಪಾಲಿಗೆ ಮುಚ್ಚಿದ್ದಕ್ಕಾಗಿ

೭. ವಿಜ್ಞಾನ, ಭಾಷೆ, ಪುರುಷರ ಪರವಾಗಿ ರೂಪಿತವಾಗಿದ್ದಕ್ಕೆ

೮. ಲೇಖಕಿಯರನ್ನು ವಿಮರ್ಶಕರು ಅಲಕ್ಷಿಸಿರುವುದರಿಂದ

೯. ವರ್ಗ, ಜಾತಿಗಳು ಮಹಿಳೆಯನ್ನು ಶೋಷಣೆಗೆ ಗುರಿಮಾಡಿರುವುದರಿಂದ

೧೦. ಸ್ತ್ರೀ ಸ್ವಾತಂತ್ರ್ಯ ಕುರಿತಂತೆ ಚಿಂತನೆಗಳು ಹುಟ್ಟಿದ ಪರಿಣಾಮ ಹಾಗೂ ಸ್ತ್ರೀ ಚಳವಳಿಗಳ ಪ್ರೇರಣೆಯಿಂದಾಗಿ

೧೧. ಸ್ತ್ರೀ ಶೋಷಣೆ ಬಗ್ಗೆ ಸಾಹಿತ್ಯ, ರಂಗಭೂಮಿ, ಸಿನೆಮಾ ಇತ್ಯಾದಿ ಬೆಳೆದು ಬಂದಿರುವುದರ ಪರಿಣಾಮ

೧೨. ಧಾರ್ಮಿಕ ನಿರ್ಬಂಧನೆಗಳಿಂದಾಗಿ - ಇತ್ಯಾದಿ

ಈ ಮೇಲಿನ ಹತ್ತು-ಹಲವು ಅಸಮಾನತೆಗಳನ್ನು ನೀಗಿಸಲು ಸ್ತ್ರೀವಾದ ಹುಟ್ಟಿಕೊಂಡಿತು. ಯಾವುದೊಂದು ಹೊಸ ವಿಚಾರವನ್ನಾಗಲಿ, ಸಿದ್ಧಾಂತವನ್ನಾಗಲಿ ಜನರು ಸುಲಭವಾಗಿ ಒಪ್ಪಿಕೊಳ್ಳುವುದಿಲ್ಲ. ಅಂಥವುಗಳಿಗೆ ವಿರುದ್ಧವಾಗಿ ಪ್ರತಿಕ್ರಿಯಿಸುವುದೇ ಹೆಚ್ಚು. ಅಂತೆಯೇ ಸ್ತ್ರೀವಾದವೂ ಕೂಡ ಆರಂಭದಲ್ಲಿ ಹಲವಾರು ಆತಂಕ, ವಿರೋಧ, ಪ್ರತಿಕ್ರಿಯೆ, ಗುಮಾನಿ ಮೊದಲಾದವುಗಳನ್ನು ಕೂಡ ಎದುರಿಸಬೇಕಾಯಿತು. ಅಲ್ಲದೆ ಇಂದಿಗೂ ವಿರೋಧ, ಅಣುಕು, ಅಪಾರ್ಥಗಳನ್ನು ಎದುರಿಸುತ್ತ ವ್ಯಾಪಕವಾಗಿ ಬೆಳೆದು ಬಂದಿರುತ್ತದೆ ಹಾಗೂ ಬೆಳೆಯುತ್ತಿದೆ.

"ಕ್ರಿ.ಶ. ೧೬೪೭ರಲ್ಲಿಯೇ ಮಾರ್ಗರೇಟ್ ಬ್ರೆಂಟಿನ್‌ನು ಮೊಟ್ಟಮೊದಲು ಮೇರಿಲ್ಯಾಂಡ್ ಶಾಸನ ಸಭೆಯಲ್ಲಿ ಮಹಿಳೆಯರಿಗೂ ಉತ್ತಮವಾದ ಸ್ಥಾನ ಮತ್ತು ಮತದಾನದ ಹಕ್ಕು ಸಹ ಬೇಕು ಎಂಬ ಬೇಡಿಕೆಯನ್ನು ಇಟ್ಟಿದ್ದ"[೧] ಈ ಬೇಡಿಕೆ ಮುಂದೆ ಎಲ್ಲೆಡೆ ಪ್ರತಿಧ್ವನಿಸಿತು. ೧೬೯೧ ರಿಂದ ೧೭೮೦ರ ವರೆಗೆ ಆಸ್ತಿಯ ಒಡತಿಯರಾಗಿದ್ದ ಸ್ತ್ರೀಯರು ಮ್ಯಸಾಚ್ಯುಸೆಟ್ಸ್‌ನಲ್ಲಿ ಮೊದಲಿಗೆ ಮತಾಧಿಕಾರವನ್ನು ಪಡೆದುಕೊಂಡಿದ್ದರು. ೧೮೩೦ ರಿಂದ ೧೮೮೦ರ ಕಾಲಘಟ್ಟದಲ್ಲಿ ಎಲ್ಲಾ ಮಹಿಳೆಯರಿಗೂ ಮತದಾನದ ಹಕ್ಕು ನೀಡಬೇಕೆಂದು ವಿಭಿನ್ನ ಯತ್ನಗಳು ನಡೆದಿದ್ದವು. ಪ್ಯಾಲಿನ್ ರೈಟ್ ಡೇವಿಸ್, ಲ್ಯುಕ್ರೇಶಿಯಾ, ಮಾರ್ಟ್, ಲ್ಯೂಸಿಸ್ಟವ್, ಇರ್ನ್‌ಸ್ಟೈನ್ ರೋಜ್ ಮೊದಲಾದವರು ಮತದಾನ ಚಳವಳಿಯ ಮುಖೇನ ವಾದ ಮಾಡುತ್ತಾ ಮಹಿಳೆಯರ ಹಕ್ಕುಗಳಿಗೆ ಕೇಳಿಕೊಂಡಿದ್ದರು. ೧೮೪೮ರಲ್ಲಿ ಎಲಿಜಬೆತ್ ಕ್ರೇಡಿ ಸ್ಟಂಟಿನ್, ಮಾರ್ಥಾರ್ರೈಟ್, ಮೇರಿ ಅನ್ ಮೆಕಲಿಂಟಾಕರವರು ಮಹಿಳೆಯರ ಹಕ್ಕುಗಳಿಗಾಗಿ ಚರ್ಚಿಸಲು ಅಧಿವೇಶನವನ್ನು ನಡೆಸಲಾಯಿತು. ಅಧಿವೇಶನದಿಂದಾಗಿ ೬೮ ಜನ ಮಹಿಳೆಯರ ಹಾಗೂ ೩೨ ಜನ ಪುರುಷರ ಸಹಿಯುಳ್ಳ 'ಸಿನೇಕ ಫಾಲ್ಸ್' ಎಂಬ ಸ್ತ್ರೀ ಸ್ವಾತಂತ್ರ್ಯದ ಜಾಹೀರಾತು ಸಹ ಪ್ರಕಟವಾಯಿತು. ಅಲ್ಲದೆ ಅಧಿವೇಶನವು ಘೋಷಣೆಯನ್ನು ಹೊರಡಿಸಿ 'ಸ್ತ್ರೀ-ಪುರುಷರಿಬ್ಬರೂ ಸಮಾನವಾಗಿಯೇ ಹುಟ್ಟಿದ್ದಾರೆ. ಮಾನವ ಜನಾಂಗದ ಚರಿತ್ರೆ ಎಂದರೆ ಪುರುಷರು ಸ್ತ್ರೀಯರ ಮೇಲೆ ಮೇಲಿಂದ ಮೇಲೆ ನಡೆಸುತ್ತ ಬಂದ ದಬ್ಬಾಳಿಕೆ, ದೌರ್ಜನ್ಯಗಳ ಚರಿತ್ರೆ ಆಗಿದ್ದು, ಅದು ಅವಳ ಮೇಲೆ ಸಂಪೂರ್ಣ ನಿರಂಕುಶ ಅಧಿಕಾರವನ್ನು ಸ್ಥಾಪಿಸುವ ಉದ್ದೇಶವನ್ನು ಹೊಂದಿರುವುದು'. ಅಂತೆಯೇ ಸ್ತ್ರೀಯರಿಗೆ ಶೈಕ್ಷಣಿಕ, ಧಾರ್ಮಿಕ, ಆರ್ಥಿಕ, ರಾಜಕೀಯ ಹಕ್ಕುಗಳನ್ನು ನೀಡಬೇಕೆಂದು ಒತ್ತಾಯಿಸಿದ್ದು ಗಮನಾರ್ಹ.

ಉದಾರವಾದ, ಮಾನವತಾವಾದದ ಹಿನ್ನೆಲೆಯಿಂದ ಉಂಟಾದ ಫ್ರಾನ್ಸ್ ಕ್ರಾಂತಿಯು ಸಹ ಹೆಣ್ಣನ್ನು ಕುರಿತಂತೆ ಏನೂ ಹೇಳಲಿಲ್ಲ. ಇದರಿಂದಾಗಿ ಸ್ತ್ರೀ ಪರ ಚಿಂತನೆಗಳೂ ಬೆಳೆಯಲಿಲ್ಲ. ಫ್ರಾನ್ಸ್ ಕ್ರಾಂತಿಯ ಸಂದರ್ಭದಲ್ಲಿ `ಕ್ರಾಂತಿ'ಯಿಂದ ಉಂಟಾದ ಸುಧಾರಣೆಗಳನ್ನು ತಿಳಿಯಲು, ಜನರ ಅಭಿಪ್ರಾಯ ಸಂಗ್ರಹಣೆಯ ಕಾರ್ಯವೂ ಆರಂಭವಾಯಿತು. ಹೀಗೆ ಅಭಿಪ್ರಾಯ ಸಂಗ್ರಹಣೆಯಲ್ಲಿ `ಮೇಡಂ ದಿ ಸ್ಟೇಲ್' ಎಂಬಾಕೆ ಕ್ರಾಂತಿಯನ್ನು ಉದ್ದೇಶಿಸಿ ಹೇಳುತ್ತಾ ``ಪುರುಷ ಪ್ರಧಾನ ಸಮಾಜದಲ್ಲಿನ ಮೌಲ್ಯಗಳನ್ನು ಮತ್ತು ಸ್ತ್ರೀ ಪಾತ್ರಗಳನ್ನು ಗಮನಿಸಿಕೊಂಡು ಪ್ರೀತಿಯು ಜರತಾರಿ ಸೀರೆಯ ಅಂಚು. ಹಾಗೂ ಈ ಪ್ರೀತಿಯಿಂದ ಮಹಿಳೆಯರು ದೂರವಿರುವುದೇ ಅವಶ್ಯಕ'' ಎಂದಿದ್ದಳು. ಅಲ್ಲದೆ ಮಹಿಳೆಯರಿಗೂ ಪುರುಷನಂತೆ ಸಮಾಜದ ಎಲ್ಲ ಕಾರ್ಯಗಳಲ್ಲಿ ಭಾಗವಹಿಸುವ ಮುಕ್ತ ಅವಕಾಶ ನಿರ್ಮಾಣವಾಗಬೇಕಾಗಿದ್ದು, ಮಹಿಳೆಯರೂ ಮನುಷ್ಯರೇ ಆಕೆಗೂ ಆಸೆ-ಆಕ್ಷಾಂಕ್ಷೆಗಳಿರುತ್ತವೆ. ಪುರುಷರಿಗೆ ಇರುವ ನೈಸರ್ಗಿಕ ಹಕ್ಕುಗಳು ಸ್ತ್ರೀಯರಿಗೂ ದೊರೆಯಬೇಕು. ಅಲ್ಲದೆ ಸಂಪತ್ತಿನ, ವಾಕ್ ಸ್ವಾತಂತ್ರ್ಯ ಮೊದಲಾದ ಹಕ್ಕುಗಳು ಸಹ ಮಹಿಳೆಯರಿಗೆ ಲಭ್ಯವಾಗಬೇಕು. ಜೊತೆಗೆ ಮಹಿಳೆಯರು ಅಪರಾಧ ಮಾಡಿದ್ದಲ್ಲಿ ಆಕೆಗೂ ಕಾನೂನಿನ ಕ್ರಮದಂತೆ ಶಿಕ್ಷೆ ನೀಡಬೇಕು. ಅವಳು ಕರ ಪಾವತಿಸುವುದಕ್ಕೆ ಅವಕಾಶ ಕೊಡಬೇಕು. ಸಾಮಾಜಿಕ ಕರ್ತವ್ಯಗಳಲ್ಲಿ ಭಾಗವಹಿಸುವುದಕ್ಕೆ ಅವಕಾಶ ನೀಡಬೇಕು' ಎಂದಿದ್ದಳು. ಒಟ್ಟಾರೆ ಕ್ರಾಂತಿಯು ಇಂಥ ಸೌಲಭ್ಯಗಳನ್ನು ನೀಡಿಲ್ಲದಿದ್ದರೆ ಕ್ರಾಂತಿಯಿಂದ ಉಪಯುಕ್ತತೆಯಾದರೂ ಏನು?' ಎಂದು ಸಹ ಈಕೆ ಪ್ರಶ್ನಿಸಿದ್ದಳು.'' ಹೆಣ್ಣಿನ ಪರ ಚಿಂತನೆ ಮಾಡಿ, ಸುಧಾರಣೆ ಕೈಗೊಳ್ಳಬೇಕೆಂದು ಹೇಳಿದವರಲ್ಲಿ ಸ್ಟೇಲ್ ಮೊಟ್ಟ ಮೊದಲನೆಯವಳು ಕೂಡಾ. ಸ್ಟೇಲ್‌ಳ ಚಿಂತನೆ-ವಿಚಾರಗಳೇ ನಂತರದ ಸ್ತ್ರೀವಾದಿ ಚಿಂತಕರಿಗೆ ಅಡಿಪಾಯ ಆದವು ಹಾಗೂ ಪ್ರೇರಣೆ ಸಹ ಆಗಿದ್ದವು. ಸ್ಟೇಲ್‌ಳ ನಂತರ ನ್ಯಾಷನಲ್ ಅಸೆಂಬ್ಲಿಯಲ್ಲಿ ಆಲಿಂಪ್-ದಿ-ಗ್ಯಾಜೆಸ್ ಎಂಬಾಕೆಯೂ ಮಹಿಳೆಯರ ಸಮಾನತೆಗಾಗಿ ೧೭ ಬೇಡಿಕೆಗಳ ಪಟ್ಟಿಯನ್ನು ಮಂಡಿಸಿದ್ದಳು. ಹತ್ತೊಂಬತ್ತನೆಯ ಶತಮಾನದಲ್ಲಿ ಉಂಟಾದ ಔದ್ಯೋಗಿಕ ಕ್ರಾಂತಿಯು ಇಂಗ್ಲೆಂಡ್ ಮತ್ತು ಯುರೋಪ್‌ಗಳನ್ನು ಆರ್ಥಿಕವಾಗಿ ಮುನ್ನಡೆಸಿತು ಎಂದಾದರೂ, ಶೋಷಣೆಯನ್ನು ಸಹ ಬೆಳೆಸಿತು. ಈ ಶೋಷಣೆಯಿಂದ ನೊಂದು-ಬೆಂದವರು ಪ್ರತಿಭಟಿಸುತ್ತ ``ಮಾನವ ಯಂತ್ರವಲ್ಲ, ಪ್ರತಿಯೊಬ್ಬ ಮಾನವನಿಗೆ ಗೌರವ ದೊರೆಯಬೇಕು'' ಎಂದಿದ್ದರು. ಇವರುಗಳ ಉದಾರವಾದ, ಮಾನವತಾವಾದದ ಜೊತೆಯಲ್ಲಿಯೇ ಸ್ತ್ರೀವಾದವೂ ಹುಟ್ಟಿಕೊಂಡಿತು. ಮಹಿಳೆಯರು ಶ್ರೀಮಂತರಾಗಿರಲಿ-ಬಡವರಾಗಿರಲಿ, ಶ್ರೇಷ್ಟ-ಕನಿಷ್ಟ-ಅಕ್ಷರಸ್ಥೆ-ಅನಕ್ಷರಸ್ಥೆಯಾಗಿರಲಿ ಆಕೆ ಹುಟ್ಟಿನೊಂದಿಗೆ ಪುರುಷ ಪ್ರಧಾನ ಸಮಾಜದಲ್ಲಿ ಶೋಷಿತಳಾಗಿದ್ದಾಳೆ. ಧಾರ್ಮಿಕ ಆಚರಣೆ, ನಂಬಿಕೆ, ಸಂಪ್ರದಾಯಗಳು ಆಕೆಯನ್ನು ಮತ್ತಷ್ಟು ಬಂಧಿಸಿರುತ್ತವೆ. ಪುರುಷನು ತನ್ನ ಬಯಕೆಗಳ ತೃಪ್ತಿಗಾಗಿ ಆಕೆಯನ್ನು ಬಂಗಾರದ ಪಂಜರದಲ್ಲಿ ಬಂಧಿಸಿದ್ದಾನೆ. ಪಂಜರ ಬಂಗಾರದ್ದು ಎಂದಾದರೂ ಅದು ಪಂಜರವೇ ಹೌದು. ಮಹಿಳೆ ಈ ಪಂಜರದ ಆಚೆ ಬರಲು ಪ್ರಯತ್ನ ಮಾಡಬೇಕು ಎಂದಿದ್ದರು. ನಂತರದ ದಿನಗಳಲ್ಲಿ ರಾಜಕೀಯ, ಆರ್ಥಿಕ, ಸಾಮಾಜಿಕ, ಧಾರ್ಮಿಕ ಕ್ಷೇತ್ರಗಳಲ್ಲಿನ ಅನ್ಯಾಯ, ಅಸಮಾನತೆ, ಮೂಢನಂಬಿಕೆಯ ವಿರುದ್ಧ ಮಹಿಳೆಯರು ಪ್ರತಿಭಟಿಸಿದರು. ಈ ಪ್ರತಿಭಟನೆ ಆಯಾ ದೇಶಗಳ, ಕಾಲಘಟ್ಟಗಳ, ಸಂಸ್ಕೃತಿಗಳ, ಚಾರಿತ್ರಿಕ ಸಂದರ್ಭಕ್ಕೆ ತಕ್ಕಂತೆ ಸ್ತ್ರೀವಾದ ರೂಪುಗೊಂಡಿತು.

ಸ್ತ್ರೀವಾದದ ಬೆಳವಣಿಗೆ ಸಾಹಿತ್ಯದ ಮೇಲೂ ಪ್ರಭಾವ ಬೀರಿತು. ಇದರಿಂದ ಅನೇಕ ಕೃತಿಗಳು ರಚನೆಯಾದವು. ಈ ಎಲ್ಲ ಕೃತಿಗಳ ಪ್ರಧಾನ ಕೇಂದ್ರಬಿಂದು ಮಹಿಳೆ ಮತ್ತು ಸಮಾಜವೇ ಆಗಿರುತ್ತಿತ್ತು. ಹರ್ಬರ್ಟ್ ಮರ್ಡರ್ ಸಾಹಿತ್ಯವನ್ನು ಗಮನಿಸುತ್ತ "ಪಸರಿಸುತ್ತಿದ್ದ ಮಹಿಳಾ ಆಂದೋಲನಗಳ ಪರಿಣಾಮ ಸಾಹಿತ್ಯದ ಮೇಲೆ ಆಯಿತು. ಈ ಸ್ತ್ರೀವಾದಿ ವಿಚಾರಗಳಿಂದ ಅನೇಕ ಬರಹಗಾರರು ಪ್ರಭಾವಿತರಾದರು. ವಿಕ್ಟೋರಿಯಾ ಕಾಲಘಟ್ಟದ ಕಾದಂಬರಿಗಳಲ್ಲಿ ಕಂಡುಬರುವ ಸಾಮಾಜಿಕ ವಿಮರ್ಶೆಯ ಬಹು ಭಾಗ ಮಹಿಳೆಯರ ಅಸಂತುಷ್ಟತೆಯ ವಿಷಯವಾಗಿರುತ್ತದೆ"[5] ಎಂದಿದ್ದಾನೆ. ಮೇರಿವೂಲಸ್ಟನ್ ಕ್ರಾಫ್ಟ್ "The Vindication of the rights and Wrongs of Women" ಎನ್ನುವ ಕೃತಿ ರಚಿಸಿದ್ದಳು. ಈಕೆಯ ಕೃತಿಯೇ ಮಹಿಳೆಯರ ವ್ಯಕ್ತಿತ್ವ ವಿಕಾಸಕ್ಕಾಗಿ ಪ್ರೇರಣೆಯಾಯಿತು. ವರ್ಜಿನಿಯಾ ವುಲ್ಫ್‌ಳು "A Room of one once" ಕೃತಿಯನ್ನು, ಜರ್ಮನಿಯ ಗ್ರೀಕ್ ಎಂಬಾಕೆ "The female Evnuch" ಕೃತಿಯನ್ನು, ಮೇರಿ ಫರ್ಗುಸನ್ 'Images of Women in Literature' ಕೃತಿಯನ್ನು, ಕೇಟ್ ಮಿಲ್ಲೆಟಳು 'Sexual Politics' ಕೃತಿಯನ್ನು, ಪ್ಯಾಟ್ರಿಸಿಯಾ ಸ್ಪ್ಯಾಕ್ಸ್ 'The female Imagination' ಕೃತಿಯನ್ನು, ಎಲಿಸಿಯಾ ಬಸ್ರಿಕಳು 'Writing like a Women' ಕೃತಿಯನ್ನು, ಜ್ಯೂಲಿಯನ್ ಫ್ಲೀನರಳು 'The female Gothic' ಕೃತಿಯನ್ನು, ಸಿಮೋನ್-ದಿ-ಬುವಾಳು 'The Second Sex' ಕೃತಿಯನ್ನು, ಇನ್ನೂ ಮೊದಲಾದವರು ಸಹ ಕೃತಿಗಳನ್ನು ರಚಿಸಿದ್ದರು. ಸ್ತ್ರೀವಾದಿ ಸಾಹಿತ್ಯ ಬೆಳದಂತೆ, ಸ್ತ್ರೀವಾದವು ವ್ಯಾಪಕವಾಯಿತು. ಆದರೆ ವಿಭಿನ್ನ ದೇಶಗಳ, ಜನಾಂಗೀಯ, ಜಾತಿ, ವರ್ಗ, ಸಾಂಸ್ಕೃತಿಕ ಅಂಶಗಳಿಂದ ಸ್ತ್ರೀವಾದ ಬಹುರೂಪತೆ ಪಡೆದಿರುತ್ತದೆ. ಹೀಗೆ ಸ್ತ್ರೀವಾದದ ಬಗ್ಗೆ ಚಿಂತನೆ ಕೈಗೊಂಡವರು ಅವರುಗಳ ಚಿಂತನೆ-ವಿಚಾರಗಳಿಂದ ಅವರದೇ ಆದ ಪಂಥಗಳನ್ನು ಸೃಷ್ಟಿಸಿಕೊಂಡಿದ್ದಾರೆ. ಅಲ್ಲದೆ ಸ್ತ್ರೀವಾದವು ಸಹ ವಿವಿಧ ಜ್ಞಾನ ಶಾಖೆಗಳೊಂದಿಗೆ ವಿಚಾರ ವಿನಿಮಯ ಕೈಗೊಂಡಿದ್ದನ್ನು ಕಾಣಬಹುದು.

## ೨.೩. ಸ್ತ್ರೀವಾದದ ಅರ್ಥ

'ಸ್ತ್ರೀವಾದ'ವನ್ನು ಬರೀ ನಿರ್ದಿಷ್ಟ ತಾತ್ವಿಕ ಆಕಾರದೊಳಗೆ ಮಿತಗೊಳಿಸಿ ಇಡಲಾಗದು. ಇದು ಎಲ್ಲ ಕಾಲಘಟ್ಟದ ದೇಶ ಸಂಸ್ಕೃತಿಯ ಸ್ತ್ರೀಯರಿಗೆ ಏಕರೂಪವಾಗಿ ಅನ್ವಯಿಸುವಂಥ ಅಮೂರ್ತ ತತ್ತ್ವವಲ್ಲ. ಆಗಾಗ್ಗೆ ಐತಿಹಾಸಿಕ, ಸಾಂಸ್ಕೃತಿಕ ಅಂಶಗಳು ಬದಲಾಗುತ್ತಿದ್ದು, ಈ ಬದಲಾವಣೆಯ ವಾಸ್ತವಿಕತೆಯ ಮೇಲೆ ಸ್ತ್ರೀವಾದ ನಿಂತಿರುತ್ತದೆ. ಸಮಾಜದ ವಿಭಿನ್ನ ಸ್ತರಗಳ ಮಹಿಳೆಯರು ತಮ್ಮ ಆಸೆ-ಆಕಾಂಕ್ಷೆ, ತಾವು ಪಡೆದ ಶಿಕ್ಷಣ, ಅವರುಗಳ ಜಾತಿ, ವರ್ಗ, ನಗರ-ಗ್ರಾಮೀಣ, ಬುಡಕಟ್ಟು ಮೊದಲಾದವುಗಳಿಂದ ವಿಭಿನ್ನವಾಗಿ ಚಿಂತಿಸುತ್ತಾ ಅವರದೆ ಆದ ಸ್ತ್ರೀವಾದವನ್ನು ರೂಪಿಸಿಕೊಂಡಿದ್ದಾರೆ. ಆದ್ದರಿಂದ ಸ್ತ್ರೀವಾದದ ಅರ್ಥ ವಿಭಿನ್ನವಾಗಿರುತ್ತದೆ. ಆದರೂ ಅಂತಿಮವಾಗಿ ಸ್ತ್ರೀವಾದದ ಕೇಂದ್ರಬಿಂದು ಮಹಿಳೆಯ ಹಿತಾಸಕ್ತಿ ಮತ್ತು ಆಕೆಯ ಕಾಳಜಿಯೆ ಆಗಿದೆ. ಸ್ತ್ರೀವಾದವನ್ನು ಕುರಿತಂತೆ ಒಂದೇ ಜಾತಿಯ ಸಮಾನ ಮಹಿಳೆಯರ ಚಿಂತನೆಗಳಲ್ಲಿಯೂ ವ್ಯತ್ಯಾಸ ಇರುತ್ತದೆ. ಆರಂಭದಲ್ಲಿನ ಸ್ತ್ರೀವಾದದ ಕಾರ್ಯ-ಚಟುವಟಿಕೆಗಳಿಗೂ, ಸಮಕಾಲೀನ ಸಂದರ್ಭದ ಸ್ತ್ರೀವಾದದ ಚಿಂತನೆ, ಕ್ರಿಯೆ-ಸಾಧ್ಯತೆಗಳು ಸಹ ಭಿನ್ನವಾಗಿರುತ್ತವೆ. ಯಾವುದೇ ವ್ಯವಸ್ಥೆಯಲ್ಲಿ ಪ್ರಬಲರು ದುರ್ಬಲರನ್ನು ಶೋಷಿಸುವುದು ಸಹಜ. ಹಾಗೆಯೇ ಈ ಶೋಷಕರ ವಿರುದ್ಧ ಶೋಷಿತರು ಹೋರಾಟ ಮಾಡಿದ್ದಾರೆ. ಇಂಥ ಹೋರಾಟವು ನಿರಂತರವಾಗಿ ಇದ್ದು, ತನಗೆ ಬೇಕಾದ ಅವಕಾಶವನ್ನು

ಸರಿಯಾಗಿ ಉಪಯೋಗಿಸಿಕೊಂಡು ಅವರದೆ ಆದ ವಿಧಾನಗಳನ್ನು ಕಂಡುಕೊಂಡಿರುವಂಥದ್ದು. ಅಂತೆಯೇ ಸ್ತ್ರೀವಾದವು ಮಹಿಳೆಯ ಶೋಷಣೆಗೆ ಪುರುಷ ಮತ್ತು ಅವನ ಧೋರಣೆಯ ಸಮಾಜವೇ ಕಾರಣ ಎಂದು ಗುರುತಿಸಲಾಗಿದೆ. ಮೊದ-ಮೊದಲು ಸ್ತ್ರೀವಾದವು ಪುರುಷ ದ್ವೇಷಿಯಾಗಿಯೇ ಇತ್ತು. ಹಾಗೂ ಸ್ತ್ರೀವಾದಿಗಳು ಕೂಡ ಪುರುಷರಂತೆ ಮುಕ್ತರಾಗಿ ಇರಲು ಆಶಿಸಿದ್ದು, ಪ್ರಧಾನವಾಗಿ ಎರಡು ಮಾರ್ಗಗಳನ್ನು ಕಂಡುಕೊಂಡರು. ಈ ಎರಡು ಮಾರ್ಗಗಳಲ್ಲಿನ ಸ್ತ್ರೀವಾದವನ್ನು ಕಂಡ ಪುರುಷರು ನಗುತ್ತಿದ್ದರು. ಎರಡನೆಯ ಮಾರ್ಗದ ಸ್ತ್ರೀವಾದಿಗಳು ಕೂಡ ಪುರುಷರಂತೆ ವ್ಯವಹರಿಸಲು ಮುಂದಾದರು. ಇದನ್ನು ಕಂಡ ಎಷ್ಟೋ ಮಹಿಳೆಯರೇ ನಗೆ ಆಡಿದ್ದು ಉಂಟು. ಒಟ್ಟಿನಲ್ಲಿ ಸ್ತ್ರೀ ವಿಮೋಚನೆಯನ್ನು ಪಡೆಯಲು ಪುರುಷನನ್ನು ಅನುಸರಿಸುವುದೇ ಸರಿ ಎಂಬ ಮನೋಭಾವನೆಯನ್ನು ಹೊಂದಿದ್ದರು. ಸ್ತ್ರೀ ವಿಮೋಚನೆ ಬಗ್ಗೆ ಚಿಂತಿಸುತ್ತ ಮಾರ್ಗರೇಟ್ ಫುಲ್ಲರ್ "ವಿಮೋಚನೆ ಎಂದರೆ ಮಹಿಳೆ ಸ್ವತಂತ್ರಳಾಗಿರಲು ಬಯಸುವುದು"[೪] ಎಂದಿದ್ದಾಳೆ. ಚಿತ್ರಾ ಘೋಷಳು ಸಹ ಸ್ತ್ರೀ ವಿಮೋಚನೆ ಕುರಿತಂತೆ ಹೇಳುತ್ತಾ "ಅಸಹಜವಾದ ಮತ್ತು ನಿರರ್ಥಕವಾದ ಕಟ್ಟಳೆಗಳನ್ನು ತೆಗೆದುಹಾಕಿ ಪ್ರತಿಯೊಬ್ಬರು ಸಮಾಜವು ನೀಡುವ ಎಲ್ಲ ಸದಾವಕಾಶಗಳನ್ನು ಸರಿಯಾಗಿ ಬಳಸಿಕೊಂಡು ಯಾವ ನಿರ್ಬಂಧಗಳಿಲ್ಲದೆ ತಮ್ಮ ವ್ಯಕ್ತಿತ್ವದ ಬೆಳವಣಿಗೆಗೆ, ಅಭ್ಯುದಯಕ್ಕೆ ಉಪಯೋಗಿಸಿಕೊಳ್ಳಬೇಕೆಂದು"[೫] ತಿಳಿಸಿದ್ದಾಳೆ.

ಸ್ತ್ರೀವಾದವು ಕುಟುಂಬದೊಳಗೆ ಹಾಗೂ ಕುಟುಂಬದಾಚೆ ನಡೆಯುವ ಶೋಷಣೆ, ದಬ್ಬಾಳಿಕೆಗಳನ್ನು ಗಮನಿಸಿ, ಅದನ್ನು ತಡೆಯಲು ಪ್ರಜ್ಞಾಪೂರ್ವಕವಾಗಿ ಕಾರ್ಯಗಳನ್ನು ರೂಪಿಸುತ್ತದೆ. ಸ್ತ್ರೀವಾದದ ಈ ಕಾರ್ಯಚಟುವಟಿಕಗಳು ಬರೀ ವೇದಿಕೆಗಳಿಗೆ ಮಾತ್ರ ಸೀಮಿತವಾಗಿಲ್ಲ. ಹೀಗಾಗಿ -

> "An Awarness of Women oppression and Exploitation in Society, at work and within the family and Conscious action by Women and men to change this situation"[೬] ಎನ್ನಬಹುದಾಗಿದೆ.

'ಸ್ತ್ರೀವಾದ' ಎಂಬ ಪದ ೧೮೭೦-೯೦ರ ಸಂದರ್ಭದ ವೇಳೆಗೆ ನಿಘಂಟಿನಲ್ಲೂ ಸೇರಿಕೊಂಡಿತು. ಸ್ತ್ರೀವಾದ ಎಂಬ ಶಬ್ದವನ್ನು "೧೮೭೨ರಲ್ಲಿ L.Homme femme" ಎನ್ನುವ ಕಿರುಹೊತ್ತಿಗೆಯೊಂದರಲ್ಲಿ ಕಿರಿಯ ಅಲೆಗ್ಸಾಂಡರ್ ಡ್ಯೂಮ್ ಮೊಟ್ಟ ಮೊದಲು ಬಳಸಿದ್ದನೆನ್ನಲಾಗಿದೆ. ಮಹಿಳೆಯರ ಹಕ್ಕು ಬಾಧ್ಯತೆಗಳನ್ನು ಕುರಿತಂತೆ ನಡೆಸುತ್ತಿದ್ದ ಚಳವಳಿಗಳನ್ನು ಸಹ ಈ ಶಬ್ದವು ಸೂಚಿಸುತ್ತಿತ್ತು.

ಸ್ತ್ರೀವಾದ ಒಂದು ವಿಚಾರಧಾರೆ, ಜೀವನಕ್ರಮ, ಸಾಮಾಜಿಕ ಚಳವಳಿ, ಸೈದ್ಧಾಂತಿಕ ಕ್ರಮವೂ ಆಗಿದೆ. ಸ್ತ್ರೀವಾದದ ಬಗ್ಗೆ ಮತ್ತಷ್ಟು ತಿಳಿಯಲು ಈ ಕೆಳಗಿನ ಅಂಶಗಳನ್ನು ಪರಿಶೀಲಿಸಬಹುದು.

### ೧. ಸ್ತ್ರೀತ್ವ

ಸ್ತ್ರೀ-ಪುರುಷರ ನಡುವಿನ ದೈಹಿಕ, ಜೈವಿಕ ಭಿನ್ನತೆಯೊಂದಿಗೆ 'ಸ್ತ್ರೀತ್ವ' ಎನ್ನುವ ಪರಿಕಲ್ಪನೆ ಬಿದ್ದುಗೊಂಡಿದೆ. ದೈಹಿಕ-ಜೈವಿಕ ವ್ಯತ್ಯಾಸವು ವಂಶವಾಹಿನಿಗಳಿಂದ ನಿರ್ಧಾರಿತವಾಗಿದ್ದು ಎಲ್ಲ ಜೀವಿ ವರ್ಗಕ್ಕೂ ಅನ್ವಯವಾಗುವ ಜೈವಿಕ ಸ್ಥಿತಿಯಾಗಿರುತ್ತದೆ. ಆದರೆ ಪುರುಷ ಪ್ರಧಾನ ಸಮಾಜ ಜೈವಿಕತೆಯಿಂದ ವ್ಯಕ್ತಿತ್ವದ

ಗುಣಗಳಿಗೆ ಸಂಬಂಧ ಕಲ್ಪಿಸುವ ಏಕಪಕ್ಷೀಯ ನಿಲುವು ತಳೆದಿದೆ. ಸಹಜವಾಗಿ ಪುರುಷರೂ ಮಹಿಳೆಯ ಬಗ್ಗೆ ತಪ್ಪಾಗಿ ಆಲೋಚಿಸುವುದುಂಟು. ಜೈವಿಕ ಆಧಾರಿತ ನಿರ್ದಿಷ್ಟ ಗುಣಗಳಿಂದ ಸ್ತ್ರೀ-ಪುರುಷರನ್ನು ಗುರುತಿಸುತ್ತ ಆಕ್ರಮಣಶೀಲತೆ, ಸಾಹಸ, ಬಿರುಸು, ಧೈರ್ಯ, ಶೌರ್ಯ, ವೈಚಾರಿಕತೆ ಮೊದಲಾದವುಗಳು ಗಂಡು ಗುಣಗಳು ಎಂದೂ, ಕೋಮಲತೆ, ಮಾರ್ದವತೆ, ಭಯ, ಸಹನೆ, ಭಾವನಾತ್ಮಕತೆ, ನಂಬಿಕೆ ಮೊದಲಾದವು ಹೆಣ್ಣಿನ ಗುಣಗಳೆಂದೂ ವಿಂಗಡಿಸಲಾಗಿದೆ. ಹೀಗೆ ನಿರ್ಧರಿತವಾದ ಗುಣಗಳ ಆಚರಣೆಗಳಿಂದ ಸ್ತ್ರೀ-ಪುರುಷರಿಬ್ಬರೂ ಸಮಾಜದಲ್ಲಿ ಗೌರವಕ್ಕೆ ಅರ್ಹರಾಗುತ್ತಾರೆ. ಮಹಿಳೆಯೊಬ್ಬಳು ಸಾಹಸ ಕಾರ್ಯಗಳಲ್ಲಿ ನಿರತಳಾದರೆ, ಜೋರಾಗಿ ಮಾತನಾಡಿದರೆ, ಗಟ್ಟಿಯಾಗಿ ನಗುವುದು, ಯಾವಾಗಲೂ ಪುರುಷರ ಸಂಗಡ ಇದ್ದರೂ ಮುಂತಾದವುಗಳಿಂದ ಆಕೆಯನ್ನು 'ಗಂಡುಬೀರಿ' ಎಂಬ ಮಾತುಗಳಿಂದ ವ್ಯಂಗ್ಯ ಮಾಡಲಾಗುತ್ತದೆ. ಹಾಗೆಯೇ ಪುರುಷನೊಬ್ಬ ಸಾಹಸ ಕಾರ್ಯಗಳಲ್ಲಿ ತೊಡಗಿಕೊಂಡು ವಿಫಲನಾದರೆ ಅಂಥವನಿಗೆ ಬಳೆ, ಸೀರೆ ನೀಡುವ ರೂಢಿಯೂ ಇದೆ. ಪುರುಷನೊಬ್ಬ ಬರೀ ಮಹಿಳೆಯರ ನಡುವೆ ಇದ್ದರೆ ಅವನನ್ನು 'ಹೆಣ್ಣಿಗ' ಎನ್ನಲಾಗುತ್ತದೆ. ಅಲ್ಲದೇ ನಗುವ ಮಹಿಳೆಯರನ್ನು ಅಳುವ ಗಂಡಸನ್ನು ನಂಬಬಾರದು ಎಂಬ ವಾಡಿಕೆಯು ಇದೆ. ಇಂಥ ಲಿಂಗಭೇದ ಅಸಮಾನತೆಗಳನ್ನು ತಳ್ಳಿಹಾಕಿದ ಸ್ತ್ರೀವಾದವು ವೈಜ್ಞಾನಿಕ ನೆಲೆಯಲ್ಲಿ ಆಲೋಚಿಸುತ್ತ ಈಗಾಗಲೇ ರೂಢಿಯಲ್ಲಿದ್ದ ಗುಣಗಳನ್ನು ತಿರಸ್ಕರಿಸಲು ಮುಂದಾಗಿದೆ. ಸ್ತ್ರೀ-ಪುರುಷರಿಬ್ಬರಿಗೂ ಅವರು ಬೆಳೆಯುವ ಪರಿಸರ, ದೊರೆತ ಅವಕಾಶಗಳಿಂದ ಗುಣಗಳು ನಿರ್ಧಾರವಾಗಿರುತ್ತವೆಯೇ ಹೊರತು ಅವು ಯಾವುದೇ ಹುಟ್ಟಿನಿಂದ ಬಂದಿರುವುದಿಲ್ಲ ಎಂದು ಸ್ತ್ರೀವಾದ ತಿಳಿಸುತ್ತದೆ.

**೨. ಸ್ತ್ರೀಯಾತ್ಮಕತೆ**

ಹೆಣ್ಣಿನ ಜೈವಿಕತೆಯನ್ನು ನಿರ್ದಿಷ್ಟ ಸಾಮಾಜಿಕ ಚೌಕಟ್ಟಿಗೆ ಒಳಪಡಿಸಿದಾಗ ಉಂಟಾಗುವುದೇ ಸ್ತ್ರೀಯಾತ್ಮಕತೆ. ಸಹಜ ಜೈವಿಕತೆಯು ಇನ್ನೊಂದೇನೋ ಆಗುವ ಪ್ರಕ್ರಿಯೆ ಇದು. ಸ್ತ್ರೀ ಪ್ರಕೃತಿಯನ್ನು ಸಂಸ್ಕೃತಿಯಾಗಿಸುವ ಅವಧಿಯನ್ನೇ "ಸ್ತ್ರೀಯಾತ್ಮಕತೆ" ಎನ್ನಲಾಗುತ್ತದೆ. ಪುರುಷ ಪ್ರಧಾನ ಚರಿತ್ರೆಯುದ್ದಕ್ಕೂ ಈ ಸಂಸ್ಕೃತೀಕರಣ ಕಾರ್ಯ ಪುರುಷನ ಹಿತಾಸಕ್ತಿಗಳಿಗೆ ಅನುಗುಣವಾಗಿ ನಡೆದಿದೆ. ಅಲ್ಲದೆ ಸಂಸ್ಕೃತೀಕರಣಗೊಂಡ ಪಾತ್ರಗಳಿಂದ ಸ್ತ್ರೀ-ಪುರುಷರ ವ್ಯಕ್ತಿತ್ವವೂ ವಿಕಾಸವಾಗದೆ ತಡೆ ಆಗಿರುತ್ತದೆ. ಮಹಿಳೆಯನ್ನು ತಾಯಿ, ಹೆಂಡತಿ, ಸೊಸೆ, ಮಗಳು, ವಿಧವೆ, ಬಂಜೆ, ಸೂಳೆ ಎಂಬ ಪಾತ್ರಗಳಿಂದ ಗುರುತಿಸಿದೆ. ಮಹಿಳೆಯು ಸಹ ಇವುಗಳೇ ಜೀವನದ ಮೌಲ್ಯಗಳೆಂದೂ ತನಗೆ ನೀಡಿದ ಪಾತ್ರಗಳನ್ನು ನಿರ್ವಹಿಸುತ್ತ ಅವುಗಳಿಂದಲೇ ಪುರುಷ ಪ್ರಧಾನ ಸಮಾಜಕ್ಕೆ ಅಧೀನಳಾಗಿದ್ದಾಳೆ. ಪ್ರತಿ ಮಹಿಳೆಯು ಮದುವೆ ಆಗಲೇಬೇಕು ಮತ್ತು ಗೃಹಿಣಿಯು ಮಗುವಿಗೆ ಜನ್ಮನೀಡಲೇಬೇಕು ಎಂಬ ಹೇರಿಕೆಯು ರೂಢಿಗೆ ಬಂದಿತು. ಮಹಿಳೆಯು ತಾಯಿತನ ಪಡೆಯುವ ಕ್ರಿಯೆ ನೈಸರ್ಗಿಕ ಸೃಷ್ಟಿಯದಾಗಿರುತ್ತದೆ. ಆದರೆ ಪುರುಷ ಪ್ರಧಾನತೆ 'ತಾಯಿತನ'ವನ್ನು ವೈಭವೀಕರಿಸುತ್ತ ಹೆಣ್ಣನ್ನು ಅಧೀನವಾಗಿಸಿಕೊಂಡು, ಅದೇ ಹೊತ್ತಿನಲ್ಲಿ ಪುರುಷನ 'ತಂದೆತನ'ವನ್ನು ಗೌಣವಾಗಿಸಿದೆ. ಇಂಥ ಅಸಮಾನತೆಯನ್ನು ಸ್ತ್ರೀವಾದ ಗುರುತಿಸಿ ವಿರೋಧಿಸಿದೆ ಸಹ. ಹಾಗೂ 'ತಾಯಿತನ' ಪಡೆದ ಮಹಿಳೆಯರನ್ನು ಗೌರವದಿಂದ ಕಾಣುವುದು, ತಾಯಿತನ ಪಡೆಯದ ಮಹಿಳೆಯರನ್ನು 'ಬಂಜೆ' ಎಂದು ಕೀಳಾಗಿ ಕಾಣುವುದನ್ನು ಪ್ರತಿಭಟಿಸಿದೆ. ತಾಯಿತನ ಪಡೆಯುವುದು ಮಹಿಳೆಯರಿಗೆ ಇಚ್ಛೆಯಾಗಿರಬೇಕೆ ಹೊರತು ಒತ್ತಾಯವಾಗಿರಬಾರದು ಎಂಬುದನ್ನು ಮಹಿಳಾ ಚಿಂತನೆ ಮೂಡಿಸುತ್ತಿದೆ.

ಗಂಡನ ಅಗಲಿಕೆಯಿಂದಾಗಿ ಮಹಿಳೆಯು 'ವಿಧವೆ' ಪಟ್ಟ ಪಡೆದು ಮಕ್ಕಳ-ಸಂಸಾರದ ಹೊಣೆ ಹೊರಬೇಕು. ಜೊತೆಗೆ ಮಾನಸಿಕವಾಗಿ, ದೈಹಿಕವಾಗಿ, ಬೌದ್ಧಿಕವಾಗಿ ಹಿಂಸೆಯನ್ನು ಅನುಭವಿಸುತ್ತಾಳೆ. ಆದರೆ ಪುರುಷನೊಬ್ಬ ಹೆಂಡತಿ ಸತ್ತ ಕೆಲವೇ ದಿನಗಳಲ್ಲಿ ಮರುವಿವಾಹ, ಉಪಪತ್ನಿಯನ್ನು ಹೊಂದುತ್ತಾನೆ. ಇಂಥ ಅಸಮಾನತೆಯನ್ನು ಪ್ರಶ್ನಿಸಿದರೆ ಪುರುಷನು ಹೊರಗೆ ದುಡಿಯಲು ಹೋಗಬೇಕಾಗಿದ್ದರಿಂದ ಮಕ್ಕಳ ಲಾಲನೆ-ಪಾಲನೆಗೆ, ಮನೆಯ ಕೆಲಸ-ಕಾರ್ಯಗಳಿಗೆ ಮರುವಿವಾಹ ಅವಶ್ಯಕ ಎಂಬ ಉತ್ತರ ಸಿದ್ಧವಾಗಿರುತ್ತದೆ. ಇಂಥ ಅರ್ಥಹೀನ ಲಿಂಗಾಧಾರಿತ ರೂಢಿಯನ್ನು ಸ್ತ್ರೀವಾದ ವಿರೋಧಿಸಿದೆ. ಕುಟುಂಬದಲ್ಲಿ ಸ್ತ್ರೀ-ಪುರುಷರಿಬ್ಬರಿಗೂ ಸಮಾನ ಹಕ್ಕು-ಕರ್ತವ್ಯಗಳು ಉಂಟು ಎಂದಿದೆ. ಇದೇ ಹೊತ್ತಿನಲ್ಲಿ ಸಂಸ್ಕೃತೀಕರಣಗೊಳಿಸುವ ಮಹಿಳೆಯನ್ನು ಒಂದೆಡೆ ದೇವಿ ಎಂದೂ, ಇನ್ನೊಂದೆಡೆ ಆಳು, ಭೋಗದ ವಸ್ತು ಎಂದು ಕಂಡಿದ್ದನ್ನು ತಿಳಿಸಿ ಪ್ರತಿರೋಧ ವ್ಯಕ್ತಪಡಿಸಿದೆ. ಇದುವರೆಗೆ 'ವಿವಾಹ, ಕುಟುಂಬ' ಎಂಬ ಸಂಸ್ಥೆಗಳು ಮಹಿಳೆಗೆ ರಕ್ಷಣೆ ನೀಡುತ್ತವೆ ಎಂಬ ಭ್ರಮೆ ಇತ್ತು. ಇಂಥ ಭ್ರಮೆಯನ್ನು ಸ್ತ್ರೀವಾದ ಅಲ್ಲಗಳೆದಿದೆ. ಹಾಗೂ ಗೃಹ ಕೆಲಸಕಾರ್ಯಗಳು ಮಹಿಳೆಗೆ, ಮನೆಯಾಚೆಗಿನ ಕೆಲಸಕಾರ್ಯಗಳು ಗಂಡಿಗೆ ಎಂದು ನಿರ್ಧರಿಸಿದ್ದನ್ನು ಸ್ತ್ರೀವಾದವು ಅಲ್ಲಗಳೆದಿದೆ.

ರಾಜಕೀಯ, ಧಾರ್ಮಿಕ ನೆಲೆಗಳಲ್ಲಿಯೂ ಮಹಿಳೆಯನ್ನು ವೈಭವೀಕರಿಸಿದ್ದು, ಮತದಾನ, ಮೀಸಲಾತಿ, ಆಸ್ತಿಹಂಚಿಕೆ, ವೈವಾಹಿಕ ಕಾನೂನುಗಳು, ರಾಷ್ಟ್ರೀಯ ವಾಣಿಜ್ಯ ವ್ಯವಹಾರ, ಗಡಿರಕ್ಷಣೆ ಮೊದಲಾದವುಗಳೆಲ್ಲ ಪುರುಷ ಕೇಂದ್ರಿತ ಆಗಿದ್ದು, ಮಹಿಳೆಗೆ ಯಾವ ಪ್ರಧಾನ್ಯತೆಯನ್ನೂ ನೀಡಿಲ್ಲ. ಇಂಥ ವ್ಯವಸ್ಥೆಯನ್ನು ಗುರುತಿಸಿದ ಸ್ತ್ರೀವಾದ ಅವುಗಳನ್ನೆಲ್ಲಾ ಮರು ನಿರ್ವಚಿಸಲು, ವ್ಯಾಖ್ಯಾನಿಸಲು ಸೂಚಿಸಿದೆ. ರಾಜಕೀಯ ಮತ್ತು ಧಾರ್ಮಿಕ ನೆಲೆಗಳಿಂದ ಮಹಿಳೆಯರನ್ನು ಒಡೆದು ಆಳುವ ಸಂಚು ಸಹ ಇರುತ್ತವೆ. ಉದಾಹರಣೆಗೆ ೨೦೦೨ರ ಸಂದರ್ಭದಲ್ಲಿ ಉಡುಪಿಯ ಸ್ವಾಮಿಯೊಬ್ಬರು ಭಾಷಣದಲ್ಲಿ "ವಿದೇಶಿ ಮಹಿಳೆಯೊಬ್ಬಳು ಭಾರತದ ಪ್ರಧಾನಿಯಾದರೆ ತಾವು ಭಾರತ ಬಿಟ್ಟು ಹೊರ ದೇಶಗಳಲ್ಲಿ ಬದುಕುತ್ತೇವೆ" ಎಂದಿದ್ದರು. ಇಂಥ ಅರ್ಥಹೀನ ಕ್ಷುಲ್ಲಕ ವಿಚಾರ ಮಾತುಗಳನ್ನು ಸ್ತ್ರೀವಾದ ಪ್ರಶ್ನಿಸಿದೆ. ಧಾರ್ಮಿಕ ಮುಖಂಡರೊಬ್ಬರು ಮಹಿಳೆಯನ್ನು ಉದ್ದೇಶಿಸಿ ಮೇಲಿನಂತೆ ಅಭಿಪ್ರಾಯ ವ್ಯಕ್ತಪಡಿಸಿದರೆ, ಇನ್ನೂ ಜನಸಾಮಾನ್ಯರು ಹೇಗೆ ಚಿಂತಿಸುತ್ತಾರೆ ಎಂಬುದು ಊಹೆಗೂ ನಿಲುಕದು. ಇದನ್ನೆಲ್ಲಾ ಸ್ತ್ರೀವಾದ ಅಭಿವ್ಯಕ್ತಿಸುತ್ತದೆ.

ಸಿನಿಮಾ, ರೇಡಿಯೊ, ಟಿ.ವಿ. ಪತ್ರಿಕೆಗಳು ಮೊದಲಾದವುಗಳಲ್ಲಿನ ಕತೆಗಳು, ಹೇಳಿಕೆಗಳು, ಜಾಹೀರಾತು, ಸಂಭಾಷಣೆಗಳು ಸ್ತ್ರೀ ಸ್ವಾತಂತ್ರ್ಯವನ್ನು ಅತಿಯಾಗಿ ವೈಭವೀಕರಿಸುತ್ತ ಅಥವಾ ಪೂರ್ವಗ್ರಹಗಳಿಂದಲೇ ತೋರಿಸುತ್ತವೆ. ಮತ್ತೆ ಕೆಲವು ಬಾರಿ ಅತಿಯಾಗಿ ಸ್ತ್ರೀ ಸ್ವಾತಂತ್ರ್ಯವನ್ನು ವಿವರಿಸುತ್ತ ಹೆಣ್ಣಿನ ಸ್ವಾತಂತ್ರ್ಯ ಕುಟುಂಬದ ನೆಮ್ಮದಿಗೆ ಅಡ್ಡಿ ಎಂಬ ದ್ವಂದ್ವ ನೀತಿಗಳನ್ನು ಪ್ರದರ್ಶಿಸುತ್ತವೆ. ಇಂಥವುಗಳು ಮಹಿಳೆಗೆ ಸವಾಲುಗಳಾಗಿ ಪರಿಗಣಿತವಾಗಿವೆ. ಉದಾಹರಣೆಗೆ 'ಲಜ್ಜಾ' ಸಿನಿಮಾವೊಂದರಲ್ಲಿ ಸ್ತ್ರೀಯೊಬ್ಬಳು ಸೀತೆಯ ಪಾತ್ರ ಮಾಡಬೇಕಾಗಿದ್ದಾಗ ಆಕೆ ತನ್ನ ಪಾವಿತ್ರ್ಯತೆಯನ್ನು ಸಾಬೀತುಪಡಿಸಲು ಅಗ್ನಿಪರೀಕ್ಷೆ ಎದುರಿಸುವ ಪಾತ್ರವಿತ್ತು. ಆದರೆ ಆ ಮಹಿಳೆ ತಾನು ಅಗ್ನಿಯನ್ನು ಪ್ರವೇಶಿಸಲು ನಿರಾಕರಿಸುತ್ತಾಳೆ. ಇದು ಪ್ರೇಕ್ಷಕರಿಗೆಲ್ಲಾ ಆತಂಕವನ್ನು ಉಂಟುಮಾಡಿ ನಮ್ಮ ಸಂಸ್ಕೃತಿಯು ನಾಶವಾಗುತ್ತದೆ ಎಂದು ಆಲೋಚಿಸಲು ಅವಕಾಶ ನೀಡಿತು. ಇಂಥ ಸಂದರ್ಭದಲ್ಲೆಲ್ಲ ಸ್ತ್ರೀವಾದ ಪ್ರವೇಶಿಸಿ ಸಂಸ್ಕೃತಿ ಎಂದರೇನು? ಯಾವುದು? ಒಂದು ಸಂಸ್ಕೃತಿಯಿಂದ

ಕೆಲವು ವರ್ಗಗಳಿಗೆ ಹಿಂಸೆ-ನೋವು ಆಗುತ್ತಿದ್ದರೆ ಅದು ಒಳ್ಳೆಯ ಸಂಸ್ಕೃತಿಯೇ? ಎಂದು ಪ್ರಶ್ನಿಸಿ, ಇಂಥ ಪುರುಷ ಕೇಂದ್ರಿತ ಮತ್ತು ಜೀವ ವಿರೋಧಿ ಮೌಲ್ಯಗಳ ಸಂಸ್ಕೃತಿಯನ್ನು ಸ್ತ್ರೀವಾದ ನಿರಾಕರಿಸುತ್ತದೆ. ಪ್ರಾಚೀನ ಕಾಲದಿಂದ ರೂಢಿಯಲ್ಲಿರುವ ಸತಿಸಹಗಮನ, ಬಾಲ್ಯವಿವಾಹ, ವೇಶ್ಯೆ, ವಧುದಹನ, ಬಹುಪತ್ನಿತ್ವ ಮೊದಲಾದವು ಭಾರತೀಯ ಹೆಮ್ಮೆಯ ಸಂಸ್ಕೃತಿಯಲ್ಲಿದ್ದುದನ್ನು ಸಹ ತಿರಸ್ಕರಿಸುವಂತೆ ಹೇಳಿದೆ. ಇಂಥ ಪ್ರತಿಕ್ರಿಯೆಗೆ ಮಡಿವಂತರ, ಸಂಪ್ರದಾಯವಾದಿಗಳ ವಿರೋಧವೂ ವ್ಯಾಪಕವಾಗಿ ಅಭಿವ್ಯಕ್ತವಾಗಿದೆ. ಸ್ತ್ರೀವಾದವು ಭಾರತೀಯ ಸಂಸ್ಕೃತಿ ಮತ್ತು ಮಹಿಳೆಯರನ್ನು ಹಾಳು ಮಾಡುತ್ತದೆ ಎಂದು ಬೊಬ್ಬೆ ಹೊಡೆದರೂ ಕೂಡ ಸ್ತ್ರೀವಾದ ಅಂಥ ವಿರೋಧಿ ಭಾವನೆಯ ಪ್ರತಿಕ್ರಿಯೆಗಳನ್ನು ಎದುರಿಸುತ್ತ, ಪ್ರಶ್ನಿಸುತ್ತ ಬದಲಾವಣೆಗಾಗಿ ಹೋರಾಟ ಮಾಡುತ್ತಿದೆ.

ಸುಖ-ದುಃಖ, ಸಂತೋಷ, ನೋವು-ನಲಿವುಗಳು ಸ್ತ್ರೀ-ಪುರುಷರಿಬ್ಬರಿಗೂ ಒಂದೇ ಆಗಿರುತ್ತವೆ. ಆದರೆ ಅವುಗಳನ್ನು ವ್ಯಕ್ತಪಡಿಸುವಾಗ ಲಿಂಗಭೇದ ತಡೆಯನ್ನು ನೀಡುತ್ತದೆ. ಉದಾಹರಣೆಗೆ ಜಾನಪದ ಸಾಹಿತ್ಯದಲ್ಲಿ ತಂದೆಯೊಬ್ಬ ಮಗಳನ್ನು ಗಂಡನ ಮನೆಗೆ ಕಳಿಸುವಾಗ ವಸ್ತ್ರದ ಮರೆಯಲ್ಲಿ ಅಳುತ್ತಾನೆ. ಇಲ್ಲಿ ಗಂಡಸು ಮುಕ್ತವಾಗಿ ಅಳಬಾರದು ಎಂಬ ಹೇರಿಕೆ ಇದೆ. ಇಂಥ ಹೇರಿಕೆಗಳು ಸ್ತ್ರೀ-ಪುರುಷರಿಬ್ಬರಿಗೂ ಅಡ್ಡಿಯಾಗಿದ್ದನ್ನು ಸ್ತ್ರೀವಾದ ಗುರುತಿಸಿ, ವಿರೋಧಿಸಿದೆ.

ಮಹಿಳೆಯ ನಡೆ-ನುಡಿ, ಉಡುಗೆ-ತೊಡುಗೆ, ಆಚಾರ-ವಿಚಾರ, ವೈಯಕ್ತಿಕ ನಿರ್ಧಾರ ಎಲ್ಲವುಗಳ ಮೇಲೆ ಪುರುಷಕೇಂದ್ರಿತ ಹೇರಿಕೆಗಳಾಗಿರುವುದನ್ನು ಸ್ತ್ರೀವಾದ ಗುರುತಿಸಿದೆ. ಹಾಗೂ ವಿರೋಧಿಸುವಂತೆ ತಿಳಿಸಿರುತ್ತದೆ. ಉದಾಹರಣೆಗೆ ಗೊಲ್ಲ, ಭೋವಿ ಜನಾಂಗದ ಮಹಿಳೆಯರು ರವಿಕೆ ಧರಿಸದೆ ಇರುವುದನ್ನು ಲಂಬಾಣಿ ಮಹಿಳೆಯರ ಉಡುಪು ಮತ್ತು ಇತರೆ ಮಹಿಳೆಯರು ಧರಿಸುವ 'ಪರದಾ' ಸಹ ಹೆಣ್ಣಿನ ಮುನ್ನಡೆಗೆ ತಡೆಯಾಗಿವೆ ಎಂದು ಹೇಳುವುದರ ಜೊತೆಗೆ ಇಂಥವುಗಳನ್ನು ತಿರಸ್ಕರಿಸುವಂತೆಯೂ ತಿಳಿಸಿದೆ.

### ೩. ದೈಹಿಕ ಶ್ರೇಷ್ಠತೆಯ ನಿರಾಕರಣೆ

ಪುರುಷ ಹಾರ್ಮೋನುಗಳು ಆತನನ್ನು ಬಲಿಷ್ಠನನ್ನಾಗಿ, ಆಕ್ರಮಣಕಾರಿ, ದೃಢಕಾಯ ವ್ಯಕ್ತಿಗಳನ್ನಾಗಿ ಮಾಡಿದರೆ, ಸ್ತ್ರೀ ಹಾರ್ಮೋನುಗಳು ಸಾಧು ಸ್ವಭಾವ, ಮಾರ್ದವತೆ ಇತ್ಯಾದಿಗಳಿಂದ ಕೂಡಿವೆ. ಆದರೆ ಪುರುಷರ ದೇಹ ಶ್ರೇಷ್ಟ ಎಂದು ಹೆಣ್ಣಿನ ದೇಹ ಕನಿಷ್ಟ ಎಂಬುದನ್ನು ಸ್ತ್ರೀವಾದ ದೈಹಿಕ ಶ್ರೇಷ್ಠತೆಯನ್ನು ನಿರಾಕರಿಸಿ, ಪುರುಷತ್ವ, ಸ್ತ್ರೀತ್ವಗಳು ಮಾನಸಿಕ ಸ್ಥಿತಿಗಳಾಗಿವೆಯೇ ಹೊರತು, ಸಾರ್ವತ್ರಿಕವಾಗಿ ಅಲ್ಲ. ವ್ಯಕ್ತಿತ್ವದ ವಿಕಾಸಕ್ಕೆ ದೊರೆತ ಸಂದರ್ಭ, ಅವಕಾಶಗಳಿಂದ ರೂಪುಗೊಂಡಿವೆ ಎಂದು ಸ್ಪಷ್ಟಪಡಿಸಿದೆ. ಪುರುಷನ ಕಾರ್ಯಗಳು ಕುಟುಂಬದ ಆಚೆ ಇರುವುದರಿಂದ ಅವು ಗೋಚರಿಸಿ, ಶ್ರೇಷ್ಠತೆಯನ್ನು ತಂದಿವೆ. ಆದರೆ ಹೆಣ್ಣು ದಿನವಿಡೀ ಕೆಲಸ ಮಾಡುತ್ತಾ ಮಕ್ಕಳಿಗೆ ಜನ್ಮ ನೀಡುತ್ತಾಳೆ. ಈ ಕ್ರಿಯೆಗಳು ಎಲ್ಲ ನಾಲ್ಕು ಗೋಡೆಯೊಳಗೆ ಆಗುತ್ತಿದ್ದು ಹೊರಗಡೆ ಗೋಚರಿಸುತ್ತಿಲ್ಲ. ಇದರಿಂದ ಹೆಣ್ಣಿನ ಶ್ರಮದಕ್ಷತೆಯು ಗೋಚರಿಸದೇ, ಅವಳು ಕೇವಲ ಅನುತ್ಪಾದಕ ಶಕ್ತಿಯೆಂದು ತಿಳಿಯಲಾಗಿದೆ. ಆದರೆ ಆಕೆ ನಿರ್ವಹಿಸುವ ಮನೆಯೊಳಗಿನ ಹಾಗೂ ಮನೆಯಾಚೆಗಿನ ಆಫೀಸು, ಹೊಲ-ಗದ್ದೆ, ಕಾರ್ಖಾನೆಗಳ ಶ್ರಮ ಪುರುಷನಷ್ಟೇ ಉತ್ಪಾದಕ ಮೌಲ್ಯವಾಗಿದೆ. ಇವೆಲ್ಲವುಗಳಿಂದ

ಆಕೆಯೇನು ಕನಿಷ್ಟ ಅಲ್ಲ ಎಂಬುದನ್ನು ಸ್ತ್ರೀವಾದ ತೋರಿಸಿದೆ. ಈಗಾಗಲೇ ಮಹಿಳಾ ಕ್ರೀಡಾಪಟುಗಳು ತಾಯಿಯರಾಗಿ ಮತ್ತೆ ಕ್ರೀಡಾ ಕ್ಷೇತ್ರಕ್ಕೆ ಬಂದು ಸಾಧನೆ ಮಾಡಿ ತೋರಿಸಿದ್ದಾರೆ. ಇವರೇನು ಅಬಲೆಯರೆ? ಇಂಥವೆಲ್ಲವುಗಳನ್ನು ಸ್ತ್ರೀವಾದ ಚರ್ಚಿಸಿ, ಸ್ತ್ರೀಯರಿಗೆ ಗೌರವ ದೊರೆಯುವಂತೆ ಮಾಡಲು ಪ್ರಯತ್ನಿಸಿದೆ.

**೪. ಹೊರ ದುಡಿಮೆಯ ನಿರಾಕರಣೆ**

ಮಹಿಳೆಯರು ಕುಟುಂಬದ ಆಚೆ ದುಡಿಯಲು ಹೋಗಿ ಆರ್ಥಿಕವಾಗಿ ಸಬಲರಾಗುತ್ತಾರೆ. ಆಗ ಮನೆ, ಮಕ್ಕಳು, ಗಂಡನನ್ನು ಸರಿಯಾಗಿ ಗಮನಿಸುವುದಿಲ್ಲ. ಇದರಿಂದಾಗಿ ಕುಟುಂಬದ ನೆಮ್ಮದಿ ಹಾಳಾಗಿ ಮಕ್ಕಳು ಬಾಲಾಪರಾಧಕ್ಕೆ ಗುರಿ ಆಗುತ್ತಾರೆ. ದಾಂಪತ್ಯದಲ್ಲಿಯೂ ವಿರಸ ಉಂಟಾಗಿ, ವಿಚ್ಛೇದನಕ್ಕೆ ದಾರಿ ಆಗುತ್ತದೆ ಎಂಬ ಇಂಥ ಹಲವಾರು ಭ್ರಮೆಗಳು ರೂಢಿಯಲ್ಲಿದ್ದವು. ಇವೆಲ್ಲವುಗಳನ್ನು ಸ್ತ್ರೀವಾದ ಪ್ರಶ್ನಿಸಿ, ಗೃಹಿಣಿ ಆಗಿದ್ದರಿಂದ ವಿಚ್ಛೇದನಗಳು ಆಗಿಲ್ಲವೆ? ಅವರ ಮಕ್ಕಳು ಬಾಲ ಅಪರಾಧಿಗಳಾಗಿಲ್ಲವೆ? ದಾಂಪತ್ಯ ಜೀವನ ಸುಖವಾಗಿ ಇರುವುದೆ? ಎಂದಿದೆ. ಇದರಿಂದಾಗಿ ಸ್ತ್ರೀಯರು ಕುಟುಂಬದಾಚೆ ಬಂದು ದುಡಿಯುತ್ತಿದ್ದಾರೆ. ಇಂದಿನ ಬಹುಪಾಲು ಮಹಿಳೆಯರು 'ಉದ್ಯೋಗಂ ಸ್ತ್ರೀ ಲಕ್ಷಣಂ' ಎಂಬ ಮನೋಭಾವನೆಯುಳ್ಳವರಾಗಿದ್ದಾರೆ. ಎಲ್ಲ ಕ್ಷೇತ್ರಗಳಲ್ಲೂ ಪ್ರವೇಶಿಸಿ, ಪುರುಷನ ಸರಿಸಮಾನ ದುಡಿಯುತ್ತಿದ್ದಾರೆ. ಇದಕ್ಕೆಲ್ಲಾ ಕಾರಣ ಸ್ತ್ರೀವಾದವೇ ಆಗಿರುತ್ತದೆ.

**೫. ಸಾಮಾಜಿಕ ಕಾರ್ಯಗಳು**

ಹೆಣ್ಣನ್ನು ನಾಲ್ಕು ಗೋಡೆಗಳ ಮಧ್ಯೆ ಬಂಧಿಯನ್ನಾಗಿಸಿ ಬಾವಿಯಲ್ಲಿನ ಕಪ್ಪೆಯ ತೆರನಾಗಿ ಭಾವಿಸಲಾಗಿತ್ತು. ಇದರಿಂದಾಗಿ ಹೆಣ್ಣು ಸಹ ಕುಟುಂಬವೇ ದೊಡ್ಡ ಸಾಮ್ರಾಜ್ಯ ಎಂಬ ಕಲ್ಪನೆಯಲ್ಲಿ ತೇಲಿದ್ದು, ವೈಚಾರಿಕತೆಯನ್ನು ಬೆಳೆಸಿಕೊಳ್ಳಲು ವಿಫಲಳಾದಳು. ಆದರೆ ಸ್ತ್ರೀವಾದ ಮಹಿಳೆಗೆ ಸೂಕ್ತ ಅವಕಾಶಗಳನ್ನು ಕೊಟ್ಟು ಮಹಿಳೆಯು ಆಡಳಿತದ ಉಸ್ತುವಾರಿ, ಪ್ರಮುಖ ಸ್ಥಾನಗಳನ್ನು ಪಡೆಯುವಂತೆ ಮಾಡಿದೆ. ಜೊತೆಗೆ ವ್ಯಕ್ತಿತ್ವ ವಿಕಾಸಕ್ಕೆ ಹೆಚ್ಚು ಗಮನ ಹರಿಸುವಂತೆ ಮಾಡಿದೆ. ಇದರಿಂದಾಗಿ ಕುಟುಂಬಗಳಲ್ಲಿ ಪುರುಷರೇ ಆಧಾರಸ್ತಂಭ ಎಂಬ ಭಾವನೆ ಬದಲಾಗಿ ಹೆಣ್ಣು ಎಂದರೆ 'ಎದೆಯ ಮೇಲಿನ ಭಾರ' ಎನ್ನುವುದು ಮರೆಯಾಗುತ್ತಿದೆ.

**೬. ಸ್ತ್ರೀ ಸಂಸ್ಕೃತಿಯ ಶೋಧ**

ಚರಿತ್ರೆ, ಜಾನಪದ, ಸಾಹಿತ್ಯ, ಅರ್ಥಶಾಸ್ತ್ರ, ರಾಜ್ಯಶಾಸ್ತ್ರ ಇತ್ಯಾದಿ ಕ್ಷೇತ್ರಗಳಲ್ಲಿ ಸ್ತ್ರೀ ಸಾಧನೆಗಳ ದಾಖಲೆಗಳು ಮುಚ್ಚಿಹೋಗಿವೆ. ಅಂಥ ದಾಖಲೆಗಳನ್ನು ಸ್ತ್ರೀವಾದ ಗುರುತಿಸಿ, ಶೋಧಿಸುವ ಕಾರ್ಯವನ್ನು ಆರಂಭಿಸಿದೆ. ಮಹಿಳೆಯನ್ನು ಕೇಂದ್ರವಾಗಿಟ್ಟುಕೊಂಡು 'ಹೆಣ್ಣಿನ ಬುದ್ಧಿ ಮೊಳಕಾಲು ಕೆಳಗೆ', 'ಹೆಣ್ಣಿಗೆ ಹೆಣ್ಣೇ ಶತ್ರು' ಎಂಬ ನುಡಿಗಟ್ಟುಗಳು ಎಲ್ಲ ಪುರುಷ ರಚಿತವು ಎಂದು ತಿಳಿಸುತ್ತದೆ. ಅಲ್ಲದೆ ಪಾವಿತ್ರ್ಯದ ಏಮ್ಮುಖಿ ಹೇರಿಕೆಯನ್ನು ಅಲ್ಲಗಳೆದಿದೆ. ಆರಂಭದಲ್ಲಿ ಸ್ತ್ರೀವಾದವು ಶಿಕ್ಷಣ, ಮತದಾನ, ಉದ್ಯೋಗ, ಆಸ್ತಿ ಪಡೆಯುವಿಕೆ, ಸರಕಾರದಲ್ಲಿ ಭಾಗವಹಿಸುವಿಕೆ, ವಿವಾಹ ವಿಚ್ಛೇದನ, ಸಂತಾನ ನಿಯಂತ್ರಣ ಇತ್ಯಾದಿಗಳನ್ನು ಪಡೆಯಲು

ಹೋರಾಡಿತು. ಲೆಸ್ಬಿಯನ್ನರು ಪುರುಷ ಸಂಬಂಧದಿಂದ ದೂರ ಉಳಿಯಲು ಹೋರಾಡಿದ್ದಾರೆ. ಸ್ತ್ರೀವಾದಿ ಹೋರಾಟಗಳು ನಡೆಯುತ್ತಲೇ ಇವೆ. ಆದರೂ ಅಂದು ಕೊಂಡಷ್ಟು ಸಮಾನತೆ ಸಾಧಿಸಲು ಆಗಿಲ್ಲ. ಅಂತೆಯೇ ಸ್ತ್ರೀವಾದ ತನ್ನ ಹೋರಾಟವನ್ನು ದ್ವಿಗುಣಗೊಳಿಸಿಕೊಂಡಿದೆ. ಸಮಕಾಲೀನ ಸ್ತ್ರೀವಾದಿ ಹೋರಾಟವು -

> "Today, feminists have gone beyond mere legal reforms to end discrimination; they are working towards the emancipation of women. Feminism therefore now includes the struggle against women's subordination to the male with the home; against their exploitation by the family; against their continuing low status at work, in society and in the culture and religion of the country; against their double burden in production and reproduction"[೭]

- ಮೊದಲಾದವುಗಳಿಗೆ ಸಂಬಂಧಪಟ್ಟಿದ್ದಾಗಿರುತ್ತದೆ. ಅಲ್ಲದೆ ಸ್ತ್ರೀವಾದಿ ಹೋರಾಟ ಮಹಿಳಾ ವಿಮೋಚನೆಗಷ್ಟೇ ಅಲ್ಲದೆ ಅದು -

> "Women have to not only fight against discrimination, but also for emancipation and liberation from all forms of oppression by the state, by society, by men. Since women are victims of explotation (unequal pay, low wages); subordination (under male domination) oppression (Violence against women) we are in a position to understand the problems facing other women, and know that we have to initiate the struggle to change our situation, and society itself"[೮]

- ಮೊದಲಾದ ವಿಷಯಗಳಿಗೂ ಸಂಬಂಧಿಸಿರುತ್ತದೆ. ಸ್ತ್ರೀಯರಿಗೆ ಕುಟುಂಬ ಅವಶ್ಯಕತೆ ಇದೆಯಾದರೂ ಅದು ಆಯ್ಕೆಯದಾಗಿರಬೇಕು. ಕುಟುಂಬದಲ್ಲಿ ಸ್ತ್ರೀ-ಪುರುಷರಿಬ್ಬರಿಗೂ ಸಮಾನ ಅಧಿಕಾರಗಳು ಇದ್ದು, ಮಹಿಳೆ ತನ್ನ ಲೈಂಗಿಕ ಬದುಕಿನ ಮೇಲೆ ಸೌಮ್ಯವನ್ನು ಪಡೆದುಕೊಂಡು ಸಂತಾನ ಬೇಕು-ಬೇಡಗಳನ್ನು ತಾನೇ ನಿರ್ಧರಿಸಬೇಕು. ಹೊರಗೆ ದುಡಿಯುವ ಅವಕಾಶದ ಜೊತೆಗೆ ದುಡಿಮೆಯ ಪ್ರತಿಫಲದ ಮೇಲೆ ಹಕ್ಕು ಇನ್ನೂ ಮುಂತಾದವುಗಳಲ್ಲಿ ಸಮಾನ ಅವಕಾಶಗಳನ್ನು ಪಡೆಯಲು ಮುಂದಾಗಬೇಕೆಂದು ಸ್ತ್ರೀವಾದ ಬಯಸುತ್ತದೆ.

### ೭. ಅಪವಾದಗಳು

ಇಷ್ಟೆಲ್ಲಾ ಅಂಶಗಳು ಸ್ತ್ರೀವಾದದಲ್ಲಿ ಇದ್ದರೂ ಇದು ಅಪವಾದಕ್ಕೆ ಒಳಗಾಗಿದೆ. ಸ್ತ್ರೀ ವಾದಿಗಳು ಕುಟುಂಬದ ನೆಮ್ಮದಿ ಹಾಳು ಮಾಡುವವರು. ಮಧ್ಯಮ ವರ್ಗದ ಮಹಿಳೆಯರು ಪಾಶ್ಚಾತ್ಯರಿಂದ ಪ್ರಭಾವಿತರಾದವರು, ಪುರುಷ ದ್ವೇಷಿಗಳು ಎಂದೆಲ್ಲ ತಪ್ಪಾಗಿ ಅರ್ಥೈಸಿದ್ದಾರೆ. ಸ್ತ್ರೀವಾದ ಯಾರನ್ನು ದ್ವೇಷಿಸುವುದಿಲ್ಲ, ಸ್ತ್ರೀವಾದ ವಿರೋಧಿಸುವುದು ಪುರುಷ ಕೇಂದ್ರಿತ ವ್ಯವಸ್ಥೆಯನ್ನು ಹಾಗೂ ಮೌಲ್ಯಗಳನ್ನು, ಇಂಥ ಮೌಲ್ಯಗಳನ್ನು ಹೊಂದಿದ ಪುರುಷನಾಗಲಿ, ಸ್ತ್ರೀ ಆಗಲಿ ಇದ್ದರೂ ಅವರನ್ನು ತಿರಸ್ಕರಿಸುತ್ತದೆ.

ಉದಾಹರಣೆಗೆ ಸ್ತ್ರೀ ಭ್ರೂಣ ಹತ್ಯೆ, ವರದಕ್ಷಿಣೆ ಇತ್ಯಾದಿಗಳ ಹಿಂದೆ ಸ್ತ್ರೀಯರು ಇದ್ದರೂ ಈ ಸ್ತ್ರೀಯರೂ ಪುರುಷ ಕೇಂದ್ರಿತ ಮೌಲ್ಯಗಳಿಗೆ ಒಳಗಾಗಿದ್ದನ್ನು ಸ್ತ್ರೀವಾದ ಖಂಡಿಸುತ್ತದೆ.

ಸಮೂಹ ಮಾಧ್ಯಮಗಳು, ಪತ್ರಿಕೆಗಳು ಸ್ತ್ರೀವಾದವನ್ನು ಕುರಿತು ತಪ್ಪಾಗಿ ಹೇಳುತ್ತಿವೆ. ಪತ್ರಿಕೆಗಳಲ್ಲಿ ಸ್ತ್ರೀವಾದ ಕುರಿತಂತೆ ಅಣುಕಗಳಿದ್ದು, ಸ್ತ್ರೀವಾದ, ಸ್ತ್ರೀವಾದಿಗಳೆಂದರೆ ಅಪಹಾಸ್ಯ ಮಾಡಲಾಗುತ್ತದೆ. ಹೆಣ್ಣಿನ ಗುಣ, ಆಸೆ, ಆಕಾಂಕ್ಷೆಗಳನ್ನು ವಿಪರೀತವಾಗಿ ವೈಭವೀಕರಿಸಿ ಅವುಗಳಿಂದಲೇ ಸ್ತ್ರೀವಾದಕ್ಕೆ ಅಪಹಾಸ್ಯ ಮಾಡಲಾಗುತ್ತಿದೆ. ಉದಾಹರಣೆಗೆ "ಅಮ್ಮಾವ್ರ ಗಂಡ" ಎನ್ನುವ ಚಲನಚಿತ್ರದಲ್ಲಿ ಸ್ತ್ರೀ ಗುಣಗಳನ್ನು ವೈಭವೀಕರಿಸಿ ತಪ್ಪಾಗಿ ಚಿತ್ರಿಸಿದೆ. ಅಂತೆಯೆ `ಮುದುಡಿದ ತಾವರೆ ಅರಳಿತು` ಇದು ಚಿತ್ರಲೇಖ ಅವರ ಕಾದಂಬರಿ. ಈ ಕಾದಂಬರಿಯನ್ನು ಚಲನಚಿತ್ರವಾಗಿಸಿ, ಚಿತ್ರದಲ್ಲಿ ನಾಯಕಿ ಪುರುಷದ್ವೇಷಿ ಆಗಿಯೇ ಇದ್ದು, ಕೊನೆಗೆ ಜೀವನದಲ್ಲಿ ಸೋತು, ಸ್ತ್ರೀವಾದಿ ಚಿಂತನೆ ಬಿಟ್ಟು ಸಾಮಾನ್ಯ ಮಹಿಳೆಯಾಗಿ ಜೀವಿಸಲು ಆರಂಭಿಸುತ್ತಾಳೆ. ಇಂಥ ಚಿತ್ರಗಳು ಸ್ತ್ರೀವಾದಕ್ಕೆ ಸವಾಲಾಗಿವೆ. ಆದರೂ ಇವುಗಳನ್ನು ಸ್ತ್ರೀವಾದ ತಳ್ಳಿಹಾಕಿದೆ.

### ೮. ದ್ವಿಲಿಂಗ ದೃಷ್ಟಿಕೋನವನ್ನು ಪ್ರೋತ್ಸಾಹಿಸಿದೆ

ರೂಢಿಯಲ್ಲಿರುವ ಲಿಂಗಭೇದ ಹೋಗಬೇಕಾದರೆ ಸ್ತ್ರೀ-ಪುರುಷ ಇಬ್ಬರೂ ದ್ವಿಲಿಂಗ ದೃಷ್ಟಿಕೋನಗಳನ್ನು ಬೆಳಸಿಕೊಳ್ಳಬೇಕೆಂದು ಸ್ತ್ರೀವಾದ ವಾದಿಸುತ್ತದೆ. ಇನ್ನೂ ಕೆಲವರು ಇಪ್ಪತ್ತೊಂದನೆಯ ಶತಮಾನ ಹೆಣ್ಣಿನದೇ ಆಗಿದೆ. ಆಕೆ ಎಲ್ಲ ಕ್ಷೇತ್ರಗಳಲ್ಲಿಯೂ ಮುಂದೆ ಇದ್ದಾಳೆ. ಹೀಗಿರುವಾಗ ಸ್ತ್ರೀವಾದದ ಅವಶ್ಯಕತೆ ಏಕೆ? ಎಂದು ಪ್ರಶ್ನಿಸಿದ್ದಾರೆ. ಅಲ್ಲದೇ ಸಂವಿಧಾನದಲ್ಲಿ ಸ್ತ್ರೀಯರಿಗೆ ಅನೇಕ ಸೌಲಭ್ಯಗಳನ್ನು ಕಲ್ಪಿಸಿದೆ ಎಂದು ಹೇಳುವವರು ಇದ್ದಾರೆ. ಇಂಥ ಪ್ರಶ್ನೆಗಳನ್ನು ಸ್ತ್ರೀವಾದ ತಳ್ಳಿಹಾಕಿ ಮಾನವ ಜನಾಂಗದ ಅರ್ಧದಷ್ಟಿರುವ ಸ್ತ್ರೀಯರಲ್ಲಿ ಬೆರಳೆಣಿಕೆಯಷ್ಟು ಸ್ತ್ರೀಯರು ಮಾತ್ರ ಮುಂದೆ ಬಂದರೆ ಆಗದು. ಉದಾಹರಣೆಗೆ ಒಬ್ಬ ರಮಾದೇವಿ ರಾಜ್ಯಪಾಲಳಾದರೆ, ಕಲ್ಪನಾಚಾವ್ಲ ಒಬ್ಬಳೇ ಗಗನ ಯಾತ್ರಿ ಆದರೆ, ಮಹಾಶ್ವೇತದೇವಿ ಜ್ಞಾನಪೀಠ ಪ್ರಶಸ್ತಿ ಪಡೆದರೆ, ಪಿ.ಟಿ.ಉಷಾ ಮುಂತಾದವರನ್ನು ತೋರಿಸಿ, ಮಹಿಳೆಯರು ಎಲ್ಲ ಕ್ಷೇತ್ರಗಳಲ್ಲಿ ಮುಂದೆ ಇದ್ದಾರೆ ಎಂದು ಹೇಳಿದರೆ ತಪ್ಪಾಗುವುದು. ಸ್ತ್ರೀವಾದ ಇಂಥ ಮಹಿಳೆಯರನ್ನು ಕುರಿತು ಚಿಂತಿಸುವುದಿಲ್ಲ. ಇನ್ನೂ ಆ ಸ್ಥಾನಗಳನ್ನು ಪಡೆಯದೆ ಇರದ ಮಹಿಳೆಯರನ್ನು ಕುರಿತು ಚಿಂತಿಸುತ್ತ ಸಮಾಜದಲ್ಲಿರುವ ಎಲ್ಲ ಮಹಿಳೆಯರು ಮುಂದೆ ಬರಬೇಕೆಂಬ ಕಾಳಜಿಯಿಂದ ಆಲೋಚಿಸುತ್ತಿದೆ.

## ೨.೪. ಸ್ತ್ರೀವಾದದ ವ್ಯಾಖ್ಯೆಗಳು

ವಿಭಿನ್ನ ಕಾಲ, ದೇಶ, ಜನಾಂಗದ ಮಹಿಳೆ, ಚಾರಿತ್ರಿಕ ಸಂದರ್ಭಗಳಿಗೆ ಬದ್ಧವಾಗಿ ಅನುಭವಗಳಿಗೆ ತಕ್ಕಂತೆ ಸ್ತ್ರೀವಾದ ರೂಪುಗೊಂಡಿದೆ. ಇದು "Feminism does not derive its theoretical or conceptual base from any single theoretical formulation"[೯] ಆಗಿಲ್ಲವಾದ್ದರಿಂದ ಸಿದ್ಧ ಮಾದರಿಗಳಿಂದ ಸ್ತ್ರೀವಾದಕ್ಕೆ ಏಕೀಕೃತ ವ್ಯಾಖ್ಯೆ ಕೊಡುವುದು ಅಷ್ಟು ಸರಳ ಅಲ್ಲ. ಇದು ಆಗಾಗ್ಗೆ ಬದಲಾವಣೆ ಹೊಂದುತ್ತಲೇ ಇರುತ್ತದೆ. ಈ ಬದಲಾವಣೆ -

> "Feminism is based on Historically and Culturally Concrete realities and levels of Consciousness, Perceptions and actions"[೧೦] - ಗಳಿಗೂ ಅನ್ವಯವಾಗಿರುತ್ತದೆ.

ಸ್ತ್ರೀವಾದವನ್ನು ಕುರಿತಂತೆ ವಿಭಿನ್ನ ಚಿಂತಕರು, ಪಂಥಗಳು ಇವೆ. ಅಲ್ಲದೆ ಅವರೆಲ್ಲರೂ ವಿಭಿನ್ನವಾಗಿಯೇ ಅರ್ಥೈಯಿಸಿದ್ದಾರೆ. ಇವರ ಎಲ್ಲ ಹೇಳಿಕೆಗಳ ಕೇಂದ್ರಬಿಂದು 'ಮಹಿಳೆ' ಆಗಿದ್ದಾಳೆ.

೧. **ಫೈರ್ ಸ್ಟನ್ :** ಈಕೆ ಸ್ತ್ರೀವಾದ ಕುರಿತಂತೆ "ಸ್ತ್ರೀವಾದವು ತನ್ನ ಎಲ್ಲಾ ಆಕಾರ-ರೂಪಗಳಲ್ಲೂ ಮಹಿಳೆಯರನ್ನು ಮೌಲಿಕಗೊಳಿಸುವ ಸಲುವಾಗಿ ಮಹಿಳೆಯರ ಪ್ರತಿಭಟನೆ ಆಗಿದೆ. ಮಹಿಳೆಯರು ಮಹಿಳೆಯರಿಗಾಗಿ ನಡೆಸುವ ಹೋರಾಟ" ಎಂದಿದ್ದಾಳೆ.[೧೧]

೨. **ಗ್ಲೋರಿಯಾಸ್ಟೆಮಳ್ :** ಖ್ಯಾತ ಸ್ತ್ರೀವಾದಿಯಾದ ಈಕೆ "ನಮ್ಮನ್ನು ಪೂರ್ಣಗೊಳಿಸಿಕೊಳ್ಳುವುದೇ ಈಗಿನ ಗುರಿ. ಹೆಚ್ಚು ಪ್ರತಿಪಾದಿಸಿಕೊಳ್ಳುವುದರಲ್ಲಿ ಸಂಘರ್ಷದ ಜೊತೆಗೆ ಸಮರ್ಥ ನಿರ್ವಹಣೆ ಹಾಗೂ ಮನೆ ಹೊರಗೆ ಹೆಚ್ಚು ಚಟುವಟಿಕೆಯಿಂದ ಇರುವುದರಲ್ಲಿ ಮಹಿಳೆಯರ ಪ್ರಗತಿ ಅಡಗಿದೆ. ಹೆಚ್ಚು ತೀಕ್ಷ್ಣ, ಹೆಚ್ಚು ಸಹಾನುಭೂತಿ ಮನೆಗೆಲಸದಲ್ಲಿ ಹೆಚ್ಚು ಹಿತ ಅನುಭವಿಸುವುದು ಇವೇ ಮುಂತಾದವುಗಳಲ್ಲಿ ಪುರುಷರ ಪ್ರಗತಿ ಅಡಗಿದೆ. ನಾವು ಸ್ಥಾನಗಳ ವಿಚಾರಗಳಲ್ಲಿ ವ್ಯಾಪಾರ ಮಾಡುತ್ತಿಲ್ಲ. ನಾವು ಪರಿಪೂರ್ಣ ರಾಗ ಬಯಸುತ್ತೇವೆ ಅಷ್ಟೇ."[೧೨]

೩. ವಿಭಿನ್ನ ರೀತಿಯ ಶೋಷಣೆಗಳಿಗೆ ಒಳಗಾದ ಮಹಿಳೆಯರು ತಮ್ಮ ಅನುಭವಗಳನ್ನು ಹಂಚಿಕೊಳ್ಳಲು, ಪ್ರತಿಕ್ರಿಯಿಸಲು ಒಂದು ಸಾಮೂಹಿಕ ವೇದಿಕೆಯನ್ನು ಸ್ತ್ರೀವಾದ ಸಿದ್ಧಪಡಿಸುತ್ತದೆ.[೧೩]

೪. ಸ್ತ್ರೀವಾದವು ಮಹಿಳೆ, ಮಹಿಳೆಯನ್ನೇ ಹೊಸದಾಗಿ ಗುರುತಿಸಿಕೊಳ್ಳಲು ಪ್ರೇರಕವಾಗಿದೆ. ಸ್ತ್ರೀವಾದದೊಳಗಿನ ಪ್ರವೇಶವು ಮಹಿಳೆ ಮಹಿಳೆಯರೊಂದಿಗೆ ಸ್ಥಾಪಿಸುವ ಸಂಬಂಧವನ್ನು ಮಾತ್ರ ಕುರಿತದ್ದಲ್ಲ. ಪುರುಷನ ಜೊತೆಗಿನ ಸಂಬಂಧವೂ ಕೂಡ ಪ್ರಬುದ್ಧ ನೆಲೆಯಲ್ಲಿರೂಢಿಸಿಕೊಳ್ಳಲು ಸ್ತ್ರೀವಾದ ಮಾರ್ಗದರ್ಶನ ನೀಡುತ್ತದೆ.[೧೪]

೫. ಜ್ಞಾನ ಹಾಗೂ ಅಧಿಕಾರದ ಸಂಬಂಧವೆಂಬುದು ಹೇಗೆ ಪುರುಷಾತ್ಮಕತೆಯ ನೆಲೆಯಲ್ಲಿಯೇ ನಡೆದು ಬಂದದ್ದಾಗಿದೆ ಎಂಬುದನ್ನು ವಿವರಿಸುತ್ತದೆ.[೧೫]

೬. ಹೆಣ್ಣಿನ ಕುರಿತ ಇಂತಹ ಮೂಲಭೂತ ಯೋಚನಾ ಕ್ರಮವನ್ನೇ ನಾವು ಪ್ರಶ್ನಿಸಬೇಕಾಗಿದೆ. ಇಂತಹ ಯೋಚನಾ ಕ್ರಮಗಳಿಗೆ ಮೂಲವಾಗಿರುವ ನಮ್ಮ ಸಾಂಸ್ಕೃತಿಕ ರಾಜಕೀಯ, ಧಾರ್ಮಿಕ, ಆರ್ಥಿಕ ಕಾರಣಗಳನ್ನು ನಾವು ಶೋಧಿಸಬೇಕಾಗಿದೆ. ಯಾಕೆಂದರೆ ಈ ಎಲ್ಲ ಯೋಚನಾ ಕ್ರಮಗಳನ್ನು ಪ್ರಬಲ ಸಂಸ್ಕೃತಿ ರೂಪಿಸಿದೆ. ಆ ಪ್ರಬಲ ಸಂಸ್ಕೃತಿ ಅಷ್ಟೇ ಮಹತ್ವದ ಸ್ತ್ರೀ ಸಂಸ್ಕೃತಿಯನ್ನು ಅಲ್ಲಗಳೆದಿದೆ. ಈ ನಿರ್ಲಕ್ಷ್ಯ ಜನ ಸಂಸ್ಕೃತಿಯ ನೆಲೆಯಿಂದ ಒಟ್ಟು ಸಂಸ್ಕೃತಿಯನ್ನು ಪುನರ್ರಚಿಸಬೇಕಾಗಿದೆ. ಇದನ್ನು ಸ್ತ್ರೀವಾದ ಆಗು ಮಾಡುತ್ತದೆ.[೧೬]

೭. “ಸ್ತ್ರೀವಾದ ಒಂದು ಚಿಂತನಾ ಕ್ರಮ” - ವಿಜಯ ದಬ್ಬೆ

೮. “ಸ್ತ್ರೀವಾದ ಎಲ್ಲ ರೀತಿಯ ಯಜಮಾನಿಕೆಗೆ ವಿರೋಧಿ”[೧೭]

೯. “ಫೆಮಿನಿಸ್ಟ್’ ಚಿಂತನೆ ಸಮಾನತೆಯ ಅವಕಾಶವನ್ನು ಕುರಿತದ್ದಾಗಿದೆ ಅಂದರೆ ರೂಢಿಯಲ್ಲಿರುವ ಸಾಮಾಜಿಕ ಚಿಂತನೆಗಳು ಸ್ತ್ರೀ-ಪುರುಷರ ನಡುವೆ ಪೈಪೋಟಿಯನ್ನು ಸೃಷ್ಟಿಸಿ, ಈ ಪೈಪೋಟಿಯಲ್ಲಿ ಗೆಲ್ಲುವವರು ಪುರುಷರಾದ್ದರಿಂದ ಅವರೇ ಮಾನವ ಸಂತತಿಯಲ್ಲಿ ಶ್ರೇಷ್ಠರೆನ್ನಿಸುತ್ತಾರೆ. ಆದರೆ ಈ ಪಂದ್ಯದ ನಿಯಮಗಳೇ ನ್ಯಾಯಬದ್ಧವಾಗಿಲ್ಲ. ಎಲ್ಲ ನಿಯಮಗಳು ಪುರುಷ ಪರವಾಗಿ ರೂಪಿಸಲಾಗಿದೆ. ಈ ನಿಯಮಗಳಲ್ಲಿ ಸೂಕ್ತ ಬದಲಾವಣೆಗಳನ್ನು ತರಬೇಕಾಗಿದೆ ಎಂಬುದು ಸ್ತ್ರೀವಾದಿ ಚಿಂತನೆಯ ಮುಖ್ಯ ಎಳೆ.”[೧೮]

೧೦. **ಡೇಲ್ ಸ್ಪೆಂಡರ್** : “ಜಗತ್ತನ್ನು ಕುರಿತಾದ ಅನೇಕ ಪರಿಕಲ್ಪನೆಗಳಲ್ಲಿ ಸ್ತ್ರೀವಾದವೇ ಹೆಚ್ಚು. ಯೋಗ್ಯ ರೀತಿಯದು. ಎಲ್ಲ ಮಾನವರು ಸಮಾನರು. ಯುದ್ಧ, ಶಿಕ್ಷೆ, ದಬ್ಬಾಳಿಕೆ ಹಿಂಸೆಗಳಿಲ್ಲದೇ ಈ ಗ್ರಹದ ಮೇಲೆ ಸಹಬಾಳ್ವೆಯಿಂದ ಬಾಳಲು ಸಾಧ್ಯ ಎಂಬ ನಂಬಿಕೆಯ ಅಡಿಪಾಯದ ಮೇಲೆ ಸ್ತ್ರೀವಾದವು ಜಗತ್ತನ್ನು ಕುರಿತ ಪರಿಕಲ್ಪನೆಯನ್ನು ಹೊಂದಿದೆ. ಸ್ತ್ರೀವಾದದ ತಾತ್ವಿಕತೆಯು ಪಿತೃ ಪ್ರಧಾನ್ಯತೆ ಹೊಂದಿರುವ ದಬ್ಬಾಳಿಕೆಗೆ ವಿರುದ್ಧವಾಗಿದೆ. ದಬ್ಬಾಳಿಕೆ ಎಂದರೆ ಗಂಡು-ಹೆಣ್ಣಿನ ಮೇಲೆ, ಬಿಳಿಯ ವ್ಯಕ್ತಿ ಕಪ್ಪು ವ್ಯಕ್ತಿಯ ಮೇಲೆ, ಶ್ರೀಮಂತವರ್ಗ ಬಡ ವರ್ಗದ ಮೇಲೆ ಮಾಡುವ ದಬ್ಬಾಳಿಕೆ. ಹಾಗೆಯೇ ಬುದ್ಧಿಜೀವಿ ವರ್ಗವು ಎತ್ತಿ ಹಿಡಿದ ಸ್ಪರ್ಧೆ ಹಾಗೂ ಅರ್ಹತಾ ಪರೀಕ್ಷೆಗಳು ಕೂಡ ದಬ್ಬಾಳಿಕೆಯ ಸೂಕ್ಷ್ಮ ವಿಧಾನಗಳಾಗಬಲ್ಲವು. ಆಳುವ ವರ್ಗದ ಜಗತ್ತಿನ ಗ್ರಹಿಕೆಗಳು ಆಳಿಸಿ ಕೊಳ್ಳುವವರ ಜಗತ್ತಿನ ಗ್ರಹಿಕೆಗಳಿಗಿಂತ ಭಿನ್ನವಾಗಿರುತ್ತವೆ ಎಂಬ ಸತ್ಯವನ್ನು ಸ್ತ್ರೀವಾದಿಯಾಗಿ ತಾನು ಕಂಡುಕೊಂಡೆ”[೧೯] ಎಂದಿದ್ದಾಳೆ.

ಹಲವಾರು ಜ್ಞಾನಶಾಖೆಗಳು ಮಹಿಳೆಯರ ಸಾಧನೆಗಳ ದಾಖಲೆಗಳನ್ನು ಒಳಗೊಂಡಿಲ್ಲ. ಆ ದಾಖಲೆಗಳು ಮುಚ್ಚಿಹೋಗಿರುತ್ತವೆ. ಅಂಥವುಗಳನ್ನು ಶೋಧಿಸಿ, ದಾಖಲಿಸಲು ಬಯಸುವುದೇ ಸ್ತ್ರೀವಾದ. ಪುರುಷನಿಗಿಂತ ಭಿನ್ನವಾಗಿ ಆಲೋಚನೆಯನ್ನು ಮಾಡುವುದೇ ಸ್ತ್ರೀವಾದ. ಸಮಾಜದಲ್ಲಿ ಲಿಂಗಾಧಾರಿತ ಅಸಮಾನತೆ ಇದೆ. ಹೀಗಾಗಿ ಸಮಾಜದ ವಿವಿಧ ಕ್ಷೇತ್ರಗಳಲ್ಲಿ ಮಹಿಳೆಯರು ಎದುರಿಸುವ ತಾರತಮ್ಯದ ಧೋರಣೆ, ದೌರ್ಜನ್ಯ ಹಾಗೂ ಶೋಷಣೆಗಳನ್ನು ಗುರುತಿಸುತ್ತಾ ಅವುಗಳನ್ನು ಅಳಿಸಿ ಹಾಕುವ ಪ್ರಜ್ಞಾಪೂರ್ವಕವಾದ, ಪ್ರಾಮಾಣಿಕವಾದ ಪ್ರಯತ್ನವನ್ನು ‘ಸ್ತ್ರೀವಾದ’ ಎನ್ನಬಹುದು. ಹೀಗೆ ಶೋಷಣೆಗಳಿಗೆ ಒಳಗಾದವರಿಗೆ ಮಾತು ಕಲಿಸುವ ಕೆಲಸವನ್ನು ಸ್ತ್ರೀವಾದ ಮಾಡುತ್ತದೆ.

ಆರಂಭದಲ್ಲಿ ಸ್ತ್ರೀವಾದವು ಶಿಕ್ಷಣ, ಆಸ್ತಿ, ಮತದಾನ, ರಾಜಕೀಯದಲ್ಲಿ ಭಾಗವಹಿಸುವಿಕೆ, ವಿಚ್ಛೇದನ, ಸಂತಾನ ನಿಯಂತ್ರಣ ಮೊದಲಾದವುಗಳಲ್ಲಿ ತೊಡಗಿಸಿಕೊಂಡಿತ್ತು. ಆದರೆ ಸಮಕಾಲೀನ ಸ್ತ್ರೀವಾದವು “ಮಹಿಳೆ

ಸಂಪೂರ್ಣವಾಗಿ ಮನೆಯ ಒಳಗೆ ಮತ್ತು ಹೊರಗೆ ಸಮಾನತೆ, ಸ್ವಾತಂತ್ರ್ಯ ಪಡೆದುಕೊಂಡು ತನ್ನ ಬದುಕು, ದೇಹದ ಮೇಲೆ ತಾನೇ ಸ್ವಾಮ್ಯ ಪಡೆದುಕೊಳ್ಳುವಂತೆ ಆಲೋಚಿಸುತ್ತಿದೆ ಮತ್ತು ಮಹಿಳಾ ಮೀಸಲಾತಿಗಾಗಿಯೂ ಹೋರಾಟ ಆರಂಭಿಸಿದೆ.

### ೨.೫. ಪಾಶ್ಚಿಮಾತ್ಯ ಸ್ತ್ರೀವಾದಿ ಚಿಂತನೆ

ಚರಿತ್ರೆ, ಸಮಾಜಶಾಸ್ತ್ರ, ಅರ್ಥಶಾಸ್ತ್ರ, ರಾಜ್ಯಶಾಸ್ತ್ರ ಮೊದಲಾದ ಜ್ಞಾನಶಿಸ್ತುಗಳ ಚಿಂತಕರಂತೆ ಸ್ತ್ರೀವಾದಿ ಅಧ್ಯಯನದ ಚಿಂತಕರು ಸಹ ತಮ್ಮದೇ ಆದ ಚಿಂತನೆಗಳ ಮೂಲಕ ಈ ಶಿಸ್ತನ್ನು ವಿಸ್ತರಿಸಿದ್ದಾರೆ. ಈ ದಿಸೆಯಲ್ಲಿ ಕೆಲವು ಚಿಂತನಕಾರರನ್ನು ಹಾಗೂ ಅವರ ಚಿಂತನೆಗಳನ್ನು ಪರಿಶೀಲಿಸಬಹುದು.

### ೧. ಮೇರಿ ವುಲ್ ಸ್ಟಾನ್ ಕ್ರಾಫ್ಟ್

ಮಹಿಳೆಯರ ವಿಮೋಚನೆ, ಸಮಾನತೆ ಹಕ್ಕುಗಳಿಗೆ ಚಿಂತಿಸಿ, ವರ್ತಮಾನ ದೃಷ್ಟಿಕೋನಗಳ ವಿರುದ್ಧ ದನಿ ಮಾಡಿ, ಇತರರ ಸ್ಫೂರ್ತಿಗೆ ಕಾರಣರಾದವರು ಮೇರಿವುಲ್ ಸ್ಟಾನ್ ಕ್ರಾಫ್ಟ್. ಹದಿನೆಂಟನೆಯ ಶತಮಾನದ ಯುರೋಪಿನ ಸಮಾಜ ಮತ್ತು ಮಹಿಳೆಯರ ಸ್ಥಿತಿ-ಗತಿಗಳನ್ನು ಕುರಿತು ಚಿಂತಿಸಿದವರಲ್ಲಿ ಈಕೆಯೇ ಮೊಟ್ಟಮೊದಲನೆಯವಳು. ಅಂದಿನ ಸಮಾಜದ ಸ್ಥಿತಿ-ಗತಿ ತಿಳಿಯಲು ಚೆಸ್ಟರ್ ಫೀಲ್ಡ್ ನ ಕೃತಿ, ರೂಸೋನ ಶೈಕ್ಷಣಿಕ ವಿಚಾರಗಳು ಪ್ರಧಾನವಾಗಿವೆ. ಚೆಸ್ಟರ್ ಫೀಲ್ಡ್ ತನ್ನ ಮಗನಿಗೆ ಬುದ್ಧಿ ಹೇಳುವ ವಿಚಾರಗಳನ್ನೇ 'Letter to his Son' ಕೃತಿಯಲ್ಲಿ ತಿಳಿಸುತ್ತ -

> "ಮಹಿಳೆ ಎಂದರೆ ಬೆಳೆದ ಮಕ್ಕಳಿದ್ದಂತೆಯೇ ಅವರನ್ನು ಗಂಭೀರವಾಗಿ ಎಂದೂ ತೆಗೆದುಕೊಳ್ಳಬಾರದು ಅವರೊಡನೆ ಆಟವಾಡಬಹುದು, ನಗಬಹುದು ಕಲಿಯಬಹುದು, ಮುದ್ದಾಡಬಹುದು ಅಷ್ಟೇ ಅಲ್ಲದೆ ಬಾಯ್ತುಂಬ ಹೊಗಳಬಹದು. ಆದರೆ ಗಂಭೀರ ವಿಷಯಗಳಲ್ಲಿ ಸಮಾಲೋಚಿಸಲು ಬಿಡಬಾರದು. ಅವರ ವಿಶ್ವಾಸವನ್ನು ತೆಗೆದುಕೊಂಡ ಹಾಗೇ ಭ್ರಮೆಯನ್ನು ಹುಟ್ಟಿಸಬೇಕು. ಆಗ ಅದರಿಂದಲೇ ಅವರು ಕೋಡು ಮೂಡಿದ ಹಾಗೆ ಗರ್ವದಿಂದ ಬೀಗುವರು"[೨೦] ಎಂದು ಹೇಳಿದ್ದಾನೆ.

ರೂಸೋ ಸಹ ಮಹಿಳೆಯರ ಶಿಕ್ಷಣದ ಬಗ್ಗೆ ವಿವರಿಸುತ್ತ ಮಹಿಳೆಯರಿಗೆ ಬಾಲ್ಯದಿಂದಲೇ ನೃತ್ಯ, ಸಂಗೀತ ಕಲಿಸಬೇಕು. ಮಹಿಳೆ ಹುಟ್ಟಿರುವುದೇ ಪುರುಷನಿಗಾಗಿ, ಆಕೆ ಯಾವಾಗಲೂ ಪುರುಷನನ್ನು ಸಂತೋಷ ಪಡಿಸಿ, ಅವನ ಪ್ರೀತಿ, ಗೌರವಗಳನ್ನು ಗಳಿಸಿಕೊಳ್ಳುವುದೇ ಆಕೆಯ ಪ್ರಧಾನ ಕರ್ತವ್ಯ. ಮಹಿಳೆಯರು ತಮ್ಮ ಸೌಂದರ್ಯವನ್ನು ಕಾಪಾಡಿಕೊಳ್ಳಬೇಕು ಎಂದು ತಿಳಿಸಿದ್ದಾನೆ. ಮೇರಿವುಲ್ ಸ್ಟಾನ್ ಕ್ರಾಫ್ಟ್ ಈ ಇಬ್ಬರ ವಿಚಾರಗಳನ್ನು ಕಂಡುಕೊಂಡಳು. "A Vindication of rights and wrongs of women" ಎಂಬ ಕೃತಿ ರಚಿಸಿದಳು. ಈ ಕೃತಿಯಲ್ಲಿ ಮಹಿಳೆಯರ ವಿಮೋಚನೆ ರೂಸೋನ ಶಿಕ್ಷಣಕ್ರಮ ಇತ್ಯಾದಿ ವಿಚಾರಗಳ ಚರ್ಚೆ ಆಗಿವೆ. ಹದಿನೆಂಟನೆಯ ಶತಮಾನದ ಸಮಾಜದಲ್ಲಿ ಮಹಿಳೆ ಎಂದರೆ, ವೈಚಾರಿಕತೆ ಇಲ್ಲದವಳು, ಭಾವನೆ

ಪ್ರಧಾನಳು ಎಂದೇ ಗುರುತಿಸಲಾಗುತ್ತಿತ್ತು. ಇದನ್ನು ಮೇರಿ ವಿರೋಧಿಸಿದ್ದಾಳೆ. ಮಾನವನ ಸದ್ಗುಣಗಳು ವಂಶವಾಹಿನಿಯಾಗಿ ಬರುತ್ತವೆ. ಇಲ್ಲವೆ ವ್ಯಕ್ತಿತ್ವಕ್ಕೆ ಅನುಗುಣವಾಗಿ ಬಂದಿರುತ್ತವೆ. ಇವುಗಳನ್ನು ಯಾರು ನಿರ್ದಿಷ್ಟ ಲಿಂಗಕ್ಕೆ ನಿರ್ದಿಷ್ಟ ಗುಣಗಳೆಂದು ಹೇರಬಾರದು. ಮಹಿಳೆಯ ಇಂದಿನ ಸ್ಥಿತಿಗೆ ಸಮಾಜವೇ ಕಾರಣವಾಗಿದೆ. ವೈಚಾರಿಕತೆ ಪ್ರತಿಯೊಬ್ಬರಿಗೂ ಅವಶ್ಯಕ. ಆದ್ದರಿಂದ ಸ್ವ ಪ್ರಯತ್ನದಿಂದ ವೈಚಾರಿಕತೆಯನ್ನು ಬೆಳಸಿಕೊಂಡು, ವ್ಯಕ್ತಿತ್ವವನ್ನು ವಿಕಾಸ ಮಾಡಿಕೊಳ್ಳಬೇಕು. ಜೊತೆಗೆ ಶಿಕ್ಷಣವು ಅವಶ್ಯಕವಾಗಿದ್ದು, ಮುಕ್ತವಾಗಿ ಚರ್ಚಿಸಲು ಸ್ವಂತ ನಿರ್ಣಯ ಕೈಗೊಳ್ಳಲು ಸಹಾಯಕ. ಅರ್ಥಹೀನ ಕೃತಿ ಬಿಟ್ಟು ನಿಜವಾದ ಮೌಲ್ಯಗಳನ್ನು ತಿಳಿಯಬೇಕು. ಮಹಿಳೆ ಪುರುಷನ ಸುಖ-ಸಂತೋಷಕ್ಕೆಂದು ಸಂಗೀತ, ನೃತ್ಯ ಏಕೆ ಕಲಿಯಬೇಕು? ಆಕೆ ತನ್ನ ಸೌಂದರ್ಯ ಕಾಪಾಡಿಕೊಳ್ಳಲು ಗಮನ ಕೊಟ್ಟು ತನ್ನ ವ್ಯಕ್ತಿತ್ವ ವಿಕಾಸಕ್ಕೆ ಅವಶ್ಯವಾದ ಮೌಲ್ಯ, ಚಟುವಟಿಕೆಗಳನ್ನು ಮರೆಯುತ್ತಾಳೆ. ಇದರಿಂದ ಸಾಧಿಸಿದ್ದು ಏನು? ಮಹಿಳೆಯರು ಎಲ್ಲ ತಾವು ಕೀಳು ಎಂಬ ಭ್ರಮೆಯಿಂದ ಆಚೆ ಬಂದು ಶಿಕ್ಷಣ ಪಡೆದು ವಕೀಲರಾಗಿ, ಡಾಕ್ಟರಾಗಿ ಇತ್ಯಾದಿ ವೃತ್ತಿಗಳನ್ನು ಕೈಗೊಳ್ಳಲಿ ಎಂದಳು. ಪುರುಷರನ್ನು ಕುರಿತು ಹೇಳುತ್ತಾ ''ಮಹಿಳೆ ನಿಮ್ಮ ಸಮಾನಳೆಂದು ಭಾವಿಸಿ ಆಕೆಯೊಂದಿಗೆ ಗೌರವದಿಂದ ವರ್ತಿಸಿದರೆ ನಿಮಗೂ ಗೌರವವಿದೆ'' ಎಂದಿದ್ದಾಳೆ. ಅಲ್ಲದೆ ಅವಳು ಅವೈಚಾರಿಕತೆಯ ಗೋಡೆ ಒಡೆದು ವೈಚಾರಿಕಾಗಿ ಆಲೋಚಿಸಿ ಹಕ್ಕುಗಳನ್ನು ಪಡೆಯಲು ಮಹಿಳೆಯರೇ ಮುಂದೆ ಬರಬೇಕು, ಆಗಲೇ ಅವಳು ಗುಲಾಮಗಿರಿಯಿಂದ ಮುಕ್ತಾಳಾಗುತ್ತಾಳೆ. ಸಂದರ್ಭ ಒಂದರಲ್ಲಿ ಆಕೆಯ ಮೇಲೆ ಹೇರಲ್ಪಟ್ಟ ಕೆಲವು ಮೌಲ್ಯಗಳು ಆಕೆಯನ್ನು ತರ್ಕಬದ್ಧವಾಗಿ ಚಿಂತಿಸದಂತೆ ಮಾಡಿದೆ. ಅವುಗಳೇ ಬದುಕಿನ ಅನುಭವ, ನಂಬಿಕೆಯ ನೆಲೆಯಲ್ಲಿ ಮೌಲ್ಯಗಳ ರೂಪ ಪಡೆದಿವೆ. ಗಂಡ ನನ್ನ ಸಹಭಾಗಿ ಆಗಿರುವ, ಆದ್ದರಿಂದ ಅವನನ್ನು ಪ್ರೀತಿಸುವೆ. ಆದರೆ ಅವನ ಅಧಿಕಾರ ಧೋರಣೆ, ದಬ್ಬಾಳಿಕೆಯನ್ನು ಸಹಿಸಲು ಆಗುವುದಿಲ್ಲ. ಮಹಿಳೆಯರ ಸಮಸ್ಯೆಗಳು, ರಾಜಕೀಯ ಸಮಸ್ಯೆಗಳಷ್ಟೇ ಪ್ರಧಾನವಾಗಿವೆ. ಗಂಭೀರವಾದವು ಹೌದು. ಖಾಸಗಿ ಆಸ್ತಿಯು ಬೆಳಣಿಗೆಯಾಗಿ ಮಹಿಳೆಯ (ಅಧೀನ) ದಾಸ್ಯಕ್ಕೆ ಕಾರಣ ಆಗಿದೆ. ಪುರುಷನ ಅಧಿಕಾರದ ಧೋರಣೆ, ದಬ್ಬಾಳಿಕೆಗಳು ಮಹಿಳೆಯನ್ನು ಕೆಳಸ್ತರಕ್ಕೆ ನೂಕಿವೆ. ಮಹಿಳೆಯರಿಗೆ ಈ ಅಂಶಗಳೇ ಒಳ್ಳೆಯವು. ಆಕೆ ಈ ಮೌಲ್ಯಗಳನ್ನೇ ಆಚರಿಸಬೇಕು. ಇಂಥವುಗಳು ಎಲ್ಲ ಪುರುಷ ಕೇಂದ್ರಿತವಾಗಿವೆ. ಮಹಿಳೆಯರಿಗೆ ಒಳ್ಳೆಯದು ಎಂದು ಪುರುಷನಿಗೆ ಹೇಗೆ ಗೊತ್ತಾಯಿತು? ಮಹಿಳೆಯರ ಕುರಿತು ನಿರ್ಧಾರ ಕೈಗೊಳ್ಳಲು ಯಾರು ಹೇಳಿದರು? ಇತ್ಯಾದಿ ಪ್ರಶ್ನೆಗಳನ್ನು ಕೇಳಿದ್ದಾಳೆ. ಹೆಂಗಸರ ಬುದ್ಧಿಮಟ್ಟ ಕಡಿಮೆ ಎಂದು ಹೇಗೆ ನಿರ್ಧರಿಸಿದ? ಇದೆಲ್ಲಾ ಪುರುಷ ಕೇಂದ್ರಿತ ದಬ್ಬಾಳಿಕೆ, ಅಧಿಕಾರ ಧೋರಣೆ, ಹೆಣ್ಣನ್ನು ಅಧೀನವಾಗಿಸುವ ಪ್ರಕ್ರಿಯೆ ಎಂದಿದ್ದಾಳೆ.

**೨. ಸಿಮೋನ್ - ದ - ಬೋವಾ**

ಸಿಮೋ ಫ್ರಾನ್ಸ್ ದೇಶದಾಕೆ. ಉತ್ತಮ ಕಾದಂಬರಿಗಾರ್ತಿ, ಪ್ರಬಂಧಗಳೂ ಆಗಿರುವ ಈಕೆ ಅಸ್ತಿತ್ವವಾದದ ಮುಂಚೂಣಿಯಲ್ಲಿ ಇದ್ದಳು. ಯಾವ ಮಾಧ್ಯಮವನ್ನಾಗಲಿ ಆಯ್ದುಕೊಂಡರೂ ಮಹಿಳೆ ಏಳಿಗೆ ಕುರಿತಂತೆ ಚಿಂತಿಸಿ, ಸ್ತ್ರೀ ಪರವಾಗಿ ಬರೆಯುತ್ತಿದ್ದಳು. ದೇಶಗಳು ಅಭಿವೃದ್ಧಿ ಆಗಬಹುದು, ಆಗದೇ ಇರಬಹುದು, ಆದರೆ ಮಹಿಳೆಯು ಶೋಷಣೆಗೆ ಒಳಗಾಗಿ ಇರುತ್ತಾಳೆ ಎಂದು, ಅದು ಅನಂತವಾದದ್ದು ಎನ್ನುವ ಕಟು ಸತ್ಯವನ್ನು ಈಕೆಯ ಕೃತಿಗಳು ತಿಳಿಸಿವೆ. ಬಾಲ್ಯದಲ್ಲಿ ಈಕೆಯ ಮೇಲೆ ತಾಯಿಯ ನಿಯಂತ್ರಣ

ಇತ್ತು. ಸಿಮೋ ತಾಯಿಯ ನಿಯಂತ್ರಣವನ್ನು ವಿರೋಧಿಸಿದ್ದಳು. ಈಕೆಯ ಕೃತಿಗಳಲ್ಲಿ ಅಪೂರ್ವವಾದುದು 'Second Sex'. ಈ ಕೃತಿಯಲ್ಲಿ ಸ್ತ್ರೀಯರ ಸಮಸ್ಯೆಗಳನ್ನು ವೈಜ್ಞಾನಿಕ ವಿಶ್ಲೇಷಣೆಯಿಂದ ಚರ್ಚಿಸಿದ್ದಾಳೆ. ಮಾರ್ಕ್ಸ್‌ವಾದ, ಅಸ್ತಿತ್ವವಾದದ ಪರಧಿಯಲ್ಲಿ ಮಹಿಳೆಯರ ಸಮಸ್ಯೆಗಳನ್ನು ಗುರುತಿಸಿರುವುದು ಇವಳ ವಿಶೇಷತೆ. ಐತಿಹಾಸಿಕ, ಜೈವಿಕ, ವೈಜ್ಞಾನಿಕ, ಮಾನಸಿಕ, ಸಾಂಸ್ಕೃತಿಕ ಹಿನ್ನೆಲೆಯಲ್ಲಿ ಮಹಿಳೆ ಸಮಾಜದಲ್ಲಿ ರೂಪ ಪಡೆಯಬೇಕೆಂದು ಒತ್ತಾಯಿಸಿ ಅದಕ್ಕಾಗಿ ಸಿದ್ಧಾಂತಗಳನ್ನು ರೂಪಿಸಿ ಮಹಿಳೆಯರಿಗೆ ನಾಗರಿಕ ಹಕ್ಕಿನ ಜೊತೆಗೆ ಆರ್ಥಿಕ ಸ್ವಾತಂತ್ರ್ಯವೂ ಅವಶ್ಯ. ಪುರುಷನ ನೆರಳಿನಲ್ಲಿರುವ ಹೆಂಡತಿ, ಪ್ರೇಯಸಿ ಇಬ್ಬರು ಗುಲಾಮರೆ. ಅವರು ಗುಲಾಮತನದ ಆಚೆ ಬಂದು, ಆದಾಯ-ಉತ್ಪನ್ನಕಾರಕ ಚಟುವಟಿಕೆಗಳಲ್ಲಿ ತೊಡಗಬೇಕು. ಹೀಗೆ ಮಹಿಳೆಯರು ಒಮ್ಮೆ ಸ್ವಾವಲಂಬಿಗಳಾಗಿ ಬದುಕು ಆರಂಭಿಸಿದರೆ ಆಕೆಯ ದಮನದ, ದಬ್ಬಾಳಿಕೆ ವ್ಯವಸ್ಥೆ, ತಾನೇ ಉರುಳುವುದು. ಆಗ ಜಗತ್ತಿನ ಮತ್ತು ಹೆಣ್ಣಿನ ನಡುವೆ ಪುರುಷ ಮಧ್ಯವರ್ತಿ ಆಗುವ ಪ್ರಮೇಯ ಇರುವುದಿಲ್ಲವೆಂದು ಹೇಳಿ, ಆರ್ಥಿಕ ಸ್ವಾತಂತ್ರ್ಯ, ಮಾನಸಿಕ ಸ್ವಾಸ್ಥ್ಯಗಳಿಂದ ಆಕೆ ಶೋಷಣೆಯಿಂದ ಮುಕ್ತಳಾಗುವುದಿಲ್ಲ. ಸ್ತ್ರೀ-ಪುರುಷರ ನಡುವೆ ತಾರತಮ್ಯ ಶತಮಾನಗಳಿಂದ ಇದೆ. ಹೀಗಾಗಿ ಹೆಣ್ಣು ಎರಡನೆ ದರ್ಜೆಯ ನಾಗರಿಕಳು ಎಂದಿದ್ದಾಳೆ. ಸ್ತ್ರೀಯರ ಸ್ಥಾನಮಾನಗಳನ್ನು ಜೈವಿಕತೆಯಿಂದ ಅಳೆಯಬಾರದು. ಉದ್ಯೋಗದಲ್ಲಿ ಸ್ಪರ್ಧೆ ಏರ್ಪಟ್ಟರೆ ಮಹಿಳೆಯರು ಹಿಂದೆಯೇ ಉಳಿಯುತ್ತಾರೆ. ಕಾರಣ ಆಕೆ ಬೆಳೆದ ಸಮುದಾಯ, ವಾತಾವರಣ ಆಕೆಗೆ ಆರಂಭದಿಂದಲೂ 'ಕೀಳು' ಎಂಬ ಭ್ರಮೆ ಮೂಡಿಸಿರುತ್ತದೆ. ಒಂದು ವೇಳೆ ಸ್ಪರ್ಧೆಯಲ್ಲಿ ವಿಜೇತೆಯಾದರೂ ಆಕೆಯನ್ನು ಪುರುಷ ನಂಬುವುದಿಲ್ಲ. ಇದು ಮೇಲ್ಜಾತಿಯವರು ಕೀಳು ಜಾತಿಯವರನ್ನು ಹೇಗೆ ನಂಬುವುದಿಲ್ಲವೊ ಹಾಗೆಯೇ ಇಲ್ಲಿಯೂ ಅಂಥ ಸನ್ನಿವೇಶವೇ ಇರುತ್ತದೆ. ಮಹಿಳೆ ಉದ್ಯೋಗಿಯಾದರೆ ಮಾನಸಿಕ ಒತ್ತಡಕ್ಕೆ ಒಳಗಾಗುತ್ತಾಳೆ. ಕುಟುಂಬ ಹಾಗೂ ಕುಟುಂಬದಾಚೆಯ ಕೆಲಸ ಕಾರ್ಯಗಳು ದ್ವಿಗುಣವಾಗಿವೆ. ಅವುಗಳನ್ನು ಚಾಚು ತಪ್ಪದೇ ಮಾಡಲೇ ಬೇಕಾಗಿದ್ದು, ಮನೆಯನ್ನು ಸ್ವಚ್ಛಗೊಳಿಸುವುದು, ಅಡುಗೆ ಮಾಡುವುದು, ಸೌಂದರ್ಯವನ್ನು ಕಾಪಾಡಿಕೊಳ್ಳುವುದು, ಕುಟುಂಬದ ಎಲ್ಲ ಸದಸ್ಯರ ಯೋಗಕ್ಷೇಮವನ್ನು ನೋಡಿಕೊಳ್ಳುವುದರ ಜೊತೆಗೆ ಕೆಲವು ಸಂದರ್ಭದಲ್ಲಿ ದ್ವಿ ಪಾತ್ರಗಳನ್ನು ಮಾಡಬೇಕಾಗುತ್ತದೆ. ಕಡಿಮೆ ವೇತನದ ಮಹಿಳೆಯರು ಉತ್ತಮ ಜೀವನಕ್ಕಾಗಿ ಪುರುಷರ ಭೋಗ ವಸ್ತುಗಳಾಗುವರು. ಮಹಿಳೆಯರೆಲ್ಲ ತಾವು ಕೀಳು ಎಂಬ ಭ್ರಮೆಯಿಂದ ಹೊರ ಬಂದು, ತಮ್ಮ ಕ್ಷೇತ್ರಗಳಲ್ಲಿ ಸಾಧನೆ ಮಾಡಬೇಕು ಎಂದು ವಾದಿಸಿದ್ದಾಳೆ.

ಹೆಣ್ಣಿನ ತಾಯ್ತನದ ಬಗ್ಗೆ ಸಿಮೋನಳು ಚಿಂತಿಸುತ್ತ ಮಗುವನ್ನು ಹೆರುವುದು, ಅದಕ್ಕೆ ಹಾಲು ಕೊಡುವುದು ಸಾಮಾಜಿಕ ಚಟುವಟಿಕೆಗಳಲ್ಲ. ಅವುಗಳು ನೈಸರ್ಗಿಕ ವಿದ್ಯಮಾನಗಳಾಗಿವೆ. ಈ ವಿದ್ಯಮಾನಗಳಿಂದ ಯಾವುದೇ ಯೋಜನೆಗಳಿರುವುದಿಲ್ಲ. ಇಂಥವುಗಳಿಂದ ಯಾವ ಉನ್ನತ ಸ್ಥಾನಗಳು ಸಿಗಲಾರವು ಎಂದಿದ್ದಾಳೆ. ಹೆಣ್ಣಿನ ದಬ್ಬಾಳಿಕೆ ಹೇಗೆ ಆಗುತ್ತದೆ ಎನ್ನುವುದನ್ನು ಕುರಿತು ಹೇಳುತ್ತಾ ಆತನದನ್ನೇ ಪ್ರತಿಬಿಂಬಿಸುವಂಥ, ಅವನಿಗೆ ಸಂತಾನವನ್ನು ಹೆತ್ತು ಕೊಡುವಂಥ ಹೆಣ್ಣಿನ ಪ್ರಜ್ಞೆ ತನಗಿಂತ ಭಿನ್ನವಾದ್ದರಿಂದ ಅದನ್ನು ಬಂಧಿಸಿ ತನ್ನ ಭದ್ರತೆ ಉಳಿಸಿಕೊಳ್ಳಲು ದಬ್ಬಾಳಿಕೆ ನಡೆಸುತ್ತಾನೆ ಎಂದಿದ್ದಾಳೆ. ಈಕೆಯ ಪ್ರಧಾನ ಕಾಣಿಕೆ ಎಂದರೆ ಹೆಣ್ಣಿನ ಶೋಷಣೆಗೆ ಕಾರಣವಾದ ಆರ್ಥಿಕ ಮತ್ತು ಸಂತಾನೋತ್ಪಾದನೆಯ ನೆಲೆಗಳನ್ನು, ಮನೋವೈಜ್ಞಾನಿಕ ಹಾಗೂ ಅಸ್ತಿತ್ವವಾದಿ ನೆಲೆಗಳಿಂದ ಹೊಂದಿಸಿ, ವಿಶ್ಲೇಷಿಸಿರುವುದು.

೩. ವರ್ಜೀನಿಯಾ ವುಲ್ಫ್

ಸ್ತ್ರೀವಾದಿ ಚಿಂತಕರಲ್ಲಿ ವುಲ್ಫ್ ಸಹ ಪ್ರಮುಖಳಾಗಿದ್ದಾಳೆ. ಕ್ರಿ.ಶ. ೧೯೦೪ ರಿಂದಲೇ ಬರವಣಿಗೆ ಆರಂಭಿಸಿದ ಈಕೆ ೧೯೧೫ರ ಅವಧಿಗೆ 'The Voyage out' ಕೃತಿಯನ್ನು ರಚಿಸಿದಳು. ವುಲ್ಫ್ ಳ ಬರವಣಿಗೆಯ ಕೇಂದ್ರಬಿಂದು ಸಹ ಮಹಿಳೆ ಆಗಿರುತ್ತಾಳೆ. ಮಹಿಳೆಯರು ಕುಟುಂಬದಲ್ಲಿ ಹಲವು ಪಾತ್ರ ನಿರ್ವಹಿಸುತ್ತ, ಕುಟುಂಬದ ಎಲ್ಲ ಸದಸ್ಯರ ಆಗು-ಹೋಗುಗಳನ್ನು ನೋಡಿಕೊಳ್ಳುವ ಕಾರ್ಯ ತುಂಬಾ ಶ್ರಮದ್ದಾಗಿದೆ ಎಂದು ಹೇಳಿ ಮನೆಯಲ್ಲಿನ ಅವರ ಕೆಲಸಕಾರ್ಯಕ್ಕೂ ವೇತನ ನೀಡಬೇಕು ಎಂದಿದ್ದಾಳೆ. ಮಹಿಳೆಯರು ಶಿಕ್ಷಣ ಪಡೆಯುವ, ಉದ್ಯೋಗ ಆಯ್ದುಕೊಳ್ಳುವ, ವಿಚ್ಛೇದನದ ಕಾನೂನಿನ ಸುಧಾರಣೆ ಮುಂತಾದವುಗಳಲ್ಲಿ ಬದಲಾವಣೆ ಅವಶ್ಯಕ ಎಂದಿದ್ದಾಳೆ. ಅಲ್ಲದೆ ವಿಜ್ಞಾನ ಕ್ಷೇತ್ರದಲ್ಲಿಯೂ ಮಹಿಳೆಯನ್ನು ಕುರಿತಂತೆ ಬದಲಾವಣೆ ಆಗಬೇಕೆಂಬುದು ಇವಳ ವಾದ. ಮಹಿಳೆಯರಿಗಾಗಿ ಪ್ರತ್ಯೇಕ ಪತ್ರಿಕೆ, ಕಾಲೇಜು, ರಾಜಕೀಯ ಪಕ್ಷ, ಕನಿಷ್ಟ ಕೂಲಿ, ಪಿಂಚಣಿ ಅಸ್ತಿತ್ವದಲ್ಲಿರಬೇಕು ಎಂದಿದ್ದಳು. ಲಿಂಗಪ್ರಭೇದ ಸಾಮಾಜೀಕರಣ, ಸಾಂಸ್ಕೃತಿಕರಣದಿಂದ ಜಾರಿಯಲ್ಲಿದೆ. ಇದನ್ನು ಬದಲಾಯಿಸಲು ಸೂಕ್ತ ಸಂದರ್ಭ ಅವಕಾಶಗಳಿಂದ ಮಾತ್ರ ಸಾಧ್ಯ ಎನ್ನುತ್ತಾಳೆ.

ವುಲ್ಫ್‌ಳ ಪ್ರಧಾನ ಕೃತಿ 'A Room of once own'ನಲ್ಲಿ, ಮಹಿಳೆ ಹೇಗೆ ಪುರುಷನ ಅಧೀನಕ್ಕೆ ಒಳಗಾಗಿದ್ದಳು, ಆಕೆಯನ್ನು ಅಧೀನಪಡಿಸಿಕೊಳ್ಳುವಾಗ ಗಂಡಸಿನ ವರ್ತನೆ ಹೇಗೆ ಇರುತ್ತದೆ ಎಂದು ಚರ್ಚಿಸಿದ್ದಾಳೆ. ಮಹಿಳೆಯರು ಕನ್ನಡಿಯಂತಿದ್ದು ಅವರು ಸಮಾಜವನ್ನು ತಮ್ಮ ಜೀವನ ವಿಧಾನದಿಂದ ಪ್ರತಿಬಿಂಬಿಸುತ್ತಾರೆ ಎಂದಿದ್ದಳು. ವುಲ್ಫ್‌ಳು ತನ್ನ ಕಾಲದಲ್ಲಿ ಲೇಖಕಿಯಾಗ ಬಯಸುವವರು ಪ್ರಧಾನವಾಗಿ ಎದುರಿಸುವ ಸಮಸ್ಯೆಗಳನ್ನು ವಿವರಿಸುತ್ತಾ ಉತ್ತಮ ಶಿಕ್ಷಣ ಇಲ್ಲದಿರುವ ಮತ್ತು ಹಣದ ಅಡಚಣೆಯಂಥ ಕೊರತೆಗಳನ್ನು ಎದುರಿಸುತ್ತಿದ್ದರು ಎಂದು ಹೇಳಿದ್ದಾಳೆ. ಸಾವಿರಾರು ವರುಷಗಳಿಂದ ಶಿಕ್ಷಣವು ಪುರುಷನ ನಿಯಂತ್ರಣದಲ್ಲಿದ್ದು, ಪುರುಷರ ಲಾಭಕ್ಕಾಗಿಯೇ ನಡೆಯುತ್ತ ಬಂದಿರುತ್ತದೆ. ಜೊತೆಗೆ ಸಂಪತ್ತು ಮತ್ತು ಅಧಿಕಾರಗಳು ಪುರುಷರ ಕೈಯಲ್ಲಿ ಉಳಿದಿರುತ್ತವೆ. ಪ್ರಾಚೀನ ಕತೆಗಳಲ್ಲಿ ಪ್ರತಿಭಾ ಶಾಲಿಗಳಾದ ಮಹಿಳೆಯರ ಉಲ್ಲೇಖಗಳು ಇದ್ದರೂ ವಾಸ್ತವವಾಗಿ ನೋಡಿದಾಗ ಅಲ್ಲಿರುವ ಚಿತ್ರವೇ ಭಿನ್ನ. ಮಹಿಳೆಗೆ ಕಾಲ್ಪನಿಕವಾಗಿ ಮಹತ್ವದ ಸ್ಥಾನವೇನೊ ಇರುತ್ತದೆ. ಆದರೆ ನಿಜವಾಗಿ ಅವಳು ಕಡೆಗಣಿಸಲ್ಪಟ್ಟಿರುವಳು ಎಂದು ತಿಳಿಸುತ್ತ "ಕಾವ್ಯದಲ್ಲಿ ಮೊದಲಿನಿಂದ ತುದಿಯವರೆಗೂ ಅವಳೇ ತುಂಬಿರುತ್ತಾಳೆ. ಆದರೆ ಚರಿತ್ರೆಯಿಂದ ಮಾತ್ರ ಗೈರು ಹಾಜರಾಗಿರುತ್ತಾಳೆ. ಕಾಲ್ಪನಿಕ ಬರೆಹಗಳಲ್ಲಿ ಆಕೆ ರಾಜಮಹಾರಾಜರನ್ನೂ, ವಿಜಯಿಗಳನ್ನು ಆಳುತ್ತಿರುತ್ತಾಳೆ. ನಿಜ ಜೀವನದಲ್ಲಿ ತನ್ನ ತಂದೆತಾಯಂದಿರ ಬಲವಂತಕ್ಕೆ ಮಣಿದು ಆಕೆ ಬೇರೆಯವನಿಗೆ ಉಂಗುರ ತೊಡಿಸಿ, ಅವನ ಆಳಾಗಿದ್ದಾಳೆ. ಸಾಹಿತ್ಯದಲ್ಲಿನ ಕೆಲವು ಅತ್ಯಂತ ಸ್ಫೂರ್ತಿದಾಯಕ ಶಬ್ದಗಳನ್ನು ಗಾಢ ಚಿಂತನೆಗಳನ್ನು ಆಡುವ ಆಕೆ ನಿಜಜೀವನದಲ್ಲಿ ಅನಕ್ಷರಸ್ಥಳು, ಮಾತು ಬಾರದ ಮೂಢೆಯಾಗಿದ್ದಾಳೆ. ಬರೀ ತನ್ನ ಗಂಡನ ಸ್ವತ್ತು ಆಗಿದ್ದಾಳೆ."[೨೧]

ಇನ್ನೊಂದು ಕೃತಿಯಾದ "Three Guiness"ನಲ್ಲಿ ಸಾಮಾಜಿಕ ಚಾರಿತ್ರಿಕ ಅಧ್ಯಯನಗಳ ಬಗ್ಗೆ ಇರುವ ಆಸಕ್ತಿಯನ್ನು ತಿಳಿಸುತ್ತದೆ. ಪಿತೃಪ್ರಧಾನ ವ್ಯವಸ್ಥೆ ಜಾರಿಗೆ ತಂದ ಮಿಲಿಟರೀಕರಣ, ಫ್ಯಾಸಿಸಂ, ಕಾನೂನಿನ ಅನ್ಯಾಯಗಳನ್ನು ವಿವರಿಸಿದ್ದಾಳೆ. ಒಟ್ಟು ಕೃತಿಯಲ್ಲಿ ಸ್ತ್ರೀ ವ್ಯಕ್ತಿತ್ವದ ಮೌಲ್ಯಗಳ ಬಗ್ಗೆ ಚರ್ಚಿಸಿದ್ದಾಳೆ.

'Women and Writing' ಕೃತಿಯು ಸ್ತ್ರೀವಾದಿ ವಿಮರ್ಶಾ ಮಾದರಿಗಳ ಹಾಗೂ ಆಂಗ್ಲಭಾಷೆಯ ಮಹಿಳಾ ಸಾಹಿತ್ಯ ಪರಂಪರೆ ಬಗ್ಗೆಯೂ ಚರ್ಚಿಸಿದೆ. ಸಾಹಿತ್ಯ ಹೆಣ್ಣಿನ ಬದುಕಿನ ಮೇಲೆ ಹೇಗೆ ಪ್ರಭಾವ ಬೀರುತ್ತದೆ. ಕೃತಿಯನ್ನು ಬರೆಯಬೇಕಾದರೆ ಲೇಖಿಕಿಗೆ ಸ್ವಂತ ಆದಾಯ, ಕೋಣೆ ಅವಶ್ಯಕ ಹಾಗೂ ಲೇಖಿಕಿಯರ ಬರವಣಿಗೆ, ಆದರ್ಶ, ದೈವತ್ವದ ಭ್ರಮೆಯಾಚೆ ಬಂದು ಮಾನವೀಯ ಮೌಲ್ಯಗಳನ್ನು ಸಾಕಾರಗೊಳಿಸಬೇಕು ಎಂದಿದ್ದಾಳೆ. ಲೈಂಗಿಕತೆಯ ಅಭಿವ್ಯಕ್ತಿಯಲ್ಲಿ ಮಡಿವಂತಿಕೆ ಇರಬಾರದು ಪ್ರಮಾಣಿಕತೆ ಇರಬೇಕು ಎನ್ನುವುದು ವುಲ್ಫಳ ಅಭಿಪ್ರಾಯ.

## ೪. ಬೆಟ್ಟಿ ಫ್ರೀಡನ್

ಬೆಟ್ಟಿ ಫ್ರೀಡನ್ ಸಹ ಪ್ರಮುಖ ಸ್ತ್ರೀವಾದಿ ಚಿಂತಕಿ. ಈಕೆಯು 'The Feminine Mystique' ಎಂಬ ಕೃತಿಯನ್ನು ಬರೆದಿದ್ದಾಳೆ. ಈ ಕೃತಿಯು ಎರಡನೆ ಮಹಾಯುದ್ಧ ನಂತರದಲ್ಲಿ ಅಮೇರಿಕಾದ ಮಧ್ಯಮ ವರ್ಗದ ಮಹಿಳೆಯರ ಸ್ಥಿತಿ-ಗತಿಗಳನ್ನು ಕುರಿತಂತೆ ಹೇಳುತ್ತದೆ. ಯುದ್ಧಕಾಲದಲ್ಲಿ ವಿಭಿನ್ನ ಉದ್ಯೋಗಗಳನ್ನು ಮಾಡುತ್ತಿದ್ದ ಮಹಿಳೆಯರು, ಯುದ್ಧದಿಂದ ಸೈನಿಕರು ಹಿಂತಿರುಗಿದ ನಂತರ ಉದ್ಯೋಗ ಬಿಟ್ಟುಕೊಟ್ಟು ಬಲವಂತದಿಂದ ಮನೆಗೆ ಬಂದರು. ಅಲ್ಲದೆ ತಮ್ಮನ್ನು ಗೃಹ ಕೆಲಸ ಕಾರ್ಯಗಳಲ್ಲಿ ತೊಡಗಿಸಿಕೊಂಡರು. ಈ ಮಹಿಳೆಯರು ಗೃಹ ಕೆಲಸಕಾರ್ಯಗಳಲ್ಲಿ ತೃಪ್ತಿಯನ್ನು ಪಡೆಯಲಿಲ್ಲ. ಅಲ್ಲದೆ ಪುರುಷರಂತೆ ಸ್ವಾತಂತ್ರ್ಯ ಹೊಂದಲು ಆಗುತ್ತಿಲ್ಲ ಎಂದು ಮಾನಸಿಕವಾಗಿ ಕೊರಗಿದರು. ತಮ್ಮ ಮಾನಸಿಕ ನೋವನ್ನು ನಿವಾರಿಸಿಕೊಳ್ಳಲು ವೈದ್ಯರ ಬಳಿಗೂ ಹೋಗಿದ್ದರು. ವೈದ್ಯರು ಈ ಗೃಹಿಣಿಯರನ್ನು ಪರೀಕ್ಷಿಸಿ ಅವರನ್ನು ಕಾಡುತ್ತಿರುವ ಕಾಮಿಲೆಗೆ "ಹೆಸರೇ ಇಲ್ಲದ ಸಮಸ್ಯೆ" ಎಂದೂ, ಗೃಹಿಣಿ ಬದುಕು ಬದಲಾಗಬೇಕು ಎಂದರು. ಇಂಥ ಕಾಯಿಲೆಗೆ ಮಹಿಳೆಯರು 'ಮಹಿಳಾ ಅಧೀನತೆ' ಎಂದು ಹೆಸರು ನೀಡಿದರು. ವೈದ್ಯರ ಸಲಹೆಯಂತೆ "ತಮ್ಮ ಬದುಕನ್ನು ಬದಲಾಯಿಸಿಕೊಳ್ಳಲು ಗೃಹಿಣಿಯರು ಉದ್ಯೋಗಕ್ಕೂ ಹೋದರು ಎಂದಿದ್ದಾಳೆ. ಗೃಹಿಣಿಯರ ಬದುಕನ್ನು ವಿವರಿಸುತ್ತ "ಮಹಿಳೆಯರನ್ನು ಒಂದು ವಿಚಾರದಿಂದಲೇ ಬಾಲ್ಯದಿಂದಲೂ ಬೆಳೆಸುತ್ತಾರೆ. ಅದು ಸ್ತ್ರೀಯರ ಜೀವನದ ಪ್ರಧಾನ ಉದ್ದೇಶ ಗಂಡ ಮತ್ತು ಮಕ್ಕಳನ್ನು ನೋಡಿಕೊಳ್ಳುವುದು ಎಂದೇ. ಇದರಿಂದಾಗಿ ಸ್ತ್ರೀಯರಿಗೆ ಮನೆ ಎಂಬುದು "ಕಾನ್‌ಸೆಂಟ್ರೇಷನ್ ಕ್ಯಾಂಪ್" ಆಗಿರುತ್ತದೆ. ಇಂಥವರಲ್ಲಿ ಇರುವ ಸ್ತ್ರೀಯರನ್ನು ಬಾಲಿಶ ನೆಲೆಗೆ ಅಂಟಿಸಿಬಿಟ್ಟು, ಅವರು ಪ್ರಬುದ್ಧತೆಯ ಚೌಕಟ್ಟಿನಡಿಯಲ್ಲಿ ಗುರುತಿಸಲ್ಪಡುವುದನ್ನು ಅಲ್ಲಗಳೆದಿದ್ದಾಳೆ.

ಎಲ್ಲ ಗೃಹಿಣಿಯರು ಬದುಕಿನಲ್ಲಿ ಕಾಯಿಲೆಗೆ ಒಳಗಾಗಿ ನರಳಿದ್ದಾರೆ. ಅವರೆಲ್ಲ ಉದ್ಯೋಗ ಮಾಡುವ ಗುರಿ ಹೊಂದಿರುವವರು ಎನ್ನುವುದು ಇಡೀ ಸಮಾಜಕ್ಕೆ ಅನ್ವಯವಾಗುತ್ತಿರಲಿಲ್ಲ. ಒಂದು ಚಿಕ್ಕ ಸಮೂಹದ ಬಿಕ್ಕಟ್ಟೇ ಇಡೀ ಮಹಿಳಾ ಸಮೂಹದ ಸಮಸ್ಯೆ ಎಂದಿದ್ದನ್ನು ವಿಮರ್ಶಕರು ಗುರುತಿಸಿ, ವಿಮರ್ಶೆಗೆ ಒಳಪಡಿಸಿದರು. ೧೯೬೬ರಲ್ಲಿ 'ನ್ಯಾಷನಲ್ ಆರ್ಗನೈಜೇಷನ್ ಫಾರ್ ವಿಮನ್'ಗೆ ಮೊದಲ ಅಧ್ಯಕ್ಷಣಿಯಾಗಿದ್ದಳು. ಇದರ ಆರಂಭದ ಸಮಾವೇಶದಲ್ಲಿ ಮಾತನಾಡುತ್ತಾ ಮಹಿಳೆಯರ ಮೇಲೆ ನಡೆಯುತ್ತಿರುವ ಶೋಷಣೆ, ದೌರ್ಜನ್ಯ ಮೊದಲಾದವುಗಳನ್ನು ನಿಲ್ಲಿಸಲು ಏಳು ಸೂತ್ರಗಳನ್ನು ಸೂಚಿಸಿದಳು. ಅವುಗಳೆಂದರೆ "ವಿದ್ಯಾಭ್ಯಾಸದ ಕ್ಷೇತ್ರ, ಉದ್ಯೋಗ, ಧರ್ಮ, ಬಡ ಮಹಿಳೆಯರು, ಸಮೂಹ ಮಾಧ್ಯಮಗಳಲ್ಲಿ

ಮಹಿಳೆ, ಮಹಿಳೆಯರ ರಾಜಕೀಯ ಹಕ್ಕು ಮತ್ತು ಕುಟುಂಬ'' ಎಂದು ಹೇಳಿದಳು. ಅಲ್ಲದೆ ಈ ಮೇಲಿನವುಗಳಲ್ಲಿ ಬದಲಾವಣೆ ಅವಶ್ಯಕ. ಅದರಲ್ಲಿಯೂ ವಿದ್ಯಾಭ್ಯಾಸವೇ ಸಮಾಜದ ಬದಲಾವಣೆಗೆ ಮೊದಲ ಸಾಧನ ಎಂದಳು. ಮಹಿಳೆಯರು ಹತಾಶರಾಗದೆ, ಬಳಲದೇ ಇರುವಂತೆ ಹೇಳುತ್ತಾ ಚಾಲ್ತಿಯಲ್ಲಿರುವ ಪುರುಷ ಪ್ರಧಾನ ಸಮಾಜದ ವ್ಯವಸ್ಥೆಯನ್ನೇ ಬದಲಾವಣೆ ಮಾಡಿಕೊಳ್ಳಬೇಕು ಎಂದು ಅಭಿಪ್ರಾಯಪಟ್ಟಳು.

೫. ಮೇರಿ ಎಲ್‌ಮನ್

ಮೇರಿ ಎಲ್ ಮನ್ 'Thinking about woman' ಕೃತಿ ರಚಿಸಿದಳು. ಇದು ಹಲವು ಅಧ್ಯಾಯಗಳನ್ನು ಒಳಗೊಂಡಿದೆ. ಅಲ್ಲದೆ ಪ್ರತಿ ಅಧ್ಯಾಯವು ಒಂದೊಂದು ವಿಷಯವನ್ನು ಕೇಂದ್ರವಾಗಿಸಿಕೊಂಡಿದೆ. ಈಕೆಯ ಬರವಣಿಗೆಯ ಪ್ರಧಾನ ವಿಷಯ ಲೈಂಗಿಕತೆ. ಮಾನವರಲ್ಲಿಯೂ ಭಿನ್ನತೆಗಳಿವೆ. ಇದರಿಂದಾಗಿ ನಮ್ಮ ಜೀವನದ ಎಲ್ಲ ದೃಶ್ಯರೂಪಾವಳಿಗಳನ್ನು ತಿಳಿದುಕೊಳ್ಳುವಾಗ ಸಾಮಾನ್ಯವಾಗಿ 'ಲೈಂಗಿಕ ಸಾದೃಶ್ಯ ಆಧಾರಿತ ವಿಚಾರ' ಇದ್ದೇ ಇರುತ್ತದೆ ಎಂದಿದ್ದಾಳೆ. ಈ ವಿಚಾರವು ನಮ್ಮ ಎಲ್ಲ ಅನುಭವಗಳನ್ನು ಲೈಂಗಿಕ ಸಾದೃಶ್ಯದ ಮೇಲೆ ವಿಂಗಡಿಸಿರುವಂಥದ್ದು. ಈ ಬೌದ್ಧಿಕ ಅಭ್ಯಾಸವು ನಾವು ಜಗತ್ತನ್ನು ಕಾಣುವ ರೀತಿಯನ್ನು ರೂಪಿಸುತ್ತದೆ ಎಂದಿದ್ದಾಳೆ. ಎಲ್‌ಮನ್‌ಳ ಬರವಣಿಗೆಯ ಪ್ರಧಾನ ಉದ್ದೇಶ ಲೈಂಗಿಕತೆಯ ಬಗ್ಗೆ ಇರುವ ವಿಚಾರ-ವಿಧಾನದ ತರ್ಕಹೀನತೆ, ಅರ್ಥ ಹೀನತೆಗಳನ್ನು ತಿಳಿಸುವುದು. ಈ ಲೈಂಗಿಕತೆಯೊಂದಿಗಿನ ವಿಚಾರ ಸಾಹಿತ್ಯದ ರೂಪಕಗಳಲ್ಲಿಯೂ, ಜೀವನದ ಹಲವು ಕ್ಷೇತ್ರಗಳಲ್ಲಿಯೂ ಇರುತ್ತದೆ ಎಂದು ನಿರ್ವಚಿಸಿ, ತನ್ನ ಕಾಲಘಟ್ಟದೊಂದಿಗೆ ಅದನ್ನು ಹೋಲಿಕೆ ಮಾಡಿಕೊಂಡು ಚಿಂತಿಸಿದ್ದಾಳೆ.

ಮೂರನೆಯ ಅಧ್ಯಾಯವನ್ನು ಪುರುಷರ ಅಧಿಕಾರ ವಿಮರ್ಶೆಗೆ ಎಂದು ಹೇಳಿದ್ದಾಳೆ. ಸ್ತ್ರೀಯರ ಕೃತಿಗಳನ್ನು ಕುರಿತಂತೆ ಚರ್ಚಿಸುವಾಗ ಪುರುಷರು ಸ್ತ್ರೀತ್ವದ ಪ್ರಶ್ನೆಯನ್ನೇ ಅವರು ವಸ್ತುವಿಷಯವನ್ನಾಗಿ ಮಾಡಿಕೊಳ್ಳುತ್ತಾರೆ. ಅಲ್ಲದೆ ತಾವೇ ಮಹಿಳೆಯರೋ ಎಂಬಂತೆ ತಿಳಿದುಕೊಂಡು ವಿಮರ್ಶಿಸುತ್ತಾರೆ ಎಂದು ಗುರುತಿಸಿದ್ದಾಳೆ. ಅಲ್ಲದೆ ಸ್ತ್ರೀಯರ ಹನ್ನೊಂದು ರೀತಿಯ ಪ್ರಧಾನ ಸಿದ್ಧರೂಪಗಳನ್ನು ಪುರುಷ ವಿಮರ್ಶಕರು ಹೇಳುವಂಥದ್ದನ್ನು ಕಂಡುಕೊಂಡಳು. ಅವು ನಿರಾಕಾರತೆ, ಜಡತೆ, ಅಸ್ಥಿರತೆ, ಸೀಮಿತತೆ, ಪರಿಶುದ್ಧತೆ, ಐಹಿಕತೆ, ಆಧ್ಯಾತ್ಮಿಕತೆ, ಅವ್ಯವಹಾರಿಕತೆ, ವಿಧೇಯತೆ, ಮಾಟಗಾತಿ, ಗಂಡುಬೀರಿ ಎಂದು ಹೇಳಿದ್ದಾಳೆ.

ನಾಲ್ಕನೆಯ ಅಧ್ಯಾಯದಲ್ಲಿ "ಧ್ವನಿಯಲ್ಲಿ ಭಿನ್ನತೆ" ಎಂದು ಹೇಳುವಾಗ ಪುರುಷರ ಬರೆಹ ಅಧಿಕೃತವಾಗಿದೆ. ಅದು ಸಮರ್ಥನೀಯವೂ ಆಗಿದ್ದರೆ ಮಹಿಳೆಯರ ಬರೆಹ ಸಂವೇದನೆಯನ್ನು ತಿಳಿಸುತ್ತದೆ ಎಂದೂ ಹೇಳಿ, ೧೯೬೦ರಿಂದ ಸ್ತ್ರೀಯರು ಹೊಸ ಬಗೆಯಲ್ಲಿ ಬರೆಯಲು ಆರಂಭಿಸಿದರು ಎಂದು ತಿಳಿಸಿದ್ದಾಳೆ.

ಕೊನೆಯ ಅಧ್ಯಾಯದಲ್ಲಿ "ಪ್ರತಿಕ್ರಿಯೆಗಳು" ಎಂದು ವಿವರಿಸುತ್ತ ಲೇಖಕಿಯರು ಪುರುಷಪ್ರಧಾನ ಮೌಲ್ಯಗಳು, ವಿಚಾರಗಳನ್ನು ಹೊಂದಿರುವವರೊಂದಿಗೆ ಹೇಗೆ ವರ್ತಿಸಬೇಕು ಹಾಗೂ ಅವರನ್ನು ಎದುರಿಸುವುದಕ್ಕೆ ಇರುವ ಹೊಸ ತಂತ್ರಗಳು ಯಾವ ಬಗೆಯವು ಎಂಬುದನ್ನು ಚರ್ಚಿಸಿದ್ದಾಳೆ.

### ೬. ಶುಲಾಮಿತ್ ಫೈರ್‌ಸ್ಟನ್

ತೀವ್ರವಾದಿ ಸ್ತ್ರೀವಾದಿಗಳಲ್ಲಿ ಫೈರ್‌ಸ್ಟನ್ ಪ್ರಧಾನಗಳಾಗಿದ್ದಾಳೆ. ಈಕೆ ಪುರುಷರೆಲ್ಲಾ ಶೋಷಕರು ಎಂದು ತಿಳಿಸುತ್ತಾ ಸ್ತ್ರೀ-ಪುರುಷರು ಜೈವಿಕತೆಯಿಂದ ಭಿನ್ನವಾಗಿದ್ದಾರೆ. ಈ ಅಂಶವೇ ಅವರನ್ನು ಮೇಲು-ಕೀಳೆಂಬ ತಾರತಮ್ಯಕ್ಕೆ ಒಳಪಡಿಸಿತ್ತು. ಸ್ತ್ರೀಯರ ಮೇಲೆ ಪುರುಷರ ದಬ್ಬಾಳಿಕೆ ನಡೆಸಲು ಸಹ ಕಾರಣವಾಗಿರುತ್ತದೆ. ಈ ದೈಹಿಕ ವ್ಯತ್ಯಾಸ ಇವರಿಬ್ಬರ ನಡುವೆ ತಾರತಮ್ಯ ವ್ಯಾಪಕಗೊಳ್ಳಲು ಸಹಾಯಕವಾಗಿದೆ. ಇಂಥ ತಾರತಮ್ಯ ಸಮಾಜದ ವಿವಿಧ ಸಂಸ್ಥೆಗಳಿಂದ ವ್ಯಕ್ತವಾಗಿ ಮಹಿಳೆಯನ್ನು ಶೋಷಣೆಗೆ ಒಳಪಡಿಸಿದೆ. ಈಕೆಯು 'The Dialectics of sex' ಎಂಬ ಕೃತಿ ರಚಿಸಿದ್ದಾಳೆ. ಈ ಕೃತಿಯಲ್ಲಿ ಮಹಿಳೆಯ ಶೋಷಣೆಗೆ ಕಾರಣಗಳನ್ನು ತಿಳಿಸಿದ್ದಾಳೆ.

ಮಹಿಳೆಯ ಶೋಷಣೆಗೆ ವರ್ಗದ ಜೊತೆಗೆ ಲಿಂಗಪ್ರಭೇದವು ಜೈವಿಕ ವಾಸ್ತವವಾಗಿದೆ. ಸ್ತ್ರೀ-ಪುರುಷರು ವಿಭಿನ್ನವಾಗಿ ಹುಟ್ಟಿದ್ದಾರೆ. ಆದರೆ ಅಸಮಾನತೆಗಳನ್ನು ಪಡೆದೇನೂ ಹುಟ್ಟಿಲ್ಲ. ಹೆಣ್ಣು ಮುಟ್ಟಿನ ಆರಂಭಕ್ಕೂ ಅದರ ನಿಲ್ಲುವಿಕೆಯೂ ಮೇಲಿಂದ ಮೇಲೆ ಮಕ್ಕಳ ಜನ್ಮ ನೀಡುವ ತ್ರಾಸದಾಯಕ ಕ್ರಿಯೆಯಿಂದಲೂ, ಮಕ್ಕಳಿಗೆ ಹಾಲು ಉಣ್ಣಿಸುವ ಕ್ರಿಯೆಯಿಂದಲೂ ಮತ್ತು ಅವುಗಳ ಲಾಲನೆ-ಪಾಲನೆ ಮಾಡುತ್ತಾ ಇರಬೇಕಾಗಿದ್ದರಿಂದ ಮಹಿಳೆ ಆಹಾರಕ್ಕಾಗಿ, ರಕ್ಷಣೆಗಾಗಿಯೂ ಪುರುಷನನ್ನು ಅವಲಂಬಿಸಿದ್ದಳು ಎಂದಿದ್ದಾಳೆ. ಗಂಡ ಅಥವಾ ಹೆಣ್ಣು ಮಗು ಹುಟ್ಟಿದಾಗ ಅದು ತುಂಬ ಸೂಕ್ಷ್ಮವಾಗಿರುತ್ತವೆ. ಅವುಗಳು ಬೆಳೆದು ದೊಡ್ಡವಾಗಬೇಕಾದರೆ ಬಹಳ ಸಮಯ ತೆಗೆದುಕೊಳ್ಳುತ್ತದೆ. ಅದಕ್ಕಾಗಿಯೂ ಆಕೆಯು ಪುರುಷನನ್ನು ಅವಲಂಬಿಸುವಂತಾಯಿತು. ಹೀಗೆ ಮಹಿಳೆಯು ಮತ್ತು ಆಕೆಯ ಮಗುವೂ ಅವಲಂಬನೆಯಿಂದ ಇರಬೇಕಾಗಿದ್ದು, ಈ ಅವಲಂಬನೆ ತಾಯಿ-ಮಗುವಿನ ಮಾನಸಿಕ ಆರೋಗ್ಯದ ಮೇಲೆ ಪ್ರಭಾವ ರೂಪಿಸುತ್ತದೆ. ಹೆಣ್ಣು ಪುರುಷನನ್ನು ಅವಲಂಬಿಸಿ ಬಹುಕಾಲ ಇರಬೇಕಾಗಿದ್ದರಿಂದ ಆಕೆಯು ನಿರ್ದಿಷ್ಟ ಕೆಲಸ ಕಾರ್ಯಗಳಿಗೆ ಸೀಮಿತವಾದಳು. ಇದೇ ಆರ್ಥಿಕ ಸಾಂಸ್ಕೃತಿಕ ವರ್ಗಗಳ ವಿಭಜನೆಗೂ ಸಹಾಯಕವಾಯಿತು. ಇವೆಲ್ಲವುಗಳಿಂದ ಮಹಿಳೆ ಪುರುಷನ ಅಧೀನವಾಗಿ ಶೋಷಿಸಿಕೊಂಡಳು. ಆದರೆ ಈ ಶೋಷಣೆಯ ತಡೆಗೆ ವೈಜ್ಞಾನಿಕ ಮತ್ತು ತಂತ್ರಜ್ಞಾನದ ಬೆಳವಣಿಗೆಯೂ ಕಾರಣವಾಯಿತು. ಇದು ಸಂತತಿಯನ್ನು ತಡೆಯಲು ಸಹಾಯವಾಗಿ ಹೆಣ್ಣನ್ನು ಶೋಷಣೆಯಿಂದ ಮುಕ್ತಳನ್ನಾಗಿ ಮಾಡಿತ್ತು. ಅಲ್ಲದೆ ಮಗುವನ್ನು ಬೆಳೆಸುವ ಪ್ರಕ್ರಿಯೆಯಲ್ಲಿ ಸ್ತ್ರೀ-ಪುರುಷರಿಬ್ಬರೂ ಹೊಣೆ ಹೊರಬೇಕಾಯಿತು. ಇದರಿಂದಾಗಿ ಹೆಣ್ಣು ಗಂಡಿನಂತೆ ಮುಕ್ತವಾಗಿ ಬೆರೆಯಲು, ಕಾರ್ಯಚಟುವಟಿಕೆಗಳಲ್ಲಿ ತೊಡಗಲು ಸಾಧ್ಯವಾಗಿದೆ ಎಂದು ಹೇಳಿದ್ದಾಳೆ.

### ೭. ಕೇಟ್ ಮಿಲ್ಲೆಟ್

ಕೇಟ್ ಮಿಲ್ಲೆಟ್ ಸಹ ಪ್ರಧಾನ ಸ್ತ್ರೀವಾದಿ ಚಿಂತಕಿಯಾಗಿದ್ದಾಳೆ. ೧೯೭೦ರಲ್ಲಿ ಮಿಲ್ಲೆಟ್ 'Sexual Politics' ಕೃತಿ ರಚಿಸಿದಳು. ಮಿಲ್ಲೆಟ್ ಸಾಹಿತ್ಯವನ್ನು ಸರಿಯಾಗಿ ಅರ್ಥ ಮಾಡಿಕೊಳ್ಳಲು ಅದರ ಸಾಮಾಜಿಕ, ಸಾಂಸ್ಕೃತಿಕ ಸಂದರ್ಭಗಳನ್ನು ಅಧ್ಯಯನ ಮಾಡಬೇಕಾದದ್ದು ಅವಶ್ಯಕವೆಂದೂ ಹೇಳಿದ್ದಳು. 'Sexual Politics'ನಲ್ಲಿ ಮೂರು ಭಾಗಗಳಿರುತ್ತವೆ. 'ಲೈಂಗಿಕ ರಾಜಕೀಯ'ವನ್ನು ಮೊದಲ ಭಾಗದಲ್ಲಿ ಸಾಹಿತ್ಯಕ

ಪಠ್ಯಗಳಲ್ಲಿ ಮೂಡಿಸಿರುವ ನಿದರ್ಶನಗಳ ಮುಖಾಂತರ ಲೈಂಗಿಕ ಕ್ರಿಯೆಯಲ್ಲಿ ಹೆಣ್ಣು-ಗಂಡುಗಳ ಲಿಂಗಪ್ರಭೇದಗಳ ನಡುವೆ ಇರುವ ಅಧಿಕಾರದ ಸಂಬಂಧವನ್ನು ವಿವರಿಸಿದ್ದಾಳೆ. 'ಲೈಂಗಿಕ ರಾಜಕಾರಣ'ದ ಸೈದ್ಧಾಂತಿಕ ವಿಶ್ಲೇಷಣೆ ನೀಡುತ್ತಾ ಪಿತೃ ಪ್ರಧಾನ್ಯತೆಯ ಮತ್ತು ಅದರ ವಿವಿಧ ಸ್ವರೂಪವನ್ನು ತಿಳಿಸಿ ಅದು ಲೈಂಗಿಕ ರಾಜಕಾರಣದ ಸ್ವರೂಪದಲ್ಲಿ ವಹಿಸುವ ಪಾತ್ರವನ್ನು ವಿವರಿಸಿದ್ದಾಳೆ.

ಎರಡನೆಯ ಅಧ್ಯಾಯದಲ್ಲಿ ಲೈಂಗಿಕ ರಾಜಕಾರಣದಲ್ಲಿ ೧೮೩೦-೧೯೩೦ರ ದಶಕದಲ್ಲಿ ಉಂಟಾದ ಪರಿವರ್ತನೆಯನ್ನು ಲೈಂಗಿಕ ಕ್ರಾಂತಿಯನ್ನಾಗಿಸಿ, ಅದನ್ನು ರಾಜಕೀಯ ಸಾಹಿತ್ಯಕ ನೆಲೆಯಲ್ಲಿಯೂ ವಿಶ್ಲೇಷಿಸಿದ್ದಾಳೆ. ೧೯೩೦-೧೯೬೦ರ ಪರಿವರ್ತನೆಯನ್ನು ಪ್ರತಿಕ್ರಾಂತಿಯನ್ನಾಗಿ ಕಂಡುಕೊಂಡು, ಅದನ್ನು ಜರ್ಮನಿಯ ನಾಜಿ ಮತ್ತು ಸೋವಿಯತ್ ಯೂನಿಯನ್‌ಗಳ ಮಾದರಿಯನ್ನು ಪ್ರತಿ ಮಾದರಿಯನ್ನಾಗಿ ಗ್ರಹಿಸಲು ತಿಳಿಸಿದ್ದಾಳೆ. ಅಲ್ಲದೆ ಫ್ರಾಯ್ಡ್ ಮತ್ತು ಅವನ ವಿಚಾರಗಳನ್ನು ಲೈಂಗಿಕ ರಾಜಕಾರಣದ ಅನ್ವಯದೊಂದಿಗೆ ವಿವರಿಸುತ್ತಾಳೆ.

ಮೂರನೆಯ ಅಧ್ಯಾಯದಲ್ಲಿ ಡಿ.ಎಚ್.ಲಾರೆನ್ಸ್, ಹೆನ್ರಿಮಿಲ್ಲರ್, ನಾರ್ಮನ್ ಮೇಯ್ಲರ್, ಜಾನ್ ಜೆನೆ ಮೊದಲಾದವರ ಕೃತಿಗಳಲ್ಲಿ ಲೈಂಗಿಕ ರಾಜಕೀಯವು ಹೇಗೆ ಕಾರ್ಯನಿರ್ವಹಿಸುತ್ತದೆ ಎಂಬುದನ್ನು ಪ್ರಯೋಗ ಮಾಡುತ್ತಾ ನಿರ್ವಚಿಸಿದ್ದಾಳೆ.

ಮಿಲ್ಲೆಟ್‌ಳು ರಾಜಕೀಯದ ಅಂತಿಮಗುರಿ ಅಧಿಕಾರ. ಲೈಂಗಿಕ ಕ್ಷೇತ್ರವೂ ಯಾವುದೇ ರೂಪದಲ್ಲಿ ವ್ಯಕ್ತವಾಗದೆ ಮೌನವಾಗಿ ಇದ್ದರೂ ಅದು ಸಂಸ್ಕೃತಿಯಲ್ಲಿ ವ್ಯಾಪಕವಾದ ಸಿದ್ಧಾಂತವಾಗಿರುತ್ತದೆ ಎಂದಿದ್ದಾಳೆ. ಅಧಿಕಾರದಲ್ಲಿದ್ದು ಆಳುವ ಲಿಂಗ ಪ್ರಭೇದವು ತನ್ನ ಅಧೀನಕ್ಕೆ ಒಳಗಾದ ಲಿಂಗಪ್ರಭೇದದ ಮೇಲೆ ನಿಯಂತ್ರಣ ಪಡೆದು ಅಧಿಕಾರವನ್ನು ಸ್ಥಾಪಿಸಲು ಅದನ್ನು ಮತ್ತಷ್ಟು ವಿಸ್ತರಗೊಳಿಸಲು ಉಳಿಯುವಂತೆ ಮಾಡುವ ಪ್ರಯತ್ನದ ಪ್ರಕ್ರಿಯೆಯೇ 'ಲಿಂಗರಾಜಕೀಯ' ಎಂದು ಊಹಿಸಿದ್ದಾಳೆ. ಮಿಲ್ಲೆಟ ಶೋಷಿತರಲ್ಲಿಯೇ ಒಬ್ಬಳು. ಈಕೆಗೆ ಶೋಷಣೆಯ ವಿರುದ್ಧ ಪ್ರತಿಭಟಿಸಲು ಇನ್ನೂ ತಿಳುವಳಿಕೆಯೂ ಬೇಕಾಗಿರುತ್ತದೆ. ಪಿತೃಪ್ರಧಾನ್ಯತೆಯು ಸಿದ್ಧಾಂತದ ಪೊಳ್ಳುತನವನ್ನು ಕಂಡು ಅದನ್ನು ಪ್ರಶ್ನಿಸಿ ಸ್ವತಂತ್ರಳಾಗಬಹುದು ಎಂದಿದ್ದಳು. ಪುರುಷ ಪ್ರಧಾನ್ಯತೆಯನ್ನು ಕುರಿತಂತೆ ಮಿಲ್ಲೆಟ್‌ಳ ವಿಚಾರ ವಿಶೇಷವಾಗಿದೆ. ಪುರುಷ ಪ್ರಧಾನ್ಯತೆಯೊಳಗೆ ಗಂಡು ಪ್ರಬಲನಾಗಿ ಅಧಿಕಾರ ಪಡೆದು ಸಾಮಾಜೀಕರಣದ ಗುಣ-ಪಾತ್ರಗಳಿಂದ ಹೆಣ್ಣನ್ನು ಅಧೀನವಾಗಿಸಿಕೊಂಡಿದ್ದಾನೆ. ಹಾಗೂ ಅಧೀನತೆಯನ್ನು ಮತ್ತಷ್ಟು ವ್ಯಾಪಕವಾಗಿಸಲು ಮತ್ತು ಅದು ಶಾಶ್ವತವಾಗಿ ಇರುವಂತೆ ಮಾಡಲು ಸಾಂಸ್ಥಿಕ ಪದ್ಧತಿಗಳನ್ನು ಬಳಸಿಕೊಂಡಿರುವರು. ಪುರುಷರು ಹುಟ್ಟಿನಿಂದಲೇ ಆಳುವ ಅಧಿಕಾರ ಚಲಾಯಿಸುವವರಾಗಿ ರಾಜಕೀಯ, ಆರ್ಥಿಕ, ಸೈನಿಕ ಮುಂತಾದ ವ್ಯವಸ್ಥೆಗಳನ್ನು ನಿಯಂತ್ರಿಸುವವರು ಪುರುಷರೇ ಆಗಿರುತ್ತಾರೆ ಎಂದು ಹೇಳಿದ್ದಾಳೆ.

## ೨.೬. ಪಾಶ್ಚಿಮಾತ್ಯ ಸ್ತ್ರೀವಾದಿ ಪಂಥಗಳು

ಸ್ತ್ರೀವಾದದ ಸಮಗ್ರ ಅಧ್ಯಯನಕ್ಕೆ ಸ್ತ್ರೀವಾದಿ ಪಂಥಗಳು ಸಹಾಯಕ. ಸ್ತ್ರೀ ಕುರಿತ ಚಿಂತನೆಗಳು ವಿಭಿನ್ನವಾಗಿವೆ. ಈ ವಿಭಿನ್ನತೆಗಳೇ ವಿವಿಧ ಪಂಥಗಳಲ್ಲಿ ರೂಪು ಪಡೆದಿದೆ. ಸ್ತ್ರೀ ಚಿಂತನೆಯಲ್ಲಿ ವಿಭಿನ್ನತೆ

ಇರುವುದು ಸಹಜ. ಆದರೆ ಎಲ್ಲಾ ಪಂಥಗಳ ಉದ್ದೇಶ ಸ್ತ್ರೀ ಶೋಷಣೆ ಮತ್ತು ಪಿತೃಪ್ರಧಾನತೆಯ ವಿರುದ್ಧವಾಗಿದೆ.

### ೧. ಉದಾರವಾದಿ ಸ್ತ್ರೀವಾದಿ ಪಂಥ

ವಸಾಹತುಗಳ ಸಂಪತ್ತು ಐರೋಪ್ಯ ದೇಶಗಳನ್ನು ವೈಜ್ಞಾನಿಕವಾಗಿ ಮುನ್ನಡಿಸಿದೆ. ಸಹಜವಾಗಿ ಸಾಮಾಜಿಕ ಬದಲಾವಣೆಗಳು ಆದವು. ನವ ಬಂಡವಾಳಶಾಹಿ ವರ್ಗ ಹುಟ್ಟಿಕೊಂಡಿತು. ಕ್ಯಾಥೋಲಿಕ್ ಕ್ರಿಶ್ಚಿಯನ್ ಧರ್ಮ, ಜಮೀನುದಾರರು, ಭೂಮಾಲೀಕರು ಹಿಂದಿನಂತೆ ಇರಲು ಅಸಾಧ್ಯವಾಯಿತು. ಅಂತೆಯೇ ಪ್ರಾಟೆಸ್ಟಂಟ್ ಪಂಥ, ವೈಜ್ಞಾನಿಕ ಸಿದ್ಧಾಂತಗಳು ಉದಯವಾದವು. ಇದರಿಂದಾಗಿ ಸಮಾಜ ವೈಚಾರಿಕ ಕ್ರಾಂತಿಯನ್ನು ಕಂಡಿತು. ಈ ಕ್ರಾಂತಿಯು ಉದಾರವಾದ, ಮಾನವತವಾದ ಉದಯಕ್ಕೂ ಕಾರಣವಾಗಿ ಬಂಡವಾಳಶಾಹಿ ವ್ಯವಸ್ಥೆ ಬೌದ್ಧಿಕ ಮತ್ತು ದೈಹಿಕವಾಗಿ ಸಮರ್ಥನಿದ್ದ ವ್ಯಕ್ತಿಗೆ ಹಕ್ಕು ಎಂದು ಅಧಿಕಾರವನ್ನು ಹೊಸದಾಗಿ ವ್ಯಾಖ್ಯಾನಿಸಿತು. ಆದರೆ ಸಮಾಜವನ್ನು ಬುದ್ಧಿಪೂರ್ವಕತೆಯಿಂದ ತಾರ್ಕಿಕವಾಗಿ ಕಟ್ಟಲು ಉದಾರವಾದಿ ಪಂಥ ಬಯಸಿದ್ದು. ಸಮಾಜ ಅಸಮಾನತೆಗಳಿಂದ ಕೂಡಿರುವುದಕ್ಕೆ ದೈವವು ಕಾರಣವಾಗಿಲ್ಲ ಎಂದು. ವೈಜ್ಞಾನಿಕ ಪ್ರಗತಿ ಬದಲಾವಣೆಯನ್ನು ತೋರಿಸಿತು. "ಮಾನವನ ಹುಟ್ಟು ಸಹಜ, ನೈಸರ್ಗಿಕ. ನೈಸರ್ಗಿಕ ಹಕ್ಕುಗಳೆಲ್ಲಾ ಮಾನವರಿಗೆ ಬೇಕು. ಸ್ತ್ರೀ-ಪುರುಷರಲ್ಲಿ ಬೇದ-ಭಾವವಿರಬಾರದು. ಪ್ರತಿಯೊಬ್ಬರಿಗೂ ಅವರ ವ್ಯಕ್ತಿತ್ವ ವಿಕಾಸಕ್ಕೆ ಬೇಕಾದ ಸ್ವಾತಂತ್ರ್ಯ, ಸಮಾನ ಹಕ್ಕುಗಳು ದೊರೆಯಬೇಕು ಎಂದಿತು. ಈ ಪರಿಯ ವೈಚಾರಿಕತೆಯ ಚಿಂತನೆಗಳು ಶೋಷಿತರಿಗೆ ಒಂದು ನೆಲೆ, ಅಸ್ತಿತ್ವವನ್ನು ಕೊಟ್ಟವು. ಇದರಿಂದ ಶ್ರೇಣೀಕರಣ ಸಮಾಜದ ಮೇಲು-ಕೀಳಿನ ಬಗ್ಗೆ ಯುರೋಪಿಯನ್ನರು ಹೋರಾಟ ಆರಂಭಿಸಿದರು. ವ್ಯಕ್ತಿ ಸಮಾನತೆ ಪಡೆಯಲು ಚಳವಳಿಕಾರರು ಮುಂಚೂಣಿಯಲ್ಲಿದ್ದರು. ಆದರೂ ಇವರು ಮಹಿಳೆಯನ್ನು ಕುರಿತಂತೆ ಕಲ್ಪನೆಯಾಗಲಿ, ವಿಚಾರವಾಗಲಿ ಮಾಡಲಿಲ್ಲ. ಇದನ್ನು ಕಂಡ ಮಹಿಳೆಯರು ಪುರುಷರ ವಿರುದ್ಧ ಪ್ರತಿಭಟಿಸಲು ಎರಡು ಬಗೆಯ ಹೋರಾಟಗಳನ್ನು ಆರಂಭಿಸಿದರು. ಮೊದಲನೆಯ ಹೋರಾಟ ಬಂಡವಾಳಶಾಹಿ ವ್ಯವಸ್ಥೆಯಾದರೆ, ಎರಡನೆಯ ಹೋರಾಟ ಪುರುಷ ಪ್ರಧಾನ್ಯತೆ ವಿರುದ್ಧವಾಗಿತ್ತು. ಈ ಹೋರಾಟ ಸ್ತ್ರೀವಾದದ ಇತಿಹಾಸದಲ್ಲಿ ಪ್ರಮುಖವಾದುದು. ಈ ಚಳವಳಿಯಲ್ಲಿ ಸ್ತ್ರೀ-ಪುರುಷರು ಒಂದೇ ನೆಲೆಯಲ್ಲಿ ನಿಂತು ಹೆಚ್ಚಿನ ಜಾಗ್ರತೆಯನ್ನು ಕಂಡುಕೊಳ್ಳುವಂತೆ ಆಯಿತು. ಕುಟುಂಬದಲ್ಲಿ ಸ್ತ್ರೀ-ಪುರುಷರ ಸಮಾನತೆ ಬಂದರೆ ಹೊರಗಿನ ಕ್ಷೇತ್ರದ ಸಮಾನತೆ ಪಾಲಿಸಬಹುದು ಎಂದು ಅರಿತರು. ವಸಾಹತುಗಳನ್ನು ವಿಶ್ವದಾದ್ಯಂತ ಹೊಂದಿದ್ದು, ವ್ಯಾಪಕವಾದ ಮಾರುಕಟ್ಟೆ, ಯಂತ್ರಗಳು ಇದ್ದುವಾದರೂ, ದುಡಿಯುವವರು ಇರಲಿಲ್ಲ. ದುಡಿಯುವವರ ಕೊರತೆಯಾಗಿದ್ದರಿಂದ ಮನೆಯಲ್ಲಿದ್ದ ಮಹಿಳೆಯರು ಕೈಗಾರಿಕೆಗಳನ್ನು ಪ್ರವೇಶಿಸಿದರು. ಇದರಿಂದ ಸ್ವಲ್ಪ ಮಟ್ಟಿನ ಆರ್ಥಿಕ ಸ್ವಾತಂತ್ರ್ಯ, ಆಲೋಚನಾ ಸ್ವಾತಂತ್ರ್ಯ ಪಡೆದರು. ಆದರೂ ಮಹಿಳೆ ಮಾತ್ರ ಎರಡನೆ ಪ್ರಜೆಯಾಗಿ ಉಳಿದಳು ಹಾಗೂ ಮಹಿಳಾ ಹಕ್ಕು-ಬಾಧ್ಯತೆಗಳ ಬಗೆಗೆ ಚಿಂತನೆಯೂ ಆರಂಭವಾಯಿತು. ಹಕ್ಕು-ಬಾಧ್ಯತೆಗಳನ್ನು ತಿಳಿಸಲು ಸಮಾವೇಶ, ಮೆರವಣಿಗೆ, ಪ್ರತಿಭಟನೆಗಳು ಜರುಗಿದವು. ಲೇಖಕಿಯರು ತಮ್ಮ ಬರೆಹಗಳ ಮೂಲಕ ಮಹಿಳಾ ವಿಮೋಚನೆಗೆ ಪ್ರೇರಣೆ ನೀಡಿದರು.

ಮೇರಿವುಲ್ ಸ್ಟನ್ ಕ್ರಾಫ್ಟ್ ಮಹಿಳಾ ವಿಮೋಚನೆ ಕುರಿತು ಚಿಂತಿಸಿ 'The Vindication of rights and wrongs of woman' ಕೃತಿ ರಚಿಸಿದ್ದಾಳೆ. ಈ ಕೃತಿಯಲ್ಲಿ ಪುರುಷ ತನ್ನ ಹಕ್ಕುಗಳನ್ನು ರಕ್ಷಿಸಿಕೊಳ್ಳಲು ಮಹಿಳೆಯನ್ನು ಹೇಗೆ ಅಧೀನಕ್ಕೆ ಒಳಪಡಿಸಿಕೊಂಡಿರುವನೆಂಬ ಬಗ್ಗೆ ಚರ್ಚಿಸಿದ್ದಾಳೆ. ಉದಾರವಾದಿ ಚಿಂತಕರಲ್ಲಿ ರೂಸೋ ಮಹಿಳೆಯನ್ನು ಕುರಿತ ಸಂಪ್ರದಾಯವಾದಿ ವಿಚಾರದವನೇ. ಆದರೂ ರೂಸೋ ಪಿತೃ ಪ್ರಧಾನ್ಯತೆಯನ್ನೇ ವೈಭವಿಕರಿಸಿದ್ದಾನೆ. ಕುಟುಂಬದ ಮುಖ್ಯಸ್ಥ ಪುರುಷ. ತನ್ನ ಅಭಿವೃದ್ಧಿಗೆ ಅನುಕೂಲವಾಗುವಂತೆ ಸೌಲಭ್ಯಗಳನ್ನು ಮಾಡಿಕೊಂಡಿರುವ ಪತ್ನಿ ಹಾಗೂ ಮಕ್ಕಳ ನಿಯಂತ್ರಣಕ್ಕೆ ಒಳಗಾಗಿರುವರು, ಎಂದು ಮಹಿಳೆ ಪ್ರಗತಿಗೆ ಏನನ್ನು ಹೇಳಲಿಲ್ಲ.

ಆದರೆ ಉದಾರವಾದಿ ಸ್ತ್ರೀವಾದ ಮಹಿಳೆಯ ವಿಮೋಚನೆಯ ಪ್ರಗತಿಗೆ ಪ್ರಯತ್ನಿಸಿದೆ. ಶತ-ಶತಮಾನಗಳಿಂದ ಮಹಿಳೆಯೆಂದರೆ ಭಾವುಕತೆಯ ಮುದ್ದೆ ಎಂತಲೂ ಇದೆ. ಮೇರಿ ವುಲ್ ಸ್ಟನ ಕ್ರಾಫ್ಟ್ ಈ ಭಾವುಕತೆಯ ದುರ್ಬಲ ಗೋಡೆಯನ್ನು ಒಡೆದು ಮಹಿಳೆಯರು ಆಚೆ ಬರಲು ತಿಳಿಸಿದಳು. ಸ್ವಂತ ಆಲೋಚನೆ ಮಾಡಿ, ಗುಲಾಮಗಿರಿಯಿಂದ ಮುಕ್ತಳಾಗಬೇಕು. ಮಹಿಳೆಗೆ ವೈಚಾರಿಕತೆ ಇಲ್ಲ ಎಂಬುದನ್ನು ವಿರೋಧಿಸಿದ ಮೇರಿ ಮಹಿಳೆಯ ಎಲ್ಲಾ ಬಗೆಯ ಶೋಷಣೆಗೆ ಪುರುಷ ಪ್ರಧಾನ್ಯತೆಯೆ ಕಾರಣ ಎಂದಿರುವಳು.

ಉದಾರವಾದಿ ಸ್ತ್ರೀವಾದದ ಚಿಂತಕರಲ್ಲಿ ಸ್ಟುವರ್ಟ್ ಮಿಲ್ ಮತ್ತು ಹ್ಯಾರಿಯಟ್ ಟೇಲರ್ ಮಿಲ್ಸ್ ಪ್ರಮುಖರು. ಸ್ಟುವರ್ಟ ಮಿಲ್ "ದಿ ಸಬ್ಜೆಕ್ಷನ್ ಆಫ್ ವಿಮೆನ್" ಕೃತಿ ರಚಿಸಿದ. ಈ ಕೃತಿ ಉದಾರವಾದದ ತತ್ವಜ್ಞಾನವು ಸ್ತ್ರೀಯರಿಗೂ ಅನ್ವಯಿಸುವ ತತ್ವಜ್ಞಾನ. ಕುಟುಂಬದಾಚೆ ಮಹಿಳೆಯ ಬದುಕನ್ನು ವಿಸ್ತರಿಸಿದಾಗ ಮಾತ್ರ ನಿಜವಾದ ಸ್ವಾತಂತ್ರ್ಯ ಸಾಧ್ಯ. ಪಾಲನೆಯೇ ಪ್ರಧಾನವೆಂದರೂ, ಕುಟುಂಬದಾಚೆಗೂ ಯೋಚಿಸಬೇಕು. ದುಡಿಮೆ ಕುರಿತು ನಿರ್ಧರಿಸುವ ಹಕ್ಕು ಮಹಿಳೆಗೇ ಇರಬೇಕು. ಹ್ಯಾರಿಯಟ್ ಟೇಲರ್ ಮಿಲ್ಸ್ "ದಿ ಎನ್ ಫ್ರಾನ್‌ಚೈಸ್‌ಮೆಂಟ್ ಆಫ್ ವಿಮೆನ್" ಕೃತಿ ರಚಿಸಿದ್ದಾಳೆ. ಈ ಕೃತಿ ಸ್ತ್ರೀಗೆ ಸ್ವಂತದ ದುಡಿಮೆ ಬೇಕು, ಮನೆಯಾಚೆಗಿನ ದುಡಿಮೆಯೇ ಮಾನ್ಯತೆ ನೀಡುವುದು ಎಂದಿರುವಳು. ವೈಚಾರಿಕತೆ, ಶಿಕ್ಷಣ, ಮತದಾನದ ಹಕ್ಕು, ಉದ್ಯೋಗ, ವೈವಾಹಿಕ ಸಂಬಂಧ, ಸಹಭಾಗಿತ್ವ ಮುಂತಾದವುಗಳಲ್ಲಿ ಸಮಾನತೆ ಬೇಕು. ಇವುಗಳೇ ಉದಾರವಾದದ ಮೌಲ್ಯಗಳಾಗಿವೆ. ಸ್ತ್ರೀ-ಪುರುಷರ ಸಮಾನತೆ ಕುರಿತಂತೆ ಕಾನೂನು ಇದ್ದರೂ ಅವುಗಳಿಂದ ಸಮಾನತೆ ದೊರೆತಿಲ್ಲ. ಆದ್ದರಿಂದ ಅಂಥ ಕಾನೂನುಗಳನ್ನು ತೆಗೆದುಹಾಕಲು ಚಿಂತಿಸಿದ್ದಾರೆ. ಸಮಾಜದ ಸಂಪನ್ಮೂಲಗಳ ಉಪಭೋಗ, ವಿತರಣಾ ವ್ಯವಸ್ಥೆಯಲ್ಲಿ ಹೆಣ್ಣಿಗೆ ಸಮಾನತೆ ಇಲ್ಲದಿರುವುದನ್ನು ಖಂಡಿಸಿರುವರು.

ಆಧುನಿಕ ಉದಾರವಾದಿ ಸ್ತ್ರೀವಾದಿಗಳು ಸ್ತ್ರೀ-ಪುರುಷರ ಸಮಾನತೆಗೆ ದ್ವಿಲಿಂಗ ದೃಷ್ಟಿಕೋನ ಬೆಳೆಸಿಕೊಳ್ಳುವಂತೆ ಹೇಳಿದ್ದಾರೆ. ಪುರುಷರು ಸ್ತ್ರೀ ಗುಣಗಳನ್ನು ಸ್ತ್ರೀಯರು ಪುರುಷರ ಗುಣಗಳನ್ನು ಬೆಳೆಸಿಕೊಂಡರೆ ಸಮಾಜದಲ್ಲಿ ಅಸಮಾನತೆಯೇ ಇರುವುದಿಲ್ಲ ಎನ್ನಲಾಗಿದೆ. ಬೆಟ್ಟಿ ಫ್ರೀಡನ್ ಸ್ತ್ರೀ ಪ್ರತಿಮೆಯ ಸಿದ್ಧ ಮಾದರಿಗಳನ್ನು ವಿರೋಧಿಸಿದ್ದಾಳೆ. ಮಹಿಳೆಗೆ ಮನೆಯು 'ಕಾನ್‌ಸೆಂಟ್ರೇಷನ್ ಕ್ಯಾಂಪ್' ಆಗಿದೆ. ಬೆಟ್ಟಿಯ ಪ್ರಧಾನ ಚಿಂತನೆಯ ಗುರಿ ಸಂತೃಪ್ತಿಯಿಂದ ಇರುವ ಗೃಹಿಣಿಯರನ್ನು ಕುರಿತು. ಈಕೆ ಗೃಹಿಣಿಯ ಮನದಾಳದ ಶೂನ್ಯತೆ, ಹತಾಶೆಗಳನ್ನು ಗುರುತಿಸಿ ಮಹಿಳೆಯ ಶೋಷಣೆ ತಡೆಗೆ ಏಳು ಸೂತ್ರಗಳನ್ನು ಹೇಳಿರುವಳು. "The

Feminine mystique" ಬೆಟ್ಟಿಯ ಪ್ರಮುಖ ಕೃತಿ. ಎರಡನೆಯ ಮಹಾಯುದ್ಧದ ನಂತರ ಅಮೆರಿಕೆಯ ಮಹಿಳೆಯರು ಪುರುಷನಂತೆ ಇರಲು ಬಯಸಿ ವ್ಯಕ್ತಿತ್ವ ವಿಕಾಸನಕ್ಕೆ ಮುಂದಾದರು. ಅಲ್ಲದೇ ಉದ್ಯೋಗಕ್ಕೆ ಸೇರಿಕೊಂಡು ತಮ್ಮ ವೈಯಕ್ತಿಕ ಘನತೆಯನ್ನು ಹೆಚ್ಚಿಸಿಕೊಳ್ಳಲು ಆರಂಭಿಸಿದರು. "ದಿ ಸೆಕೆಂಡ್ ಸ್ಟೇಜ್" ಈಕೆಯ ಇನ್ನೊಂದು ಕೃತಿ. ಈ ಕೃತಿ ಸ್ತ್ರೀ-ಪುರುಷರ ನಡುವೆ ಸಮಾನತೆ ಸಾಧಿಸಬೇಕು ಎಂದು ಹೇಳಿ, ಮಾನವೀಯ ಪ್ರೇಮವನ್ನು ನಿರ್ಲಕ್ಷಿಸಬಾರದು ಎಂದು ತಿಳಿಸಿದೆ.

ಆಲಿಸಾನ್ ಜ್ಯಾಗರ್, ಜೀನ್ ಬೆತ್ಕು, ಎಲ್ ಶೈನ್‌ರು ಸ್ತ್ರೀ ಸಮಾನತೆ ಸಾಧಿಸಲು ದ್ವಿಲಿಂಗ ದೃಷ್ಟಿಕೋನದ ಗುಣಗಳು ಅವಶ್ಯಕವಿಲ್ಲ ಎಂದಿದ್ದಾರೆ. ಲೈಂಗಿಕ ಸಮಾನತೆಯನ್ನು ಸಂದಿಗ್ಧವಾದ ಭವಿಷ್ಯದಲ್ಲಿ ಸಾಧಿತವಾಗಬೇಕಾದ ಗುರಿ ಎಂದು ಹೇಳಿರುವುದು ಕೆಲವು ಸ್ತ್ರೀವಾದಿಗಳಿಗೆ ಅಸಮಾಧಾನ ತಂದಿದೆ. ಆದ್ದರಿಂದ ಅವರೆಲ್ಲಾ ಈ ವಾದವನ್ನು ವಿಮರ್ಶಿಸಿದ್ದಾರೆ.

೧. ಈ ವಾದ ಸಾಮಾಜಿಕ ನಿಯಂತ್ರಣದ ಬಗೆಗೆ ಹೇಳಿರುವ ಧೋರಣೆಗಳನ್ನು ಪ್ರಶ್ನಿಸಿದೆ.
೨. ಈ ವಾದ ಕೌಟುಂಬಿಕ ಸ್ವರೂಪದಲ್ಲಿನ ಅಸಮಾನತೆಯನ್ನು ಗುರುತಿಸುವಂಥದ್ದು.
೩. ಅಧಿಕಾರ ವಿಮರ್ಶೆಯ ವ್ಯಾಪ್ತಿಗೆ ಒಳಪಟ್ಟಿಲ್ಲ.
೪. ಮಹಿಳಾ ಹಕ್ಕು, ಹೋರಾಟ, ಸಾರ್ವಜನಿಕ ಕಾರ್ಯಗಳಲ್ಲಿ ಭಾಗವಹಿಸುವುದನ್ನು ವಿಮರ್ಶಿಸಿದ್ದಾರೆ.
೫. ಶತ್ರುವಿನ ಶತ್ರು ತನ್ನ ಮಿತ್ರ ಎಂಬ ಧೋರಣೆಯನ್ನು ವಿರೋಧಿಸಿದ್ದಾರೆ.

### ೨. ತೀವ್ರಗಾಮಿ ಸ್ತ್ರೀವಾದ

ಮಾನವೀಯ ಹೋರಾಟದ ಒಟ್ಟು ಕ್ಷೇತ್ರದಿಂದ ದೂರ ಉಳಿದು ಮಹಿಳಾ ಹೋರಾಟಕ್ಕಷ್ಟೇ ತಮ್ಮ ಸೈದ್ಧಾಂತಿಕ, ಪ್ರಾಯೋಗಿಕ ಕಾರ್ಯ-ಚಟುವಟಿಕೆಗಳನ್ನು ಸೀಮಿತಗೊಳಿಸಿಕೊಂಡವರು ತೀವ್ರಗಾಮಿ ಸ್ತ್ರೀವಾದಿಗಳು. ಆರಂಭದ ವಿಮುಕ್ತಿ ಹೋರಾಟದಲ್ಲಿ ಭಾಗವಹಿಸಿದ ವ್ಯಕ್ತಿಗಳು, ಗುಂಪುಗಳು ಈ ವಾದದಲ್ಲಿ ಇದ್ದಾರೆ. ಹೆಂಗಸರು ಸೀಮಿತ ಜಗತ್ತಿಗೆ ಅಂಟಿಕೊಂಡವರು, ಶೋಷಿತ ನೆಲೆಯ ಹೆಂಗಸರ ಸಮಸ್ಯೆಗಳೇ ಇವರ ಕಳಕಳಿ. ಹೆಣ್ಣಿನ ಕೋಪ ಹೊರುವವರು, ಸ್ತ್ರೀಯರ ಕಿಚ್ಚನ್ನು ಆಸ್ಫೋಟಿಸುವವರು ಗಂಡುಗಳೆಂದು, ಒಳವಸ್ತ್ರಗಳನ್ನು ಸುಟ್ಟವರು, ಪ್ಯಾರಿಸ್ ಸಮಾವೇಶದಲ್ಲಿ ಭಾಗವಹಿಸಿ ಬಂದು ಮನೆಗಳಿಗೆ ಪೆಟ್ರೋಲ್ ಹಾಕಿ ಸುಟ್ಟವರು ಇತ್ಯಾದಿ ಅಪವಾದಗಳಿಗೆ ಒಳಗಾಗಿದ್ದಾರೆ. ಪುರುಷರಿಂದ ಪ್ರತ್ಯೇಕವಾಗಿ ಸ್ತ್ರೀಯರದೇ ಆದ ರಾಜಕೀಯ ಒಂದರ ಸಾಧ್ಯತೆ ರೂಪಿಸಲು ಬಯಸಿದರು.

ಜೈವಿಕತೆಯಿಂದ ಸ್ತ್ರೀ ಕೆಳಸ್ತರದವಳು ಎಂದು ಪುರುಷ ಪ್ರಧಾನ್ಯತೆ ತಿಳಿದಿದೆ. ಶೋಷಣೆಗಿಂತ ಮೊದಲೆ ಲೈಂಗಿಕ ದಮನವು ಎಲ್ಲ ವರ್ಗ, ಜನಾಂಗದಲ್ಲಿ ಇದೆ. ಪುರುಷ ಪ್ರಧಾನ್ಯತೆಯು ಸಾರ್ವತ್ರಿಕ, ಸರ್ವ ವ್ಯಾಪಿಯಾಗಿದೆ. ಇದರಿಂದ ಮಹಿಳೆ ಪಾರಾಗಲು ಪುರುಷ ಸಂಬಂಧಗಳಿಂದ, ಪುರುಷ ವ್ಯವಸ್ಥೆಗಳಿಂದ ದೂರ ಇರಬೇಕು. ಕುಟುಂಬವೇ ಹೆಣ್ಣನ್ನು ಲೈಂಗಿಕ ದಾಸ್ಯಕ್ಕೆ ಒತ್ತಾಯದ ತಾಯ್ತನಕ್ಕೆ ಕಾರಣವಾಗಿ ಶೋಷಿಸುತ್ತಿದೆ. ಆದ್ದರಿಂದ ಮಹಿಳೆ ತನ್ನ ಶರೀರದ ಮೇಲೆ ಸೌಮ್ಯ ಸ್ಥಾಪಿಸಿಕೊಂಡು, ರಕ್ಷಿಸಿಕೊಳ್ಳಬೇಕು. ಹೆಣ್ಣುತನ.

ಹೆಣ್ಣಾಗಿರುವ ನೆಲೆಗಳು ಹೀನವಲ್ಲ, ಅಪಮೌಲ್ಯಕ್ಕೆ ಒಳಗಾಗಿಲ್ಲ. ಎಲ್ಲ ಪುರುಷರೂ ಶೋಷಕರೇ ಆಗಿರುವರು. ತೀವ್ರಗಾಮಿ ಸ್ತ್ರೀವಾದಿಗಳಲ್ಲಿ ಶುಲಾಮಿತ್ ಫೈರಸ್ಟನ್ ಪ್ರಮುಖಳು. ಈಕೆಯ ಕೃತಿ 'The Dialectics of sex' ಯಲ್ಲಿ ಹೆರಿಗೆಯಂಥ ಸಹಜ ಕ್ರಿಯೆ, ಮಕ್ಕಳ ಲಾಲನೆ-ಪಾಲನೆಗಳು ಸಾಮಾಜಿಕ ವರ್ಗೀಕರಣಕ್ಕೆ ಕಾರಣವಾಗಿವೆ. ವಿಜ್ಞಾನ, ತಂತ್ರಜ್ಞಾನಗಳ ಬೆಳವಣಿಗೆಯಿಂದ ಮಹಿಳೆ ವಿಮೋಚನೆ ಸಾಧ್ಯ. ಸ್ತ್ರೀವಾದವು ತನ್ನ ಎಲ್ಲಾ ಆಕಾರ-ರೂಪಗಳಲ್ಲೂ ಮಹಿಳೆಯರನ್ನು ಮೌಲ್ಯಿಕಗೊಳಿಸುವ, ಮಹಿಳೆಯರು ಮಹಿಳೆಯರಿಗಾಗಿ ನಡೆಸುವ ಹೋರಾಟ ಎಂದಿದ್ದಾಳೆ.

ವ್ಯಾಲರಿ ಸೋಲಾಸಿಸ್, ಜೋರೀನ್‌ವರು ಹೆಣ್ಣು ತನ್ನ ಲಿಂಗದಿಂದ ದಮನಕ್ಕೆ ಒಳಗಾಗಿರುವಳು. ಅಂದರೆ ಮೇರಿ ಡಾಲಿ, ಸೂಸನ್ ಗ್ರಿಫನ್ ಅವರು ಸ್ತ್ರೀವಾದದ ಸೈದ್ಧಾಂತೀಕರಣವನ್ನು ವಿರೋಧಿಸಿದವರು. "ಈ ಸಿದ್ಧಾಂತ ಎನ್ನುವುದು ಪುರುಷ ನಿರ್ಮಿತ ಚರ್ಚೆಯದೇ ಇನ್ನೊಂದು ಮುಖ ಅಷ್ಟೆ. ಮಹಿಳೆಯರನ್ನು ಒಳಕ್ಕೆ ತೆಗೆದುಕೊಂಡು ಪುರುಷ ಪ್ರಾಬಲ್ಯವನ್ನು ಉಳಿಸಿಡುವ ಆ ಮೂಲಕ ಸ್ತ್ರೀತ್ವವನ್ನು ಹತ್ತಿಕ್ಕುವ ಯತ್ನ ಅದು ಎಂಬುದು ಅವರ ನಿಲುವು."

ಮೇರಿ ಡಾಲಿ 'Gyn/Ecology' ಕೃತಿ ರಚಿಸಿ, ಪುರುಷ ಅಧಿಕಾರದ ಹಿಂಸೆಯ ರೂಪಗಳನ್ನು ಹೇಳಿರುವಳು. ಭಾರತದ ಸತಿಸಹಗಮನ, ಚೀನಿ ಮಹಿಳೆಯರ ಪಾದ ಬಂಧನ, ದಕ್ಷಿಣ ಆಫ್ರಿಕಾದ ಬುಡಕಟ್ಟುಗಳಲ್ಲಿ ಹೆಣ್ಣಿನ ಶಿಶ್ನಿಕೆಯನ್ನು ಭೇದಿಸುವ ಪದ್ಧತಿ, ಮಾಟಗಾರ್ತಿ ಎಂದು ಚಿತ್ರಹಿಂಸೆ ನೀಡಿ ಕೊಲ್ಲುವ ಇತ್ಯಾದಿ ರೂಪಗಳನ್ನು ತಿಳಿಸಿದ್ದಾಳೆ.

ಸೈದ್ಧಾಂತಿಕತೆ ಬದುಕನ್ನು ನಿಯಂತ್ರಿಸಿ, ಅದೇ ನಮ್ಮ ಬದುಕಿನ ಮೇಲೆ ಅಧಿಕಾರ ಹೇರುವುದು. ಈಗಾಗಲೇ ಸ್ತ್ರೀ ವೈಚಾರಿಕವಾಗಿ ಹಿಂದೆ ಉಳಿದಿದ್ದಾಳೆ. ಸೈದ್ಧಾಂತಿಕತೆ ಇನ್ನಷ್ಟು ಮಹಿಳೆಯನ್ನು ಅವೈಚಾರಿಕೆಯನ್ನಾಗಿಸುತ್ತಿದೆ. ವಿಜ್ಞಾನ, ಸಾಮಾಜಿಕ ಸಿದ್ಧಾಂತಗಳೆಲ್ಲಾ ಪುರುಷ ಕೇಂದ್ರಿತವಾಗಿವೆ. ಮಾನವರು ಎನ್ನುವ ಪದದಿಂದ ಸ್ತ್ರೀಯರನ್ನು ಪುರುಷರಂತೆ ನಿರ್ವಚಿಸಿ, ಸ್ತ್ರೀಯರಲ್ಲಿ ಐಕ್ಯತೆ ಉಂಟಾಗದಂತೆ ಮಾಡುವುದು ಎಂದು ನಂಬಿದ್ದಾರೆ. ಮೇರಿಡಾಲಿ ಸ್ತ್ರೀತ್ವ, ಸ್ತ್ರೀಯಾತ್ಮಕತೆಗೆ ಹೊಸ ಅರ್ಥವನ್ನು ನಿರ್ವಹಿಸಿದ್ದಾಳೆ. ಫ್ರಾನ್ಸ್ , ಅಮೆರಿಕೆಯ ತೀವ್ರಗಾಮಿಗಳ ವೈಚಾರಿಕತೆಯು ಪುರುಷ ಪ್ರಧಾನ್ಯತೆಯ ಅಧಿಕಾರವನ್ನು ಪ್ರಸಾರ ಮಾಡಿದೆ. ಲೈಸ್ಬಿಯನ್ ಲೈಂಗಿಕತೆಗೂ, ತಾಯ್ತನಕ್ಕೂ ಇವರ ಕಲ್ಪನೆ ಸಂಬಂಧಿಸಿದೆ. ತಾಯಿತನವನ್ನು ವೈಭವೀಕರಿಸಿದ್ದಾರೆ. ಆದರೆ ಇವರು ತಾಯಿತನ ಹೆಣ್ಣಿನ ಮಾನಸಿಕ ಗುಣವೆಂದು ತಿಳಿಸಿ ಅದು ಎಲ್ಲ ಕಾಲಕ್ಕೂ ಸಾರ್ವತ್ರಿಕ ಎಂದಿದ್ದಾರೆ. ಸ್ತ್ರೀಯಾತ್ಮಕ ಲಕ್ಷಣಗಳಲ್ಲಿ ಪುರುಷ ಕೇಂದ್ರಿತವೆಂದು ತಿಳಿದಿಲ್ಲ. ಮಹಿಳಾ ಸಾಹಿತ್ಯಕ್ಕೆ ಭಿನ್ನ ಭಾಷೆ ಬೇಕು. ಆಗ ಮಾತ್ರ ಸ್ತ್ರೀ ವಿಮೋಚನೆ ಸಾಧ್ಯ ಎಂದಿದ್ದಾರೆ. ಇವರು ಲಿಂಗಾಧಾರಿತ ಶ್ರಮ ವಿಭಜನೆಗಳಿಲ್ಲ ಎಂದು ಹೇಳಿದ್ದಾರೆ. "ಸ್ತ್ರೀಯರ ಲೈಂಗಿಕವಾದ ಶೋಷಿತ ನೆಲೆಯು ಅನೈಸರ್ಗಿಕ ಎಂದು ತಿರಸ್ಕರಿಸುವ ಇವರು ಪಿತೃ ಪ್ರಧಾನತೆಯಿಂದ ನಿಜವಾದ ಸ್ತ್ರೀತ್ವ ತಿರುಚಲ್ಪಟ್ಟಿರುವುದರ ಫಲ" ಇದೆಂದು ಗುರುತಿಸಿ ಸ್ತ್ರೀಯರದೇ ಆದ ಪ್ರತ್ಯೇಕ ಸಂಸ್ಕೃತಿಯತ್ತ ಒತ್ತಾಯಿಸಿದ್ದಾರೆ.

ತೀವ್ರಗಾಮಿಗಳು ತಾಯಿತನವನ್ನು ವೈಭವೀಕರಿಸಿ ಮತ್ತೆ ಪಿತೃ ಪ್ರಧಾನತೆಯನ್ನು ಎತ್ತಿ ಹಿಡಿದಿರುವವರು ಎಂಬ ವಿಮರ್ಶೆಗೆ ಒಳಗಾಗಿದ್ದಾರೆ. ಲಿಂಗಾಧಾರಿತ ಶೋಷಣೆಯಿಂದ ಸಾಮಾನ್ಯ ಸ್ತ್ರೀಯರನ್ನು ಹೇಗೆ ಪಾರು

ಮಾಡಬೇಕು ಎಂದು ತಿಳಿಸಿಲ್ಲ. ಇವರು ಸ್ತ್ರೀಯರದೇ ಆದ ಉಪ ಸಂಸ್ಕೃತಿಯನ್ನು ಬಯಸಿದ್ದಕ್ಕೆ ವಿಮರ್ಶೆಗೆ ಒಳಗಾಗಿದ್ದಾರೆ.

### ೩. ಸಾಂಸ್ಕೃತಿಕ ಸ್ತ್ರೀವಾದ

ತೀವ್ರಗಾಮಿಗಳ ಮುಂದುವರೆದ ರೂಪವೇ ಸಾಂಸ್ಕೃತಿಕ ಸ್ತ್ರೀವಾದ. ಇದರಲ್ಲಿ ಸ್ತ್ರೀ ಕುರಿತು ನಿರ್ದಿಷ್ಟ ಗುಣಗಳನ್ನು ಚಿಂತಿಸಿ, ಅಪಮೌಲ್ಯಕ್ಕೆ ಒಳಗಾದ ಗುಣಗಳನ್ನು ಮತ್ತೆ ಮೌಲ್ಯಿಕಗೊಳಿಸಲು ಪ್ರಯತ್ನಿಸಲಾಗಿದೆ. ಅಲ್ಲದೆ ಸ್ತ್ರೀಯರದೇ ಆದ ಪ್ರತ್ಯೇಕ ಸಂಸ್ಕೃತಿಯನ್ನು ರೂಪಿಸಲು ಬಯಸಿದ್ದಾರೆ. ಮೇರಿಡಾಲಿ, ಆಡ್ರಿಯನ್ ರಿಚ್, ಸುಸನ್ ಗ್ರೀಫಿನ್ ಕ್ಯಾಡ್ಲೀನ್ ಬ್ಯಾರಿ, ಜೆನೀಸ್ ರೇಮೆಂಡ್, ರಾಬಿನ್ ಮಾರ್ಗನ್ ಮೊದಲಾದವರು ಈ ವಾದದ ಪ್ರತಿಪಾದಕರಾಗಿದ್ದಾರೆ. ಹೆಣ್ಣಿನ ಶೋಷಣೆಗೆ ಪುರುಷ ಮತ್ತು ಆತನ ಜೀವಶಾಸ್ತ್ರವೇ ಕಾರಣ. ಪುರುಷ ಪ್ರಧಾನ್ಯತೆಯು ಸ್ತ್ರೀ ಎಂದರೆ "ಮೃದುತನ, ಸಹನೆ, ಕ್ಷಮೆ, ಪ್ರೇಮ, ಭಾವನಾತ್ಮಕ ಗುಣ"ಗಳೆಂದು ಹೇಳಿದೆ. ಈ ಗುಣಗಳೇ ಸ್ತ್ರೀಯನ್ನು ದುರ್ಬಲಳನ್ನಾಗಿ ಮಾಡಿವೆ. ಶಕ್ತಿ, ಸಾಮರ್ಥ್ಯದಲ್ಲಿ ಹಿಂದುಳಿದ ರಾಷ್ಟ್ರ ಪುರುಷನಿಗೆ ಬಳೆ ನೀಡುವ ರೂಢಿ ಜಾರಿಯಲ್ಲಿದ್ದರೆ, ಗಂಡನ ಮನೆಗೆ ಹೋಗುವ ಮಗಳನ್ನು ಕುರಿತು ತಂದೆ ವಸ್ತ್ರದ ಮರೆಯಲ್ಲಿ ದುಃಖಿಸುವುದನ್ನು ಜಾನಪದ ಸಾಹಿತ್ಯ ತಿಳಿಸಿದೆ. ಇಂಥ ಹೇರಿಕೆಯ ಪಾತ್ರ, ಗುಣಗಳನ್ನು ಸಾಂಸ್ಕೃತಿಕ ಸ್ತ್ರೀವಾದ ವಿರೋಧಿಸಿ ವ್ಯಕ್ತಿತ್ವದ ವಿಕಾಸಕ್ಕೆ ಬೇಕಾದ ನಂಬಿಕೆ ಮೌಲ್ಯಗಳನ್ನು ಸ್ವೀಕರಿಸಲು ತಿಳಿಸಿದೆ.

ಮೇರಿಡಾಲಿ ಸ್ತ್ರೀ ಶಕ್ತಿ ಕುರಿತು ಚಿಂತಿಸುತ್ತಾ ಹೀಗೆ ಹೇಳಿದ್ದಾಳೆ ;

> "ಸ್ತ್ರೀಶಕ್ತಿ ಎನ್ನುವುದು ಮೂಲದಲ್ಲಿ ಜೀವ ಪ್ರೇಮವೇ ಆಗಿದ್ದು, ಅದರ ಬಹುಮುಖ್ಯ ನೆಲೆಯಾಗಿರುವ ಸ್ತ್ರೀ ಶರೀರವು ಜೀವ ವಿರೋಧಿಯಾದ ನಿರಂತರ ಆಕ್ರಮಣಕ್ಕೆ ಮೊದಲು ಗುರಿಯಾಗುತ್ತದೆ. ಜೀವಪ್ರೇಮವುಳ್ಳ ಸ್ತ್ರೀ ಶಕ್ತಿಯನ್ನು ಮತ್ತೆ ಗಳಿಸಿಕೊಳ್ಳುವ ಹೋರಾಟವೇ ಸ್ತ್ರೀ ಪರಿಸರವಾದ ಎಂದು" ಪ್ರತಿಪಾದಿಸಿದ್ದಾಳೆ.

ಸ್ತ್ರೀ ದೇಹ ವಿಸ್ಮಯಗಳಿಂದ ಕೂಡಿದ್ದು, ತನ್ನದೆ ಆದ ಪವಾಡಗಳನ್ನು ಮಾಡಿರುವುದು. ಅವುಗಳಲ್ಲಿ ಸಂತಾನೋತ್ಪತ್ತಿಯ ಸಾಮರ್ಥ್ಯವೂ ಒಂದು. ಇದರಿಂದಲೇ ಸ್ತ್ರೀ ಪುರುಷನಿಗಿಂತ ವಿಶೇಷಳು. ಹಾಗಾಗಿ ಗೌರವಕ್ಕೆ ಅರ್ಹಳಾಗಿರುವಳು ಎಂದು ಮೇರಿ ಡಾಲಿ ಗುರುತಿಸಿದ್ದಾಳೆ. ಪುರುಷ ಗರ್ಭ ಧರಿಸಲು ಸಾಧ್ಯವಿಲ್ಲವಾದ್ದರಿಂದ ಅವನು ತನ್ನದಲ್ಲದ ಸ್ತ್ರೀ ಗರ್ಭಕೋಶದ ಜೊತೆ ತನ್ನನ್ನು ಗುರುತಿಸಿಕೊಳ್ಳುವನು. ಹೀಗೆ ಪುರುಷ ತನ್ನ ವ್ಯಕ್ತಿತ್ವದ ಗುರುತುಗಳ ಕುರಿತು ಸ್ತ್ರೀಯಲ್ಲಿ ಶೋಧಿಸಿಕೊಳ್ಳುವನು. ಸಹಜವಾಗಿ ಆತ ಅಗೌರವಕ್ಕೆ, ಅವಮಾನಕ್ಕೆ ಒಳಗಾಗಿ ಭಯ, ಅಭದ್ರತೆಯ ಭಾವನೆಗಳನ್ನು ಹೊಂದುತ್ತಾನೆ. ಇವುಗಳನ್ನು ಮೆಟ್ಟಿನಿಲ್ಲಲು ಪ್ರಯತ್ನಿಸಿ ವಿಫಲನಾಗಿ ಸ್ತ್ರೀ ಕುರಿತು ದ್ವೇಷದ ಭಾವನೆಗಳನ್ನು ಬೆಳೆಸಿಕೊಳ್ಳುತ್ತಾನೆ. ಸ್ತ್ರೀಯರ ಶಕ್ತಿ ಬಗ್ಗೆ ಭಯ ಇಟ್ಟುಕೊಂಡು, ಆಕೆಯ ಶಕ್ತಿಯ ಮೇಲೆ ಅಧಿಕಾರ ಸ್ಥಾಪಿಸಿ ಒಡೆಯನಾಗುತ್ತಾನೆ ಎಂದು ಹೇಳಿದ್ದಾಳೆ. 'ಸ್ತ್ರೀ' ಅಂಕಿತದಿಂದ ಗುರುತಿಸಿಕೊಳ್ಳಬೇಕೆಂದು ಮಹಿಳೆ ಬಂಧುಗಳ, ಸ್ನೇಹಿತರ, ಶತ್ರುಗಳ ಹಿತಾಸಕ್ತಿ, ಸ್ವಭಾವಗಳನ್ನು ಅರಿಯಬೇಕು ಎಂದು ಮೇರಿ ಹೇಳಿದ್ದಾಳೆ.

ಲೆಸ್ಬಿಯನ್ ಲೇಖಿಕಿಯಾದ ಆಡ್ರಿಯಾನ್ ರಿಚ್ ಸ್ತ್ರೀ ಕುರಿತು ಚಿಂತಿಸಿ, ತನ್ನದೆ ಆದ ನಿಲುವುಗಳನ್ನು ಹೇಳಿದ್ದಾಳೆ. ಸ್ತ್ರೀ ದೇಹದ ರಚನೆ, ಶರೀರ ಪಡೆಯಲಾರದ ವಿಶೇಷ ಅನುಭೂತಿಗಳ ಉಗಮ. ಶಾರೀರಿಕ ಇಂದ್ರಿಯ ಸಂವಾದಿತ್ವವು ಪುರುಷನಲ್ಲಿ ಸೀಮಿತ ನೆಲೆಯಲ್ಲಿ ಇದ್ದರೆ, ಮಹಿಳೆಯಲ್ಲಿ ವ್ಯಾಪಕವಾಗಿ ಬಹುರೂಪದಲ್ಲಿ ಇದೆ. ಸ್ತ್ರೀ ದೇಹದ ಕೆಲವು ವಿಶಿಷ್ಟ ಅಂಗಗಳು ಪುರುಷನಿಗೆ ಲೈಂಗಿಕ ಗೀಳಿನ ಅಂಗಗಳಾಗಿವೆ. ಆದರೆ ಪುರುಷ ದೇಹದ ಯಾವ ಅಂಗಗಳು ಸ್ತ್ರೀಗೆ ಲೈಂಗಿಕ ಗೀಳನ್ನು ಉಂಟುಮಾಡುವುದಿಲ್ಲ. ಹಾಗಾಗಿ ಸ್ತ್ರೀ ಪೂರ್ಣ ರೂಪದ ಇಂದ್ರಿಯ ಸೂಕ್ಷ್ಮಾನುಭವವನ್ನು ಪಡೆದಿರುವವಳು. ಸ್ತ್ರೀ ಶರೀರದಿಂದ ಮಾತ್ರ ಸಾಧ್ಯವಾಗುವ ಮುಟ್ಟು, ಗರ್ಭಧಾರಣೆ, ಹಾಲು ಉಣ್ಣಿಸುವ, ತಾಯ್ತನಗಳು, ಆಕೆಯ ವ್ಯಕ್ತಿತ್ವವನ್ನು ವಿಶೇಷಗೊಳಿಸಿವೆ. ಪುರುಷನಿಗಿಂತ ಶ್ರೇಷ್ಠವೆಂದು ಹೇಳಿವೆ. ಆದ್ದರಿಂದ ಸ್ತ್ರೀ ಹೆಮ್ಮೆಯಿಂದ ಇದ್ದು ತಾನು ಪುರುಷನಿಗಿಂತ ಕೀಳೆಂದು ಭಾವಿಸಬಾರದು ಎಂದಿರುವಳು. ನೈಸರ್ಗಿಕವಾದ ತನ್ನ ಅಸ್ತಿತ್ವವನ್ನು ರಾಜಕೀಯ, ಅರ್ಥದ ನೆಲೆಯಲ್ಲಿ ಪ್ರತಿಷ್ಠಾಪಿಸಿಕೊಂಡು, ಪುರುಷನ ಅಧಿಕಾರವನ್ನು ಎದುರಿಸಿ, ತನ್ನ ವಿಶಿಷ್ಟ ಗುಣ, ವ್ಯಕ್ತಿತ್ವದಿಂದಲೇ ಬಿಡುಗಡೆ ಪಡೆಯಲು ಹೊಸ ಮಾರ್ಗಗಳನ್ನು ಕೈಗೊಳ್ಳಬೇಕೆಂದು ಹೇಳಿರುವಳು.

ರಿಚ್ ಸಹ ಮೇರಿ ಡಾಲಿಯಂತೆ ಸ್ತ್ರೀಯ ಮೂಲ ಸತ್ವವನ್ನು ವಿವರಿಸಿದ್ದಾಳೆ. ಹಿರಿದಾದ ಬೌದ್ಧಿಕ ಸಾಮರ್ಥ್ಯ, ಸೂಕ್ಷ್ಮ ಅರಿವು, ನಿರೀಕ್ಷಣಾಶಕ್ತಿ, ಸಂಕೀರ್ಣವಾದ ನೋವು ಸಹಿಸಬಲ್ಲ ಸ್ತ್ರೀ ವಿಶಿಷ್ಟ ಗುಣ, ಹೆಣ್ಣಿನ ತಾಯ್ತನದ ಬಗ್ಗೆ ಪುರುಷನಿಗೆ ದ್ವೇಷ, ಅಸೂಯೆ, ಭಯವಿದೆ. ಪಿತೃಪ್ರಧಾನತೆಯನ್ನು ಸ್ತ್ರೀಯು ಬಿಡಬೇಕೆಂದು ಅದಕ್ಕಾಗಿ ಇತರ ಸ್ತ್ರೀಯರೊಂದಿಗೆ ಕೊಂಡಿ ಬೆಸೆದುಕೊಳ್ಳಬೇಕು. ಆಗ ತನ್ನ ಸೃಜನಶೀಲತೆ ಗಳಿಸಿಕೊಳ್ಳಲು ಸಾಧ್ಯ ಎಂದಿದ್ದಾಳೆ.

ಸಾಂಸ್ಕೃತಿಕ ಸ್ತ್ರೀವಾದಿಗಳು ಸ್ತ್ರೀ ಕುರಿತು ಆಕೆ ಕುಟುಂಬವನ್ನು ರಚಿಸಿ, ಬೆಳೆಸಿ, ಪೋಷಿಸುವವಳು. ಈಕೆಯ ಕರಕುಶಲ ಕಲೆ ಉತ್ತಮವಾದುದು. ಅಲ್ಲದೇ ತನ್ನ ಗುಣಗಳಿಂದ ಪುರುಷನಿಗಿಂತ ಭಿನ್ನ, ವಿಶಿಷ್ಟಳು. ಆದ್ದರಿಂದ ಗೌರವಕ್ಕೆ ಅರ್ಹಳು ಎಂದಿರುವರು. ಆಲಿಸ್ ಇಕೋಲ್ಸ್ ಈ ವಾದವನ್ನು ವಿಮರ್ಶಿಸಿದ್ದಾನೆ. ಸ್ತ್ರೀ ವಿಶಿಷ್ಟತೆ ಪುರುಷನ ಅವಹೇಳನ, ಸ್ತ್ರೀ ಗುಣಗಳ ವೈಭವೀಕರಣ ಮೊದಲಾದವುಗಳಿಂದ ಲಿಂಗತಾರತಮ್ಯ ಇನ್ನೂ ಹೆಚ್ಚಾಗುತ್ತದೆ ಎಂದು ಅಭಿಪ್ರಾಯಪಟ್ಟಿದ್ದಾನೆ.

### ೪. ಮಾರ್ಕ್ಸ್‌ವಾದಿ ಸ್ತ್ರೀವಾದಿ ಪಂಥ

ಸ್ವಾತಂತ್ರ್ಯ, ಸಮಾನತೆ, ಮಾನವನ ಘನತೆಗಾಗಿ ಮಾರ್ಕ್ಸ್‌ವಾದ ಹೋರಾಡಿದೆ. ಅಲ್ಲದೆ ಸ್ತ್ರೀ ಸಮಸ್ಯೆಗಳನ್ನು ಗುರುತಿಸಿ, ಸ್ತ್ರೀ ವಿಮೋಚನೆಗಾಗಿ ತನ್ನ ವಿಚಾರಗಳನ್ನು ಕೊಟ್ಟಿದೆ. ಲಿಂಗಾಧಾರಿತ ಶ್ರಮವಿಭಜನೆಯ ಸಿದ್ಧಾಂತವನ್ನು ಆಧರಿಸಿ, ಸ್ತ್ರೀ-ಪುರುಷರ ಸಾಮಾಜಿಕ ಅಸಮಾನತೆಯ ಸ್ವರೂಪವನ್ನು ವಿವರಿಸಿದೆ. ಮಾರ್ಕ್ಸ್ ಮತ್ತು ಏಂಗೆಲ್ಸ್‌ರು ತಮ್ಮ ಸಾಮಾಜಿಕ ಚಿಂತನೆಯಲ್ಲಿ ಶೋಷಣೆ ಕುರಿತು ವಿಶ್ಲೇಷಿಸಿದ್ದಾರೆ. ಕುಟುಂಬದಲ್ಲಿನ ಶೋಷಣೆಯನ್ನು ವರ್ಗಕ್ಕೆ ವಿಸ್ತರಿಸಿಕೊಂಡು ಸಮಾಜ ಸಂಪೂರ್ಣವಾಗಿ ಬದಲಾಗಬೇಕು. ಆಗ ಮಾತ್ರ ಸಮಾನತೆ ಸಾಧ್ಯ ಎಂದಿದ್ದಾರೆ.

ಮಾರ್ಕ್ಸ್ ಮತ್ತು ಏಂಗೆಲ್ಸ್‌ರಿಗೆ ಸ್ತ್ರೀ ವಿಮೋಚನೆ ಅಂಚಿನ ನೆಲೆಯಾಗಿದೆ. ಮಾರ್ಕ್ಸ್ 'The Holy family' ಕೃತಿಯಲ್ಲಿ ಸ್ತ್ರೀ ವಿಮೋಚನೆ ನೈಸರ್ಗಿಕವಾಗಿ ಆಗುವುದಿಲ್ಲ ಎಂದು ಹೇಳಿ ಪೂರ್ಯರ್ೀನ ಮಹಿಳಾ ವಿಮೋಚನೆಯ ವಿಚಾರಗಳನ್ನೇ ಬೆಂಬಲಿಸಿದ್ದಾನೆ. ಸ್ತ್ರೀ ವಿಮೋಚನೆ ಎನ್ನುವುದು ಮಾನವತೆಯು ಪಶುತ್ವವನ್ನು ಜಯಿಸಿದ್ದಕ್ಕೂ, ಸಂಸ್ಕೃತಿ ಪ್ರಕೃತಿಯನ್ನು ಗೆದ್ದದ್ದಕ್ಕೂ ಮಾನದಂಡ ಎಂದಿದ್ದಾನೆ.

ಏಂಗೆಲ್ಸ್ 'The origin of Family private property and state' ಕೃತಿಯಲ್ಲಿ ಮಾತೃಪ್ರಧಾನ ಕುಟುಂಬಗಳ ನಾಶ. ಖಾಸಗಿ ಆಸ್ತಿಯ ಬೆಳವಣಿಗೆ, ಮಹಿಳೆಯ ಶೋಷಣೆಗೆ ನಾಂದಿ ಎಂದು ಹಾಗೂ ಮಹಿಳೆಯನ್ನು ಸಾಮಾಜಿಕ ಉತ್ಪಾದನಾ ಕಾರ್ಯದಲ್ಲಿ ತೊಡಗಿಸಬೇಕು, ಆಗ ಮಾತ್ರ ಸ್ತ್ರೀ ವಿಮೋಚನೆ ಸಾಧ್ಯ. ಕುಟುಂಬವು ಸ್ತ್ರೀಯನ್ನು ಶೋಷಿಸಲು ಪುರುಷನ ಸಾಧನ. ಅಂತೆಯೇ ಪ್ರಭುತ್ವವು ವರ್ಗ ಶೋಷಣೆಯ ಸಾಧನ ಎಂದಿದ್ದಾನೆ. ಕುಟುಂಬದಲ್ಲಿ ಮಹಿಳೆ ಶ್ರಮಜೀವಿಯಾಗಿದ್ದು, ಪುರುಷ ಬೂರ್ಷ್ವಾ ಆಗಿರುತ್ತಾನೆ. ದುಡಿಮೆಯ ಅಸಾಮರ್ಥ್ಯವೇ ಶೋಷಣೆಗೆ ಕಾರಣ. ಆದ್ದರಿಂದ ಎಲ್ಲಾ ಸ್ತ್ರೀಯರು ಸಾಮಾಜಿಕ ಉತ್ಪಾದನೆಯಲ್ಲಿ ಬಾರಿ ಸಂಖ್ಯೆಯಲ್ಲಿ ಭಾಗವಹಿಸಿದರೆ ವಿಮೋಚನೆ ಸಾಧ್ಯ. ಸಮಾಜದಲ್ಲಿ ಕುಟುಂಬಗಳೇ ಆರ್ಥಿಕ ಘಟಕಗಳಂತೆ ವರ್ತಿಸಿವೆ. ಇಂಥ ಅಧಿಕಾರದಿಂದ ಅವು ಸ್ತ್ರೀಯನ್ನು ಶೋಷಿಸಿವೆ. ಅದಕ್ಕಾಗಿ ಕುಟುಂಬಗಳು ಆರ್ಥಿಕ ಘಟಕವಾಗದಂತೆ ನೋಡಿಕೊಳ್ಳಬೇಕು ಎಂದ.

ಆಗಸ್ಟ್ ಬೆಬಲ್ 'Women and Socialism' ಕೃತಿ ರಚಿಸಿದ್ದಾನೆ. ಮಹಿಳಾ ಶೋಷಣೆಯ ಇತಿಹಾಸ, ಶೋಷಣೆಯ ಸ್ವರೂಪ, ಉತ್ಪಾದನೆಯಲ್ಲಿ ಮಹಿಳೆಯರು ತೊಡಗಿದ್ದರಿಂದ ಉಂಟಾದ ಬದಲಾವಣೆ ಬೆಳವಣಿಗೆಗಳನ್ನು ವಿಶ್ಲೇಷಿಸಿದ್ದಾನೆ. ಮಹಿಳಾ ವಿಮೋಚನೆಗೆ ಸಮಾಜವಾದಿ ಕ್ರಾಂತಿ ಅವಶ್ಯಕ. ಮಾನವ ಜೀವಿಗಳಲ್ಲಿ ಮೊದಲ ಜೀತದಾಳಾದವಳು ಎಂದರೆ ಮಹಿಳೆ. ಹೆಣ್ಣಿನ ದೈಹಿಕತೆ ಮತ್ತು ತಾಯ್ತನಗಳೇ ಆಕೆಯು ಪುರುಷನನ್ನು ಅವಲಂಬಿಸುವಂತೆ ಮಾಡಿವೆ ಎಂದು ಹೇಳಿದ್ದಾನೆ.

ಸಮಾಜವಾದಿ ಹೋರಾಟದಲ್ಲಿರುವ ಲೆನಿನ್ ಕೂಡ ಸ್ತ್ರೀ ವಿಮೋಚನೆ ಕುರಿತು ಚಿಂತಿಸದೆ ಬಿಟ್ಟಿಲ್ಲ. ಮಹಿಳೆಯರು ಸಾಮಾಜಿಕ ಕಾರ್ಯಗಳಲ್ಲಿ ಭಾಗವಹಿಸಬೇಕು. ಆಗ ಮಾತ್ರ ಸಾಮಾಜಿಕ ಕಾರ್ಯಗಳು ಪೂರ್ಣವಾಗುತ್ತವೆ. "ಸೃಷ್ಟಿ" ಪತ್ರಿಕೆಯ ಸಂಪಾದಕರಾದ ಎ.ಸೆರಫಿ ಮೋವಿಚರನ್ನು ಕುರಿತು ನಿಮ್ಮ ಪತ್ರಿಕೆಗಳಲ್ಲಿ ಸೋವಿಯತ್ ಮಹಿಳೆ ರೈತ ಮಹಿಳೆಯ ಜೀವನದ ಬಗ್ಗೆ ಏಕೆ ಬರೆಯುತ್ತಿಲ್ಲ? ಪುನರೂಪಿತವಾದ ಹೊಸ ರಾಜ್ಯದಲ್ಲಿ ಮಹಿಳೆ ಪ್ರಮುಖ ಪಾತ್ರ ವಹಿಸಿರುವಳು. ಮೊದಲ ಬಾರಿಗೆ ಸಾರ್ವಜನಿಕ ಚಟುವಟಿಕೆಯ ವಿಶಾಲ ರಂಗಕ್ಕೆ ಅಡಿ ಇಡುತ್ತಿರುವಳು. ಗ್ರಾಮೀಣ ಮಹಿಳೆಯರು ಶಿಕ್ಷಣ ಪಡೆಯಲು ಉತ್ಸಾಹದಿಂದ ಇದ್ದಾರೆ. ಕೆಲವೇ ದಿನಗಳಲ್ಲಿ ಮಹಿಳಾ ವೈದ್ಯರು, ವಕೀಲರು, ವಿಜ್ಞಾನಿಗಳು, ರಾಜನೀತಿಜ್ಞೆಯರು ಬರಲಿ ಎಂದಿದ್ದಾನೆ.

ಜರ್ಮನಿಯ ಸೋವಿಯತ್ ಡೆಮೊಕ್ರಟಿಕ ಪಕ್ಷ ಹೆಂಗಸರ ಹಕ್ಕು-ಸ್ವಾತಂತ್ರ್ಯಕ್ಕೆ ಹೆಚ್ಚು ಗಮನ ನೀಡಿತು. ಲಿಂಗಭೇದವಿಲ್ಲದೇ ಎಲ್ಲರಿಗೂ ರಾಜಕೀಯ ಹಕ್ಕುಗಳು ದೊರೆಯಬೇಕೆಂದು ಕಾರ್ಯಕ್ರಮ ರೂಪಿಸಿತು. ಕ್ಲಾರಾ ಜೆಟಕಿನ್, ರೋಸಾ ಲಕ್ಸೆಂಬರ್ಗ್ ಮಹಿಳಾ ವಿಮೋಚನೆಗೆ ಕ್ರಾಂತಿಕಾರಿ ದೃಷ್ಟಿ ಅವಶ್ಯವೆಂದು ಹೋರಾಡಲು ಮುಂದೆ ಬಂದರು. ರಷ್ಯಾದ ಮಹಿಳೆಯರು ಅಕ್ಟೋಬರ್ ಕ್ರಾಂತಿಯಿಂದ ಸಮಾನತೆ ಪಡೆದು, ರಾಜಕೀಯದಲ್ಲಿ ಭಾಗವಹಿಸಿದರು. ರಷ್ಯಾದ ಸಮಾಜ ಕಲ್ಯಾಣ ಇಲಾಖೆಯ ಮಂತ್ರಿ ಮತ್ತು ವಿದೇಶಿ

ರಾಯಭಾರಿಯಾಗಿ 'ಅಲೆಗ್ಸಾಂಡ್ ಕೊಲಂತೈ' ಅಧಿಕಾರ ವಹಿಸಿಕೊಂಡಳು. ಮಹಿಳೆಯು ಮಂತ್ರಿಯಾಗಿದ್ದು ಚಾರಿತ್ರಿಕ ಮಹತ್ತ್ವದ ಘಟನೆಯಾಗಿದೆ. ಕೊಲಂತೈ ಮಹಿಳೆಯರನ್ನು ಕುರಿತು ಚಿಂತಿಸಿ, ಶತ-ಶತಮಾನಗಳಿಂದ ಮಹಿಳೆಯರು ಶ್ರಮಜೀವಿ, ತಾಯಿ, ಹೆಣ್ಣಾಗಿ ಶೋಷಣೆಗೆ ಒಳಗಾಗಿದ್ದಾರೆ. ಇವರನ್ನು ಸಾಂತ್ವನಗೊಳಿಸಲು ಭಿನ್ನ ಬಗೆಯ ದೃಷ್ಟಿಕೋನ ಅವಶ್ಯಕ ಎಂದಳು. ಅಲ್ಲದೆ ಮಹಿಳೆಯರನ್ನು ಸಂಘಟಿತರಾಗುವಂತೆ ಕಿವಿಮಾತು ಹೇಳಿದ್ದಾಳೆ.

ಮಕ್ಕಳ ಲಾಲನೆ-ಪಾಲನೆ, ಆಹಾರ ತಯಾರಿಸುವಿಕೆ, ಸಂತಾನೋತ್ಪತ್ತಿ, ಕುಟುಂಬದ ಸದಸ್ಯರ ಯೋಗಕ್ಷೇಮ ಇತ್ಯಾದಿಗಳನ್ನು ಮಾಡುವ ಕಾರ್ಯಕ್ಕೆ ಮೌಲ್ಯ ಬೆಲೆಗಳಿಲ್ಲ ಎಂದು ಮಾರ್ಕ್ಸ್‌ವಾದಿ ಸ್ತ್ರೀವಾದಿಗಳು ಗುರುತಿಸಿದರು. ಕುಟುಂಬದ ಜವಾಬ್ದಾರಿ ಕಾರ್ಯಗಳು ಮಹಿಳೆಯನ್ನು ಸಾರ್ವಜನಿಕ ಉತ್ಪಾದನೆಗೆ ಹೋಗದಂತೆ ತಡೆಯುತ್ತವೆ. ಒಂದು ವೇಳೆ ಕೆಲಸಕ್ಕೆ ಹೋದರೂ ಅರೆಕಾಲಿಕ, ಅಕೌಶಲ್ಯವುಳ್ಳ ಉದ್ಯೋಗಕ್ಕೆ ಹೋಗುವರು. ಶಿಶುಪಾಲನ ಕೇಂದ್ರ ಇದ್ದರೆ ಮಹಿಳೆ ಮಕ್ಕಳನ್ನು ಅಲ್ಲಿ ಬಿಟ್ಟು ತನ್ನ ಗಮನವನ್ನು ಹೆಚ್ಚು ವೇಳೆ ಉದ್ಯೋಗಕ್ಕೆ ಮೀಸಲಾಗಿಸಿಕೊಳ್ಳುವಳು ಎಂದಿದ್ದಾರೆ. ಆದರೆ ಇದನ್ನು ಇತರೆ ಸ್ತ್ರೀವಾದಿ ಚಿಂತಕರು ಒಪ್ಪಿಲ್ಲ. ಕಾರಣ ಮಹಿಳೆ ದುಡಿಮೆಯ ಮಾಲೀಕ ಹಾಗೂ ಕುಟುಂಬದ ಮುಖ್ಯಸ್ಥನಿಂದ ಇಬ್ಬಗೆಯ ಶೋಷಣೆಗೆ ಒಳಗಾಗುತ್ತಾಳೆ. ಅಲ್ಲದೆ ಮತ್ತೆ ಕೆಳಸ್ತರಕ್ಕೆ ಹೋಗುವಳು ಎಂದಿದ್ದಾರೆ.

ಸಮಕಾಲೀನ ಸ್ತ್ರೀವಾದಿಗಳು ಏಂಗೆಲ್ಸ್‌ನ 'ಖಾಸಗಿ ಆಸ್ತಿ'ಯ ಬೆಳವಣಿಗೆಯು ಸ್ತ್ರೀ ಶೋಷಣೆಗೆ ಕಾರಣವಾಗಿಲ್ಲ ಎಂದಿದ್ದಾರೆ. ಏಕೆಂದರೆ ಶೋಷಣೆ ಒಂದೇ ಅಂಶಗಳಿಂದ ಆಗುತ್ತಿಲ್ಲ ಎನ್ನುವುದು ಇವರ ಅಭಿಪ್ರಾಯ. ಪುರುಷನ ದುಡಿಮೆಯನ್ನು ಮಹಿಳೆ ಬಳಸುವಂತಿರುವುದರಿಂದ ಆಕೆ ಬಳಕೆದಾರಳಾಗಿ ಇರುವಳು ಎಂಬ ಧೋರಣೆಯನ್ನು ಪ್ರಶ್ನಿಸಲಾಗಿದೆ. ಮಹಿಳೆಯ ಕುಟುಂಬದೊಳಗಿನ ಕಾರ್ಯಗಳು ಅನುತ್ಪಾದಕವೆಂದು ಹೇಳಿರುವುದನ್ನು ಪ್ರಶ್ನಿಸಿದ್ದಾರೆ. ಸ್ತ್ರೀಗೆ ಮೀಸಲಾದ ಎಲ್ಲಾ ಕಾರ್ಯಗಳನ್ನು ಮತ್ತೆ ಸಮಾಜೀಕರಣ ಮಾಡಬೇಕು, ಆಗ ಮಾತ್ರ ಸ್ತ್ರೀ ವಿಮೋಚನೆ ಸಾಧ್ಯ ಎಂದರು. ಮಾರ್ಗರೇಟ್ ಬೆನ್‌ಸ್ಟನ್ನಳು "ಗೃಹಕೃತ್ಯಗಳ ಸಮಾಜೀಕರಣವೇ ಸ್ತ್ರೀ ಶೋಷಣೆಯ ಅಂತ್ಯಕ್ಕೆ ಉಪಾಯ" ಎಂದಿದ್ದಾಳೆ. ದಲ್ಲಾ ಕೊಸ್ತ ಮತ್ತು ಸೆಲ್ಮಾ ಜೇಮ್ಸ್‌ರು ಮಹಿಳೆ ಮನೆಗೆಲಸಕ್ಕೆ ವೇತನವನ್ನು ಕೇಳಿರುವರು. ಇದನ್ನು ಬಾರ್ಬರ್ ಬೆರ್ಗಮನ್ನಳು ನಿರಾಕರಿಸಿದ್ದು. ಮನೆಯಲ್ಲಿನ ಕೆಲಸಕ್ಕೆ ವೇತನ ಸಿಗುವುದನ್ನು ಬಂಡವಾಳಶಾಹಿ ಪ್ರಭುತ್ವ ನೋಡಿದರೆ, ಇದನ್ನೇ ಒಂದು ವ್ಯಾಪಾರವನ್ನಾಗಿ ಮಾಡಿಕೊಂಡು ಮಹಿಳೆಯನ್ನು ಮತ್ತಷ್ಟು ಶೋಷಿಸುತ್ತದೆ. ಮಹಿಳಾ ವಿಮೋಚನೆಗೆ ಸಾಮಾಜಿಕ ಬದಲಾವಣೆ ಮುಖ್ಯವೆಂದು ಹಾಯ್ ಡಿ ಹಾರ್ಟ್‌ಮೆನ್‌ಳು ಹೇಳಿದ್ದಾಳೆ. ಮಾರ್ಕ್ಸ್‌ವಾದ ಹಾಗೂ ಸ್ತ್ರೀವಾದ ಎರಡು ಇಂಗ್ಲಿಶ್ ಕಾನೂನಿನ ಗಂಡ-ಹೆಂಡತಿ ಎಂದಿದ್ದಾರೆ. ಪಿತೃ ಪ್ರಧಾನತೆ, ಬಂಡವಾಳಶಾಹಿಯನ್ನು ಎದುರಿಸುವಂಥ ಹೋರಾಟಕ್ಕೆ ತಾತ್ವಿಕತೆಯನ್ನು ಕಟ್ಟಿಕೊಳ್ಳಲು ಮಾರ್ಕ್ಸ್‌ವಾದ, ಸ್ತ್ರೀವಾದಗಳೆರಡೂ ಸಹಾಯಕ.

ಮಹಿಳೆ ದುಡಿಯುವುದರಿಂದ ಶೋಷಣೆ ನಿಲ್ಲುತ್ತದೆ ಎನ್ನುವುದಾದರೂ, ದುಡಿಯುವ ಮಹಿಳೆಯರು ಶೋಷಣೆಗೆ ಒಳಗಾಗಿದ್ದಾರೆ. ಆರ್ಥಿಕ ವ್ಯವಸ್ಥೆಯನ್ನು ಕೇಂದ್ರವಾಗಿಟ್ಟುಕೊಂಡು ಹೋರಾಡುವ ಸ್ತ್ರೀವಾದವು ಸೋಲುತ್ತದೆ. ಮಾರ್ಕ್ಸ್‌ವಾದದ ಮಿತಿಗಳ ಅರಿವಿನೊಂದಿಗೆ ಕಟ್ಟಿಕೊಂಡ ಹೊಸ ಎಚ್ಚರವು ಸ್ತ್ರೀವಾದಕ್ಕೆ ಬೇಕಾಗಿದೆ. ಕಾರ್ಲ್‌ಮಾರ್ಕ್ಸ್ "The German Ideology" ಕೃತಿಯಲ್ಲಿ ಸಂಪತ್ತು ಹೇಗೆ ಅಸಮಾನವಾಗಿ

ಹಂಚಿಕೆಯಾಗಿದೆ. ಕುಟುಂಬ ಯಾವ ಆಧಾರದಿಂದ ಶ್ರಮವಿಭಜನೆ ಮಾಡಿದೆ. ಕುಟುಂಬದಲ್ಲಿ ಎಲ್ಲಾ ಆಸ್ತಿಯ ಒಡೆಯ ಮುಖ್ಯಸ್ಥನೇ ಆಗಿದ್ದು, ದುಡಿಯುವ ಮಕ್ಕಳು, ಹೆಂಡತಿಯರು ಗುಲಾಮರಂತೆ ಇರುತ್ತಾರೆ ಎಂದಿದ್ದಾನೆ.

ಐಸನ್ ಸ್ಟೀನ್‌ಳು ಮಾರ್ಕ್ಸ್‌ವಾದವು ಸಂತಾನೋತ್ಪತ್ತಿ ಕ್ರಿಯೆಯನ್ನು ಪ್ರಮುಖವೆಂದು ಗುರುತಿಸದೆ ಇರುವುದನ್ನು ಆಕ್ಷೇಪಿಸಿರುವಳು. ಸ್ತ್ರೀಯರು ಮಾಡುವ ಮನೆಗೆಲಸಕ್ಕೆ ಸಾಮಾಜಿಕ, ಆರ್ಥಿಕ ವ್ಯವಸ್ಥೆಯಲ್ಲಿ ಪ್ರಧಾನ ಪಾತ್ರವನ್ನು ಕೊಡಲಿಲ್ಲ ಎಂದಿದ್ದಾಳೆ.

### ೫. ಅಮೆರಿಕೆಯ ಸ್ತ್ರೀವಾದ

ಅಮೆರಿಕೆಯ ಪತ್ರಕರ್ತೆಯರು, ಲೇಖಕಿಯರು, ವಿಶ್ವವಿದ್ಯಾನಿಲಯಗಳ ಪ್ರಾಧ್ಯಾಪಕಿಯರು ಮುಂತಾದ ಮಹಿಳೆಯರು ಸ್ತ್ರೀ ಸ್ವಾತಂತ್ರ್ಯ ಚಳವಳಿಯಲ್ಲಿ ಭಾಗವಹಿಸಿದ್ದರು. ಅಲ್ಲಿ ಅವರು ಕಂಡ ಸ್ತ್ರೀ-ಪುರುಷರ ಸಮಾನತೆಗೂ, ತಮ್ಮ ಜೀವನದಲ್ಲಿ ತಾವು ಅನುಭವಿಸುತ್ತಿರುವ ಸಮಾನತೆಗೂ ತುಂಬಾ ವ್ಯತ್ಯಾಸವನ್ನು ಕಂಡುಕೊಂಡರು. ಸಾಹಿತ್ಯ ಅಧ್ಯಯನ, ಬೋಧನೆಗಳಲ್ಲಿ ನಾಯಕಿಯರಿಗೆ, ಲೇಖಕಿಯರಿಗೆ, ವಿದುಷಿಯರಿಗೆ ಸಿಕ್ಕಿರುವ ಸ್ಥಾನ ಎರಡನೆಯ ದರ್ಜೆಯದು ಎಂದರು. ಲೇಖಕಿಯರ ಬದುಕು ಮತ್ತು ಸಾಹಿತ್ಯದ ಅನುಭವಗಳ ಬಗ್ಗೆ ಹೊಸ ತೀವ್ರತೆಗಳು ಉದಯವಾದವು. ವಿಶ್ವವಿದ್ಯಾನಿಲಯಗಳ ಸಾಹಿತ್ಯ ಹಾಗೂ ಮಹಿಳಾ ಅಧ್ಯಯನ ವಿಭಾಗಗಳಿಂದ ಅಮೆರಿಕೆಯ ಸ್ತ್ರೀವಾದ ಪ್ರೇರಣೆ ಪಡೆದಿದೆ. ಆರಂಭದಲ್ಲಿ ಅಮೆರಿಕೆಯ ಸ್ತ್ರೀವಾದವು ಸಾಹಿತ್ಯದಲ್ಲಿರುವ ಸ್ತ್ರೀ ದ್ವೇಷಿ ಅಂಶಗಳನ್ನು ನಾಶಗೊಳಿಸಿತು. ಅಂದಿನ ಸಾಹಿತ್ಯವು ಸ್ತ್ರೀಯನ್ನು ದೇವತೆ, ದೆವ್ವಗಳೆಂದೂ ಚಿತ್ರಿಸಿದರೆ, ಪಠ್ಯಗಳು ಸ್ತ್ರೀಯರಿಗೆ ಬೆದರಿಕೆ ಹಾಕಿದವು. ಸಾಹಿತ್ಯದಿಂದ ದೂರ ಇರುವಂತೆ ಮಾಡಿದವು. ಎಪ್ಪತ್ತರ ದಶಕದ ಲಿಂಗ ತಾರತಮ್ಯ ಮತ್ತು ಲಿಂಗ ಪ್ರಭೇದದ ತಿಳುವಳಿಕೆ ಅಧಿಕವಾದಂತೆ ಸ್ತ್ರೀ ಬರಹಗಾರರಿಗೂ ತಮ್ಮದೆ ಆದ ಸಾಹಿತ್ಯ ಚರಿತ್ರೆಯಿದೆ. ಆದರೆ ಪಿತೃಪ್ರಧಾನತೆ ಅವುಗಳನ್ನು ನಾಶಗೊಳಿಸಲು ಪ್ರಯತ್ನಿಸಿ ಗೋಚರಿಸದಂತೆ ಮಾಡಿದೆ ಎಂದು ಅರಿತರು. ಆದ್ದರಿಂದ ಮಹಿಳಾ ಬರೆಹದ ಶೋಧನೆಗೆ ಗಮನ ಹರಿಸಿದರು. ಅಮೆರಿಕೆಯ ಸ್ತ್ರೀವಾದ ಎರಡು ವಿಧದಿಂದ ಅಧ್ಯಯನ ಕೈಗೊಂಡಿದೆ. ಅವುಗಳೆಂದರೆ -

೧. ಸಾಹಿತ್ಯದಲ್ಲಿನ ಸ್ತ್ರೀ ಪ್ರತೀಕಗಳ ವಿಮರ್ಶೆ
೨. ಸಾಹಿತ್ಯದಲ್ಲಿನ ಸ್ತ್ರೀ ಕೇಂದ್ರಿತ ದೃಷ್ಟಿಕೋನ

ಅಮೆರಿಕೆಯ ಸಾಹಿತ್ಯದಲ್ಲಿ ಸ್ತ್ರೀ ಪ್ರತೀಕಗಳ ವಿಮರ್ಶೆ ಬೆಳೆಯಿತು. ಅಲ್ಲದೇ ಸ್ತ್ರೀ ಕುರಿತು ಬರೆಹಗಳು ರಚಿತಗೊಂಡವು. ಈ ವಿಮರ್ಶೆಯ ಉದ್ದೇಶ ಸಾಹಿತ್ಯವನ್ನು ಓದುವಾಗ ಓದುಗರು ತಮ್ಮ ಬದುಕನ್ನು ಲೇಖಕಿಯ ಬದುಕಿನೊಂದಿಗೆ ಗುರುತಿಸಿಕೊಳ್ಳಬೇಕು ಎಂದಿದೆ. ವಿಮರ್ಶಕಿಯೊಬ್ಬಳು ಓದುವಾಗ ಆಕೆ ತನ್ನ ಬದುಕನ್ನು ಲೇಖಕರ ಬದುಕಿನೊಂದಿಗೆ ಗುರುತಿಸಿಕೊಳ್ಳುತ್ತಾಳೆ. ಈ ರೀತಿಯ ಅನುಭವಗಳಿಂದ ಅವರನ್ನು ಕುರಿತು ಚಿತ್ರಿಸಲು ಸಹಾಯಕ ಎಂದು ನಂಬುತ್ತಾರೆ. ವಿಮರ್ಶೆಯು ಸಾಂಸ್ಕೃತಿಕ, ಸಾಮಾಜಿಕ, ರಾಜಕೀಯ, ವೈಯಕ್ತಿಕ ಅಂಶಗಳಿಂದ ಸಮಾಜದಲ್ಲಿ ಉದಯವಾಗುತ್ತದೆ. ಅಲ್ಲದೆ ವಿಮರ್ಶೆಯನ್ನು ಎಲ್ಲೆಡೆ ವಿಸ್ತರಿಸಲು ಅಧಿಕಾರಶಾಹಿ ಪ್ರಯತ್ನಿಸುತ್ತದೆ. ಜನರು ಸಹ ಇದಕ್ಕೆ ಪ್ರತಿಕ್ರಿಯಿಸುವರು. ಇದರಿಂದಾಗಿ ಓದುಗರು ಸ್ವಂತ ಅನುಭವಗಳನ್ನು ಅರಿಯಲು ನೆರವಾಗಬಹುದು ಎನ್ನುವ ನಂಬಿಕೆಯಿದೆ. ಸೂಸನ್ ಕೊಪಲ್ ಮನ್

ಕಾರ್ನಿಲಾನ್‌ಳ 'Images of women in fiction. Feminist perspective' ಕೃತಿ ಇಪ್ಪತ್ತೊಂದು ಲೇಖನಗಳ ವಿಭಿನ್ನ ಲೇಖಕ, ಲೇಖಕಿಯರ ಸಂಕಲನವಾಗಿದೆ. ಬದುಕು ಮತ್ತು ಸಾಹಿತ್ಯ ಒಂದೇ ರೀತಿಯಲ್ಲಿರಬೇಕು ಎಂದು ಹೇಳಿ, ಪಠ್ಯವೊಂದು ಸಾಹಿತ್ಯ, ಸಾಹಿತ್ಯೇತರ ಅಂಶಗಳನ್ನು ಒಳಗೊಂಡಿರುತ್ತದೆ. ಸ್ತ್ರೀ ಪ್ರತೀಕಗಳ ಜೊತೆಗೆ ಓದುಗರು ಸಾಹಿತ್ಯದಲ್ಲಿ ಬಲಿಷ್ಠ, ಪ್ರಭಾವಶಾಲಿಯಾದ ಸ್ತ್ರೀ ಪಾತ್ರಗಳನ್ನು ಗುರುತಿಸಿಕೊಳ್ಳಬೇಕು. ಚೆರ್ರಿ ರಿಜಿಸ್ಟರ್ ಹೇಳುವಂತೆ -

> "ಒಂದು ಸಾಹಿತ್ಯ ಕೃತಿ ಆದರ್ಶ ಸ್ತ್ರೀ ಪಾತ್ರಗಳನ್ನು ಒಳಗೊಂಡರೆ ತಮ್ಮ ಗುರಿಗಳನ್ನು ತಲುಪಲು ಪುರುಷರನ್ನು ಅವಲಂಬಿಸದೇ ಮಹಿಳೆಯರನ್ನು ಚಿತ್ರಿಸಬೇಕು. ಪ್ರಸ್ತುತ ಸ್ಥಿತಿಗತಿ ಬಗ್ಗೆ ತಿಳಿಸುವಾಗ ನಿಜ ಜೀವನದಲ್ಲಿ ದುರ್ಬಲರು, ಪ್ರಭಾವಹೀನರು ಸೋಲೊಪ್ಪುವವರೂ ಆದ ಸ್ತ್ರೀಯರು ಎಷ್ಟೋ ಜನ ಇದ್ದಾರೆಂಬುದನ್ನು ಗುರುತಿಸಬೇಕು. ಯಾವಾಗಲೂ ಆದರ್ಶ ಸ್ತ್ರೀ ಪಾತ್ರಗಳನ್ನು ಕಾಣಬೇಕೆಂದು ಹಂಬಲಿಸುವುದಕ್ಕೆ ಸ್ವ ವಿರೋಧವು ಈ ವಿಮರ್ಶೆಯಲ್ಲಿದೆ. ಆದರ್ಶ ಮಹಿಳೆಯರ ಚಿತ್ರಣ ಬೇಕಾಗಿದೆ. ಆದರೆ ಅದಕ್ಕೆ ಒಂದು ಮಿತಿ ಅವಶ್ಯಕ" ಎಂದಿದ್ದಾಳೆ.

ಮಹಿಳೆಯರ ಬದುಕು ಜಾತಿ, ವರ್ಗ, ಲಿಂಗಗಳಿಂದ ಕೂಡಿದ್ದು. ಸಾಮಾಜಿಕ, ವೈಯಕ್ತಿಕ ಅಂಶಗಳಿಂದಲೂ ರೂಪಿತವಾಗಿರುತ್ತದೆ. ಒಂದೇ ಸನ್ನಿವೇಶದ ಅನುಭವವನ್ನು ಸ್ತ್ರೀ-ಪುರುಷರು ಭಿನ್ನ ಭಿನ್ನವಾಗಿಯೆ ಅನುಭವಿಸುತ್ತಾರೆ. ಸ್ತ್ರೀವಾದಿಗಳು ಸ್ತ್ರೀ-ಪುರುಷರ ನಡುವಿನ ವ್ಯತ್ಯಾಸವನ್ನು ಅಧ್ಯಯನದಿಂದ ಕಂಡುಕೊಳ್ಳಲು ಬಯಸಿ, ಅದಕ್ಕಾಗಿ ಮಹಿಳಾ ಬರೆಹಗಳನ್ನು ಶೋಧಿಸಿ, ಸಂಗ್ರಹಿಸಿ, ಅಧ್ಯಯನ ಮಾಡಲು ಆರಂಭಿಸಿದರು. ಹೀಗೆ ಮಹಿಳಾ ಬರೆಹಗಳನ್ನು ಒಂದೆಡೆ ಸೇರಿಸಿ ಅಧ್ಯಯನವನ್ನು ಕೈಗೊಂಡವರಲ್ಲಿ ಎಲೈನ್ ಶೋವಾಲ್ಟರ್ ಪ್ರಮುಖಳು. ಮಹಿಳೆಯರಿಗೆ ಒಂದು ಚರಿತ್ರೆಯಿದೆ, ಇದರಿಂದ ಮಹಿಳೆಯರ ಸ್ಥಾನಮಾನ ಅವಳ ಮೇಲಿರುವ ನಿರ್ಬಂಧಗಳನ್ನು, ವಿಧಾನಗಳನ್ನು ತಿಳಿಯಬಹುದು ಎಂದಳು. ಮಹಿಳೆಯರ ಬರೆಹಗಳನ್ನು ಕುರಿತು ಸ್ತ್ರೀವಾದಿ ಪರಿಭಾಷೆಯ ಲಕ್ಷಣವನ್ನು 'The Female Imagination' ಕೃತಿ ನಿರ್ವಚಿಸಿದೆ. ಇದರ ಕರ್ತೃ ಪೆಟ್ರೇಷಿಯಾ ಮೇಯರ್ ಸ್ಪ್ಯಾಕ್ಸ್. ಎಲೆನ್ ಮೋಯರ್ಸ್ ಎಂಬಾಕೆ 'Literary Woman' ಕೃತಿಯನ್ನು ರಚಿಸಿದ್ದಾಳೆ. ಇದರಲ್ಲಿ ಮಹಿಳೆಯನ್ನು ಚರಿತ್ರೆಯಿಂದ ದೂರ ಇಟ್ಟ ಬಗೆ, ಪ್ರತ್ಯೇಕ ಘಟಕವೆಂದು ಹೇಳುವ ಲೇಖಕಿಯ ವಿವಿಧ ಹಂತಗಳನ್ನು ಒಳಗೊಂಡಿವೆ.

ಎಲೈನ್ ಶೋವಾಲ್ಟರ್ 'A Literature of their own' ಕೃತಿಯಲ್ಲಿ ಮಹಿಳಾ ಸಾಹಿತ್ಯವನ್ನು ಒಂದು ಉಪಸಂಸ್ಕೃತಿಯೆಂದು ಈ ಸಾಹಿತ್ಯವು ತನ್ನದೆ ಆದ ವಸ್ತು, ಪ್ರತಿಮಾ ಕಾಳಜಿಗಳನ್ನು ಹೊಂದಿದೆ ಎಂದು ಹೇಳಿ ಅದನ್ನು ಮೂರು ಹಂತಗಳಲ್ಲಿ ವಿಭಜಿಸಲಾಗಿದೆ. ಅವುಗಳೆಂದರೆ -

೧. ಸ್ತ್ರೀಯಾತ್ಮಕ ಹಂತ : ಈ ಹಂತದಲ್ಲಿ ಪ್ರಧಾನ ಪರಂಪರೆಯ ಕಲಾ ಮಾನದಂಡಗಳನ್ನು, ಸಾಮಾಜಿಕ ಪಾತ್ರ ಕುರಿತ ದೃಷ್ಟಿಕೋನಗಳನ್ನು, ಮೌಲ್ಯಗಳನ್ನು ಲೇಖಕಿಯರು ಅಂತಸ್ಥವಾಗಿಸಿಕೊಂಡಿರುತ್ತಾರೆ.

೨. ಸ್ತ್ರೀವಾದಿ ಹಂತ : ಪಿತೃಪ್ರಧಾನ ವ್ಯವಸ್ಥೆಯ ಮಾನದಂಡ, ಮೌಲ್ಯಗಳ ವಿರುದ್ಧ ಪ್ರತಿಭಟಿಸುವುದು. ಅಲ್ಪಸಂಖ್ಯಾತರ ಹಕ್ಕುಗಳನ್ನು, ಮೌಲ್ಯಗಳನ್ನು ಎತ್ತಿಹಿಡಿದು ಸ್ವಾಯತ್ತತೆಗಾಗಿ ಹಕ್ಕೊತ್ತಾಯಿಸುವ ಹಂತ.

೩. ಸ್ತ್ರೀತ್ವದ ಹಂತ : ಆತ್ಮ ಶೋಧನೆಗಾಗಿ ವಿರೋಧದಿಂದ ಮುಕ್ತವಾದ ತನ್ನೊಳಗೆ ತಿರುಗಿದ ಸ್ವಂತಿಕೆಯ ಹುಡುಕಾಟದ ಹಂತ.

ಮಹಿಳಾ ಸಂಸ್ಕೃತಿ ಕುರಿತ ವಿಚಾರಗಳನ್ನು ಸ್ತ್ರೀವಾದಿ ಸಾಹಿತ್ಯದಲ್ಲಿ ಸೇರಿಸಲು ಪ್ರಯತ್ನಿಸಲಾಗಿದೆ. 'ಮಹಿಳಾ ಸಂಸ್ಕೃತಿ ಸಿದ್ಧಾಂತ' ಮಹಿಳೆಯ ಭಾಷೆ, ದೇಹ, ಮನಸ್ಸುಗಳನ್ನು ಒಳಗೊಂಡಿದ್ದು ಇವುಗಳು ಹುಟ್ಟಿದ ಸಾಮಾಜಿಕ ಸಂದರ್ಭವನ್ನು ವಿವರಿಸುತ್ತದೆ.

ಗಿಲ್ಬರ್ಟ್, ಗುಬರ್ ಅವರ 'The Mad Woman in the attic' ಕೃತಿಯು ಹತ್ತೊಂಬತ್ತನೆಯ ಶತಮಾನದ ಇಂಗ್ಲೀಷ್ ಲೇಖಕಿಯರ ಅಧ್ಯಯನವನ್ನು ಒಳಗೊಂಡಿರುವಂಥದ್ದು. ೧೯ನೆಯ ಶತಮಾನದಲ್ಲಿ ಪುರುಷನೇ ಸೃಜನಶೀಲ ಸಾಹಿತ್ಯ ಬರೆಯುವವನು, ಆತನೇ ಕೃತಿಯ ತಂದೆ, ಸೃಷ್ಟಿಕರ್ತನೇ ಎನ್ನುವ ನಂಬಿಕೆಯಿತ್ತು. ಇದನ್ನು ಗಿಲ್ಬರ್ಟ್, ಗುಬರ್ ನಿರಾಕರಿಸಿ ಇದು ಪುರುಷ ಪ್ರಧಾನ್ಯತೆಯಿಂದ ಕೂಡಿದೆ. ಲೇಖಕಿಯರ ಸಾಹಿತ್ಯವನ್ನು ಅಲ್ಲಗಳೆಯಲು ಮಹಿಳೆಯರನ್ನು ಶೋಷಿಸಲು ನಿರ್ಮಾಣವಾದ ಸ್ಥಿತಿ. ಪುರುಷರ ಈ ಹೇರಿಕೆಗಳನ್ನು ಸ್ತ್ರೀಯರು ಅನಿವಾರ್ಯವಾಗಿ ಒಪ್ಪಿಕೊಳ್ಳಬೇಕಿತ್ತು. ಮಹಿಳೆಯರು ತಮ್ಮ ಸ್ತ್ರೀ ಪ್ರತೀಕಗಳನ್ನು ಸೃಷ್ಟಿಸಿರುವುದನ್ನು ಪುರುಷ ಸಂಸ್ಕೃತಿ ನಿರಾಕರಿಸಿದ್ದಿದೆ. ಲೇಖಕಿಯರು ಹೊಸ ಅರ್ಥದೊಂದಿಗೆ ಮತ್ತೆ ಸ್ತ್ರೀ ಪ್ರತೀಕಗಳನ್ನು ಸೃಷ್ಟಿಸಿ ದ್ವಂದ್ವ ಪ್ರತೀಕಗಳಲ್ಲಿ ಹೇಳಿದ್ದಾರೆ. ಇಂಥ ದ್ವಂದ್ವಗಳಲ್ಲಿ ನಾಯಕಿಯರು ಪ್ರಧಾನ ಪರಂಪರೆಯ ನಿರೀಕ್ಷೆಗಳನ್ನು ಪೂರೈಸಿದರೂ ಲೇಖಕಿಯರ ಪ್ರತಿಬಿಂಬಗಳಾಗಿರುವರು. "ನೆಲಮಾಳಿಗೆಯಲ್ಲಿ ಬಚ್ಚಿಟ್ಟ 'ಹುಚ್ಚಿ'ಯರ ರೂಪವೂ, ಅದೇ ಲೇಖಕಿಯರು ಅದುಮಿಟ್ಟ ಕ್ರೋಧ, ಆತಂಕಗಳಿಗೆ ಸಂಕೇತವಾಗಿರುತ್ತವೆ. ತಮ್ಮ ಹೆಣ್ತನದ ವಿಚ್ಛಿದ್ರಿತ ಭಾವನೆಗಳ ಜೊತೆ ಹೊಂದಾಣಿಕೆ ಮಾಡಿಕೊಳ್ಳಲು ಲೇಖಕಿಯರು ಈ ಹುಚ್ಚಿಯ ಪ್ರತೀಕವನ್ನು ಬಳಸಿಕೊಂಡಿದ್ದಾರೆ. ತಾವು ಆಗಲು ಬಯಸುವ ಸ್ಥಿತಿಗೂ ಆಗಬೇಕಾಗಿ ಬಂದಿರುವ ಸ್ಥಿತಿಗೂ ಇರುವ ಬಿರುಕನ್ನು ಈ ದ್ವಂದ್ವ ರೂಪಗಳ ಮೂಲಕ ಸ್ತ್ರೀ ಬರೆಹಗಾರರು ವ್ಯಕ್ತಪಡಿಸುತ್ತಾರೆ" ಎಂದು ಹೇಳುವ ಗಿಲ್ಬರ್ಟ್, ಗುಬರ್ ಎಲ್ಲಾ ಮಹಿಳಾ ಬರೆಹಗಾರರ ರಚನೆಗಳಲ್ಲೂ ಈ ವೈಶಿಷ್ಟ್ಯವಿದೆ ಎಂದು ಸಾಧಾರಣೀಕರಿಸುತ್ತಾರೆ. ಪಿತೃಪ್ರಧಾನ ಪಠ್ಯಗಳು ಕಟ್ಟಿಕೊಡುವ ದೇವತೆ-ರಕ್ಕಸಿಯರ ದ್ವಿತ್ವಗಳನ್ನು ವಶಪಡಿಸಿಕೊಂಡು ಅವುಗಳನ್ನು ನಿರಚಿಸಿ, ಹೊಸ ಅರ್ಥದೊಂದಿಗೆ ಮತ್ತೆ ಕಟ್ಟಿಕೊಡುವುದರಲ್ಲಿಯೇ ಮಹಿಳಾ ಪಠ್ಯದ ನಿಜವಿದೆ ಎಂಬುದು ಇವರ ವಾದ.

ಶೋವಾಲ್ಟರ್ ನಿರ್ದಿಷ್ಟ ಸ್ಥಳದಲ್ಲಿನ ಮಹಿಳೆ ಸ್ವಂತ ತಿಳುವಳಿಕೆಯಿಂದ ಹೇಗೆ ಸಾಹಿತ್ಯ ಬರೆಯುವಳು ಎನ್ನುವುದನ್ನು ಶೋಧಿಸಿದರೆ, ಗುಬರ್, ಗಿಲ್ಬರ್ಟ್ ಸ್ತ್ರೀಯರಿಗೆ ಪ್ರತಿಬಂಧಕ, ನಿರ್ಬಂಧಗಳು ಇದ್ದರೂ ಅವುಗಳನ್ನು ನಿರ್ಲಕ್ಷಿಸಿ ತನ್ನದೆ ಆದ ಬದುಕು ಕಟ್ಟಿಕೊಳ್ಳಲು ಹೇಗೆ ಯೋಚಿಸುವಳು ಎನ್ನುವುದನ್ನು ಶೋಧಿಸಿದ್ದಾರೆ. ತಾವು ಹೊರತಂದ ಮಹಿಳಾ ಕೇಂದ್ರಿತ ಕೃತಿಗಳಿಗೆ ಅಧಿಕೃತತೆ ತಂದಿರುವರು. ಜೊತೆಗೆ ಸ್ತ್ರೀ ಸಾಹಿತ್ಯ ಪರಂಪರೆಯನ್ನು ಸ್ಥಾಪಿಸಿದ್ದಾರೆ.

## ೬. ಫ್ರೆಂಚ್ ಸ್ತ್ರೀವಾದ

ಫ್ರೆಂಚ್ ಮಹಿಳೆಯರೆಲ್ಲಾ ಬೀದಿಗಿಳಿದು ಮೆರವಣಿಗೆ ನಡೆಸಿದರು. ಇವರು ಉದ್ದೇಶ ಮಹಿಳೆಯರ ಸಮಸ್ಯೆ ಕುರಿತದ್ದೇ ಆಗಿತ್ತು. ಇಲ್ಲಿ ಸಂತಾನವನ್ನು ಹೊಂದುವ ಆಯ್ಕೆಯ ಪ್ರಶ್ನೆ ಹಾಗೂ ಮಹಿಳೆಯ ವಿರುದ್ಧದ ಹಿಂಸೆಯ ಬಗೆಗೆ ಹೇಳಲಾಯಿತು. ಅಲ್ಲದೇ ಮಹಿಳೆಯರ ಹಕ್ಕುಗಳನ್ನು ಕುರಿತು ಜನಾಭಿಪ್ರಾಯವನ್ನು ಬದಲಾಯಿಸಲು ಹೋರಾಟ ಮಾಡಿದರು. ಫ್ರೆಂಚ್ ಸ್ತ್ರೀವಾದಿ ಗುಂಪು 'Psych et po' ವು ಎಂಬ ಮನಃಶಾಸ್ತ್ರಜ್ಞ ನೇತೃತ್ವದಲ್ಲಿ ರೂಪಗೊಂಡಿತು. ಸುಧಾರಣವಾದಿ ಮಹಿಳಾ ಚಳವಳಿಯು ಸಹ ಪಿತೃಪ್ರಧಾನ ವ್ಯವಸ್ಥೆಯೊಳಗಿನ ಅಧಿಕಾರ ನಿರೀಕ್ಷೆಗಳನ್ನು ಹೊಂದಿದೆ ಎಂದು ಸ್ತ್ರೀವಾದದ ವಿರುದ್ಧ ಘೋಷಣೆ ಮಾಡಿತು. ತಮ್ಮ ಗುಂಪಿಗೆ 'MLF ' ಎಂದು ಹೆಸರಿಸಿಕೊಂಡು ತಾವು ಮಹಿಳಾ ಚಳವಳಿಯ ಒಳಗಿನ ಮಹಿಳೆಯರು ಎಂದಿದ್ದರು. ೧೯೮೦ರ ಹೊತ್ತಿಗೆ ಇಂಥ ವಿವಾದ ನಿಂತಿತು. ಮನೋವಿಶ್ಲೇಷಣಾ ಅಧ್ಯಯನ ವ್ಯಾಪಕವಾಗಿ ಪ್ರಚಾರವಾಯಿತು. ಫ್ರೆಂಚ್ ಸ್ತ್ರೀವಾದದ ಖ್ಯಾತ ಚಿಂತಕಿ ಹೆಲನ್ ಸಿಡ್ಯಾನ್ಸ್, ಲೂಸ್ ಇರಿಗೇರೆ, ಜುಲಿಯಾಕ್ರಿಸ್ಟನ್‌ರು ಮನೋವಿಶ್ಲೇಷಣಾತ್ಮಕ ಚಿಂತನೆಯನ್ನೇ ಪ್ರಧಾನ ಗುರಿಯನ್ನಾಗಿಸಿಕೊಂಡರು. ಈ ವಾದ ಮನೋವಿಶ್ಲೇಷಣಾ ಸಿದ್ಧಾಂತದ ಮೂಲಕ ಲಿಂಗ ವ್ಯತ್ಯಾಸದ ಪ್ರಶ್ನೆಯನ್ನು ಕೇಳಿದೆ. ಮಹಿಳೆಯರು ಪುರುಷರಿಗಿಂತ ಭಿನ್ನವಾದ ಲಿಂಗೀಯತೆಯನ್ನು ಹೊಂದಿರುವರು. ಇದೇ ಅವರ ದಮನಕ್ಕೆ ಕಾರಣವಾಗಿದೆ. ಸ್ತ್ರೀವಾದದ ರಾಜಕಾರಣಕ್ಕೆ ಅಥವಾ ಸಿದ್ಧಾಂತಕ್ಕೆ ಈ ಲೈಂಗಿಕ ವ್ಯತ್ಯಾಸವೇ ಕೇಂದ್ರ ಎಂದೂ, ಈ ವ್ಯತ್ಯಾಸ ಅಧಿಕಾರದ ಜೊತೆ ಹೇಗೆ ಸಂಬಂಧಿತವಾಗಿದೆ ಎಂದು ತಿಳಿಯಬಹುದಾಗಿದೆ. ಈ ವಾದವು ಪ್ರಾಯೋಗಿಕ ಸಿದ್ಧಾಂತಗಳನ್ನು ರೂಪಿಸಿತು. ಫ್ರೆಂಚ್ ಸ್ತ್ರೀವಾದಿಗಳು ಪಿತೃಪ್ರಧಾನ ಸಂಕಥನಗಳಲ್ಲಿನ ವೈರುಧ್ಯಗಳು, ಖಾಲಿ ಸ್ಥಳಗಳು, ನಿರ್ಲಕ್ಷಿತ ಅಂಚಿನ ಸ್ಥಳಗಳಲ್ಲಿ ಮಹಿಳಾ ಬರೆವಣಿಗೆಗಳನ್ನು ಕಾಣಬೇಕೆಂದರು. ಮಹಿಳಾ ಬರೆಹಗಾರರ ಕುರಿತು ಹುಡುಕುವಾಗ ಸ್ತ್ರೀಯಾತ್ಮಕ ಬರೆಹಗಳನ್ನು ಗುರುತಿಸಿದರು. ಫ್ರೆಂಚ್ ಸ್ತ್ರೀವಾದಿಗಳ ಪ್ರಧಾನ ಕಾಣಿಕೆ ಎಂದರೆ ಪಿತೃಪ್ರಧಾನ ದೃಷ್ಟಿಕೋನವುಳ್ಳ ಚರಿತ್ರೆಯನ್ನು ನಿರಾಕರಿಸಿದ್ದು. ಪುರುಷ ಚರಿತ್ರೆಕಾರರು ಮಹಿಳೆಯರ ವಿಷಯಗಳಾದ ಪ್ರೇಮ, ತಾಯ್ತನ, ಬಾಲ್ಯಗಳನ್ನು ಅಧ್ಯಯನ ಮಾಡುತ್ತಿದ್ದರು. ಇದನ್ನು ತಿಳಿದ ಆರೆಲೆಟ್ ಫಾರ್ಜ್‌ಳು ಫ್ರೆಂಚ್ ಮಹಿಳಾ ಚರಿತ್ರೆಕಾರರ ಕೃತಿಗಳನ್ನು ವಿಮರ್ಶಾತ್ಮಕವಾಗಿ ಮಂಡಿಸಿ, ಸ್ತ್ರೀವಾದಿ ಮಹಿಳಾ ಚರಿತ್ರೆಕಾರರ ಪ್ರಯತ್ನ ಈ ಕೆಳಗಿನ ಕಾರಣಗಳಿಗಾಗಿ ಪ್ರಧಾನ ಎಂದಿದ್ದಾಳೆ.

೧. "ಸಾಂಸ್ಥಿಕ ಹಾಗೂ ಉದ್ಯೋಗಧಿಕಾರಿಗಳಲ್ಲಿ ಸೇರ್ಪಡೆಯಾಗದೆ ಉದ್ದೇಶ ಪೂರ್ವಕ ನಿರ್ಲಕ್ಷ್ಯಕ್ಕೆ ಒಳಗಾದ ಅಧಿಕೃತವೆನಿಸಿದ ಚರಿತ್ರೆಗಳಲ್ಲಿ ಹಾಗೂ ಮಹಿಳೆಯರ ಬದುಕನ್ನು ಸ್ತ್ರೀವಾದಿ ಚರಿತ್ರೆಯು ಪುನಃ ಶೋಧಿಸುತ್ತದೆ.

೨. ದಬ್ಬಾಳಿಕೆ ಹಾಗೂ ಮೇಲುಗಾರಿಕೆಯ ನೆಲೆಯಿಂದ ಹೊರತು ಪಡಿಸಿ ಮಹಿಳೆಯರ ಬದುಕನ್ನು ವಿಶ್ಲೇಷಿಸುತ್ತದೆ.

೩. ನಿರ್ಲಕ್ಷಿತ, ದಮನಕ್ಕೀಡಾದ ಮಹಿಳೆಯ ಬದುಕನ್ನು ಮಾತ್ರ ಲಕ್ಷ್ಯದಲ್ಲಿಟ್ಟುಕೊಂಡರೆ ಮಹಿಳೆಯರನ್ನು ಸದಾ ಶೋಷಿತ ನೆಲೆಯಲ್ಲೇ ಇರುವ ವರ್ಗವೆಂದು ಭಾವಿಸಲೆಡೆಯಾಗುತ್ತದೆ. ಆದ್ದರಿಂದ ಗತಕಾಲದಲ್ಲಿನ ಮಹಿಳೆಯರ ಇತ್ಯಾತ್ಮಕ ಹಾಗೂ

ಶಕ್ತ ಬದುಕನ್ನು ಗುರುತಿಸುವ, ಶೋಧಿಸುವ ಕೆಲಸವನ್ನು ಮುಖ್ಯವೆಂದು ಭಾವಿಸುವ ಸ್ತ್ರೀವಾದಿ ಮಹಿಳಾ ಚರಿತ್ರೆ ಹೊಸ ಇತಿಹಾಸವನ್ನು ನಿರೂಪಿಸುತ್ತದೆ.''

ಮಿಶೆಲ್ ಲೆದೋ ತತ್ತ್ವಶಾಸ್ತ್ರ ಚಿಂತನೆಯಂತೆ, ಪಿತೃಪ್ರಧಾನ್ಯತೆ, ಅದರ ಸ್ವರೂಪವನ್ನು ವಿವರಿಸಿದ್ದಾಳೆ. ಜ್ಞಾನದ ಕೊರತೆಯಿದೆ ಎಂದು ತಿಳಿದು, ಹೊಸ ಹೊಸ ವಿಷಯಗಳನ್ನು ಅರಿಯಲು ತತ್ತ್ವಶಾಸ್ತ್ರ ಪ್ರಯತ್ನಿಸಿದೆ. ಪಿತೃಪ್ರಧಾನ್ಯತೆ ತನ್ನ ಜ್ಞಾನವೇ ಸರಿ ಎಂದಿದೆ. ಅಲ್ಲದೇ ಮಹಿಳೆಗೆ ತತ್ತ್ವಶಾಸ್ತ್ರಕ್ಕಿಂತ ಗಂಡಸಿನ ಅಗತ್ಯವಿದೆ. ತರ್ಕವನ್ನಾಧರಿಸಿ ಚಿಂತಿಸುವ ಸಾಮರ್ಥ್ಯವುಳ್ಳ ಮಹಿಳೆ ಎಂದರೆ ನಿರಾಶಳಾದ ಅವಿವಾಹಿತೆ ಎಂದು. ಅಂಥ ಮಹಿಳೆಯರು ತತ್ತ್ವಶಾಸ್ತ್ರ ಅಭ್ಯಾಸದಿಂದ ತೃಪ್ತರಾಗುವರು. ಮಹಿಳೆಯರು ಸಸ್ಯ, ಹಸು ಇದ್ದಂತೆ ಎಂದು ಕಾವ್ಯಾತ್ಮಕವಾಗಿ ವಿವರಿಸಿದರು. ಸ್ತ್ರೀ ದ್ವೇಷದ ವಿರುದ್ಧ ಮಿಶೇಲ್ ತತ್ತ್ವಶಾಸ್ತ್ರವನ್ನು ಭಿನ್ನವಾಗಿ ನಿರ್ವಚಿಸಿ, 'ತತ್ತ್ವಶಾಸ್ತ್ರ ಅಂತ್ಯವಿಲ್ಲದ ಚಟುವಟಿಕೆಯ ಸ್ಥಿತಿ' ಎಂದಳು. ಇಲ್ಲಿಯೂ ಆಕೆ ಮನೋವಿಶ್ಲೇಷಣೆಯಿಂದಲೆ ತತ್ತ್ವಶಾಸ್ತ್ರವನ್ನು ನಿರೂಪಿಸಿದ್ದಾಳೆ. 'The Shadow and the name' ಕೃತಿಯು ಬಾಲಕಿಯ ಸ್ಥಿತಿಯು ನೆರಳಿನ ಸ್ಥಿತಿಯೆಂದೂ, ಬೆಳೆದ ಹೆಣ್ಣು ತನ್ನ ತಂದೆಯ ಹೆಸರನ್ನು ಹೊಂದಲು ಬಯಸುವಳೆಂದು ಹೇಳುತ್ತದೆ.

ಬೊವಾ ಮಹಿಳೆ ಕುರಿತು ಚಿಂತಿಸುತ್ತಾ ಮಹಿಳೆಯ ಕಲೆ, ಸಾಧನೆ, ರಾಜಕೀಯ, ತತ್ತ್ವಶಾಸ್ತ್ರಗಳಲ್ಲಿ ಮಹಿಳೆ ಪುರುಷನಿಗಿಂತ ಕೆಳಸ್ತರದಲ್ಲಿಯೇ ಇರುವಳು. ಈ ಸ್ಥಿತಿ ಮಹಿಳೆಗೆ ಸಹಜವಾಗಿ ಬಂದಿದೆಯೆ? ಇಲ್ಲವೆ ಯಾರಾದರೂ ಸಾಮಾಜಿಕ ಸಂದರ್ಭಕ್ಕೆ ಅನುಗುಣವಾಗಿ ಹೇರಿರುವರೇನು? ಒಂದು ವೇಳೆ ಯಾರಾದರೂ ಮಹಿಳೆ ಹೀಗೆ ಇರಬೇಕೆಂದು ಹೇಳಿದ್ದಾರೆಯೆ? ಯಾವ ಆಧಾರದಿಂದ ನಿರ್ಧರಿಸುವುದು ಎಂದು ಪ್ರಶ್ನಿಸಿದಳು. ವರ್ಜಿನಿಯಾ ವುಲ್ಫ್ ಳು ಮಹಿಳೆಗೆ ಪ್ರತ್ಯೇಕ ಕೊಠಡಿ ಇರಬೇಕೆಂದು ಹೇಳಿದ್ದನ್ನು ಬೊವಾ 'ಸ್ವಂತದ್ದು' ಎಂದು ಗುರುತಿಸಿ, ಮಹಿಳೆ ಕುಟುಂಬದಲ್ಲಿ ಗಂಡ, ಮಕ್ಕಳೊಂದಿಗೆ ಸೇರಿಕೊಂಡಿದ್ದಾಳೆ. ಇದರಿಂದ ಅವಳಿಗೆ ಸ್ವಂತಿಕೆ ಎಂಬುದು ಇಲ್ಲ, ಇನ್ನೂ ಬರೆಯುವುದು ಬಹುದೂರದ ಮಾತು ಎಂದಿದ್ದಾಳೆ.

ಶೇಕ್ಸ್‌ಪಿಯರ್ ಪುರುಷನಾದ್ದರಿಂದ ಅವನಿಗೆ ಶಿಕ್ಷಣ ದೊರೆತಿದೆ. ಒಂದು ವೇಳೆ ಶೇಕ್ಸ್ ಪಿಯರ್ ಹೆಣ್ಣಾಗಿ ಹುಟ್ಟಿದ್ದರೆ, ಆಕೆ ಹೊಲಿಗೆ, ಕಸೂತಿ, ಅಡುಗೆ ಮಾಡುತ್ತಾ ಇರುತ್ತಿದ್ದಳು. ಒಂದು ವೇಳೆ ಶಿಕ್ಷಣ ಪಡೆದರೂ ನಾಟಕಗಳನ್ನು ರಚಿಸುವಷ್ಟು ಸಾಮರ್ಥ್ಯ ಪಡೆಯುತ್ತಿರಲಿಲ್ಲ ಎಂದು ವುಲ್ಫ್ ಹೇಳಿದ್ದಾಳೆ. ಬೊವಾ 'The Second Sex' ಕೃತಿಯಲ್ಲಿ ಖ್ಯಾತ ಚಿಂತಕ Vangogh ಬದಲಿಗೆ ಹುಡುಗಿ ಹುಟ್ಟಿದ್ದರೆ, Vangoghನ ಸಾಮಾಜಿಕ ಚಿಂತನೆ, ವ್ಯಕ್ತಿತ್ವಗಳನ್ನು ಆ ಹುಡುಗಿ ಪಡೆಯುತ್ತಿದ್ದಳೆ? ಎಂದು ಪ್ರಶ್ನಿಸಿದ್ದಾಳೆ. ವಿದ್ಯೆ ದೈವದತ್ತವಾಗಿ ಬಂದರೂ, ಸಾಮಾಜೀಕರಣದಿಂದ, ಪರಿಸರ ಒತ್ತಡಗಳಿಂದಾಗಿ ಅಲ್ಲಿಯೇ ಮರೆಯಾಗಿ ಹೋಗುತ್ತದೆ. 'ಸ್ಪುಗಲ್'ದು ಸಹ ಇದೇ ಅಭಿಪ್ರಾಯ. ಪ್ರತಿಯೊಬ್ಬ ಮಹಿಳೆಯ ಪ್ರತಿಭೆ, ಮಾನವ ಕುಲಕ್ಕೆ ಸಿಗದೇ ಸಸಿಸಿ ಹೋಗುತ್ತದೆ ಎಂದು ಇತ್ತೀಚಿನ ವರ್ಷಗಳಲ್ಲಿ ಮಹಿಳೆಯರಿಗೆ ಉದ್ಯೋಗದ, ಮತದಾನದ ಹಕ್ಕುಗಳು ದೊರೆತಿವೆ. ಅವರೆ ಹೆಚ್ಚಿನ ಸಾಧನೆಗಳೇನು ಆಗಿಲ್ಲ. ಪುರುಷರು ಸಮಾನ ಅವಕಾಶ ಪಡೆದಿರುವರು ಎನ್ನುವುದು ಭ್ರಮೆ. ಫ್ರಾನ್ಸ್‌ನಲ್ಲಿ ಮಹಿಳಾ ಇಂಜಿನಿಯರ್, ವಾಸ್ತುತಜ್ಞೆ, ವಕೀಲರು ಇದ್ದಾರೆ. ಅವರೂ ಪ್ರಸಿದ್ಧರಾಗಿಲ್ಲ. ಪುರುಷರ ಸಂಖ್ಯೆಯು ಮಹಿಳೆಯರ ಸಂಖ್ಯೆಗಿಂತ ಹೆಚ್ಚಿದೆ. ಆದ್ದರಿಂದ ಮಹಿಳೆಯರ ಸಾಧನೆಗಳು ಗೌಣವಾಗಿವೆ.

ಅಲ್ಲದೆ ಮಹಿಳೆಯ ಪ್ರತಿಭೆಯನ್ನು ಪೋಷಿಸುವ, ಬೆಳೆಸುವ ಅವಕಾಶಗಳು ಇಲ್ಲವಾಗಿವೆ. ಆಕೆಯ ಪ್ರತಿಭೆಯನ್ನು ತೋರಿಸಲು ಅವಕಾಶವಿಲ್ಲ ಎನ್ನಲಾಗಿದೆ.

ಜಾಕ್ ದರೀದನ 'ನಿರಚನ ಸಿದ್ಧಾಂತ'ದ ಹಿನ್ನೆಲೆಯಲ್ಲಿಯೇ ಫ್ರೆಂಚ್ ಸ್ತ್ರೀವಾದಿಗಳು ಸ್ತ್ರೀಯಾತ್ಮಕತೆಯನ್ನು ವಿವರಿಸಿಕೊಂಡಿದ್ದಾರೆ. ವಿಶ್ವದ ವಸ್ತುಗಳೆಲ್ಲ ಪುರುಷ ಗ್ರಹಿಕೆಯ ದ್ವಂದ್ವದಲ್ಲಿವೆ. ಅವನು ಪುರುಷ-ಸ್ತ್ರೀ, ತಾನು-ಇತರ, ವೈಚಾರಿಕ-ಅವೈಚಾರಿಕ, ಕರ್ತೃ-ಕರ್ಮ, ಬಿಳಿಯ-ಕರಿಯ, ಪ್ರಭು-ಪ್ರಜೆ ಇತ್ಯಾದಿ ಶ್ರೇಣೀಕರಣಗೊಂಡ ಸಮಾಜವನ್ನು ರೂಪಿಸಿದ್ದಾನೆ. ಈ ಸಮಾಜ ಅವನ ಅನುಕೂಲಕ್ಕೆ ರೂಪಿತವಾದದ್ದು. ಭಾಷೆಯ ಸಂಕೇತಿಕವೂ ಇದೇ ಬಗೆಯ ಪುರುಷ ಪ್ರಧಾನ್ಯತೆಯಿಂದಲೆ ಕೂಡಿದೆ.

ಲ್ಯೂಸ್ ಇರಿಗೆರೆಯು ಮಹಿಳೆಯ ಅಭಿವ್ಯಕ್ತಿ ಪುರುಷನ ಆಚೆಯೂ ಇದೆ. ಸ್ತ್ರೀಯನ್ನು ಬಂಧಿಸುವ ಸಾಂಕೇತಿಕ ವ್ಯವಸ್ಥೆಯನ್ನು ಪ್ರತಿಭಟಿಸಬೇಕು. ಸ್ತ್ರೀಯ ಲೈಂಗಿಕತೆಯನ್ನು ಪುರುಷ ಲೈಂಗಿಕತೆಗಿಂತ ಉತ್ತಮ, ಸ್ತ್ರೀಯ ಸಮಗ್ರ ಶರೀರ ಲೈಂಗಿಕ ಸುಖಾನುಭವ ನೀಡುವ ಸಾಧ್ಯತೆ ಇದೆ ಎಂದಿದ್ದಾಳೆ. ಸ್ತ್ರೀಯು ಪುರುಷನ ಅಧಿಕಾರಕ್ಕೆ ಸವಾಲೆಸೆಯುವ, ವಿರುದ್ಧ ನೆಲೆಯಲ್ಲಿ ಚಿಂತಿಸಿ ಬರೆದು ವಿಮೋಚನೆ ಪಡೆಯಬೇಕು ಎಂದಿರುತ್ತಾಳೆ.

## ೭. ಕಪ್ಪು ಸ್ತ್ರೀವಾದ

ಜನಾಂಗ, ಲಿಂಗ, ವರ್ಗಗಳು ಮಹಿಳೆಯ ಬದುಕಿನ ಮೇಲೆ ಹೇಗೆ ಪ್ರಭಾವ ಬೀರಿವೆ ಎಂಬುದನ್ನು ವಿಮರ್ಶಿಸುವುದೇ 'ಕಪ್ಪು ಸ್ತ್ರೀವಾದ'. ಈ ವಾದದ ಪ್ರಮುಖ ಚಿಂತಕರು ಶುಲಾಮಿತ್ ಫೈರ್‌ಸ್ಟಾನ್, ಗ್ಲೋರಿಯಾ ಜಿ.ಹಲ್, ಲಾರಿನ್ ಬೆಥೆಲ್, ಇಲಾನ್ ಸ್ಕಾಟ್, ಕ್ರಿಶ್ಚಿಯನ್ ಬಾರ್ಬರಾ, ವಿ.ಕಾರ್ಬಿಯ, ಆಲಿಸ್ ವಾಕರ್ ಇನ್ನು ಮೊದಲಾದವರು. ಬಿಳಿ ಸ್ತ್ರೀವಾದದ ಸಾಹಿತ್ಯ ಬೆಳವಣಿಗೆಯಾಗಿ ಕಪ್ಪು ಸ್ತ್ರೀವಾದದ ಸಾಹಿತ್ಯಕ್ಕೆ ಅವಕಾಶ ಇರದೆ ಹೋಯಿತು. ಮಹಿಳೆಯರಿಗೆ ಪ್ರತ್ಯೇಕವಾಗಿದ್ದ ಸಾವಿರಾರು ಪುಸ್ತಕ, ಪತ್ರಿಕೆಗಳು ಇದ್ದರೂ ಬೆರಳಿಣಿಕೆಯಷ್ಟು ಪುಸ್ತಕ, ಪತ್ರಿಕೆಗಳ ಕೆಲವೇ ಪುಟಗಳಲ್ಲಿ ಮಾತ್ರ. ಕಪ್ಪು ಮಹಿಳೆ ಮತ್ತು ಕಪ್ಪು ಸ್ತ್ರೀವಾದ ಕುರಿತು ವಿವರಣೆ ಇತ್ತು. ಹತ್ತೊಂಬತ್ತನೆಯ ಶತಮಾನದಲ್ಲಿ ಅಂತರ ಜನಾಂಗದ ಗುಲಾಮಗಿರಿ, ವಿರೋಧಿ ಚಳವಳಿಗಳಲ್ಲಿ ಅಮೆರಿಕದ ಮಹಿಳೆಯರು ಭಾಗವಹಿಸಿದ್ದರು. ಕಪ್ಪು ಜನಾಂಗಕ್ಕೂ ಸೃಜನಶೀಲ ಅಭಿವ್ಯಕ್ತಿ ಬೇಕು ಎನ್ನುವಾಗ ಕಪ್ಪು ಲೇಖಕಿಯರು ತಮ್ಮ ಪೂರ್ವ ಲೇಖಕಿಯರ ಬಗ್ಗೆ ತಿಳಿಯಲು ಮತ್ತು ಅವರ ಅನುಭವಗಳೊಂದಿಗೆ ತಮ್ಮ ಅನುಭವಗಳನ್ನು ಹಂಚಿಕೊಳ್ಳಲು ಉತ್ಸಾಹದಿಂದ ಕೂಡಿದ್ದರು. ಆದ್ದರಿಂದ ತಮ್ಮ ಪೂರ್ವ ಲೇಖಕಿಯರ ಕುರಿತು ಶೋಧನೆ ಆರಂಭಿಸಿದರು. ಹೀಗೆ ಶೋಧನೆ ಕೈಗೊಂಡವರಲ್ಲಿ ಆಲಿಸ್ ವಾಕರಳು ಪ್ರಮುಖಳು. ಬೌದ್ಧಿಕವಾಗಿ ಚಿಂತಿಸದೇ ಇದ್ದ ಸ್ಥಿತಿ ತಿಳಿಯಿತು. ಇಂಥ ಸ್ಥಿತಿಯ ಸಂದರ್ಭದಲ್ಲಿಯೂ ಹಲವು ಶತಮಾನಗಳ ಹಿಂದೆ 'ಫಿಲ್ಲಿಸ್ ವೀಟ್ ಲೇ' ಎಂಬಾಕೆ ಪ್ರಮುಖ ಲೇಖಿಕಿ ಆಗಿದ್ದಳು. ಈಕೆ ಬಿಳಿ ಕವಿಗಳನ್ನು ಅನುಕರಣೆ ಮಾಡುತ್ತಿದ್ದುದು ಪ್ರಸಿದ್ಧಿಗೆ ಕಾರಣವೂ ಆಗಿತ್ತು. ವರ್ಜಿನಿಯಾ ವುಲ್ಫ್, ಲೇಖಕಿಯರಿಗೆ ಸ್ವಂತ ಕಟ್ಟಡ ಇರಬೇಕು ಎಂದು ಹೇಳಿದ್ದರೂ ವೀಟ್‌ಲೇಗೆ ಸ್ವಂತ ತನ್ನನ್ನು ತಾನು ಹೊಂದುವುದು ಆಗಲಿಲ್ಲ. ಆಕೆ ಅನಾರೋಗ್ಯದಿಂದ ಇದ್ದಳು. ಆದಾಗ್ಯೂ ದಾಸಿಯಾಗಿ ಕಾರ್ಯ ನಿರ್ವಹಿಸಿದಳು. ಒಂದು ವೇಳೆ ಬಿಳಿ ಜನಾಂಗದಲ್ಲಿ ಜನಿಸಿದ್ದರೆ ಈಕೆಯು ಸಹ ಸಮಾಜದಲ್ಲಿ ಪ್ರಮುಖ ಸ್ಥಾನವನ್ನು ಪಡೆಯುತ್ತಿದ್ದಳು. ೧೮೩೦ರಲ್ಲಿ

ಅಮೆರಿಕಾದ ಗುಲಾಮಿ ವಿರೋಧಿ ಚಳವಳಿಕಾರರು ಈಕೆಯ ಕವಿತೆಗಳನ್ನು ಪ್ರಕಟಿಸಿ ಕಪ್ಪು ಜನರು ಬರೆಯಲು ಸಾಧ್ಯ ಎಂಬುದನ್ನು ಸಾಬೀತು ಮಾಡಿದರು. ಇದರಿಂದ ಬಿಳಿ ಸ್ತ್ರೀವಾದದ ನಿರಾಕರಣೆ, ಕಪ್ಪು ಮಹಿಳೆಯಾಗಿ ಓದುವ ಅನುಭವಗಳು ವ್ಯಾಪಕವಾಗಿ ಕಪ್ಪು ಸ್ತ್ರೀವಾದದ ಉದಯಕ್ಕೆ ಕಾರಣವಾಯಿತು. ಇದೇ ಸಂದರ್ಭದಲ್ಲಿ `ಬಾರ್ಬರ` ಎಂಬಾಕೆ ಕಪ್ಪು ಮಹಿಳೆಯ ಸಾಹಿತ್ಯ ಬೆಳವಣಿಗೆ ಆಗದಿದ್ದರೆ ಆಕೆ ಇನ್ನೂ ಕೆಳಸ್ತರಕ್ಕೆ ಹೋಗುವ ಸಂಭವವಿದೆ ಎಂದು ಹೇಳಿದಳು. ಆನ್ನ ಪೆತ್ರಿಯ `ದಿ ಸ್ಟ್ರೀಟ್` ಕೃತಿಯನ್ನು, ರಾಬರ್ಟ್ ಬೋನ್ `ದಿ ನಿಗ್ರೋ ನಾವೆಲ್ ಇನ್ ಅಮೆರಿಕಾ`ದಲ್ಲಿ ಕೊಳಚೆ ಪ್ರದೇಶಗಳ ಕಪ್ಪು ನಿವಾಸಿಗಳ ದುರಂತ ಬದುಕಿನ ಸಾಮಾಜಿಕ ಜೀವನವನ್ನು ವಿವರಿಸಿದರು.

ಕಪ್ಪು ಮಹಿಳೆಯ ಶೋಷಣೆಗೆ ಬರೀ ಪಿತೃ ಪ್ರಧಾನ್ಯತೆಯೊಂದೇ ಕಾರಣವಾಗಿಲ್ಲ. ಬದಲಾಗಿ ಮಹಿಳೆಯು ಕಾರಣ ಆಗಿರುವಳು. ಬಿಳಿ ಮಹಿಳೆಯು ತನ್ನ ಗಂಡನ ಶ್ರೀಮಂತಿಕೆಯಿಂದ ಪುರುಷನ ಜೊತೆ ಸೇರಿ ಕಪ್ಪು ಮಹಿಳೆಯನ್ನು ತಿರಸ್ಕಾರದಿಂದ ಕಾಣುತ್ತಾಳೆ. ಅಕ್ಕ-ತಂಗಿಯ ಮಾತುಗಳು ಕೇವಲ ಅಲಂಕಾರಿಕವಾಗಿ ಇರುತ್ತವೆ. ಕಪ್ಪು ಮಹಿಳೆಯ ಜೊತೆಗಿನ ಸ್ನೇಹ, ಸಂಬಂಧಗಳಲ್ಲಿಯೂ ಅಪ್ರಮಾಣಿಕಳಾಗಿ ಇರುತ್ತಾಳೆ. ಆದ್ದರಿಂದ ಕಪ್ಪು ಸ್ತ್ರೀವಾದ ಬಿಳಿ ಮಹಿಳೆಯನ್ನು ಸಂಶಯದಿಂದ ನೋಡುವುದೇ ಆಗಿದೆ. ಜಾಕಿ ಹಾಗ್ಗಿನ್ ಎಂಬಾಕೆ ಒಂದೇ ಜಾತಿಯ ಲಿಂಗಕ್ಕೆ ಸೇರಿದ ಮಹಿಳೆಯರಲ್ಲಿಯೂ ಸಮಾನತೆ ಇರುವುದಿಲ್ಲ ಎಂದು ಹೇಳಿ, ಮಹಿಳೆಯರು ಲಿಂಗಗಳಿಂದ ಸಮಾನತೆ ಬಯಸದೇ ವರ್ಗದಿಂದ ಸಮಾನತೆ ಬಯಸುತ್ತಾರೆ ಎಂದಿದ್ದಾಳೆ. ಶ್ರೀಮಂತ ಮಹಿಳೆ ತನ್ನ ಅಂತಸ್ತಿಗೆ ಅನುಗುಣವಾಗಿರುತ್ತಿದ್ದು, ಕೆಳವರ್ಗದ ಮಹಿಳೆಯರ ಜೊತೆ ಸೇರಿ ಜನಪರ ಹೋರಾಟಗಳಲ್ಲಿ ಭಾಗಿಯಾಗಲು ಬಯಸುವುದಿಲ್ಲ. ಇಂಥ ಹೋರಾಟಗಳಲ್ಲಿ ಕಪ್ಪು ಗಂಡಸು, ಬಿಳಿ ಗಂಡಸು ಮಾತ್ರ ಭಾಗವಹಿಸುತ್ತಾರೆ. ವರ್ಗ ಪ್ರಜ್ಞೆ ಇರುವುದರಿಂದ ಮಹಿಳಾ ಸಂಘಟನೆ ಆಗುವುದಿಲ್ಲ. ಬಿಳಿ ಮಹಿಳೆ ಅಡುಗೆ ಮನೆಯಿಂದ ಹೊರಬರಲು ಪ್ರಯತ್ನಿಸಿದರೆ ಕಪ್ಪು ಮಹಿಳೆ ಅಡುಗೆ ಮನೆಯನ್ನು ಪ್ರವೇಶಿಸಲು ಪ್ರಯತ್ನಿಸುವಳು. ಇದರಿಂದಾಗಿ ಮಹಿಳಾ ಚಳವಳಿಯು ಐಕ್ಯತೆಯಿಂದ ಕೂಡದೆ ಇದ್ದು, ಯಶಸ್ವಿಯೂ ಆಗುವುದಿಲ್ಲ. ಆದ್ದರಿಂದ ಕಪ್ಪು ಸ್ತ್ರೀವಾದವು ಬಿಳಿ ಸ್ತ್ರೀವಾದದ ಗುರಿ, ಉದ್ದೇಶಗಳನ್ನು ಹೊಸದಾಗಿ ನಿರ್ವಚಿಸಿತು. ಶುಲಾಮಿತ್ ಫೈರ್ ಸ್ಟೋನಳು "ಜನಾಂಗವಾದವೆಂದರೆ ವಿಸ್ತೃತಗೊಂಡ ಲೈಂಗಿಕ ವಿದ್ಯಾಮಾನವೇ ಆಗಿದೆ. ಕುಟುಂಬದೊಳಗಿನ ಅಧಿಕಾರ ಶಕ್ತಿಯ ಏಣಿ-ಶ್ರೇಣೀಕರಣದಿಂದ ವ್ಯಕ್ತಿಯ ಮಾನಸಿಕ ಲಿಂಗತ್ವವು ರೂಪುಗೊಳ್ಳುವಂತೆ ಜನಾಂಗವಾದವೂ ಸಿದ್ಧಗೊಳ್ಳುತ್ತದೆ. ಅಧಿಕಾರ ಶಕ್ತಿಯ ಅಸಮಾನ ಹಂಚಿಕೆಯಿಂದಾಗಿ ಜನಾಂಗಗಳ ನಡುವಿನ ದೈಹಿಕ ಭಿನ್ನತೆ, ವಿಶಿಷ್ಟತೆಗಳು ಸಾಂಸ್ಕೃತಿಕವಾಗಿ ಮುಖ್ಯವಾಗುತ್ತವೆ. ಹೀಗೆ ಲಿಂಗ, ವರ್ಗ, ಜನಾಂಗಗಳು ಸಾದೃಶ್ಯ ನೆಲೆಯಲ್ಲಿ ರೂಪುಗೊಳ್ಳುತ್ತವೆ" ಎಂದು 'The Dialectic of Sex' ಕೃತಿಯಲ್ಲಿ ವಿಶ್ಲೇಷಿಸಿದ್ದಾಳೆ. ಜನಾಂಗವಾದವನ್ನು 'The Sexism of the family of man' ಎಂದು ನಿರೂಪಿಸಿದ್ದಾಳೆ.

ಜನಾಂಗವಾದವು ಕಪ್ಪು ಮಹಿಳೆಯ ಶೋಷಣೆಯಲ್ಲಿ ಹೇಗೆ ಭಾಗಿಯಾಗಿದೆ ಎಂದು ಕುಟುಂಬದ ರೂಪಕದ ಮುಖೇನ ತಿಳಿಸಿದ್ದಾಳೆ. ಬಿಳಿಯ ಗಂಡಸು ಗಂಡನಾಗಿ ಬಿಳಿಯ ಹೆಂಗಸು ಹೆಂಡತಿಯಾಗಿ ಕಪ್ಪು ಮಹಿಳೆ ಬೇರೊಬ್ಬ ಹೆಂಗಸಾಗಿದ್ದರೆ ಕಪ್ಪು ಗಂಡಸು ತಲೆ ಹಿಡುಕನಾಗಿರುತ್ತಾನೆ. ಬಿಳಿಯ ಹೆಂಗಸು ವೈಯಕ್ತಿಕ ಆಸ್ತಿಯಂತೆ ಹೆಂಡತಿಯಾಗಿ, ಕಪ್ಪುಮಹಿಳೆ ಸಾರ್ವಜನಿಕ ಆಸ್ತಿಯಂತೆ ವೇಶ್ಯೆ ಆಗಿರುತ್ತಾಳೆ. ಕಪ್ಪು ಗಂಡಸು ಮಧ್ಯ

ಆಗದೆ ಇದ್ದು, ಪುರುಷತ್ವದ ತನ್ನ ಗುರುತನ್ನು ಬಿಟ್ಟು ಸಲಿಂಗಿಯಾಗಿಯೂ ಇರದೆ ಅತಿ ಕೆಳದರ್ಜೆಯ ವ್ಯಕ್ತಿಯಾಗುವ ತನ್ನ ಪೌರುಷತ್ವವನ್ನು ತೋರಿಸಲು ಕಪ್ಪು ಮಹಿಳೆ ಮೇಲೆ ಅಧಿಕಾರವನ್ನು ಚಲಾಯಿಸುವ ಈ ಪಾತ್ರ ತಲೆಹಿಡುಕ ವೇಶ್ಯೆಯೊಂದಿಗೆ ಸಂಬಂಧವನ್ನು ಗುರುತಿಸಿಕೊಳ್ಳುವಂತಿರುತ್ತದೆ. ಪರೋಕ್ಷ ಹಾಗೂ ಪ್ರತ್ಯಕ್ಷವಾಗಿ ಕಪ್ಪು ಮಹಿಳೆಯ ಶೋಷಣೆಗೆ ಕಾರಣವಾಗುವ ಅಮೆರಿಕೆಯ ಎಲ್ಲ ಬಿಳಿ ಕುಟುಂಬಗಳು, ಕಪ್ಪು ಮಹಿಳೆಯರ ವೇಶ್ಯಾಸ್ಥಾನಗಳ ಬೆಂಬಲದೊಂದಿಗೆ ದೃಢವಾಗಿ ನಿಂತಿವೆ ಎಂದು ಫ್ಲೈರ್‌ಸ್ಟನ್ ವ್ಯಂಗವಾಗಿ ಹೇಳಿದ್ದಾಳೆ. ಕಪ್ಪು ಕುಟುಂಬಕ್ಕೆ ರಕ್ಷಣೆ ಇರುವುದಿಲ್ಲ. ಹೀಗೆ ಜನಾಂಗವಾದ, ಲೈಂಗಿಕತೆಯು ಕೌಟುಂಬಿಕ ನೆಲೆಯಲ್ಲಿ ಒಂದಕ್ಕೊಂದು ಸೇರಿ ಪ್ರಚಾರ ಹೊಂದುತ್ತದೆ. ಒಂದು ವೇಳೆ ಬಿಳಿಯ ಹೆಂಗಸಿನ ತಲೆ ಹಿಡುಕನಾಗಿ ಕಾರ್ಯ ನಿರ್ವಹಿಸಬೇಕಾಗಿ ಬಂದಲ್ಲಿ ಸಹಜವಾಗಿ ಆತ ಬಿಳಿ ಗಂಡಸಿನ ಮೇಲೆ ದ್ವೇಷ ಸೇಡುಗಳನ್ನು ವ್ಯಕ್ತಪಡಿಸುತ್ತಾನೆ. ಈ ಅಧಿಕಾರದಿಂದ ಕಪ್ಪು ಸಮುದಾಯಗಳು ಮತ್ತೆ ಕುಟುಂಬಗಳಾಗಿ, ಕಪ್ಪು ಗಂಡಸು ತಂದೆಯಂತೆ ಕಾರ್ಯ ನಿರ್ವಹಿಸಿದರೆ ಕಪ್ಪುಮಹಿಳೆ ಹೆಂಡತಿಯಾಗಿ ಕಾರ್ಯ ನಿರ್ವಹಿಸುವಳು ಎಂದಿದ್ದಾಳೆ.

ಕ್ಲೈವರ್ 'Soul on Ice' ಕೃತಿಯಲ್ಲಿ ಪುರುಷತ್ವವನ್ನು ಸ್ಥಾಪಿಸಿಕೊಳ್ಳುವಾಗ ಮಹಿಳೆಯನ್ನು ಆಭರಣದಂತೆ ಉಪಯೋಗಿಸಿಕೊಳ್ಳುತ್ತಾನೆ. ಆಗ ಮಹಿಳೆ ತಾನೊಬ್ಬ ಜೀವಿಯೆಂದು ಭಾವಿಸಿಕೊಳ್ಳದೆ ಕಪ್ಪು ಪುರುಷನ ಹೋರಾಟದಲ್ಲಿ ಯಶಸ್ವಿ ಸಿಗಲು ಸಹಾಯಕಳಾಗಿರುತ್ತಾಳೆ. ಅಲ್ಲದೆ ಸಿದ್ಧ ಮಹಿಳೆಯ ಪಾತ್ರವನ್ನು ನಿರ್ವಹಿಸಲು ಮುಂದಾಗಿ ಸಂಸ್ಕೃತೀಕರಣದಿಂದ ಉಂಟಾದ ಲಿಂಗ ವ್ಯವಸ್ಥೆಯ ಅನುಭವ, ಅದರಲ್ಲಿ ಕಪ್ಪು ಮಹಿಳೆಯಾಗಿ ಹೊಂದಿರುವ ಅನುಭವಗಳನ್ನು ಕಪ್ಪು ಸ್ತ್ರೀವಾದ ಶೋಧಿಸಿ ಕೆಳಸ್ತರಕ್ಕೆ ನೂಕಿದ ಲೇಖಕಿಯರನ್ನು ಮರುಸ್ಥಾಪಿಸುವ ಉದ್ದೇಶವನ್ನು ಹೊಂದಿತು. ಅದಕ್ಕಿಂತ ಮೊದಲು ಸ್ತ್ರೀವಾದದ ಪ್ರಗತಿಗೆ ಅಫ್ರೊ-ಅಮೆರಿಕನ್ ಸಾಹಿತ್ಯ ವಿಮರ್ಶೆಯು ಲಿಂಗ ವ್ಯವಸ್ಥೆಗೆ ಸಂಬಂಧಪಟ್ಟ ವಿಷಯಗಳನ್ನು ಮೂರು ಬಗೆಗಳಲ್ಲಿ ಅಧ್ಯಯನಕ್ಕೆ ಒಳಪಡಿಸಿತು. ಅವು -

೧. "ಮಹಿಳೆಯರ ಲೈಂಗಿಕ ಸಿದ್ಧ ರೂಪಗಳುಳ್ಳ ಆತ್ಮ ಚರಿತ್ರಾತ್ಮಕ ಕಥನಗಳು
೨. ಕಪ್ಪು ಕಲಾ ಚಳವಳಿಯಲ್ಲಿನ ಪುರುಷಾಧಿಕಾರದ ಸಮರ್ಥನೆ
೩. ಮಹಿಳೆಯರ ಪಠ್ಯಗಳಿಗೆ ಸಮಾನ ಬೆಲೆ ಕೊಡದೆ ಸಾಹಿತ್ಯ ಚರಿತ್ರೆಯ ಬಗೆಗೆ ಲಿಂಗ ವ್ಯವಸ್ಥೆಯು ಕುರುಡಾಗಿರುವ ಸ್ಥಿತಿ"[೨೨]

ಡಾರ್ವಿನ್ ಟರ್ನರ್ "In a minor Chordi three Afro-American writers and their search for Identity" ಕೃತಿ ಪ್ರಕಟಿಸಿದ. ಇವನು ಮೂರು ವಿಭಿನ್ನ ಗುಣ ಮೌಲ್ಯಗಳ ಕಾದಂಬರಿಕಾರರನ್ನು ಆಯ್ದುಕೊಂಡ. ಅವರಲ್ಲಿ ಇಬ್ಬರು ಪುರುಷ ಕಾದಂಬರಿಕಾರರು ಒಬ್ಬಳು ಕಾದಂಬರಿಕಾರ್ತಿ (ಜೊರುಸೀಲೆ ಹರಸ್ಟನ್)ಯಾಗಿದ್ದಳು. ಟರ್ನರ್ ಇವರನ್ನು ಕುರಿತು ತೌಲನಿಕ ಅಧ್ಯಯನ ಕೈಗೊಂಡ. ಈ ಇಬ್ಬರು ಪುರುಷ ಕಾದಂಬರಿಕಾರರ ವೈಯಕ್ತಿಕ ಜೀವನ ಅಡೆತಡೆ ಬಂದರೂ ಅವರ ಸಾಹಿತ್ಯವನ್ನು ಸಮರ್ಥಿಸುವ ಪ್ರಯತ್ನ ಮಾಡಿದ. ಆದರೆ ಹರಸ್ಟಿನ್‌ಳ ಗುಣಗಳನ್ನು ಮಾತ್ರ ಹೊಗಳಿ ಅವಳ ಸಾಹಿತ್ಯವನ್ನು ಸಮರ್ಥಿಸಲಿಲ್ಲ, ಗಮನಿಸಲಿಲ್ಲ. ಹರಸ್ಟಿನ್‌ಳ "The Eyes were watching God" ಕೃತಿಯಲ್ಲಿ ದಬ್ಬಾಳಿಕೆಗಳಿಂದ ನೊಂದ ಮಹಿಳೆ, ತನ್ನ ಗಂಡನ ಸಾವಿನ ಕೊನೆಯ ಕ್ಷಣದಲ್ಲಿ ಸಮಾಧಾನ ಹೇಳುವಂತೆ ಕಟು ಮಾತುಗಳನ್ನು

ವ್ಯಕ್ತಪಡಿಸಿದ್ದಾಳೆ. ನೊಂದ ಹೆಣ್ಣಿನ ದನಿಯನ್ನು ಸ್ತ್ರೀವಾದ ಗುರುತಿಸುತ್ತದೆ. ಆದರೆ ಟರ್ನರ್ ಈ ಮಾತುಗಳು ಕಪ್ಪು ಜನಾಂಗದ ಪುರುಷನ ಕುರಿತಂತೆ ದ್ವೇಷದವು ಎಂದಿದ್ದಾನೆ. ಬಾರ್ಬರ ಎಂಬಾಕೆ ಟರ್ನರ್ ಹರಸ್ಟನ್‌ಳಿಗೆ ತುಂಬಾ ಅನ್ಯಾಯ ಮಾಡಿದ ಎಂದಿದ್ದಾಳೆ. ಇದೇ ರೀತಿ ಆಲೀಸ್ ವಾಕರ್‌ಳು ಕಪ್ಪು ಸ್ತ್ರೀವಾದದ ನಿರ್ಲಕ್ಷ್ಯಕ್ಕೆ ಕಾರಣಗಳನ್ನು ಹೇಳಿ ಪುರುಷ ಬರೆಹಗಾರರು ಕಪ್ಪು ಮಹಿಳೆಯ ಜೀವನದ ಬಗ್ಗೆ ಮಾತನಾಡುತ್ತಾರೆಯೆ ಹೊರತು ಆಕೆಯ ಕೃತಿಯನ್ನು ವಿಮರ್ಶಿಸುವುದಿಲ್ಲ ಎಂದು ಹೇಳಿದ್ದಾಳೆ.

ಬಾರ್ಬರಳು ಕಪ್ಪು ಸ್ತ್ರೀವಾದಿ ಸಾಹಿತ್ಯದ ನಿರ್ಲಕ್ಷ್ಯಕ್ಕೆಈ ಕೆಳಗಿನ ಕಾರಣಗಳನ್ನು ಗುರುತಿಸಿದ್ದಾಳೆ.

೧ "ಚರಿತ್ರೆ, ಸಾಹಿತ್ಯ, ಸಂಸ್ಕೃತಿಯಲ್ಲಿ ಕಪ್ಪು ಮಹಿಳೆಯರ ಅನುಭವವನ್ನು ಅವಲೋಕಿಸುವ ಯತ್ನ ಮಾಡುವವರೆಗೆ ಬೆಂಬಲ ನೀಡುವ ಶಕ್ತಿ ಕೊಡುವ ರಾಜಕೀಯ ಚಳವಳಿಯೂ ಇರಲಿಲ್ಲ.

೨. ಕಪ್ಪು ಮಹಿಳೆಯರ ಬಗ್ಗೆ ಬರೆಯುವವರಿಗೆ ಮಾತನಾಡುವವರಿಗೆ ಆ ಕುರಿತು ಕನಿಷ್ಟ ಪ್ರಜ್ಞೆ, ಗೌರವವನ್ನು ಒತ್ತಾಯಿಸುವ ಯಾವುದೇ ರಾಜಕೀಯ ವ್ಯವಸ್ಥೆ ಇರಲಿಲ್ಲ.

೩. ಕಪ್ಪು ಮಹಿಳೆಯ ಕಲೆಯ ಅಧ್ಯಯನದಲ್ಲಿ ಬಳಸಬಹುದಾದ ಗ್ರಹಿಕೆಗಳನ್ನು ಕೊಡುವ ಬೆಳೆದ ಕಪ್ಪು ಸ್ತ್ರೀವಾದಿ ರಾಜಕೀಯ ತತ್ತ್ವವಿಲ್ಲ."[೨೩]

ಆಲೀಸ್ ವಾಕರಳು "In Search of Mothers Gardens" ಕೃತಿಯಲ್ಲಿ ಕಪ್ಪು ಮಹಿಳೆಯ ಬದುಕು, ಗುಲಾಮಿತ್ವ, ಜನಾಂಗವಾದದಿಂದ ಆರ್ಥಿಕ, ಸಾಮಾಜಿಕ, ರಾಜಕೀಯ, ಧಾರ್ಮಿಕ ಕ್ಷೇತ್ರಗಳಲ್ಲಿ ಹೇಗೆ ತುಳಿತಕ್ಕೆ ಒಳಗಾಗಿದೆ ಎಂದು ದಾಖಲಿಸಿದ್ದಾಳೆ. ಆಫ್ರೋ-ಅಮೆರಿಕನ್ ಸಾಹಿತ್ಯ ಚರ್ಚೆಯನ್ನು ಲಿಂಗ ಸಂಬಂಧಿ ನೆಲೆಯಿಂದ ನೋಡಲು ಸ್ತ್ರೀವಾದಿಗಳು ಪ್ರಯತ್ನಿಸಿದರು. ತಮ್ಮ ಸಾಹಿತ್ಯಕ್ಕೆ 'ಕಪ್ಪು ಮಹಿಳಾ ಬರವಣಿಗೆ' ಎಂದು ಗುರುತಿಸಿಕೊಂಡರು. ಹೇಜೆಲ್ ವಿ. ಕಾರ್ಬೆಯ 'Reconstructing Womanhood? The Emergency of the black Woman Novelist' ಕೃತಿಯನ್ನು ಬರೆದಳು. ಇದು ಪೂರ್ವದ ಕಪ್ಪು ಲೇಖಕಿಯರ ಬರೆಹಗಳನ್ನು ಮಹಿಳಾತನ, ಜನಾಂಗ, ವಸಾಹತುವಾದ ಇತ್ಯಾದಿ ವಿಷಯಗಳೊಂದಿಗೆ ವಿವರಿಸಿ ಸಮಕಾಲೀನ ಸಾಹಿತ್ಯವನ್ನು ಮಾರ್ಕ್ಸ್‌ವಾದಿ ನೆಲೆಯಿಂದ ಗುರುತಿಸಿದ್ದಾಳೆ.

ಆಲಿಸ್ ವಾಕರಳು 'Every day use' ಎಂಬ ಸಣ್ಣಕತೆ ಬರೆದು ಅದರಲ್ಲಿ ಕಪ್ಪು ಮಹಿಳೆಯ ಸೃಜನಶೀಲತೆ ಅರಳುವ, ಬೆಳೆಯುವ ಮುಂದುವರೆಯುವ ಬಗೆಯನ್ನು ಸಾಂಕೇತಿಕವಾಗಿ ತಿಳಿಸಿದ್ದಾಳೆ. ಕಪ್ಪು ಮಹಿಳೆಯ ತಾಯ್ತನವನ್ನು ಬಿಳಿ ಮಹಿಳೆ ಅಲ್ಲಗಳೆಯುವ ಸಂದರ್ಭವನ್ನು ಕುರಿತು 'Meridian' ಕೃತಿಯಲ್ಲಿ ತಿಳಿಸಿರುವಳು. ಬಿಳಿ ಹೆಂಗಸಿನ ಮಕ್ಕಳು ಹೊಂದುವ ಸೌಲಭ್ಯಗಳನ್ನು ನೋಡಿದ ಕಪ್ಪು ಮಹಿಳೆ, ತನ್ನ ಮಕ್ಕಳನ್ನು ಕೊಳಗೇರಿಗೆ ಬಿಡದೆ ಬೇರೆ ಸೌಲಭ್ಯಗಳನ್ನು ಕೇಳಿ ಅದಕ್ಕಾಗಿ ಅವಳ ತಾಯ್ತನವನ್ನು ಅಲ್ಲಗಳೆಯಲು ಮುಂದಾಗುತ್ತಾಳೆ ಎಂದಿದ್ದಾಳೆ. 'ಬಾರ್ಬರ' ೧೯೪೦ರ ವೇಳೆಗೆ ಬಿಳಿ ಮತ್ತು ಕಪ್ಪು ಮಹಿಳೆಯರನ್ನು ಒಂದೇ ರೀತಿಯಿಂದ ಗುರುತಿಸಿ ಅವರಿಬ್ಬರಿಗೂ ಅವಲಂಬಿತರಾಗಿದ್ದರೂ, ಅವರ ಆದರ್ಶಗಳು ಬೇರೆ ಬೇರೆ ಆಗಿರುತ್ತವೆ. ಕಪ್ಪು ಮಹಿಳೆಯ ಚಿತ್ರವನ್ನು ಯಾವಾಗಲೂ ಕಪ್ಪು, ದಪ್ಪ, ಧಾರ್ಮಿಕತೆಯುಳ್ಳವಳು, ದಯಾವಂತೆ, ಶಕ್ತಿಶಾಲಿ ಎಂಬಂತೆಯೂ ಬಿಳಿ ಮಹಿಳೆ ನಾಜೂಕು ಸೂಕ್ಷ್ಮತೆಯುಳ್ಳವಳು, ಅಶಕ್ತಳು, ಸೌಂದರ್ಯ ಖನಿ ಎಂತಲೂ ಕಪ್ಪು ಮಹಿಳೆ ಎಂದರೆ ವೇಶ್ಯೆ ಎಂದೂ ಚಿತ್ರಿಸಲಾಗುತ್ತಿತ್ತು.

ಒಟ್ಟಿನಲ್ಲಿ ಕಪ್ಪು ಮಹಿಳಾ ಕೃತಿಗಳಲ್ಲಿ ವಸ್ತು, ಶೈಲಿ ಭಾಷೆಯ ದೃಷ್ಟಿಯಿಂದ ಸಮಾನತೆ ಕಾಣಬೇಕೆಂಬುದನ್ನು ಕಪ್ಪು ಸ್ತ್ರೀವಾದ ಆಶಿಸಿದೆ. ಅದರಲ್ಲೂ ಕಪ್ಪು ಮಹಿಳಾ ಭಾಷೆಯ ಶೋಧನೆಯೇ ಪ್ರಮುಖ ಗುರಿ ಆಗಿದೆ. 'ಬ್ಲಾಕ್ ವಿಮೆನ್', 'ಟಾಕ್' ಗಳಂಥ ಸಂಸ್ಥೆಗಳು ಹುಟ್ಟಿದ್ದು, ಕಪ್ಪು ಸ್ತ್ರೀವಾದಿ ಸಾಹಿತ್ಯದ ಬೆಳವಣಿಗೆಗೆ ಶ್ರಮಿಸುತ್ತಿವೆ.



### ೮. ಸಮಾಜವಾದಿ ಸ್ತ್ರೀವಾದ

ಮಾರ್ಕ್ಸ್‌ವಾದಿ ಸ್ತ್ರೀವಾದ 'ಸ್ತ್ರೀ' ಶೋಷಣೆಗೆ ಅಸಮಾನತೆಗಳಿಂದ ಕೂಡುವ ವರ್ಗವೇ ಕಾರಣ ಎಂದಿದೆ. ಇದನ್ನು ನಿರಾಕರಿಸಿ ಸ್ತ್ರೀ ಶೋಷಣೆಗೆ ಇತರೆ ಕಾರಣಗಳೂ ಇವೆ ಎಂಬುದನ್ನು ಸಮಾಜವಾದಿ ಸ್ತ್ರೀವಾದ ತಿಳಿಸುತ್ತದೆ. ರಷ್ಯಾ ಕ್ರಾಂತಿಯ ಸಕ್ರಿಯ ಸದಸ್ಯಳಾದ ಕ್ಲಾರಾ ಜೆಟಿಕನ್ನಳು ಸ್ತ್ರೀಯರ ಸಮಸ್ಯೆಗಳನ್ನು ಕುರಿತು ಆಲೋಚಿಸುತ್ತಾ ಸ್ತ್ರೀಯರ ಬದುಕು ಅತಿ ಸೂಕ್ಷ್ಮ ನೋವುಗಳಿಂದ ಕೂಡಿದೆ ಎಂದು ಗುರುತಿಸಿ ಪರಿಹಾರ ನೀಡಲು ಮುಂದಾದಳು. ಇನ್ನೊಬ್ಬ ಸಮಾಜವಾದಿ ಸ್ತ್ರೀವಾದದ ಚಿಂತಕಿ ಹಾರ್ಟ್‌ಮನ್ ಸಹ ಸಮಾಜದಲ್ಲಿ ಸ್ತ್ರೀಯರ ಸ್ಥಾನಮಾನ ಹೇಗಿದೆ? ಎಂದು ಅಧ್ಯಯನ ಕೈಗೊಂಡಳು. ನಂತರ ಹಾರ್ಟ್‌ಮನ್ ಸಮಾಜದಲ್ಲಿ ಎಲ್ಲ ಸಂಸ್ಥೆಗಳು ಉತ್ತಮ ಸ್ಥಾನದಲ್ಲಿವೆ. ಆದರೆ ಮಹಿಳೆಯ ಸ್ಥಾನ ಮಾತ್ರ ಕೆಳಸ್ತರದಲ್ಲಿದೆ ಎಂದಳು. ಮಿಶೆಲ್ ಸಹ 'ದಿ ವುಮೆನ್ಸ್ ಎಸ್ಟೇಟ್' ಕೃತಿಯನ್ನು ರಚಿಸಿದಳು. ಇದರಲ್ಲಿ ಸ್ತ್ರೀ ಶೋಷಣೆ ಹೇಗೆ ಆರಂಭವಾಗಿ, ಸಮಾಜದಲ್ಲಿ ತನ್ನ ಬೇರುಗಳನ್ನು ಬಿಟ್ಟಿದೆ ಎಂದು ತಿಳಿಸಿ ಮನೋವಿಶ್ಲೇಷಣಾತ್ಮಕ ಪಾತ್ರದ ಮೂಲಕ, ಮಹಿಳೆ ಮಾನಸಿಕ ಬದಲಾವಣೆಯ ಸ್ವರೂಪವನ್ನು ಕಾಣಬೇಕೆಂದಿದ್ದಾಳೆ. ಪಿತೃ ಪ್ರಧಾನ್ಯತೆ ಹಾಗೂ ಬಂಡವಾಳಶಾಹಿ ಪ್ರಭುತ್ವಗಳು ಮಹಿಳೆಯನ್ನು ಅಧೀನ ಸ್ಥಿತಿಗೆ ತಂದಿವೆ. ಆದ್ದರಿಂದ ಅವೆರಡರ ವಿರುದ್ಧ ಹೋರಾಡಬೇಕಾಗಿದೆ ಎಂದು, ಉತ್ಪಾದನ ಹಂತದಲ್ಲಿ ಬದಲಾವಣೆ ತರಬೇಕೆಂದು ಆಶಿಸಿ, ನಾಲ್ಕು ಹಂತಗಳನ್ನು ಸೂಚಿಸಿರುವಳು.



#### ೧. ಸಂತಾನೋತ್ಪತ್ತಿ

ಮಹಿಳೆ ಸಮುದಾಯ ಕುಟುಂಬದಲ್ಲಿ ಸಂತಾನೋತ್ಪತ್ತಿಯ ಜೊತೆಗೆ ಕುಟುಂಬದ ಒಡೆತನವನ್ನು ಹೊಂದಿದ್ದಳು. ಆದರೆ ಆಧುನಿಕ ಕುಟುಂಬಗಳು ಬರೀ ಸಂತಾನೋತ್ಪತ್ತಿ ಕಾರ್ಯದಲ್ಲಿ ತೊಡಗಿಸಿವೆ. ಇದರಿಂದ ಆಕೆಯಲ್ಲಿರುವ ಕೌಶಲ್ಯಗಳು ಕರಗಿ ಹೋಗುತ್ತಿವೆ. ಆದ್ದರಿಂದ ಆಧುನಿಕ ಸಂತಾನ ನಿಯಂತ್ರಣಗಳನ್ನು ಬಳಸಿಕೊಂಡು ಸಂತಾನೋತ್ಪತ್ತಿಯಲ್ಲಿ ಬದಲಾವಣೆ ಕಾಣಬೇಕು ಎಂದಿರುವಳು.

#### ೨. ಉತ್ಪಾದನಾ ವ್ಯವಸ್ಥೆ

ಮಹಿಳೆ ಕುಟುಂಬದಾಚೆ ಬಂದು ಸಾಮಾಜಿಕ ಉತ್ಪಾದನೆಯಲ್ಲಿ ತೊಡಗಬೇಕು. ಇದರಿಂದ ಆರ್ಥಿಕವಾಗಿ ಸುಧಾರಿಸುತ್ತಾಳೆ. ಜೊತೆಗೆ ವ್ಯಕ್ತಿತ್ವವು ಬದಲಾಗುತ್ತದೆ. ಇಂಥ ಮಹಿಳೆ ಮತ್ತೆ ಉತ್ಪಾದನೆಯಲ್ಲಿ ತೊಡಗಿದಾಗ ಶೋಷಣೆಗೆ ಅವಕಾಶವೇ ಇರುವುದಿಲ್ಲ ಎಂದಿದ್ದಾಳೆ.

**೩. ಮಕ್ಕಳ ಸಾಮಾಜೀಕರಣ**

ಕುಟುಂಬದಲ್ಲಿ ಮಕ್ಕಳ ಲಾಲನೆ-ಪಾಲನೆ, ಪೋಷಣೆ ಬರೀ ಮಹಿಳೆಯದಲ್ಲ, ಕುಟುಂಬದ ಎಲ್ಲ ಸದಸ್ಯರ ಕರ್ತವ್ಯವೆಂದು ತಿಳಿಸಿ, ಅವರಿಗೆಲ್ಲಾ ಮಕ್ಕಳ ಹೊಣೆ ಹೊರಬೇಕು. ಇದರಿಂದ ಮಹಿಳೆ ಏನಾದರೂ ಚಿಂತಿಸಲು ಸಾಧ್ಯ. ಆಗ ಆಕೆಯ ಸ್ಥಾನದಲ್ಲಿ ಬದಲಾವಣೆ ಸಹಜ ಎಂದಿದ್ದಾಳೆ.

**೪. ಲೈಂಗಿಕತೆ**

ಪುರುಷ ಪ್ರಧಾನ್ಯತೆಯ ಸಮಾಜವು ಮಹಿಳೆಯನ್ನು ಲೈಂಗಿಕ ವಸ್ತುವನ್ನಾಗಿ ನೋಡಿದೆ. ಇದರಿಂದ ಆಕೆ ವೈಚಾರಿಕವಾಗಿ ಚಿಂತಿಸಲು ಆಗುತ್ತಿಲ್ಲ. ಅದಕ್ಕಾಗಿ ಮಹಿಳೆಗೆ ಗೌರವ, ಸಮಾನತೆಗಳನ್ನು ನೀಡಿ, ಆಕೆಯ ಸ್ಥಾನದಲ್ಲಿ ಬದಲಾವಣೆ ತರಬೇಕೆಂದಿದ್ದಾಳೆ. ಒಟ್ಟಿನಲ್ಲಿ ಈ ಮೇಲಿನ ನಾಲ್ಕು ಅಂಶಗಳಿಂದ ಮಹಿಳೆಯ ಸ್ಥಾನದಲ್ಲಿ ಬದಲಾವಣೆ ತರಬಹುದು. ಇಂತಹ ಬದಲಾವಣೆಗಳನ್ನು ಅತಿ ಕಡಿಮೆ ವೇಳೆಯಲ್ಲಿಯೆ ಆಗುತ್ತವೆಯಾದ್ದರಿಂದ ಇವನ್ನು 'ಜಾಗತಿಕ ಕ್ರಾಂತಿ' ಎಂದು ಕರೆದಿದದ್ದಾಳೆ.

ಮಹಿಳೆಯು ವರ್ಗ-ಆಡಳಿತ ಹಾಗೂ ಪುರುಷಾಧಿಕಾರದ ವಿರುದ್ಧ ಹೋರಾಡಬೇಕಾಗಿದೆ ಎಂದು ಸಮಾಜವಾದಿ ಸ್ತ್ರೀವಾದ ಬಯಸುತ್ತದೆ. ಪುರುಷ ನಿರ್ಮಿಸಿದ ಪಾತ್ರ, ಗುಣಗಳಿಂದ ಮಹಿಳೆ ಹೊರಬರಬೇಕು ಹಾಗೂ ತನ್ನ ವ್ಯಕ್ತಿತ್ವದ ಬೆಳವಣಿಗೆಗೆ ಸರಿಹೊಂದುವ ಪಾತ್ರ, ಗುಣ, ಇತ್ಯಾದಿಗಳನ್ನು ಅಳವಡಿಸಿಕೊಳ್ಳಬೇಕೆನ್ನುತ್ತದೆ. ಇಡೀ ಸಮಾಜವೇ ಪುರುಷ ಪ್ರಧಾನ್ಯತೆಯಿಂದ ಕೂಡಿದ್ದು, ಎಲ್ಲ ಅಧಿಕಾರಗಳನ್ನು ತನ್ನಲ್ಲಿರಿಸಿಕೊಂಡಿದೆ. ಅಧಿಕಾರದ ವಿಕೇಂದ್ರಿಕರಣವನ್ನು ತರಬೇಕೆಂದು ಆಗ ಮಾತ್ರ ಮಹಿಳಾ ವಿಮೋಚನೆ ಸಾಧ್ಯವೆಂದು ಸಮಾಜವಾದಿ ಸ್ತ್ರೀವಾದ ಹೇಳುತ್ತದೆ.

ಶೀಲಾ ರೋಬಾತಮ್ 'Woman's Consciousness : Man's World' ಕೃತಿಯಲ್ಲಿ ದುಡಿಯುವ ಮಹಿಳೆಯರ ಪ್ರಜ್ಞೆ, ಆರ್ಥಿಕ, ರಾಜಕೀಯ ಸಿದ್ಧಾಂತಗಳನ್ನು ತಿಳಿಸಿದ್ದಾಳೆ. ದುಡಿಯುವ ಮಹಿಳೆಯರು ಮನೆಯೊಳಗೆ ಮತ್ತು ಹೊರಗಿನ ದೌರ್ಜನ್ಯಗಳೆರಡರ ಅನುಭವಗಳನ್ನು ಹೊಂದುವರು. ಇವರ ಈ ಅನುಭವ ಚಾರಿತ್ರಿಕವಾಗಿ ಬದಲಾಗುತ್ತಾ ಹೋಗಿದೆ. ಪುರುಷ ಪ್ರಧಾನ ಸಮಾಜ ಭಾಷೆಯನ್ನು ತಾನೇ ನಿರ್ಧರಿಸಿದೆ. 'ಮನುಕುಲ' ಎಂಬ ಶೀರ್ಷಿಕೆಯಲ್ಲಿ ಹೆಣ್ಣು ಒಳಗೊಳ್ಳುವುದಿಲ್ಲ. ಏಕೆಂದರೆ ಪುರುಷರೇ ಸಮಾಜದಲ್ಲಿ ಹೆಚ್ಚಾಗಿರುವುದರಿಂದ ಈ ಪದವನ್ನು ಬಳಸಲಾಗಿದೆ. ಬಂಡವಾಳಶಾಹಿ ಸಮಾಜದಲ್ಲಿ ಕಾರ್ಮಿಕರು ಹೋರಾಟಕ್ಕೆ ಇಳಿದಂತೆ, ಮಹಿಳೆಯರು ಸಹ ಪುರುಷ ಪ್ರಧಾನ್ಯತೆಯ ವಿರುದ್ಧ ಹೋರಾಟ ಮಾಡುತ್ತಾರೆ. ಪುರುಷರೇ ಸೃಷ್ಟಿಸಿದ ಪುರಾಣಗಳಿಂದ ತಮ್ಮ ಜೈವಿಕ ವೈಶಿಷ್ಟ್ಯವನ್ನು ಕಾಣುವರು ಎನ್ನುತ್ತಾಳೆ. ಮಹಿಳೆಯರ ಶೋಷಣೆ ಬರೀ ವರ್ಗ, ಜನಾಂಗದಿಂದ ಕೂಡಿಲ್ಲ ಅದು ಲೈಂಗಿಕ ಶ್ರಮವಿಭಜನೆ, ಗುಂಡಸರಿಂದಾಗಿ ಪರಾಧೀನತೆಗಳಿಂದಲೂ ಕೂಡಿದೆ. ಮಹಿಳೆಯರ ಭಾಷೆ ಮತ್ತು ಸಂಸ್ಕೃತಿಯು ಮಹಿಳಾ ರಾಜಕೀಯದಲ್ಲಿ ವ್ಯಕ್ತವಾಗುವ ಅಂಶವನ್ನು ಸಾಂಪ್ರದಾಯಿಕ ಮಾರ್ಕ್ಸ್‌ವಾದಿ ಸ್ತ್ರೀವಾದ ನಿರ್ಲಕ್ಷಿಸಿದೆ ಎಂದು ಆರೋಪಿಸಿದ್ದಾಳೆ.

ಸಮಾಜವಾದಿ ಸ್ತ್ರೀವಾದಿಗಳು ತಮ್ಮ ಬರವಣಿಗೆಯಲ್ಲಿ ಕಥನದ ಶೈಲಿಯನ್ನು ಅಳವಡಿಸಿಕೊಂಡು ಅದರ ಮೂಲಕ ಸಮಾಜ, ಆರ್ಥಿಕ ಹಿನ್ನೆಲೆಗಳನ್ನು ಅಧ್ಯಯನ ಮಾಡುವುದು ವಿಶೇಷವಾಗಿರುತ್ತದೆ.

ಆಲಿಸನ್ ಜ್ಯಾಗರ್ ಸ್ತ್ರೀ ಶೋಷಣೆಯನ್ನು ಕಾರ್ಲ್‌ಮಾರ್ಕ್ಸ್‌ನ ಸಿದ್ಧಾಂತದ ದುಡಿಮೆಗಾರರು ಅನುಭವಿಸುವ 'ಅನ್ಯಾಕ್ರಾಂತತೆ'ಯಿಂದ ಗುರುತಿಸುತ್ತಾಳೆ. ಬೃಹತ್ ಕಾರ್ಖಾನೆಯಲ್ಲಿ ಕೆಲಸ ಮಾಡುವ ಕಾರ್ಮಿಕರು ಹೇಗೆ ಉತ್ಪಾದನೆಯ ವಸ್ತುಗಳಿಂದ ದೂರವಿರುವರೊ ಹಾಗೆಯೆ ಮಹಿಳೆಯರು ಸಹ ತಮ್ಮ ದೇಹದಿಂದ ದೂರವಿದ್ದು, ನಿಯಂತ್ರಣವನ್ನು ಕಳೆದುಕೊಳ್ಳುವರು. ಮಹಿಳೆಯರು ಪುರುಷರ ದೈಹಿಕ ಹಿಂಸೆಯನ್ನು ಅನುಭವಿಸುತ್ತಾ ನಿರಂತರವಾಗಿ ಮಕ್ಕಳನ್ನು ಹೆರುವ ಯಂತ್ರದಂತೆ ಇರುವುದಷ್ಟೇ ಅಲ್ಲದೆ ಮಕ್ಕಳ ಲಾಲನೆ, ಪಾಲನೆಯಲ್ಲಿ ತನ್ನ ಜೀವಮಾನದ ಅರ್ಧ ಆಯುಷ್ಯವನ್ನು ಕಳೆದು ಶಕ್ತಿಹೀನಳಾಗುತ್ತಾಳೆ. ಸಂತಾನ ನಿಯಂತ್ರಣಕ್ಕೆ ಎಂದು ವೈದ್ಯಕೀಯ ಪ್ರಯೋಗಗಳಿಗೆ ಒಳಗಾಗಿ ತಾನೇ ಹೆಣ್ಣು ಭ್ರೂಣವನ್ನು ಹತ್ಯೆ ಮಾಡಲು ಬಯಸುತ್ತಾಳೆ. ಹೀಗೆ ಮಹಿಳೆಗೆ ತನ್ನ ದೇಹವೇ ಬೇರೆಯವರಿಗಾಗಿ ಎನ್ನುವ ಸ್ಥಿತಿ ಉಂಟಾಗಿದೆ ಎಂದಿದ್ದಾಳೆ. ಮಕ್ಕಳ ಲಾಲನೆ ಪಾಲನೆಯಲ್ಲಿಯೂ ಆಕೆ ಗಂಡನ ಆದೇಶದಂತೆ ನಡೆಯಬೇಕು. ಇಂಥ ಸ್ತ್ರೀ ವಿರೋಧಿ ಮೌಲ್ಯಗಳು ಸಮಾಜದಲ್ಲಿವೆ, ಅವುಗಳನ್ನು ನಾಶಪಡಿಸಬೇಕೆಂದು ಆಶಿಸಿರುವಳು.

## ೯. ಲೆಸ್ಬಿಯನ್ ಸ್ತ್ರೀವಾದ

ಲೈಂಗಿಕತೆ ಹಲವು ಬಗೆಗಳಲ್ಲಿ ಅಭಿವ್ಯಕ್ತವಾಗುತ್ತದೆ. ಅಂಥದರಲ್ಲಿ ಸ್ತ್ರೀಯರ ಸಲಿಂಗರತಿಯು ಒಂದು. ಮಹಿಳೆಯರಲ್ಲಿನ ಸಲಿಂಗರತಿ ಪುರುಷರ ಸಲಿಂಗರತಿಯಷ್ಟು ವ್ಯಾಪಕತೆ ಪಡೆದಿಲ್ಲ ಹಾಗೂ ಗೋಚರಿಸದೆ ಗಣನೆಗೆ ಬಂದಿಲ್ಲವಾಗಿರಬಹುದು. 'ಲೆಸ್ಬಿಯನ್' ಪದ ಇಪ್ಪತ್ತನೆಯ ಶತಮಾನದಲ್ಲಿ ಅಸ್ತಿತ್ವಕ್ಕೆ ಬಂದು, ೧೯೦೮ರಲ್ಲಿ ಮೊದಲ ಸಲ ಆಕ್ಸ್‌ಫರ್ಡ್ ಇಂಗ್ಲಿಶ್ ಡಿಕ್ಷನರಿಯಲ್ಲಿ ಕಾಣಿಸಿಕೊಂಡಿತು. ಆರಂಭದಲ್ಲಿ ಒಂದು ಹೆಣ್ಣು ಇನ್ನೊಂದು ಹೆಣ್ಣಿನ ಬಗ್ಗೆ ಹೊಂದಿರುವ ರಾಗೋದ್ರೇಕವನ್ನು 'ದಿ ಸೀಕ್ರೆಟ್ ಸಿನ್' ಎನ್ನಲಾಗುತ್ತಿತ್ತು. ನಂತರದಲ್ಲಿ ಪುರುಷರಿಲ್ಲದೆ ತಮ್ಮ ವ್ಯಕ್ತಿತ್ವದ ಪರಿಪೂರ್ಣತೆಯನ್ನು ಪಡೆಯಲು ಬಯಸಿದ ಸ್ತ್ರೀವಾದಿಗಳನ್ನು ಎದುರಿಸಲು, ಸಾಮಾಜಿಕವಾಗಿ ಬಹಿಷ್ಕರಿಸಲು "ಲೆಸ್ಬಿಯನ್" ಪದವನ್ನು ಬಳಸಲಾಯಿತು. ಎಲ್ಲ ಸ್ತ್ರೀಯರಂತೆ ಶಿಕ್ಷಣ, ಉದ್ಯೋಗ, ವೇತನ ಪಡೆಯುವುದಕ್ಕೆ ಅವರದೆ ಆದ ವ್ಯಕ್ತಿತ್ವಕ್ಕಾಗಿ ಹೋರಾಡುತ್ತಿದ್ದ ಸ್ತ್ರೀವಾದಿಗಳತ್ತ ಇವರು ಗಮನಹರಿಸಿದರು. ಲೆಸ್ಬಿಯನ್ನರು ಸಹ ಸ್ತ್ರೀವಾದಿ ಚಳವಳಿಯಲ್ಲಿ ಸೇರಿಕೊಂಡರು. ಆದರೆ ಚಳವಳಿಯಲ್ಲಿ ಸೇರಿಕೊಂಡ ಲೆಸ್ಬಿಯನರು ತಾರತಮ್ಯಕ್ಕೆ ಒಳಗಾದರು. ೧೯೬೦ರಲ್ಲಿ ಸ್ತ್ರೀವಾದಿಗಳು ಲೆಸ್ಬಿಯನ್ನರ ಸಮಸ್ಯೆಗಳತ್ತ ನೋಡಲು ಬಯಸಲಿಲ್ಲ. ಸ್ತ್ರೀವಾದಿಗಳು ಲೆಸ್ಬಿಯನ್ನರನ್ನು ಪುರುಷಕೇಂದ್ರಿತ ನೆಲೆಯಿಂದಲೇ ಕಂಡುಕೊಂಡಿದ್ದರಿಂದ ಈ ಚಳವಳಿಯಿಂದ ನಿರಾಶೆಗೊಂಡರು. ಅಲ್ಲದೆ ಲೆಸ್ಬಿಯನ್ನರನ್ನು ಕೆಲಸದಿಂದ ತೆಗೆದುಹಾಕಲಾಯಿತು. ೧೯೭೦ರಲ್ಲಿ ಹತ್ತುಸಾವಿರ ಲೆಸ್ಬಿಯನ್ನರು ನ್ಯೂಯಾರ್ಕಿನ ಬೀದಿಗಳಲ್ಲಿ ಇಳಿದು, ಅವರ ಹಕ್ಕುಗಳಿಗಾಗಿ ಮೆರವಣಿಗೆ ಆರಂಭಿಸಿದರು. ೧೯೭೧ರ 'ನ್ಯಾಷನಲ್ ಆರ್ಗ್‌ನೈಸೇಷನ್ ಫಾರ್ ವಿಮೆನ್' ಸಮಾವೇಶವು ನಡೆಯಿತು. ಈ ಸಮಾವೇಶವು ಲೆಸ್ಬಿಯನ್ನರ ಹಕ್ಕುಗಳನ್ನು ಕುರಿತಂತೆ ಚರ್ಚಿಸಿತು. ಅಂದು ಲ್ಯಾವೆಂಡರ್ ಮೇನೆಸ್ ಎನ್ನುತ್ತಿದ್ದ ಲೆಸ್ಬಿಯನ್ ವಾದ ಎನ್.ಒ.ಡಬ್ಲ್ಯೂನ ಗೌರವಕ್ಕೆ ಧಕ್ಕೆ ತರುವುದು ಎಂದು ಬೆಟ್ಟಿ ಫ್ರೀಡನ್ ಸಹ ಅಂದುಕೊಂಡಿದ್ದಳು. ಆದರೆ ಸಮಾವೇಶವು ಲೆಸ್ಬಿಯನ್ನರ ಪರವಾಗಿಯೆ ಇತ್ತು. ಅದು ಮಹಿಳೆಯರಿಗೆ ಲೈಂಗಿಕತೆಯನ್ನು ತಿಳಿಸುವ, ಅಭಿವ್ಯಕ್ತಿಸುವ ಸ್ವಾತಂತ್ರ್ಯದ ಬದುಕನ್ನು ಆರಿಸಿಕೊಳ್ಳುವ ಹಕ್ಕು ಮಹಿಳೆಯರಿಗೂ ಇರುತ್ತದೆ ಎಂದು ನಿರ್ಣಯಿಸಿತು. ಅಲ್ಲದೆ ೧೯೭೫ರ 'ನ್ಯಾಷನಲ್ ವಿಮೆನ್ ಲಿಬರೇಷನ್'ನ ಸಮಾವೇಶವು ಲೆಸ್ಬಿಯನ್ನರನ್ನು ತಾರತಮ್ಯಗಳಿಂದ ಪಾರುಮಾಡಲು ಪ್ರತಿಪಾದಿಸಿತು.

೧೯೭೦ರಲ್ಲಿ ತೀವ್ರಗಾಮಿ ಸ್ತ್ರೀವಾದಿಗಳಾದ ರೀಟಾ ಮೇ ಬ್ರಾನ್, ಶಾರ್ಲಟ್ ಬಂಚ್, ಟಿ ಗ್ರೇಸ್ ಆಯಟ್ ಕಿನ್ಸನ್, ಜಿಲಾ ಜಾನ್ಸ್‌ಸ್ಟನ್‌ರ ಜೊತೆಗೆ ಫ್ಯೂರಿಸ್ ಮೊದಲಾದವರು ಸೇರಿಕೊಂಡು 'ರಾಜಕೀಯಾತ್ಮಕ ಲೆಸ್ಬಿಯನ್ ಸಿದ್ಧಾಂಥ' ಹುಟ್ಟಲು ಕಾರಣರಾದರು. ೧೯೭೩ರಲ್ಲಿ ಜಿಲಾಜಾನ್ ಸ್ಟನ್‌ಳು 'Lesbian Nation', 'The Feminist Solution' ಎಂಬ ಶೀರ್ಷಿಕೆಗಳಿಂದ ಆತ್ಮಚರಿತ್ರೆ ಪ್ರಕಟಿಸಿದಳು. ಇದು ಲೆಸ್ಬಿಯನ್ ಸ್ತ್ರೀವಾದದ ಮೊದಲ ಪುಸ್ತಕಗಳಲ್ಲಿ ಪ್ರಧಾನವಾದುದು. ಕ್ಯಾರೊಲಿನ್ ಬರ್ಡ್ 'Born Female' ಪುಸ್ತಕ ಬರೆದಳು. ಈ ಪುಸ್ತಕದಲ್ಲಿ ಸಂತಾನೋತ್ಪತ್ತಿಯ ಒತ್ತಡವು ಮಾನವ ಸಂಬಂಧದಿಂದ ದೂರವಾದಾಗ ಅನೇಕ ಬಗೆಯ ಜೀವನ ರೀತಿಗಳು ಕಾಣಿಸುತ್ತವೆ ಎಂಬ ವಾದವನ್ನು ಮಂಡಿಸಲಾಗಿದೆ.

ಲಿಂಗಾಧಾರಿತ ಪಾತ್ರಗಳು ನೈಸರ್ಗಿಕವಾದವುಗಳಲ್ಲ. ಅವುಗಳು ಪುರುಷ ಪ್ರಧಾನ ಸಮಾಜ-ಸಂಸ್ಕೃತಿ ಕಲಿಸಿದ ವರ್ತನೆಗಳು ಮಾತ್ರ. ಮಹಿಳೆಯರ ಕಾರ್ಯಕ್ಷೇತ್ರವನ್ನು, ಪಾತ್ರವನ್ನು ಸೀಮಿತಗೊಳಿಸಿದೆ. ಹೆಣ್ಣು ಗಂಡನ ಹೊರತಾಗಿ ಯಾರನ್ನು ಪ್ರೀತಿಸಬಾರದು ಎನ್ನುವ ಒತ್ತಾಯವನ್ನು ಸಾಮಾಜಿಕ ಕಲಿಕೆಯ ಒಂದು ಭಾಗವೆಂದೆ ಲೆಸ್ಬಿಯನ್ನರು ಪ್ರಶ್ನಿಸುತ್ತಾರೆ. ಇಂಥ ಮಿತಿಗಳಿಂದ ಬದುಕು ರೂಪುಗೊಂಡು ಶೋಷಣೆಗೆ ಒಳಗಾಗುತ್ತಿದೆ. ಅಂತೆಯೇ ಎಲ್ಲ ಸೀಮಿತವಾದ ಬಂದನಗಳನ್ನು ಕಿತ್ತೊಗೆದು ಎಲ್ಲ ಸಾಧ್ಯತೆಗಳ ಶೋಧನೆಯತ್ತ ಹೆಜ್ಜೆ ಇಟ್ಟರು. ಹೀಗಾಗಿ ಲೆಸ್ಬಿಯನ್ ಸ್ತ್ರೀವಾದಿ ಸಾಹಿತ್ಯ ವಿಮರ್ಶಕರು ಕಾಣಿಸಿಕೊಂಡರು. ಬಾರ್ಬರಾ ಗ್ರೀಯರ್ 'The Lesbian in Literature' ಕೃತಿಯನ್ನು ಬರೆದಳು. ಆ್ಯಡ್ರಿಯನ್ ರಿಚ್ ಲೆಸ್ಬಿಯನ್ ವಾದಕ್ಕೆ ವ್ಯಾಪಕ ಅರ್ಥ ಕೊಡುತ್ತಾ 'ಹೆಣ್ಣು ಅನನ್ಯ ಅನುಭವ' ಎಂದಳು. ಎಲಿ ಬಲ್ಕಿನ್ 'Lesbian Fiction and Lesbian Poerty' ಸಂಕಲನದಲ್ಲಿ ಲೆಸ್ಬಿಯನ್ ಸಾಹಿತ್ಯ ಪರಂಪರೆಯನ್ನೆ ಮೂಡಿಸಲು ಪ್ರಯತ್ನಿಸಿದಳು. ಮಾರ್ಗರೆಟ್ ಕ್ರಿಚ್ಚ್ ಶಾಂಕ್‌ಳ 'Lesbian Studies' ಕೃತಿ ಮನಃಶಾಸ್ತ್ರ, ಚರಿತ್ರೆ, ಸಮಾಜಶಾಸ್ತ್ರ, ಸಾಹಿತ್ಯ ಎಲ್ಲವನ್ನು ಲೆಸ್ಬಿಯನ್ ನೆಲೆಗಳಿಂದಲೇ ಗುರುತಿಸುವಂಥದ್ದು. ಲೆಸ್ಬಿಯನ್ ವಿಮರ್ಶಕರ ಪುಸ್ತಕ ಸಂಗ್ರಹದಲ್ಲಿ ಚಾರಿತ್ರಿಕವಾಗಿ ಮುಖ್ಯರಾದ ಲೆಸ್ಬಿಯನ್ ಲೇಖಕಿಯರ ಹೆಸರುಗಳು ಕಾಣದೆ ಇರುವುದು ಭಿನ್ನಲಿಂಗೀಯ ಧೋರಣೆಗೆ ನಿದರ್ಶನ ಎನ್ನಲಾಗಿದೆ.

೧೯೭೮ರಿಂದಲೇ ಲೆಸ್ಬಿಯನ್ ಕೇಂದ್ರಿತ ಲೇಖನಗಳು ಬರತೊಡಗಿದವು. ಆರಂಭದಲ್ಲಿ ಪತ್ರಿಕೆಗಳಲ್ಲಿ ಮಾತ್ರ ಕಾಣತೊಡಗಿದವು. ಪುರುಷ ವಿಮರ್ಶಕರು ಲೆಸ್ಬಿಯನ್ ವಿಮರ್ಶೆಯ ಬಗ್ಗೆ ಯಾವ ಮುಲಾಜು ಇಲ್ಲದೆ ಮಾತನಾಡತೊಡಗಿದರು. ಸ್ತ್ರೀವಾದಿ ವಿಮರ್ಶಕರಿಗೆ ತಾವು ಲೆಸ್ಬಿಯನಿಸಂ ಬಗ್ಗೆ ಮಾತನಾಡಿದರೆ ತಮ್ಮನ್ನು ಲೆಸ್ಬಿಯನ್ ಎಂದೇ ಗುರುತಿಸುತ್ತಾರೆ ಎಂಬ ಭಯವಿತ್ತು. ಬಹುಲಿಂಗತ್ವವನ್ನು ಹೇಳುವುದೇ ಸ್ತ್ರೀವಾದಿ ಸಾಹಿತ್ಯ ವಿಮರ್ಶೆಯ ಪ್ರಮುಖ ಕೃತಿಗಳ ಉದ್ದೇಶ. ಎಲೆನ್ ಮೋಯರ್ಸ್ 'Literary Woman' ಕೃತಿ ಬರೆದಳು. ಇದನ್ನು ಆಕೆ ಸಲಿಂಗಭೀತಿ ಹಾಗೂ ಭಿನ್ನಲಿಂಗೀಯ ಸಂಬಂಧಗಳ ಧೋರಣೆಯಾಗಿದೆ ಎಂದಿದ್ದಾಳೆ. ಸಾಂಡ್ರಾ ಗಿಲ್ಬರ್ಟ್ ಹಾಗೂ ಸೂಸನ್ ಗುಬರ್ ಅವರು 'The Mad Woman in the Attic' ಪುಸ್ತಕದಲ್ಲಿ ಲೆಸ್ಬಿಯನ್ ಎಂಬ ಪದ ಪದಸೂಚಿಯಲ್ಲಿ ಉಲ್ಲೇಖವಾಗಿಲ್ಲದಿರುವ ಕಡೆಗೆ ಲೆಸ್ಬಿಯನ್ ವಿಮರ್ಶಕರು ಗಮನ ನೀಡುತ್ತಾರೆ ಎಂದು ಗುರುತಿಸಿದರು.

ಬಾರ್ಬರಾ ಗ್ರೀಯೆರ್ ಎಂಬಾಕೆ 'The Ladder' ಎಂಬ ಲೆಸ್ಬಿಯನ್ ಪತ್ರಿಕೆಗೆ ಪುಸ್ತಕ ವಿಮರ್ಶೆ ಮಾಡುತ್ತಿದ್ದಳು. ಅಲ್ಲದೆ 'The Lesbian Literature- A Bibliography' ಕೃತಿಯೊಂದಿಗೆ ವಿಮರ್ಶಾ ಪಂಥವನ್ನು ಹುಟ್ಟುಹಾಕಲು ಕಾರಣಳಾದಳು. ನಂತರದ ದಿನಗಳಲ್ಲಿ 'Margin' ಪತ್ರಿಕೆ ಲೆಸ್ಬಿಯನ್ ಬರೆಹಗಳಿಗೆ ಸೀಮಿತವಾಗಿತ್ತು. ೧೯೭೬ರಲ್ಲಿ 'Sinister Wisdom' ಪತ್ರಿಕೆಯೂ ಲೆಸ್ಬಿಯನ್ ವಾದದ ವಿಶೇಷಾಂಕವನ್ನು ಹೊರತಂದಿತು. ಈ ಎರಡು ಪತ್ರಿಕೆಗಳ ವಿಶೇಷಾಂಕಗಳು ಲೆಸ್ಬಿಯನ್ ಸ್ತ್ರೀವಾದಿ ಸಾಹಿತ್ಯ ವಿಮರ್ಶೆಯ ಮೊದಲ ಬಿಂದುಗಳಾದವು.

೧೯೮೧ರಲ್ಲಿ ಲಿಲಿಯನ್ ಫ್ಯಾಡರ್‌ಮನ್ 'Surpassing the Love of men' ಎನ್ನುವ ಕೃತಿ ಬರೆದ. ಇದು ಒಂದು ಕಾಲಘಟ್ಟಕ್ಕೆ ಮಹಿಳೆಯರ ನಡುವಿನ ಪ್ರೀತಿ ಸ್ವೀಕೃತವಿತ್ತು ಹಾಗೂ ಅದಕ್ಕೆ ಪ್ರೋತ್ಸಾಹ ಸಹ ಇತ್ತು. ಮಹಿಳೆಯರು ಸಲಿಂಗರತಿಯರಾಗಿದ್ದು ಪುರುಷರ ಮೇಲೆ ಅವಲಂಬಿತರಾಗಿದ್ದರು. ಆರ್ಥಿಕವಾಗಿ ಸ್ವಾತಂತ್ರ್ಯ ಪಡೆದ ಮಹಿಳೆಯರು ಇನ್ನೊಬ್ಬ ಹೆಣ್ಣನ್ನು ತನ್ನ ಸಂಗಾತಿಯೆಂದು ವಿವಾಹದ ಹೊರಗೆ ಗುರುತಿಸಿಕೊಂಡರು. ಇವರುಗಳ ವರ್ತನೆ ಸಾಮಾಜಿಕ ರೀತಿ-ನಿಯಮಗಳನ್ನೇ ಪ್ರಶ್ನಿಸುವಂತೆ ಕಂಡಿತು. ಮಹಿಳೆಯರ ನಡುವಿನ ಪ್ರೀತಿ ಮತ್ತು ಬಾಂಧವ್ಯ ಅತಿರೇಕ ಮನೋವಿಕಾಸವಾಯಿತು. ಆದ್ದರಿಂದಲೇ ಲೈಂಗಿಕ ಶಾಸ್ತ್ರಜ್ಞರು ತಮ್ಮ ಸಿದ್ಧಾಂತಗಳ ಮೂಲಕ ಮಹಿಳೆಯರನ್ನು ದೂರವಿಡಲು ಹೇಳಿದ್ದು. 'Surpassing the Love of men' ಕೃತಿಯು ಲೆಸ್ಬಿಯನ್ನರ ಗುಣಲಕ್ಷಣಗಳನ್ನು ತಿಳಿಸುತ್ತದೆ. ೧೯೭೮ರಲ್ಲಿ ಮೇರಿಡಾಲಿ 'ಗೈನ್‌ಎಕಾಲಜಿ' ಕೃತಿ ಬರೆದಳು. ಈ ಪುಸ್ತಕದ ಕೊನೆಯಲ್ಲಿ ಉಭಯಲಿಂಗೀ ಭಾಷರೂಪದ (ಹೊಸ ಪದಗಳ) ಪಟ್ಟಿಯ ವಿವರಣೆ ನೀಡಿದ್ದಳು.

## ೨.೭. ಭಾರತದಲ್ಲಿ ಸ್ತ್ರೀವಾದಿ ಚಿಂತನೆ

ಭಾರತದಲ್ಲಿ 'ಸ್ತ್ರೀವಾದ' ಎಂಬ ಪದ ಪರಿಚಯ ಆಗುವ ಮೊದಲೆ ಸ್ತ್ರೀಪರ ಚಿಂತನೆ-ವಿಚಾರಗಳು ಅಸ್ತಿತ್ವದಲ್ಲಿದ್ದವು. ಇಂಥ ಚಿಂತನೆಗಳು ವಿವಿಧ ಕಾಲಘಟ್ಟಗಳಲ್ಲಿ ವ್ಯಕ್ತವಾಗಿದ್ದರೂ ಅಷ್ಟಾಗಿ ಬೆಳಕಿಗೆ ಬಾರದೆ ಹೋದವು. ಸ್ತ್ರೀ ಪರ ಚಿಂತನೆಗಳನ್ನು ಭಾರತದಲ್ಲಿ ಮೊದಲು ಚಿಂತಿಸಿದವರು ಪುರುಷರೇ. ಹೆಣ್ಣಿನ ಎಲ್ಲ ಶೋಷಣೆ, ದಬ್ಬಾಳಿಕೆಗಳಿಗೆ ಪಿತೃಪ್ರಧಾನ ಸಮಾಜವೇ ಕಾರಣವಾಗಿದೆ. ಅಲ್ಲದೆ ಅದೇ ಸ್ತ್ರೀ ಸುಧಾರಣೆಗೂ ಮುಂದಾಗಿದ್ದು ಸಹ ಎನ್ನಬಹುದು. ಭಾರತದಲ್ಲಿ 'ಸ್ತ್ರೀವಾದಿ' ಚಿಂತನೆಗಳು ಎಲ್ಲಿ? ಯಾವಾಗ? ಹೇಗೆ? ಹುಟ್ಟಿದವು ಎಂದು ನಿರ್ದಿಷ್ಟವಾಗಿ ಹೇಳುವುದು ಸುಲಭವೇನಲ್ಲ. ಎಲ್ಲೆಲ್ಲಿ ಯಾವಾಗ ಮಹಿಳೆಯರು ಶೋಷಣೆಗೆ, ದಬ್ಬಾಳಿಕೆಗಳಿಗೆ ಒಳಗಾದರೋ ಆಗ ಇಂಥ ಚಿಂತನೆ, ಪ್ರತಿಕ್ರಿಯೆಗಳು ಅಭಿವ್ಯಕ್ತವಾಗಿವೆ. ಚರಿತ್ರೆಯ ನೆಲೆಯಿಂದ ಸ್ತ್ರೀವಾದಿ ಚಿಂತನೆಯ ಹುಟ್ಟನ್ನು ಗುರುತಿಸಲು ಈ ಅಧ್ಯಯನದಲ್ಲಿ ಪ್ರಯತ್ನಿಸಲಾಗಿದೆ.

ಪ್ರಾಚೀನ ಭಾರತದಲ್ಲಿ ತಾಂತ್ರಿಕರು ಎನ್ನುವವರು ಸ್ತ್ರೀ ಶಕ್ತಿಯ ಆರಾಧಕರಾಗಿದ್ದರು. ಇವರು ಮಹಿಳೆಯರಿಂದಲೇ ಮಾನವ ಕುಲದ ಬೆಳವಣಿಗೆ ಎಂಬ ನಂಬಿಕೆಯುಳ್ಳವರಾಗಿದ್ದು, ತಮ್ಮ ಗ್ರಂಥವಾದ 'ಮಹಾನಿರ್ವಾಣ ತಂತ್ರ'ದಲ್ಲಿ ಸ್ತ್ರೀಪರ ಚಿಂತನೆಗಳನ್ನು ಚರ್ಚಿಸಿದ್ದಾರೆ. ಅದರಲ್ಲಿ ಮನೆಯ ಮುಖ್ಯಸ್ಥ ಮಹಿಳೆಯರನ್ನು ಕಾಣುವ ಪರಿಯನ್ನು ಹೇಳುತ್ತಾ, "ಕುಟುಂಬದಲ್ಲಿ ಪತಿಯು ಸತಿಯನ್ನು ಚೆನ್ನಾಗಿ

ನೋಡಿಕೊಳ್ಳಬೇಕು ಮತ್ತು ಆಕೆಯನ್ನು ಶಿಕ್ಷಿಸಬಾರದು. ಸತಿಯಲ್ಲದೆ ಇತರೆ ಮಹಿಳೆಯನ್ನು ಕೆಟ್ಟ ನೋಟದಿಂದ ಕಾಣಬಾರದು. ಸತಿಯನ್ನು ಕಾರಣಗಳಿಲ್ಲದೆ ಬಿಡಬಾರದು ಎಂದು ಹೇಳಲಾಗಿದೆ. ಒಂದು ವೇಳೆ ಬಿಟ್ಟರೂ ಅಂಥವನು ಕತ್ತೆಯ ಚರ್ಮವನ್ನು ಧರಿಸಿಕೊಂಡು ಏಳು ಮನೆಗಳಿಗೆ ಹೋಗಿ ಭಿಕ್ಷೆ ಬೇಡಬೇಕಾಗಿತ್ತು. ಮಹಿಳೆಯರ ಪರವಾಗಿ ಚಿಂತಿಸಿದವರಲ್ಲಿ `ವರಾಹಮಿಹಿರ`ನೂ ಒಬ್ಬ. ಇವನ ಪ್ರಧಾನ ವಿಷಯ ಖಗೋಲಶಾಸ್ತ್ರವಾದರೂ, ಸಾಮಾಜಿಕ ಕಳಕಳಿಯುಳ್ಳವನಾಗಿದ್ದ. ತನ್ನ ಕಾಲದಲ್ಲಿ ರೂಢಿಯಲ್ಲಿರುವ ಅನಿಷ್ಟ ಆಚರಣೆಗಳನ್ನು ಖಂಡಿಸಿದ್ದಾನೆ. ಇವನು `ಬೃಹತ್ ಸಂಹಿತೆ` ಎಂಬ ಕೃತಿಯಲ್ಲಿ ಮಹಿಳೆಯರನ್ನು ಉದ್ದೇಶಿಸಿ ಬರೆಯುತ್ತ -

> ''ಆಭರಣಗಳನ್ನು ಮಹಿಳೆಯರು ಧರಿಸಿಕೊಳ್ಳುವರೇ ಹೊರತು, ಆಭರಣಗಳು ಅವರನ್ನು ಧರಿಸುವುದಿಲ್ಲ. ಮಹಿಳೆಯರೇ ಅಲಂಕಾರವಿದ್ದಂತೆ. ಸೃಷ್ಟಿಯಲ್ಲಿರುವ ಎಲ್ಲರಿಗಿಂತ ಸ್ತ್ರೀಯರೇ ಶ್ರೇಷ್ಠರು. ಮಹಿಳೆಯರು ತಮ್ಮ ಆಚಾರ-ವಿಚಾರಗಳಿಂದ ಪುರುಷರಿಗೆ ಸಂತೋಷವನ್ನುಂಟು ಮಾಡುತ್ತಾರೆ. ಪುತ್ರ ಪ್ರಾಪ್ತಿಯು ಅವರಿಂದಲೇ. ಇಂಥ ಮಹಿಳೆಯರನ್ನು ಹಿಂಸಿಸುವುದು, ಹೀಯಾಳಿಸುವುದು ಯೋಗ್ಯವಲ್ಲ. ಮಹಿಳೆಯರು ತಪ್ಪನ್ನು ಮಾಡುವವರಲ್ಲ, ಅಕಸ್ಮಾತ್ ಅವರಿಂದ ದುರಾಚಾರ, ಆಚಾರವಲ್ಲದ ಕಾರ್ಯಗಳು ಜರುಗಿದರೆ ಅದಕ್ಕೆ ಕಾರಣ ಪುರುಷರೇ''[೨೪] ಎಂದಿದ್ದಾನೆ.

ಏಳನೆಯ ಶತಮಾನದಲ್ಲಿ ಬಾಣ ಕವಿಯು ಸತಿಪದ್ಧತಿಯನ್ನು ವಿರೋಧಿಸುತ್ತ ''ಸತ್ತ ಗಂಡನೊಂದಿಗೆ, ಸತಿ ಸಾಯುವುದು ಅರ್ಥಹೀನ ಕಾರ್ಯವಾಗಿದೆ. ಆಕೆ ಸಾಯುವ ಬದಲು ಗಂಡನ ಆತ್ಮಕ್ಕೆ ಶಾಂತಿ ದೊರಕುವ ಕಾರ್ಯಗಳನ್ನು ಕೈಗೊಳ್ಳಬೇಕು'' ಎಂದು ಅಭಿಪ್ರಾಯಪಟ್ಟಿರುತ್ತಾನೆ. ಇಂಥ ಸ್ತ್ರೀಪರ ಚಿಂತನೆಗಳು ಚರಿತ್ರೆಯಲ್ಲಿರುವುದನ್ನು ಗುರುತಿಸಬೇಕಾಗಿದೆ.

ಹತ್ತೊಂಬತ್ತನೆಯ ಶತಮಾನದಲ್ಲಿ ಸ್ತ್ರೀ ಸುಧಾರಣೆಗಳು ಕಾಣಿಸಿಕೊಂಡಿದ್ದು. ಈ ಸುಧಾರಣೆಗಳ ಮೊದಲ ನಾಯಕನಾಗಿ ರಾಜಾ ರಾಮ್‌ಮೋಹನ್ ರಾಯ್ ನಂತರ ಈಶ್ವರಚಂದ್ರ ವಿದ್ಯಾಸಾಗರ್, ಕೇಶವಚಂದ್ರ ಸೇನ್, ದಯಾನಂದ ಸರಸ್ವತಿ ಮೊದಲಾದವರು ಪ್ರಮುಖರು. ಇವರು ಸ್ತ್ರೀಯರ ವಿರುದ್ಧದ ಅರ್ಥಹೀನ ಆಚಾರ-ಪದ್ಧತಿಗಳನ್ನು ಖಂಡಿಸಿ, ಸುಧಾರಣೆ ಕೈಗೊಂಡರು. ಇಲ್ಲಿಂದಲೂ ನಾವು ಸ್ತ್ರೀವಾದಿ ಚಿಂತನೆಯ ಅಂಶಗಳನ್ನು ಹಾಗೂ ಅದರ ಹುಟ್ಟನ್ನು ಗುರುತಿಸಲು ಸಾಧ್ಯತೆ ಇದೆ. ಇದಾದ ನಂತರ ಸ್ತ್ರೀಯರ ಶಿಕ್ಷಣಕ್ಕಾಗಿ ಮಹಿಳೆಯರಿಂದ ಶಿಕ್ಷಣ ಸಂಸ್ಥೆಗಳು ಹುಟ್ಟಿಕೊಂಡವು. ಅಂಥ ಸಂಸ್ಥೆಗಳನ್ನು ಸ್ಥಾಪಿಸುವ ಜೊತೆಗೆ ಸ್ತ್ರೀ-ಸಮಾನತೆ, ಸುಧಾರಣೆಗಳು ಉಂಟಾದವು. ಉದಾಹರಣೆಗೆ ಪಂಡಿತಾ ರಮಾಬಾಯಿ, ಮಾತಾಜಿ ಮಹಾರಾಣಿ ತಪಸ್ವಿನಿ ಮೊದಲಾದವರು ಹಾಗೂ ಧೋಂಡೋ ಕೇಶವ ಕರ್ವೆ ಸಹ ಒಬ್ಬರು.

ಶಿಕ್ಷಣದ ಪ್ರಗತಿಯಿಂದಾಗಿ ಮಹಿಳೆ ಮನೆಯಾಚೆಗೂ ಕಾಣಿಸಿಕೊಂಡಳು. ಜೊತೆಗೆ ಮಹಿಳೆಯರಿಗಾಗಿ ಯೆಂದೇ ಸ್ತ್ರೀ-ಪುರುಷರಿಂದಲೂ ಬಹು ಬಗೆಯ ಸಂಘ-ಸಂಸ್ಥೆಗಳು ಹುಟ್ಟಿಕೊಂಡವು. ಇವುಗಳ ಮುಖೇನ ಸ್ತ್ರೀಯರು ಸಮಾಜದ ವಿವಿಧ ನೆಲೆಗಳಿಂದ ಚರ್ಚೆಗೆ ಒಳಗಾದರು. ಅಲ್ಲದೆ ಸ್ತ್ರೀ ಸುಧಾರಣೆ,ಹಕ್ಕು-ಬಾಧ್ಯತೆಗಳು, ಲಿಂಗಾಧಾರಿತ ನೆಲೆಗಳ ಬಗ್ಗೆಯೂ ಜಾಗೃತಿ ಉಂಟಾಯಿತು.

೧೯೧೭ರ ಡಿಸೆಂಬರ್ ೧೫ ರಂದು ಸರೋಜಿನಿ ನಾಯ್ಡು ಮತ್ತು ಇತರೆ ಮಹಿಳೆಯರ ಸಮೂಹವೊಂದು ಮಾಂಟೆಗೊ ಹಾಗೂ ಚೆಮ್ಸ್‌ಫೋರ್ಡ್‌ರನ್ನು ಭೇಟಿಮಾಡಿ ರಾಜಕೀಯ ಅಹವಾಲುಗಳ ಮನವಿ ಸಲ್ಲಿಸಿದರು. ಈ ಮಹಿಳೆಯರ ಸಮೂಹ ನಾಗರಿಕ ಜವಾಬ್ದಾರಿಗಳನ್ನು ಭಾರತೀಯ ಮಹಿಳೆಯರಲ್ಲಿ ಮೂಡಿಸುವ ಉದ್ದೇಶ ಹೊಂದಿದ್ದರು. ಅಲ್ಲದೆ ವಸಾಹತುಶಾಹಿ ಆಡಳಿತದ ಈ ದೇಶದಲ್ಲಿ ಸಾಮಾನ್ಯ ಪ್ರಜೆಗೆ ದೊರಕುವ ಸ್ಥಾನಮಾನಗಳೆಲ್ಲವೂ ಸ್ತ್ರೀಯರಿಗೂ ದೊರೆಯಬೇಕು ಎಂದು ಅಹವಾಲಿನಲ್ಲಿ ಕೇಳಲಾಗಿತ್ತು. ಅಂತೆಯೇ ಮಹಿಳಾ ಸಮಾವೇಶಗಳು ಜರುಗಿದವು. ಅಲ್ಲದೆ ೧೯೧೮ರಲ್ಲಿ ಮುಂಬಯಿ, ಮದರಾಸಿನ ಪ್ರಾಂತೀಯ ಸಮಾವೇಶಗಳು ಸುಧಾರಣಾ ಮಸೂದೆಯಿಂದ ಲಿಂಗಾಧಾರಿತ ಅರ್ಹತೆಯ ಕಾಲಂನ್ನು ತೆಗೆಯಬೇಕೆಂದು ನಿರ್ಣಯಗಳನ್ನು ಪಾಸು ಮಾಡಿದವು. ಇಂಥ ನಿರ್ಣಯಗಳನ್ನು ಇತರೆ ಪ್ರಾಂತೀಯ ಸಮಾವೇಶಗಳು ಅನುಮೋದಿಸಿದವು.

ಮುಂಬಯಿಯಲ್ಲಿ ೧೯೧೮ರ ವಿಶೇಷ ಕಾಂಗ್ರೆಸ್ ಅಧಿವೇಶನ ನಡೆಯಿತು. ಇದರಲ್ಲಿ ಸರೋಜಿನಿ ನಾಯ್ಡುರವರು ಮಹಿಳೆಯರ ಸಂಕಷ್ಟಗಳ ಬಗ್ಗೆ ಮಾತನಾಡಿದರು. ಮಹಿಳೆಯರ ಏಳಿಗೆಯನ್ನು ಬೆಂಬಲಿಸುವುದು ಪ್ರಗತಿಶೀಲವಾದದ್ದು ಹಾಗೂ ಮಾನವ ಹಕ್ಕುಗಳನ್ನು ಸಮಗ್ರಗೊಳಿಸುವಂಥದ್ದು ಎನ್ನುವುದರ ಮೂಲಕ ಮಹಿಳೆಯರನ್ನು ರಾಜಕೀಯ ನೆಲೆಯಿಂದ ದೂರವಿರಬೇಕೆಂದು ಆಕ್ಷೇಪಿಸುವವರನ್ನು ದೂರಿದರು. ಅಲ್ಲದೆ ಅವರು -

> ''ಸ್ತ್ರೀಯರಿಗೂ ಪುರುಷರಿಗೂ ತಮ-ತಮಗೆ ವಿಶಿಷ್ಟವಾದ ಪ್ರತ್ಯೇಕ ಗುರಿಗಳಿವೆ ಗಮ್ಯ ಸ್ಥಾನಗಳಿವೆ. ಮಹಿಳೆಯರ ಅಂತಿಮ ಗುರಿಗಳನ್ನು ಪೂರೈಸುವ ಜವಾಬ್ದಾರಿಯನ್ನು ಪುರುಷರು ಹೇಗೆ ಹೊರಲಾರರೋ ಹಾಗೆಯೇ ಮಹಿಳೆಯರು ಪುರುಷರ ಜವಾಬ್ದಾರಿಯನ್ನು ಹೊರಲಾರರು.''[೨೯] ಎಂದು ಹೇಳಿದರು.

ಮತದಾನದ ಹಕ್ಕನ್ನು ಕೇಳುತ್ತಿರುವುದು ಪುರುಷರ ಕಾರ್ಯಗಳಲ್ಲಿ ಪ್ರವೇಶಿಸಿ, ಅವರ ಅಧಿಕಾರ ಕಸಿದುಕೊಳ್ಳಲು ಅಲ್ಲ ಎಂದು ಅಭಿಪ್ರಾಯಪಟ್ಟದ್ದುಂಟು. ೧೯೧೮ರ ಡಿಸೆಂಬರ್‌ನಲ್ಲಿ 'ಇಂಡಿಯನ್ ನ್ಯಾಷನಲ್ ಕಾಂಗ್ರೆಸ್'ನ ಅಧಿವೇಶನ ದೆಹಲಿಯಲ್ಲಿ ಸೇರಿತು. ಈ ಅಧಿವೇಶನದಲ್ಲೂ ಸರಳಾದೇವಿ ಚೌಧುರಾಣಿ ಎಂಬುವವರು ಮಹಿಳೆಯರಿಗೆ ಮತದಾನದ ಹಕ್ಕಿನ ನಿರ್ಣಯವನ್ನು ಮಂಡಿಸಿದರು. ತಮ್ಮ ಗುರಿ-ಸಾಧನೆಗಳನ್ನು ತಲುಪಲು ಹಕ್ಕುಗಳನ್ನು ಕೇಳಿ ಪಡೆಯುವುದು ಸ್ತ್ರೀ-ಪುರುಷರಿಬ್ಬರಿಗೂ ಅವಶ್ಯಕ. ಅಲ್ಲದೆ ಪುರುಷರ ಕಾರ್ಯವ್ಯಾಪ್ತಿ ಬೌದ್ಧಿಕ ವಲಯಕ್ಕೂ ಮಹಿಳೆಯರ ಕಾರ್ಯವ್ಯಾಪ್ತಿ ಭಾವನಾವಲಯಕ್ಕೂ ಎನ್ನುವ ಕಲ್ಪನೆಗಳು ಇಂದು ಬದಲಾಗಿವೆ ಎನ್ನುತ್ತ ''ಮಹಿಳೆಯರು ಇಂದು ಪುರುಷರೊಂದಿಗಿನ ಎಲ್ಲ ಕಾರ್ಯಕ್ಷೇತ್ರಗಳಲ್ಲಿ ಪ್ರವೇಶಿಸಿ, ಪುರುಷರೊಂದಿಗೆ ಸಮಾನ ಹೆಜ್ಜೆ ಹಾಕುವರು. ರಾಜಕೀಯ, ಇತರೆ ವಲಯಗಳಲ್ಲಿಯೂ ಪುರುಷರಿಗೆ ಸಹ ಕಾರ್ಯಕರ್ತರಾಗಿ ಕಾರ್ಯ ನಿರ್ವಹಿಸುತ್ತಾರೆ'' ಎಂಬ ಅಭಿಪ್ರಾಯವನ್ನು ವ್ಯಕ್ತಪಡಿಸಿದರು. ವಿವಿಧ ವಲಯಗಳಲ್ಲಿ ವಿವಿಧ ಸಮಾವೇಶಗಳು ನಡೆದವು. 'ದಿ ಆಲ್ ಇಂಡಿಯಾ ವಿಮೆನ್ಸ್ ಕಾನ್ಫರೆನ್ಸ್' ಸಹ ಧೈರ್ಯವಾಗಿ ''ನಮಗೆ ಬೇಕಿರುವುದು ಲೈಂಗಿಕ ವಿಷಯವಾಗಿ ಘರ್ಷಣೆಗಳಲ್ಲ, ಎಂದು ಹೇಳಿತು. ದೇಶಕ್ಕೆ

ಸಂಬಂಧಿಸಿದ ಎಲ್ಲ ಕ್ಷೇತ್ರಗಳ ವಿಷಯಗಳಲ್ಲಿಯೂ ಮಹಿಳೆಯರು ಸಹ ಭಾಗವಹಿಸುವಂಥ ಅವಕಾಶವಿರಬೇಕು. ಈ ಕಾರಣಕ್ಕಾಗಿ ನಾವು ಸಮಾನತೆಯನ್ನು ಕೇಳುತ್ತೇವೆಯೋ ಹೊರತು ಪಶ್ಚಿಮದವರ ತರಹ ಸಮಾನತೆಯನ್ನಲ್ಲ"[೨೬] ಎಂದು ಘೋಷಿಸಿದರು.

ವಸಾಹತುಶಾಹಿ ಆಡಳಿತದ ವಿರುದ್ಧ ಅನೇಕ ಪ್ರಾಂತ್ಯಗಳ ರಾಣಿಯರು, ಇತರೆ ಮಹಿಳೆಯರು ಹೋರಾಡಿ ದೇಶವನ್ನು ವಿದೇಶಿಯರಿಂದ ಬಿಡುಗಡೆ ಮಾಡಿಸಿದ್ದರು. ಈ ಸಂದರ್ಭದಲ್ಲಿ ಸ್ತ್ರೀಯರು ಪಿತೃಪ್ರಧಾನ ಸಮಾಜ ಹಾಗೂ ವಿದೇಶಿಯರ ಆಳ್ವಿಕೆ ಬಗ್ಗೆ ಏಕಕಾಲಕ್ಕೆ ದ್ವಿಮುಖಿ ಹೋರಾಟಗಳನ್ನು ಮಾಡಿದ್ದಾರೆ. ೧೯೫೦ರಲ್ಲಿ ಸಂವಿಧಾನವು ಜಾರಿಗೆ ಬಂದಿದ್ದು. ಅದು ಸ್ತ್ರೀ-ಪುರುಷರ ಸಮಾನತೆಯನ್ನು ಎತ್ತಿಹಿಡಿದು, ಲಿಂಗತಾರತಮ್ಯವನ್ನು ನಿಷೇಧಿಸಿತು. ಅಲ್ಲದೆ ಮಹಿಳೆಯರಿಗೆ ವಿಶೇಷ ಕಾನೂನುಗಳನ್ನು ಪಾಸು ಮಾಡಿತು. ಮಹಿಳೆಯರನ್ನು ಕುರಿತಂತೆ ಅಧ್ಯಯನ ಕೈಗೊಳ್ಳಲು ಮತ್ತು ವರದಿ ಸಲ್ಲಿಸಲು ವಿಶೇಷ ನೇಮಕಾತಿಯನ್ನು ಜಾರಿಗೆ ತಂದಿತು. ಹೀಗಾಗಿ 'ಸ್ತ್ರೀವಾದ' ಎಂಬ ಪದ ಇರದಿದ್ದರೂ ಚಿಂತನೆಗಳು ಮಾತ್ರ ಇದ್ದವು. ವಿಶ್ವಸಂಸ್ಥೆಯು ಮಹಿಳೆಯರಿಗಾಗಿ ಅಂತರಾಷ್ಟ್ರೀಯ ಮಹಿಳಾ ವರ್ಷ, ಮಹಿಳಾ ದಶಕವನ್ನು ಪ್ರಕಟಿಸಿತು. ಇದರಿಂದಾಗಿ ೧೯೮೦ರ ಕಾಲಘಟ್ಟದಲ್ಲಿ ಸ್ತ್ರೀವಾದಿ ಚಿಂತನೆ ಮತ್ತು ಚಳವಳಿಗಳು ತೀವ್ರತೆಯನ್ನು ಪಡೆದವು. ಸರಕಾರದ ಕಾನೂನುಗಳಿಂದ ಅಷ್ಟಾಗಿ ಮಹಿಳೆಯರ ಶೋಷಣೆ, ಲಿಂಗತಾರತಮ್ಯವು ಬದಲಾಗಿಲ್ಲ. ಹೀಗಾಗಿ ಸ್ತ್ರೀವಾದಿ ಹೋರಾಟ ಇನ್ನೂ ತೀವ್ರಗತಿಯಲ್ಲಿ ವ್ಯಾಪಾಕವಾಗುತ್ತಿದೆ. ಸ್ತ್ರೀಪರ ಚಿಂತನೆಯ ಸಮಾವೇಶಗಳು, ಚರ್ಚೆಗಳು, ಪತ್ರಿಕೆ, ಕೃತಿಗಳು ವ್ಯಾಪಾಕವಾಗಿ ಕಂಡುಬರುತ್ತಿವೆ. ಜೊತೆಗೆ ಯಾವುದೇ ಬಗೆಯ ಅಧಿಕಾರದ ದಬ್ಬಾಳಿಕೆ, ದೌರ್ಜನ್ಯ, ಹಿಂಸೆ, ಪರಿಸರದ ಮೇಲೆ ಹಾನಿ ತರುವಂಥ ಯೋಜನೆಗಳು ಮೊದಲಾದವುಗಳನ್ನು ವಿರೋಧಿಸಲಾಗುತ್ತಿದೆ.

೧೯೯೦ರ ಸಂದರ್ಭದಲ್ಲಿ ಮಂಡಲ್ ವರದಿ ವಿರೋಧಿ ಚಳವಳಿ, ರಾಮಜನ್ಮಭೂಮಿ ವಿವಾದ, ಮುಕ್ತಮಾರುಕಟ್ಟೆ, ಜಾಗತೀಕರಣ, ವಿಶ್ವಬ್ಯಾಂಕ್ ಅನುದಾನಗಳಿಂದಾಗಿ ನವೀನ ರೀತಿಯ ಪ್ರಶ್ನೆಗಳನ್ನು ಸ್ತ್ರೀವಾದಿಗಳು ಎದುರಿಸಬೇಕಾಯಿತು. ಸ್ತ್ರೀವಾದಿಗಳಿಗೆ ಮತ್ತೆ ಮತ್ತೆ ಸಮಸ್ಯೆಗಳನ್ನುಂಟು ಮಾಡುವ ರಾಜಕೀಯ ಹುನ್ನಾರಗಳು ಎಲ್ಲೆಡೆ ಇದ್ದೇ ಇರುತ್ತವೆ. ಹಿಂದೂತ್ವವಾದದ ಹೆಸರಿನಲ್ಲಿ ಮಾತೃಭೂಮಿಯ ಕಲ್ಪನೆಯನ್ನು ಆಧಾರವಾಗಿಸಿಕೊಂಡು ಕೋಮುವಾದವನ್ನು ಬೆಳೆಸುತ್ತಿರುವುದನ್ನು ಸ್ತ್ರೀವಾದಿಗಳು ಪ್ರತಿಭಟಿಸಿದ್ದಾರೆ. ಮದ್ಯಪಾನ ವಿರೋಧಿ ಚಳವಳಿಯಲ್ಲಿ ಮಹಿಳೆಯರು ಭಾಗವಹಿಸಿದರೆ ಅಂಥವರನ್ನು ಸಮಾಜ ಸುಧಾರಣೆಯ ಶಕ್ತಿದೇವತೆಯೆಂದು ಕರೆಯಲಾಗುತ್ತದೆ. ಸ್ಥಳೀಯ ಭೂಮಾಲೀಕರ, ರಾಜಕೀಯ ಮುಖಂಡರುಗಳಿಂದ ಮದ್ಯ ಗುತ್ತಿಗೆದಾರರಿಂದ ಮದ್ಯಪಾನ ನಿಷೇಧ ಹೋರಾಟಗಳೊಂದಿಗೆ ಹೇಗೆ ಗುರುತಿಸಿಕೊಂಡಿವೆ ಎಂಬುದನ್ನು ಸ್ತ್ರೀವಾದಿ ಚಿಂತನೆ ಕಂಡುಕೊಂಡಿದೆ. ಇಂಥ ಸ್ಥಿತಿಯಲ್ಲಿ ಮಹಿಳೆಯರ ಪರವಾಗಿ ಮತ್ತು ವಿರುದ್ಧವಾಗಿರುವವರು ಯಾರು ಎನ್ನುವುದು ಪ್ರಶ್ನೆಯಾಗಿಯೆ ಉಳಿದಿದೆ.

ಭಾರತ ಅಸಂಖ್ಯ ಗ್ರಾಮಗಳಿಂದ ಕೂಡಿದ್ದರಿಂದ ಈ ಗ್ರಾಮೀಣ ಮಹಿಳೆಯರಿಗೆ "ಸ್ತ್ರೀವಾದಿ ಪ್ರಜ್ಞೆಯನ್ನು ಹೇಗೆ ತಿಳಿಸಬೇಕು ಎನ್ನುವುದೇ ತೃತೀಯ ಜಗತ್ತಿನ ಸ್ತ್ರೀವಾದಿಗಳ ಸಮಸ್ಯೆಯಾಗಿದೆ"[೨೭] ಎಂದು ಗಾಯತ್ರಿ ಸ್ಪಿವಾಕ್ ಹೇಳಿದ್ದಾರೆ. ಜ್ಯೂಲಿ ಸ್ಟೀಫನ್ಸ್ ಎಂಬಾಕೆ ತೃತೀಯ ಜಗತ್ತಿನ ಮಹಿಳಾ ಸಮಸ್ಯೆಗಳನ್ನು ಅಧ್ಯಯನ ಕೈಗೊಂಡರೆ ಸ್ವವಿಮರ್ಶೆ ಅವಶ್ಯಕ ಎಂದು ಹೇಳುತ್ತಾಳೆ. ಅನಕ್ಷರಸ್ಥ ಗ್ರಾಮೀಣ ಮಹಿಳಾ

ಸೂಚಕರನ್ನು ಭಿನ್ನ ಎಂದೂ ಕಾಣುವ ನೋಟವೇ ಸ್ತ್ರೀವಾದದ ಮೂಲಭೂತ ತಾತ್ವಿಕತೆಗೆ ವಿರುದ್ಧವಾದುದು ಎನ್ನಲಾಗಿದೆ. ಜಾಗತೀಕರಣದ ವಿರುದ್ಧದ ಸಂದರ್ಭದಲ್ಲಿಯೂ ದೇಶಿ ಮತ್ತು ವಿದೇಶಿ ಮಹಿಳೆ ಎಂದು ಭಿನ್ನವಾಗಿ ಗುರುತಿಸಲಾಗಿದೆ. ಪಾಶ್ಚಾತ್ಯ ವಿದ್ವಾಂಸರಿಂದ ಆರಂಭವಾದ ಪೌರಾತ್ಯ ಅಧ್ಯಯನವು ಭಾರತೀಯ ರಾಷ್ಟ್ರೀಯತೆಯ ಪರಿಕಲ್ಪನೆಯನ್ನು ರೂಪಿಸುವಲ್ಲಿ ಪ್ರಭಾವವನ್ನು ಬೀರಿದೆ. ದೇಶಿ-ವಿದೇಶಿ ಮಹಿಳೆ ಎಂಬ ಭೇದ ಕಲ್ಪನೆ ಬೆಳೆದುಬಂದಿತು ಎಂದು ಭಾರತೀಯ ಸ್ತ್ರೀವಾದಿ ಪಾರ್ಥಾ ಚಟರ್ಜಿ ಹೇಳುತ್ತಾರೆ. ಇಂಥ ಭೇದ ಕಲ್ಪನೆಗೆ ಕಾರಣ ಪೌರಾತ್ಯ ಅಧ್ಯಯನದ ಮಿತಿಗಳೆ. ಭಾರತೀಯ ಸ್ತ್ರೀವಾದವನ್ನು ಜಾಗತೀಕರಣದ ವಿರುದ್ಧವಾಗಿ ದೇಶೀ ವಿಚಾರದ ನೆಲೆಯಲ್ಲಿ ಕಟ್ಟಿಕೊಳ್ಳಬೇಕೆಂದು ಸ್ತ್ರೀವಾದಿಗಳು ಹೇಳಿದ್ದಾರೆ. ಮಧುಕೀಶ್ವರರು ತಮ್ಮ ವಿಚಾರವನ್ನು ತಿಳಿಸುತ್ತಾ "ಪ್ರತಿಗಾಮಿ ಹಾಗೂ ಮಹಿಳಾ ವಿರೋಧಿ ಚಿಂತನೆಗಳನ್ನು ಎದುರಿಸಲು ಅಗತ್ಯವಾದ ಅಗಾಧ ಅಂತಃ ಸಾಮರ್ಥ್ಯವು ನಮ್ಮ ಸಾಂಸ್ಕೃತಿಕ ಪರಂಪರೆಗಳಲ್ಲಿಯೇ ಇರುತ್ತದೆ. ಅವುಗಳ ಶಕ್ತಿಯನ್ನು ಕಂಡುಹಿಡಿದು ಸೃಜನಾತ್ಮಕವಾಗಿ ನಾವು ಉಪಯೋಗಿಸಬೇಕು ಆಗ ಮಾತ್ರ ಸ್ತ್ರೀಯರಿಗೆ ಆತಂಕವಾದುದನ್ನು ಸುಲಭವಾಗಿ ನಿಲ್ಲಿಸಬಹುದು. ಬಹಳಷ್ಟು ಪಾಶ್ಚಾತ್ಯೀಕರಣಗೊಂಡ ಆಧುನಿಕರು ಸಂಸ್ಕೃತಿಯ ಆಚೆ ಇದ್ದು ಅದನ್ನು ಸಾರಾಸಗಟಾಗಿ ತಿರಸ್ಕರಿಸುವುದರಿಂದ ಏನೂ ಸಾಧಿಸಲಾಗುವುದಿಲ್ಲ" ಎಂದು ಹೇಳುತ್ತಾರೆ.

ಸ್ವಾತಂತ್ರ್ಯಾನಂತರ ಭಾರತೀಯ ಸ್ತ್ರೀವಾದಿ ಅಧ್ಯಯನವು ವಿಭಿನ್ನ ನೆಲೆಗಳನ್ನು ಹೊಂದಿತು. ಆದಿವಾಸಿ, ರೈತ, ದಲಿತ, ಬಡ ಮಹಿಳೆಯರು ಹೋರಾಟದಲ್ಲಿ ಭಾಗವಹಿಸಿದರು. ಗೇಲ್ ಆಮ್‌ವೆಡ್ ಸಹ ಈ ಮಹಿಳೆಯರನ್ನು ಕುರಿತಂತೆ ಅಧ್ಯಯನ ಮಾಡಿದರು.

ಭಾರತೀಯ ಸಮಾಜದಲ್ಲಿ ವರ್ಗ, ವರ್ಣ, ಲಿಂಗ ಸಮಾನತೆಗಳು ಆಗಾಗ ಸ್ತ್ರೀವಾದಿ ಪಠ್ಯಗಳಲ್ಲಿ ವಿಶ್ಲೇಷಣೆಗೊಳಗಾಗುತ್ತಿವೆ. ಆದರೂ ಕೆಲವು ವಿಶ್ವಾತ್ಮಕ, ಸಾರ್ವತ್ರಿಕ ಪರಿಕಲ್ಪನೆಗಳನ್ನು ಅದು ಏಕಕಾಲಕ್ಕೆ ಪಡೆದಿದೆ. ಅವೆರಡರ ನಡುವಿನ ಸಮನ್ವಯವನ್ನು ತರಲಾರದ ಸ್ಥಿತಿಯಲ್ಲಿ ಇಂದು ಸ್ತ್ರೀವಾದ ಇದೆ.

ಮಹಾಶ್ವೇತಾದೇವಿಯವರ 'ಸ್ತನದಾಯಿನಿ'ಯನ್ನು ಕುರಿತಂತೆ ಗಾಯತ್ರಿ ಸ್ಪಿವಾಕ್ ವಿಚಾರ ಹೀಗಿದೆ. "ಮಹಾಶ್ವೇತಾದೇವಿಯವರ ಸಾಹಿತ್ಯವನ್ನು ಸಾಹಿತ್ಯವೆಂದು ನೋಡಲಾಗದು" ಎಂದಿದ್ದಾಳೆ. ಈ ಸಾಹಿತ್ಯವು ಭಾಷಿಕ ಅಭಿವ್ಯಕ್ತಿಗಳು ಅಲಕ್ಷಿತ ಜನರ ಚಾರಿತ್ರಿಕ ವಾಸ್ತವದ ಕಾಲ್ಪನಿಕ ಕಥನವೆಂದು ಹೇಳುತ್ತಾರೆ. 'ಸ್ತನದಾಯಿನಿ' ಕತೆಯು ಜಾತಿವ್ಯವಸ್ಥೆ, ಧಾರ್ಮಿಕ ಮೌಲ್ಯವ್ಯವಸ್ಥೆ, ವರ್ಗ ಅಸಮಾನತೆ, ನಾಗರಿಕತೆಗಳು ಒಂದಾಗಿ ಹೆಣ್ಣಿನ ಮೇಲೆ ನಡೆಸುವ ಹಿಂಸೆಯನ್ನು ಸೂಕ್ಷ್ಮವಾಗಿ ತಿಳಿಸುತ್ತದೆ ಎನ್ನಲಾಗಿದೆ.

ಭಾರತೀಯ ಸಾಹಿತ್ಯ ಪರಂಪರೆಯಲ್ಲಿ ಎರಡು ಮಾದರಿಗಳನ್ನು ಡಿ.ಆರ್.ನಾಗರಾಜ್ ಅವರು ಗುರುತಿಸುತ್ತಾರೆ. ಮೊದಲನೆಯದು ಗೃಹದೇವತೆ ರೂಪದ 'ಕಾತ್ಯಾಯಿನಿ' ಮಾದರಿ. ತ್ಯಾಗದ ಪ್ರತಿರೂಪವಾದ ಈಕೆಯಲ್ಲಿ ಏನಾದರೂ ಸಮರ್ಪಣೆ ಕುರಿತಾದ ರಾಜಕೀಯ ಪ್ರಜ್ಞೆ ಜಾಗೃತಗೊಂಡರೆ ಮನೆಯೊಂದಿಗೆ ತನ್ನನ್ನು ನಾಶಮಾಡಬಲ್ಲಳು. ಅಧಿಕಾರ ಕೇಂದ್ರದ ವಿರುದ್ಧ ಈಕೆ ಅಡಗು ತಾಣವನ್ನು ಸೃಷ್ಟಿಸಿಕೊಂಡು ಜಾಣತನದಿಂದ ಉಳಿಯಲು ಬಲ್ಲಳು. ಸ್ತ್ರೀ ಶೋಷಣೆಯನ್ನು ಪ್ರಖರ ವೈಚಾರಿಕತೆಯಲ್ಲಿ ವಿರೋಧಿಸುವ ಇನ್ನೊಂದು ಮಾದರಿ 'ಗಾರ್ಗಿ' ಪಾತ್ರದ್ದು. ನೇರ, ಸ್ಪಷ್ಟ, ತಾರ್ಕಿಕತೆ ಹಾಗೂ ಪಾರದರ್ಶಿಕತೆಯುಳ್ಳ ಬಟಾಬಯಲಿನ ಅಭಿವ್ಯಕ್ತಿ ಗಾರ್ಗಿ ಪ್ರತಿಭೆಯಿಂದಾಗುತ್ತದೆ. ಕಾತ್ಯಾಯಿನಿ-ಗಾರ್ಗಿ ಮಾದರಿಗಳನ್ನು ಬಹುಬಲ-ಬಳಕೆ

ಸಂಕೇತವಾಗಿಟ್ಟುಕೊಳ್ಳುವ ಪ್ರಯತ್ನವು ಸಾಮಾಜಿಕ ವಾಸ್ತವವನ್ನು ತಿಳಿಸುವ ಕ್ರಮವಾಗುತ್ತದೆಯೆ ಹೊರತು ಹೋರಾಟದ ತಾತ್ವಿಕತೆಯನ್ನು ಕಟ್ಟಿಕೊಳ್ಳಲು ಸಹಾಯಕವಾಗುವುದಿಲ್ಲ. ಅವರು ಗೃಹವಾದಿನಿಯ ಮಾದರಿಯನ್ನು ಅತಿರೇಕಕ್ಕೆ ಒಯ್ಯುವುದರ ಮೂಲಕ ಅಧಿಕಾರ ಕೇಂದ್ರವನ್ನು ಕಂಗೆಡಿಸಬಹುದೆಂದು ಹೇಳಿದ್ದಾರೆ. ಅಲ್ಲದೆ ಹೆಣ್ಣಿನ ಮೇಲೆ ಆರೋಪಿಸಲಾಗಿರುವ ನೇತ್ಯಾತ್ಮಕ ಗುಣಗಳನ್ನೇ ಅತಿಯಾಗಿ ಒಯ್ದು ಕ್ರಾಂತಿಕಾರಿ ವಿದ್ರೋಹದ ಸಾಧನೆಯನ್ನು ಮಾಡಬಹುದು” ಎನ್ನುತ್ತಾರೆ. ಪಾಶ್ಚಾತ್ಯ ತೀವ್ರಗಾಮಿ ಸ್ತ್ರೀವಾದದ ತಾತ್ವಿಕತೆಯ ಹಿನ್ನೆಲೆಯಲ್ಲಿ ಹುಟ್ಟಿಕೊಂಡ ಈ ವಿಚಾರಗಳು ಭಾರತದ ಅಭಿವೃದ್ಧಿಶೀಲ ರಾಷ್ಟ್ರಗಳಿಗೆ ಪ್ರಸ್ತುತವಾಗುವುದಿಲ್ಲ. ಮಹಿಳೆಯರ ಶಿಕ್ಷಣ, ಆರೋಗ್ಯ, ಉದ್ಯೋಗ, ವರದಕ್ಷಿಣೆ ನಿಷೇಧ, ಸಮಾನ ಆಸ್ತಿ ಹಕ್ಕು ಮೊದಲಾದವುಗಳಿಗೆ ಚಳವಳಿಗಳು ನಡೆಯುತ್ತಿರುವಾಗ ಸಾಂಸ್ಕೃತಿಕ ಹಾಗೂ ತೀವ್ರಗಾಮಿ ಸ್ತ್ರೀವಾದದ ಪ್ರವೇಶ ಅಕಾಲಿಕ ಎನ್ನಬಹುದು. ಅಲ್ಲದೆ ಈಗಾಗಲೇ ಇರುವ ಹೋರಾಟದ ಕಾವನ್ನು ಕುಗ್ಗಿಸುವುದಲ್ಲದೆ ಹೋರಾಟದ ಗೊಂದಲಕ್ಕೂ ಕಾರಣವಾಗುತ್ತದೆ. ಆದ್ದರಿಂದ ಕೇವಲ ಪಠ್ಯಕೇಂದ್ರಿತ ವಿಮರ್ಶೆಗಿಂತ ಸಾಮಾಜಿಕ ಹೋರಾಟಗಳಲ್ಲಿ ಭಾಗವಹಿಸುವುದರ ಅನುಭವದ ಆಧಾರದಲ್ಲಿ ಕಟ್ಟಿಕೊಳ್ಳುವ ಸ್ತ್ರೀವಾದಿ ತಾತ್ವಿಕತೆ ಹೆಚ್ಚು ಅಧಿಕೃತವಾದುದು.

ಬಂಗಾಲದ ಆದಿವಾಸಿಗಳ ನಡುವೆ ಜೀವಿಸುತ್ತಿರುವ ಮಹಾಶ್ವೇತದೇವಿ, ಮಹಾರಾಷ್ಟ್ರದ ವಾರ್ಲಿಗಳ ನಡುವೆ ಇದ್ದು ಸಶಕ್ತವಾಗಿ ಹೋರಾಟವನ್ನು ಮಾಡುತ್ತಿರುವ ಗೋದಾವರಿ ಪರುಳೇಕರ್, ಪರಿಸರ ಚಳವಳಿಯಲ್ಲಿ ತೊಡಗಿಸಿಕೊಂಡಿದ್ದ ಕುಸುಮಾ ಸೊರಬ ಮತ್ತು ವಂದನಾಶಿವ, 'ನರ್ಮದಾ ಬಚಾವ್' ಆಂದೋಲನದ ಮೇಧಾ ಪಾಟ್ಕರ್ ಮೊದಲಾದವರು ತೀವ್ರ ಸಾಮಾಜಿಕ ಬದ್ಧತೆಯೊಂದಿಗೆ ಚಳವಳಿಗಳಲ್ಲಿ ನೇತೃತ್ವ ಹೊಂದಿದ ಮಹಿಳೆಯರು. ಇವರುಗಳೆಲ್ಲಾ ಸ್ತ್ರೀವಾದಿ ಹೋರಾಟಗಳ ಮೂಲ ಪರಿಕಲ್ಪನೆಗಳಾದ ಲಿಂಗವ್ಯವಸ್ಥೆ, ಲಿಂಗಾಧಾರಿತ ಅಸಮಾನತೆ, ಲೈಂಗಿಕ ಹಿಂಸೆ, ಲಿಂಗಾಧಾರಿತ ಶ್ರಮವಿಭಜನೆ ಮುಂತಾದ ಆನ್ವಯಿಕ ಜ್ಞಾನಕ್ಕಿಂತ ತಮ್ಮ ಅನುಭವದ ಮೂಲಕವೇ ಶೋಷಣೆಯ ಸ್ವರೂಪವನ್ನು ವಿಭಿನ್ನ ಆಯಾಮಗಳಲ್ಲಿ ಗ್ರಹಿಸುವ ಕ್ರಮ ಭಾರತೀಯವಾದುದು. ಮಾರ್ಕ್ಸ್‌ವಾದಿ ಹಿನ್ನೆಲೆಯ ಹೋರಾಟವನ್ನು ರೂಪಿಸಿದ ಶರದ್ ಜೋಷಿ ಹಾಗೂ ಶರತ್ ಯಾದವರು ಸ್ತ್ರೀ ಶೋಷಣೆಯ ಆರ್ಥಿಕ, ಸಾಮಾಜಿಕ ಹಾಗೂ ರಾಜಕೀಯ ಮುಖಗಳನ್ನು ಚಿಂತಿಸಿದ್ದಾರೆ. ಸಮಕಾಲೀನ ರೈತ ಹೋರಾಟ, ಜಾಗತೀಕರಣ ವಿರೋಧಿ ಹೋರಾಟದಲ್ಲಾಗಲೀ ಮಹಿಳೆಯ ಸಹಭಾಗಿತ್ವದ ಚಾರಿತ್ರಿಕ ಅವಶ್ಯಕತೆಯನ್ನು ತಾತ್ತ್ವಿಕವಾಗಿ ವಿವರಿಸಿಕೊಳ್ಳಲು ಇವರಿಗೆ ಸಾಧ್ಯವಾಗುತ್ತದೆ.

ಸ್ತ್ರೀ ಸಲಿಂಗ ಕಾಮ ಭಾರತಕ್ಕೇನೂ ಹೊಸದಲ್ಲ, ಶತಮಾನಗಳಷ್ಟು ಹಳೆಯದಾಗಿದೆ. ಆದರೆ ಇಲ್ಲಿರುವ ಪಿತೃಪ್ರಧಾನತೆಯ ನಿರ್ಬಂಧನೆಗಳಿಂದ ಬಹಿರಂಗವಾಗಿ ಚರ್ಚೆ ಆಗುತ್ತಿಲ್ಲ, ವ್ಯಕ್ತವೂ ಆಗುತ್ತಿಲ್ಲ ಅಷ್ಟೆ. ಭಾರತದ ಶಬ್ದಕೋಶದಲ್ಲಿ ಸ್ತ್ರೀ ಸಲಿಂಗ ಕಾಮಕ್ಕೆ ಬೇರೆ ಪದವಿಲ್ಲ. ಭಾರತದ ಪುರಾಣ, ಜಾನಪದ, ಗದ್ಯದಲ್ಲಿ ಸಲಿಂಗಕಾಮದ ಬಗ್ಗೆ ಉಲ್ಲೇಖಗಳಿವೆ. ಮುಂಬೈಯಲ್ಲಿ ಸ್ತ್ರೀ ಸಂಘ, ಸಂಘಿನಿ, ದೆಹಲಿಯ ತರ್ಷಿ ಎಂಬ ಮೂರು ಲೆಸ್ಬಿಯನ್ ಲೈಫ್ ಲೈನ್‌ಗಳಿವೆ. ಭಾರತದಲ್ಲಿ ಸಲಿಂಗ ಕಾಮಿಗಳನ್ನು ಕುರಿತಂತೆ ಗುರುತಿಸುವ, ಅಧ್ಯಯನ ಮಾಡುವ ಚಟುವಟಿಕೆಗಳು ಸಹ ಇವೆ. ೧೯೯೩ರಲ್ಲಿ ದೆಹಲಿಯ ಗೀತಾಬಾತ್ರಾ ಎಂಬಾಕೆ ಲೆಸ್ಬಿಯನ್ ಅಸ್ತಿತ್ವದಲ್ಲಿ ಇರುವ ಬಗ್ಗೆ ಅಧ್ಯಯನ ಕೈಗೊಂಡಳು. ಈಕೆ "ಪಟ್ಟಣಗಳಿಗೆ ವಲಸೆ ಬಂದ ಸ್ತ್ರೀಯರೊಂದಿಗೆ

ನಡೆಸಿದ ಅಧ್ಯಯನದಲ್ಲಿ ಶೇಕಡಾ ೩೦ರಷ್ಟು ಸ್ತ್ರೀಯರು ಲೆಸ್ಬಿಯನ್ ಅನುಭವವುಳ್ಳವರೇ ಆಗಿದ್ದರು. ಮತ್ತೆ ಕೆಲವರು ಅಂಥ ಸಂಬಂಧ, ಅನುಭವ ಪಡೆಯಲು ಆತುರಗೊಂಡವರೇ ಆಗಿದ್ದರು. ಬಹುತೇಕ ಮಹಿಳೆಯರು ಲೆಸ್ಬಿಯನ್‌ನಿಂದ ಭಾವನಾತ್ಮಕವಾಗಿ, ಲೈಂಗಿಕವಾಗಿ ತೃಪ್ತಿ ಪಡೆಯುತ್ತೇವೆ" ಎಂದಿರುವುದನ್ನು ದಾಖಲಿಸಿದ್ದಾಳೆ. ಭಾರತದ ಅನೇಕ ದೇವಾಲಯಗಳಲ್ಲಿ ಸ್ತ್ರೀ ಸಲಿಂಗವನ್ನು ವ್ಯಕ್ತಪಡಿಸುವ ಸಾಕಷ್ಟು ಶಿಲ್ಪ - ವಿಗ್ರಹಗಳನ್ನು ಕಾಣಬಹುದು. ಇದರಿಂದ 'ಸಲಿಂಗ ಕಾಮ' ಪ್ರಾಚೀನದಿಂದಲೂ ನಮ್ಮಲ್ಲಿ ಇತ್ತು ಎಂದು ಚರಿತ್ರೆಯಿಂದ ತಿಳಿದುಬರುತ್ತದೆ.

'ಸ್ತ್ರೀ ಸಲಿಂಗಕಾಮ' ಕುರಿತಂತೆ ಅನೇಕ ಚಲನಚಿತ್ರ, ನಾಟಕಗಳು ಸಹ ಮೂಡಿಬಂದಿದ್ದನ್ನು ಕಾಣಬಹುದು. ೧೯೮೦ರಲ್ಲಿ ವಿಜಯ್ ತೆಂಡೂಲ್ಕರ್‌ರ ನಾಟಕ 'ಮಿತ್ರಾ ಚೆ ಗೋಷ್ಟ್' ಲೆಸ್ಬಿಯನ್ ಪ್ರೇಮವನ್ನು ವ್ಯಕ್ತಪಡಿಸಿತು. 'ರಜಿಯಾ ಸುಲ್ತಾನ್' ಚಲನಚಿತ್ರದಲ್ಲಿ ಹೇಮಮಾಲಿನಿ, ಪರ್ವೀನ್ ಬಾಬಿ ಜೋಡಿ ತೆಗೆದ ಹಾಡಿನಲ್ಲಿ ಸಲಿಂಗ ಕಾಮವನ್ನೇ ಕುರಿತಂತೆ ತಿಳಿಸುತ್ತದೆ. ೧೯೮೦ರ ತೀಜನ್ ಬೀಜನ ಚಿತ್ರ, 'ಜಂಗ್ಲೀಗರ್ಲ್' ಕಥಾ ಸಂಗ್ರಹದಲ್ಲಿ ಉನ್ನತ ವರ್ಗದ ಮಹಿಳೆ ಹಾಗೂ ಬ್ಯೂಟಿಷಿಯನ್ ನಡುವಿನ ಸಲಿಂಗ ಕಾಮ ಸಂಬಂಧಿ ಕತೆಯಿದೆ. ಗೀತಾ ಥಡಾನಿಯ 'ಸಖಿಯಾನಿ' ಒಂದು ಲೆಸ್ಬಿಯನ್ ಆತ್ಮಚರಿತ್ರೆ ಆಗಿದೆ. ಇತ್ತೀಚಿನ ವರುಷಗಳಲ್ಲಿ ಬಿಡುಗಡೆಯಾಗಿ ಹದಿನಾಲ್ಕು ಅಂತರಾಷ್ಟ್ರೀಯ ಪ್ರಶಸ್ತಿಗಳನ್ನು ಪಡೆದ 'ಫೈರ್' ಚಿತ್ರವು ಸಹ ಲೆಸ್ಬಿಯನ್ ಕುರಿತದ್ದೇ. ಈ ಚಿತ್ರದಲ್ಲಿ ಶಬಾನಾ ಆಜ್ಮಿ, ನಂದಿತಾದಾಸರು ಸ್ತ್ರೀ ಸಲಿಂಗಕಾಮವನ್ನು ಅಭಿವ್ಯಕ್ತಿಸಿದ್ದಾರೆ. ಈ ಚಿತ್ರದಲ್ಲಿ ಹಿಂದೂ ದೇವತೆಗಳ ಹೆಸರನ್ನು ಇಟ್ಟುಕೊಂಡು ಪಾತ್ರ ನಿರ್ವಹಿಸಿರುವುದು ಭಾರತದ ಸಂಸ್ಕೃತಿಯ ಮೌಲ್ಯಕ್ಕೆ ಧಕ್ಕೆ ತರಲಾಗಿದೆ ಎಂದೂ, ಕುಟುಂಬ ಎಂಬ ಸಾಮಾಜಿಕ ಘಟಕದ ಇರುವಿಕೆಗೆ ಕುತ್ತು ತರಲಾಗುತ್ತದೆ ಹಾಗೂ ಮುಗ್ಧ ನಾರಿಯರನ್ನು ದಾರಿ ತಪ್ಪಿಸಲು ಇದು ಸಾರ್ವತ್ರಿಕವಾಗಬಹುದು ಎಂದು ಇದರ ವಿರುದ್ಧ ಪ್ರತಿಭಟಿಸಲಾಯಿತು. ಜೊತೆಗೆ ಚಿತ್ರವನ್ನು ಎಲ್ಲಿಯೂ ಪ್ರದರ್ಶಿಸಬಾರದು ಎಂದು ತಡೆಯಲಾಯಿತು.

ಆರಂಭದಲ್ಲಿ ಭಾರತದ ಸ್ತ್ರೀವಾದವು ಸ್ತ್ರೀ ಸುಧಾರಣೆ, ಚಿಂತನೆ, ರಾಜಕೀಯ ಹಕ್ಕು ಪಡೆಯಲು ಮಾತ್ರ ಹೋರಾಟ ಮಾಡಿತು. ಆದರೆ ಸಮಕಾಲೀನ ಸಂದರ್ಭದಲ್ಲಿ ಮಹಿಳಾ ಮೀಸಲಾತಿಗಾಗಿ ಬೇಡಿಕೆ ಸಲ್ಲಿಸಿ ಚರ್ಚೆಗೆ ಒಳಗಾಗುತ್ತಿದೆ. ಇದರ ಬಗ್ಗೆ ಸಾಕಷ್ಟು ಚರ್ಚೆಗಳು, ಗೀತೆ, ನಾಟಕಗಳು, ಲೇಖನಗಳು, ಜನಾಭಿಪ್ರಾಯ ಸಂಗ್ರಹ ಮೊದಲಾದವು ವ್ಯಕ್ತವಾಗಿದ್ದು ಸ್ತ್ರೀವಾದಿಗಳಿಗೆ ಸಮಕಾಲೀನ ಸವಾಲು ಸಹ ಆಗಿರುತ್ತದೆ.

### ೨.೮. ಕನ್ನಡದ ಸಂದರ್ಭದಲ್ಲಿ ಸ್ತ್ರೀವಾದಿ ಚಿಂತನೆ

ಕನ್ನಡದ ಸಂದರ್ಭದಲ್ಲಿ ಸ್ತ್ರೀವಾದಿ ಚಿಂತನೆಯು ಎಂಭತ್ತರ ದಶಕದಿಂದ ಈಚೆಗೆ ವ್ಯಾಪಕವಾಗುತ್ತಿದೆ. ಜೊತೆಗೆ ಸ್ತ್ರೀವಾದಿ ಚಿಂತನೆಯು ಬರೆಹಗಳ ಮುಖೇನ ಸ್ತ್ರೀವಾದಿ ಸಾಹಿತ್ಯ ವಿಮರ್ಶೆ ಸಹ ರೂಪುಗೊಂಡಿದೆ. ಅಲ್ಲದೆ ಅನೇಕ ಸಂಘಟನೆಗಳು ಹುಟ್ಟಿಕೊಂಡು ಸ್ತ್ರೀವಾದಿ ಚಿಂತನೆಯನ್ನು ಬೆಳೆಸುತ್ತಿವೆ. ಸ್ತ್ರೀವಾದಿ ಚಿಂತನೆಯ ಹುಟ್ಟನ್ನು ಚಾರಿತ್ರಿಕ ನೆಲೆಯಿಂದ ಗುರುತಿಸುವುದಾದರೆ ಹನ್ನೆರಡನೆಯ ಶತಮಾನದಿಂದಲೇ ಎನ್ನಬಹುದು.

ಅನೇಕ ವಚನಕಾರರು, ವಚನಕಾರ್ತಿಯರು ಸ್ತ್ರೀವಾದಿ ಪರಿಕಲ್ಪನೆಗಳನ್ನೇ ಆಧಾರವಾಗಿಟ್ಟುಕೊಂಡು ವಚನಗಳನ್ನು ರಚಿಸಿದ್ದಾರೆ. ಆದ್ದರಿಂದ ಕನ್ನಡದಲ್ಲಿ ೧೨ನೆಯ ಶತಮಾನದಲ್ಲಿಯೇ ಸ್ತ್ರೀವಾದಿ ಚಿಂತನೆಯು ಹುಟ್ಟಿತೆನ್ನಬಹುದು. (ಅಧ್ಯಾಯ ಮೂರರಲ್ಲಿ ಸ್ತ್ರೀವಾದಿ ನೆಲೆಯಿಂದ ರಚಿತಗೊಂಡ ವಚನಗಳನ್ನು ಗಮನಿಸಬಹುದು) ಅಂದಿನಿಂದಲೇ ಸ್ತ್ರೀವಾದಿ ಚಿಂತನೆ-ವಿಚಾರಗಳು ಬೆಳೆಯುತ್ತ ಬಂದು ಎಂಭತ್ತರ ದಶಕದಲ್ಲಿ ವ್ಯಾಪಕವಾಗಿ ವ್ಯಕ್ತವಾಗಿದೆ. ಬೆಂಗಳೂರಿನಲ್ಲಿ ೧೯೭೮ರಲ್ಲಿ ಹುಟ್ಟಿಕೊಂಡ 'ಕರ್ನಾಟಕ ಲೇಖಕಿಯರ ಸಂಘ'ವು ಸ್ತ್ರೀವಾದಿ ವಿಚಾರಗಳನ್ನು ವ್ಯಾಪಕವಾಗಿಸಲು ಶ್ರಮಿಸುತ್ತಿದೆ. ೧೯೮೬-೮೭ರಲ್ಲಿ ಸ್ತ್ರೀವಾದಿ ಚಿಂತನೆಯ ಉದ್ದೇಶ, ನೆಲೆ, ಅರ್ಥ, ವೈಚಾರಿಕತೆ-ಚಿಂತನೆ ಮೊದಲಾದವುಗಳ ಕುರಿತಂತೆ ಗಮನ ನೀಡಿದೆ. ಜೊತೆಗೆ ಈ ನಿಟ್ಟಿನಲ್ಲಿ ಹಲವಾರು ಕಾರ್ಯಕ್ರಮಗಳನ್ನು, ವಿಚಾರ ಸಂಕಿರಣಗಳನ್ನು, ಕಾರ್ಯಾಗಾರಗಳನ್ನು ಸಂಘವು ನಡೆಸುತ್ತಿದೆ. ಅನೇಕ ಲೇಖಕ, ಲೇಖಕಿಯರು ಸಹ ಸ್ತ್ರೀವಾದಿ ಚಿಂತನೆಯಿಂದ ಕೃತಿಗಳನ್ನು ರಚಿಸುತ್ತಿದ್ದಾರೆ. ಸ್ತ್ರೀವಾದಿ ಸಾಹಿತ್ಯ ವಿಮರ್ಶೆಯ ಬಗ್ಗೆ ಮಹಿಳೆಗೆ ಸಂಬಂಧಿಸಿದಂತೆ ಕಾನೂನು, ಸಮಾಜ, ಸಂಸ್ಕೃತಿ, ಜಾನಪದ ಹೀಗೆ ಸ್ತ್ರೀ ಮತ್ತು ಇತರ ಹಲವಾರು ಕ್ಷೇತ್ರಗಳ ಸಂಬಂಧವಾಗಿ ಹೆಣ್ಣಿನ ಪರ ದೃಷ್ಟಿಯಲ್ಲಿ ಬರೆದ ಉತ್ತಮವಾದ ಪುಸ್ತಕಗಳು ಹೆಚ್ಚಿನ ಸಂಖ್ಯೆಯಲ್ಲಿ ಪ್ರಕಟಗೊಂಡಿವೆ. ಅಲ್ಲದೆ ಅಭಿನಂದನ, ಸಂಸ್ಮರಣ ಪುಸ್ತಕಗಳಲ್ಲಿ ಕೂಡ ಈಗ ಮಹಿಳೆಗೆ ಸಂಬಂಧಿಸಿದ ವಿಷಯಗಳನ್ನು ಇಲ್ಲವೆ ಮಹಿಳೆಯ ಪ್ರಗತಿಗಾಗಿ ಅವರು ಕೈಗೊಂಡ ಕಾರ್ಯಗಳು, ಸಾಧನೆಯ ಕುರಿತಾದ ವಿಷಯಗಳನ್ನು ಸೇರಿಸಲಾಗುತ್ತಿದೆ. ವಿಶ್ವವಿದ್ಯಾಲಯಗಳಲ್ಲಿ 'ಮಹಿಳಾ ಅಧ್ಯಯನ' ಎಂಬ ಕೇಂದ್ರಗಳು ಸ್ಥಾಪನೆಯಾಗಿವೆ. ಅಲ್ಲದೇ ಇತ್ತೀಚೆಗೆ ಮಹಿಳಾ ವಿಶ್ವವಿದ್ಯಾಲಯವೇ ಅಸ್ತಿತ್ವಕ್ಕೆ ಬಂದಿದೆ.

ಕುವೆಂಪು, ಕಾರಂತ ಮೊದಲಾದವರ ಕೃತಿಗಳನ್ನು ಸ್ತ್ರೀ ದೃಷ್ಟಿಕೋನದಿಂದ ವಿಶ್ಲೇಷಿಸಲಾಗುತ್ತಿದ್ದು, ಮಹಿಳೆಯರ ವಿಷಯ ಮತ್ತು ಬರೆಹಗಳನ್ನು ಪಿಎಚ್.ಡಿ, ಎಂ.ಫಿಲ್. ವಿಷಯಗಳಾಗಿ ಆಯ್ದುಕೊಳ್ಳಲಾಗುತ್ತಿರುವುದು. ಕಲಾ ಪ್ರಕಾರದಲ್ಲೂ ಸ್ತ್ರೀವಾದಿ ಚಿಂತನೆಗೆ ಹೆಚ್ಚಿನ ಆದ್ಯತೆ ನೀಡಿ ಆ್ಯಕ್ಟಿವಿಸ್ಟ್ ನೆಲೆಯಲ್ಲಿ, ಉಗ್ರತೆಯಿಂದ, ಪ್ರಖರತೆಯಿಂದ ಚಿತ್ರಕಲಾವಿದರು ತಮ್ಮ ಕಲಾಕೃತಿಗಳನ್ನು ರಚಿಸತೊಡಗಿದ್ದಾರೆ. ಉದಾಹರಣೆಗೆ ರೇಖಾ ರಾದ್ವಿತೀಯ, ಶೀಲಾಗೌಡ, ಅರ್ಪಣಾಕಾರ್ ಮೊದಲಾದವರ ಕಲಾಕೃತಿಗಳನ್ನು ನೋಡಬಹುದು.

ಮಹಿಳೆಯರ ಸ್ವಾವಲಂಬನೆಗಾಗಿ ಸಶಕ್ತೀಕರಣಕ್ಕಾಗಿ, ಸಬಲೀಕರಣಕ್ಕಾಗಿ ಸರಕಾರ ಮತ್ತು ಸರಕಾರೇತರ ಸಂಸ್ಥೆಗಳು ಶ್ರಮಿಸುತ್ತಿವೆ. ಪತ್ರಿಕೆಗಳು ನಿಯತಕಾಲಿಕೆಗಳಲ್ಲಿ ಮಹಿಳೆಯ ವಿಷಯಕ್ಕಾಗಿ ಪ್ರತ್ಯೇಕವಾದ ಒಂದು ಪುರವಣಿಯನ್ನೇ ಇಡಲಾಗುತ್ತಿದೆ. ಸಾಹಿತ್ಯ ಸಮ್ಮೇಳನಗಳಲ್ಲಿ ಮಹಿಳೆಯರಿಗೆ ಪ್ರತ್ಯೇಕ ಗೋಷ್ಠಿಗಳನ್ನೇ ನಡೆಸಲಾಗುತ್ತಿದೆ. ಜೊತೆಗೆ ಮಹಿಳೆಯರನ್ನು ಸಾಹಿತ್ಯ ಸಮ್ಮೇಳನಗಳ ಅಧ್ಯಕ್ಷರನ್ನಾಗಿ ನೇಮಕ ಮಾಡಲಾಗುತ್ತಿದೆ (ಜಯದೇವಿತಾಯಿ ಲಿಗಾಡೆ, ಶಾಂತದೇವಿ ಮಾಳವಾಡ). ಅಕಾಡೆಮಿಗಳ ಕಾರ್ಯಕ್ರಮಗಳು, ಪುಸ್ತಕ ಪ್ರಕಾಶನಗಳು, ರಾಜಕೀಯ, ಶಿಕ್ಷಣ, ಉದ್ಯೋಗ ಮೊದಲಾದ ಎಲ್ಲ ಕ್ಷೇತ್ರಗಳಲ್ಲೂ ಮಹಿಳಾ ದೃಷ್ಟಿಕೋನದಿಂದ ನೋಡುವ, ಅಧ್ಯಯನ ಮಾಡುವ ಪರಿಶೀಲನೆಗೆ ಮುಂದುವರಿಸುವ ಪ್ರಕ್ರಿಯೆ ಬೆಳೆದುಬರುತ್ತಿದೆ. ವಿಶ್ವವಿದ್ಯಾಲಯ-ಕಾಲೇಜುಗಳ ಮಟ್ಟದಲ್ಲಿ ಎಚ್.ಎಸ್.ಶ್ರೀಮತಿ, ಬಿ.ನ.ಮಂಗಳಾ, ವಿಜಯಾದಬ್ಬೆ, ವೀಣಾ ಶಾಂತೇಶ್ವರ, ಮಲ್ಲಿಕಾ ಘಂಟಿ, ರಾಮೇಶ್ವರಿ ವರ್ಮಾ ಮೊದಲಾದವರು. ಕಾನೂನು

ಕ್ಷೇತ್ರದಲ್ಲಿ ಹೇಮಲತಾ ಮಹಿಷಿ, ಪ್ರಮೀಳಾ ನೇಸರ್ಗಿ ಮೊದಲಾದವರು ಸಂಘಟನೆಯ ಮೂಲಕ ಎಚ್.ಎಸ್. ಪಾರ್ವತಿ, ಶಾಂತಾನಾಗರಾಜ್, ನಾ.ಸ.ರಾವ್, ಜಯಲಕ್ಷ್ಮಿ ಮುಂತಾದವರು, ವೈಜ್ಞಾನಿಕ ಕ್ಷೇತ್ರದಲ್ಲಿ ನೇಮಿಚಂದ್ರ, ನಾಟಕ ಕ್ಷೇತ್ರದಲ್ಲಿ ಗೀತಾ ರಾಮಾನುಜಂ ಮೊದಲಾದವರು ಸ್ತ್ರೀವಾದಿ ಚಿಂತನೆಗಳನ್ನು ಮೂಡಿಸುತ್ತಿದ್ದಾರೆ.

ಸ್ತ್ರೀವಾದವನ್ನು ಕುರಿತಂತೆ ಪೂರ್ವಗ್ರಹ ಕಲ್ಪನೆಗಳು ಇವೆ. ಇವುಗಳಿಗೆ ಎಷ್ಟೋ ವಿದ್ಯಾವಂತರು ಒಳಗಾಗಿದ್ದಾರೆ. ಸ್ತ್ರೀವಾದ ಎಂದರೆ ಸಾಕು ಅನೇಕರು ನಡೆದುಕೊಳ್ಳುವ, ಮಾತನಾಡುವ ರೀತಿಯೇ ಭಿನ್ನ. ಇಂಥವರು ಪುರುಷ ಪ್ರಧಾನ ಮೌಲ್ಯಗಳಿಂದಲೇ ಮುಳುಗಿ ಹೋಗಿರುತ್ತಾರೆ ಎನ್ನಬಹುದು. ಸಮಕಾಲೀನ ಸಂದರ್ಭದಲ್ಲಿ ಶಿಕ್ಷಣ-ಉದ್ಯೋಗ, ಆಡಳಿತ, ರಾಜಕೀಯ, ನಡೆ-ನುಡಿ, ಉಡುಗೆ-ತೊಡುಗೆ, ಆಚರಣೆಗಳು, ರಸ್ತೆಗಳು, ಬಸ್ಸು, ರೈಲು, ದೂರವಾಣಿ, ದೂರದರ್ಶನ, ಮುದ್ರಣ, ಆರ್ಥಿಕ ಯೋಜನೆಗಳು ಮೊದಲಾದವು ಪಾಶ್ಚಿಮಾತ್ಯರ ಪ್ರೇರಣೆಯಿಂದ ಅಸ್ತಿತ್ವದಲ್ಲಿವೆ. ಹೀಗಿದ್ದಾಗ 'ಸ್ತ್ರೀವಾದ' ಎನ್ನುವುದನ್ನಷ್ಟೇ ಏಕೆ ಪಾಶ್ಚಿಮಾತ್ಯದ್ದು ಎನ್ನಬೇಕು? ಸ್ತ್ರೀವಾದ ಪಾಶ್ಚಿಮಾತ್ಯದ್ದೇನೂ ಅಲ್ಲ. ಆದರೆ ಪಾಶ್ಚಿಮಾತ್ಯ ಆಹಾರ-ಪಾನೀಯ, ಉಡುಗೆ-ತೊಡುಗೆ, ಶಿಕ್ಷಣ ಮೊದಲಾದವು ಭಾರತ-ಕನ್ನಡದ ಪರಿಸರದಲ್ಲಿ ಪ್ರಭಾವ ಬೀರಿವೆ. ಅಂತೆಯೇ ಭಾರತ ಅಥವಾ ಕನ್ನಡದ ಸ್ತ್ರೀಪರ ಚಿಂತನೆಗಳು ಪಾಶ್ಚಿಮಾತ್ಯ ಪ್ರಭಾವಕ್ಕೆ ಒಳಗಾಗಿರಬಹುದು ಅಷ್ಟೆ.

### ೨.೯. ಚರಿತ್ರೆ ಮತ್ತು ಸ್ತ್ರೀವಾದದ ಸ್ವರೂಪ

'ಚರಿತ್ರೆ' ಎಂದರೆ ರಾಜ ಮತ್ತು ಅವನ ಪರಿವಾರದವರು ಕೈಗೊಂಡ ಸಾಧನೆಗಳು. ಯುದ್ಧ-ಬಿರುದು ಮೊದಲಾದವುಗಳನ್ನು ಮಾತ್ರ ನಿರ್ವಚಿಸುತ್ತದೆ. ಆದರೆ ಜಗತ್ತಿನ ಎಲ್ಲ ಚರಿತ್ರೆಗಳ ನಿರ್ಮಾಣದಲ್ಲಿ ಮಹಿಳೆಯರು ಭಾಗವಹಿಸಿದ್ದಾರೆ. ಅವರದೆ ಆದ ಕೊಡುಗೆ, ಸಾಧನೆಗಳನ್ನು ನೀಡಿದ್ದಾರೆ. ಯುದ್ಧದಂಥ ಗಂಭೀರ ಕ್ಷೇತ್ರಗಳಲ್ಲಿ ಪ್ರತ್ಯಕ್ಷವಾಗಿ, ಪರೋಕ್ಷವಾಗಿಯೂ ಭಾಗವಹಿಸಿರುತ್ತಾರೆ. ಆದರೆ ಚರಿತ್ರೆಯ ರಚನೆಯ ಸಂದರ್ಭದಲ್ಲಿ ಚರಿತ್ರಕಾರರು ಮಹಿಳೆಯರ ದಾಖಲೆಗಳನ್ನು ಗೌಣವಾಗಿಸಿದ್ದಾರೆ. ಹೀಗಾಗಿ ಇವರು ದಾಖಲೆಗಳಲ್ಲಿ ಉಲ್ಲೇಖವಾಗದೆ ಮುಚ್ಚಿಹೋಗಿದ್ದಾರೆ. ಒಂದು ವೇಳೆ ಅಪವಾದಗಳಂತೆ ಮಹಿಳೆಯರನ್ನು ಕುರಿತು ಉಲ್ಲೇಖಿಸಿದ್ದರೂ ಅದು ಪುರುಷ ಪ್ರಧಾನ ನೆಲೆಯಿಂದಲೇ. ಹೀಗಾಗಿ ಚರಿತ್ರೆಯು ಅಪರಿಪೂರ್ಣವಾದದ್ದು, ಏಮ್ಮುಖವಾದದ್ದು. ಚರಿತ್ರಕಾರರು ಮಹಿಳೆಯರಿಗೆ ಚರಿತ್ರೆಯಲ್ಲಿ ದ್ರೋಹ ಎಸಗಿದ್ದಾರೆ. ಇದನ್ನೆಲ್ಲಾ ಕಂಡುಕೊಂಡ ಸ್ತ್ರೀವಾದ ಮಹಿಳೆಯರ ದಾಖಲೆಗಳನ್ನು ಏಕೆ? ಎಲ್ಲಿ? ದಾಖಲಿಸಿಲ್ಲ ಎಂದು ಪ್ರಶ್ನಿಸುತ್ತ ಚರಿತ್ರೆಯನ್ನು ಪ್ರವೇಶಿಸುವುದು ಹಾಗೂ ಹೆಣ್ಣಿನ ದೇಹ ಪುರುಷನಿಗಿಂತ ಭಿನ್ನವಾಗಿರುವುದರಿಂದಲೂ ಆಕೆಯ ದಾಖಲೆಗಳನ್ನು ನಿರ್ಲಕ್ಷ್ಯಿಸಿದೆ. ಇದಕ್ಕೆ ಪುರುಷನ ಸ್ವಾರ್ಥ ಮನೋಭಾವವು ಕಾರಣವಾಗಿದೆ. ಅಲ್ಲದೆ ಮಹಿಳೆಯರು ಪುರುಷನಿಗೆ ಹೇಗೆ ಅಧೀನರಾದರು, ಅಧೀನತೆಗೆ ಪುರುಷರನ್ನು ಹೊರತುಪಡಿಸುವಲ್ಲಿ ಮಹಿಳೆಯರ ಪಾತ್ರವೇನು? ಮುಂತಾದವುಗಳಿಗೆ ಉತ್ತರಗಳನ್ನು ಕಂಡುಕೊಳ್ಳಲು ಮುಂದಾಗಿದೆ. ಚರಿತ್ರೆಯು ನಿರ್ದಿಷ್ಟ ಘಟ್ಟದಲ್ಲಿ ಬದಲಾದ ಉತ್ಪಾದನಾ ವಿಧಾನಗಳಿಂದ ಹಾಗೂ ಖಾಸಗಿ ಆಸ್ತಿಯ ಬೆಳವಣಿಗೆಯಿಂದ ಪುರುಷನಿಗೆ ಮಹಿಳೆ ಆಸ್ತಿಯಂತೆ ಗೋಚರಿಸಿದ್ದಾಳೆ. ಆರ್ಥಿಕವಾಗಿ, ಸಾಮಾಜಿಕವಾಗಿ, ದೈಹಿಕವಾಗಿ ಅಧೀನಳಾಗಿ ದೈಹಿಕ, ಮಾನಸಿಕ ಹಿಂಸೆಗೆ ಹೆಚ್ಚು ಒಳಗಾಗಿದ್ದು, ಪುರುಷ

ಅಗತ್ಯಗಳಿಗೆ ತಮ್ಮನ್ನು ಪೂರಕಗಳಂತೆ ರೂಪಿಸಿಕೊಂಡಿದ್ದಾಳೆ. ಇಂಥ ವ್ಯವಸ್ಥೆಯು ನಿರ್ಮಾಣವಾಗಿ ಮಹಿಳೆಯರ ಜಗತ್ತಿನ ಮೇಲೆ ಪುರುಷ ಪ್ರಭುತ್ವ ಸ್ಥಾಪಿಸಿಕೊಂಡು ತನ್ನನ್ನು ಅಧೀನದಾಚೆ ಇಟ್ಟುಕೊಂಡ ಪುರುಷನು ಸ್ತ್ರೀಯರನ್ನು ಹೇಗೆ ನಿಯಂತ್ರಿಸಿ ತೃಪ್ತಿಪಡಿಸಿ ತನ್ನ ಅಧೀನಕ್ಕೆ ಒಳಪಡಿಸಬಹುದೆಂಬ[10] ಅಂಶಗಳನ್ನು ಸಮಾಜ ವಿಜ್ಞಾನಗಳಲ್ಲಿನ ಬಹುಪಾಲು ಸಂಶೋಧನೆಯು ಪುರುಷರಿಗೆ ತಿಳಿಸಿಕೊಡುವುದರಲ್ಲಿ ಸಹಾಯಕವಾಗಿದೆ. ಜೊತೆಗೆ ಚರಿತ್ರೆಯಲ್ಲಿ ಮಹಿಳೆಯ ಅಗೋಚರತೆಗೆ 'ಮಾನವ' ಅನುಭವದ ಸಾರ್ವತ್ರೀಕರಣ ಎಂದು ಹೇಳಬಹುದು.

'ಜರ್ಡಾತಾಲರ್ನರ' ಎಂಬುವವಳು ಚರಿತ್ರೆಯ ಸಮಾವೇಶವೊಂದರ ಮೊದಲ ಮಹಿಳಾ ಅಧ್ಯಕ್ಷೆ ಆಗಿದ್ದಳು. ಈಕೆಯು ಸಮಾವೇಶದಲ್ಲಿ ಭಾಷಣ ಮಾಡುತ್ತಾ "ಮಹಿಳೆಯರಿಗೆ ಒಂದು ಚರಿತ್ರೆ ಇದೆ ಹಾಗೂ ಸ್ತ್ರೀಯರೂ ಚರಿತ್ರೆಯಲ್ಲಿ ಇದ್ದಾರೆ" ಎಂದು ಹೇಳಿದಳು. ಇವಳ ಈ ಭಾಷಣ ಲಿಂಗವ್ಯವಸ್ಥೆಯ ಚಿಂತನೆಯಲ್ಲಿ ಹೊಸದೊಂದು ವಿಚಾರವನ್ನೇ ಹುಟ್ಟಿಸಿತು. 'ಸ್ತ್ರೀತ್ವ' ಎನ್ನುವುದು ಅವಶ್ಯಕ ಅಸ್ಮಿತೆಯೆಂದೇ ತಿಳಿದಿದ್ದ ಚರಿತ್ರೆಕಾರರು ಇನ್ನಿತರ ಸಮಾಜ ವಿಜ್ಞಾನಿಗಳೂ ಈಗ 'ಸ್ತ್ರೀತ್ವ' ಎನ್ನುವುದೊಂದು 'ಸಂರಚನೆ' ಮಾತ್ರ ಎಂದೇ ಅರಿತರು. ಹೆಣ್ಣಿನ ಅಸಮಾನ ಸ್ಥಿತಿಗತಿಗಳನ್ನು ಕುರಿತು ಅಂತಿಮವಲ್ಲದ ಪ್ರಶ್ನೆಗಳನ್ನು ಎದುರಿಸುವಲ್ಲಿ ಈ ಹೊಸ ಪ್ರಮೇಯ ವಿಮೋಚನೆಯ ಹಾದಿಗೆ ದ್ವಾರವಾಯಿತು. ಮಹಿಳಾ ಚರಿತ್ರೆಯಲ್ಲಿ ಕುತೂಹಲವುಳ್ಳವರು ಗತಕಾಲದ ಬಹುಸಂಖ್ಯಾತ ಸ್ತ್ರೀಯರ ಜೀವನದ ದಾಖಲೆಗಳನ್ನು ಉಲ್ಲೇಖಿಸುವ ಗುರಿ ಹೊಂದಿದವರು. ಆ ನಿಟ್ಟಿನಲ್ಲಿ ಅಧ್ಯಯನ ನಡೆಸುತ್ತಾ ಕೃತಿಗಳನ್ನು ಬರೆಯುತ್ತಿದ್ದಾರೆ. ಇವುಗಳೇ ಐತಿಹಾಸಿಕ ಪ್ರಮಾಣದ ಲಕ್ಷಣಗಳನ್ನು ಮರುಸ್ಥಾಪಿಸಲು ಸಹಾಯಕವಾಗಿರುವುದು.

ಪಾಶ್ಚಾತ್ಯರಲ್ಲಿ ಸ್ತ್ರೀಪರ ಚರಿತ್ರೆಯನ್ನು ಮೂರು ಬಗೆಯ ಶೋಧನೆಗಳಿಂದ ನೋಡಿದರು. 'ಕೂಡಿಸುವ ಚರಿತ್ರೆ' ಎನ್ನುವುದು ಚರಿತ್ರೆಯ ಮೂಲಗಳನ್ನು ಮರು ಪರೀಕ್ಷೆಗೆ ಒಳಪಡಿಸುವ ಮುಖಾಂತರ ಮಹಿಳೆಯರ ಕೊಡುಗೆಗಳನ್ನು, ಅವರ ಪಾತ್ರಗಳನ್ನು ಶೋಧಿಸುವ ಕಾರ್ಯ ನಿರ್ವಹಿಸುವುದು. ಎರಡನೆಯ ಮಾದರಿ 'ಲಿಂಗವ್ಯವಸ್ಥೆಯ ಪರಿಣಗನೆಯ ಚರಿತ್ರೆ' ಆಗಿದೆ. ಇದು ಚರಿತ್ರೆಯ ಲೇಖನಶಾಸ್ತ್ರದ ಸಂಗತಿಗಳನ್ನು ಹೊಸ ಸ್ತ್ರೀವಾದಿ ನೋಟದಿಂದ ನೋಡುವ ಸಾಮಾಜಿಕ ಸಂಬಂಧಗಳ ವಿಶ್ಲೇಷಣೆಯಲ್ಲಿ ಲಿಂಗವ್ಯವಸ್ಥೆಯ ಭೇದ-ಭಾವವೇ ಪ್ರಧಾನ ಸೂತ್ರ ಎಂಬ ವಿಚಾರ ಇರುತ್ತದೆ. ಮೂರನೆಯ ಶೋಧ 'ಕೊಡುಗೆಯ ಚರಿತ್ರೆ' ಆಗಿರುವುದು. ಪಿತೃಪ್ರಧಾನ್ಯವು ಹೆಣ್ಣಿನ ಚಟುವಟಿಕೆಗಳನ್ನು ಸದಾ ನಿಯಂತ್ರಿಸುತ್ತಲೇ ಇರುತ್ತದೆ ಎಂದು ಹೇಳುತ್ತದೆ. ಈ ಮೂರು ಬಗೆಯ ಶೋಧನೆಗಳು ಪುರುಷರ ಮಾನದಂಡಗಳಿಂದ ನಿರ್ಧರಿಸಲ್ಪಟ್ಟ ಮಹಿಳೆಯರನ್ನು ಚರಿತ್ರೆಯ ಪರಿಶಿಷ್ಟಗಳನ್ನಾಗಿ ಉಳಿಸಿವೆ ಹಾಗೂ ಚಾಲ್ತಿಯಲ್ಲಿರುವ ಕ್ರಿಯಾಮಾದರಿಯನ್ನು ಸವಾಲೆಸೆಯದಂತೆ ಮಾಡಿವೆ.

ಸ್ತ್ರೀವಾದಿ ಚರಿತ್ರಕಾರರು ಮಹಿಳೆಯರ ಪ್ರತಿದಿನದ ಜೀವನದ ಗುಣಗಳನ್ನು ಕುರಿತು ಅವರು ಬದುಕಿದ, ದುಡಿದ ನೆಲೆಗಳ ಬಗ್ಗೆ, ಯಾವ ವಯಸ್ಸಿನಲ್ಲಿ ವಿವಾಹವಾದರು, ಮಕ್ಕಳನ್ನು ಹೆತ್ತರು ಮೊದಲಾದವುಗಳನ್ನು ಕುರಿತು ಕುಟುಂಬದಲ್ಲಿ ಸ್ತ್ರೀಯರ ಪಾತ್ರ, ಅವರ ವರ್ಗ ಸ್ವರೂಪ ಹಾಗೂ ಇತರೆ ಸ್ತ್ರೀಯರೊಂದಿಗೆ ಅವರ ಸಂಬಂಧಗಳ ಬಗ್ಗೆ, ತಮ್ಮ ಸ್ಥಾನಮಾನಗಳನ್ನು ಕುರಿತು ಮಹಿಳಾ ಅನಿಸಿಕೆಗಳ ಬಗ್ಗೆ, ಯುದ್ಧ-ಕ್ರಾಂತಿಗಳೊಂದಿಗಿನ ಅವರ ಸಂಬಂಧಗಳ ಬಗ್ಗೆ ಪ್ರಶ್ನೆಗಳನ್ನು ಕೇಳಲಾರಂಭಿಸಿದ್ದಾರೆ.[11]

ಮಹಿಳಾ ಚರಿತ್ರೆಯು 'ಖಾಸಗಿ ಹಾಗೂ ಸಾರ್ವಜನಿಕ' ವಲಯಗಳೆಂಬ ವಿಂಗಡಣೆಯನ್ನು ಕೂಡಾ ಖಂಡಿಸಿದೆ. ಈ ವಿಂಗಡಣೆಯು ಐತಿಹಾಸಿಕ ವಾಸ್ತವವನ್ನು ತಿಳಿಸುವುದರ ಬದಲು 'ಸ್ತ್ರೀಯರ ಜಾಗ' ಮತ್ತು 'ಪುರುಷನ ಜಗತ್ತು'ಗಳ ಬಗೆಗಿನ ಪ್ರಚಲಿತ ಕಲ್ಪನೆಗಳಿಗೆ ಪ್ರೇರಕ ಆಗುತ್ತದೆ. ಚರಿತ್ರೆಯ ಯಾವ ಕ್ರಾಂತಿಯಾಗಲಿ, ಪ್ರಗತಿಪರ ಕಾಲಘಟ್ಟವಾಗಲಿ ಮಹಿಳೆಯರು ಸಾಮಾಜಿಕವಾಗಿ ಮುನ್ನಡೆಯಲು ಸಹಾಯವಾಗಲಿಲ್ಲ ಎಂದು ಕೆಲವು ಸ್ತ್ರೀವಾದಿ ಚರಿತ್ರಕಾರರು ಅಭಿಪ್ರಾಯ ವ್ಯಕ್ತಪಡಿಸಿದ್ದಾರೆ. ಉದಾಹರಣೆಗೆ ಜೋನ್ಸ್ ಕೆಲ್ಲಿ ಅವರು 'ಸ್ತ್ರೀಯರ ಪಾಲಿಗೆ ಪುನರುಜ್ಜೀವನ ಮತ್ತು ಅದರ ಕಾಲಘಟ್ಟ ಯಾವ ತರಹದ ಬದಲಾವಣೆಯನ್ನು ತರಲಿಲ್ಲ'[೩೨] ಎಂದು ಹೇಳಿದ್ದಾನೆ.

ಹದಿನೆಂಟನೆಯ ಶತಮಾನದ ಅಂತ್ಯದಲ್ಲಿ ಹಾಗೂ ಹತ್ತೊಂಬತ್ತನೆಯ ಶತಮಾನದ ಆರಂಭದಲ್ಲಿ ಭಾರತವನ್ನು ಕುರಿತು ಅಧ್ಯಯನ ಮಾಡಿದ ಇಂಗ್ಲೀಶರು, ಸಂಸ್ಕೃತವು ಇಂಡೋ-ಯುರೋಪಿಯನ್ ಎಂದು ಕಂಡುಕೊಂಡು ಭಾಷಾ ಸಮುದಾಯದ ಮೂಲ ಎನ್ನುವುದನ್ನು ಗುರುತಿಸಿದರು. ಸುಮಾರು ೩,೫೦೦ ವರುಷಗಳಷ್ಟು ಹಳೆಯದಾದ ಋಗ್ವೇದದಲ್ಲಿ ಪ್ರಾಚೀನ ಭಾರತದ ಸತ್ವವು ರಕ್ಷಿತವಾಗಿದೆ[೩೩] ಎಂದು ಹೇಳಿದರು. ಜೊತೆಗೆ ಭಾರತಕ್ಕೆ ಸುವರ್ಣಾಕ್ಷರಗಳಿಂದ ರಚಿಸಬಹುದಾದ ಪೂರ್ವ ಚರಿತ್ರೆಯಿತ್ತು. ಆದರೆ ಅದು ಈಗ ನಶಿಸಿಹೋಗಿದೆ. ಭಾರತ ತನ್ನ ಗತವೈಭವದ ಚರಿತ್ರೆಯನ್ನು ವಸಾಹತುಶಾಹಿಗಳ ಸಹಾಯದಿಂದಲೆ ಹಿಂತಿರುಗಿ ಪಡೆದುಕೊಳ್ಳಲು ಸಾಧ್ಯ ಎಂದರು. ಅಲ್ಲದೆ ಐರೋಪ್ಯ, ಏಷ್ಯಾ ಸಂಸ್ಕೃತಿಗಳು ಮೂಲದಲ್ಲಿ ಒಂದೇ ಎಂದು ತೋರಿಸಿದರು. ಆದರೆ ಸೂಸಿ ಥಾರು ಮತ್ತು ಕೆ.ಲಲಿತಾ ಅವರು 'ಇಂಡೋಲಜಿಸ್ಟ'ರ ಸಿದ್ಧಾಂತದಲ್ಲಿ ಚರಿತ್ರೆಯನ್ನು ಅಳಿಸಿಹಾಕುವ ಉದ್ದೇಶ ಇರುತ್ತದೆ, ಅವರು ಭಾರತಕ್ಕೆ ವೇದಕಾಲೀನ ಸ್ಥಿತಿಯ ದರ್ಶನ ಮಾಡಿಸುವುದೊಂದೇ ಸರಿಯಾದ ಮಾರ್ಗ ಎಂದುಕೊಂಡಿದ್ದರು'[೩೪] ಎಂದು ವಿಶ್ಲೇಷಿಸಿದ್ದಾರೆ.

೧೯ನೆಯ ಶತಮಾನದ ಆರಂಭದಲ್ಲಿ ಕ್ರೈಸ್ತ ಮಿಶನರಿಗಳು, ಜೇಮ್ಸ್ ಮಿಲ್‌ನಂಥ ಚರಿತ್ರಕಾರರು ಭಾರತೀಯ ಸ್ತ್ರೀಯರ ಸ್ಥಾನ ಮಾನದ ಪ್ರಶ್ನೆಯನ್ನು ನಾಡಿನ ನಾಗರಿಕತೆಯ ಮಟ್ಟದೊಂದಿಗೆ ಹೋಲಿಕೆ ಮಾಡಿ ತಿಳಿಯಲು ಪ್ರಯತ್ನಿಸಿದರು. ಇವರು ಇಂಡಾಲಜಿಸ್ಟರಿಗಿಂತ ಭಿನ್ನವಾದ ಅಭಿಪ್ರಾಯವನ್ನು ತಾಳಿದರು. ಭಾರತೀಯ ಮಹಿಳೆಯರೊಂದಿಗೆ ಅಲ್ಲಿಯ ಪುರುಷರು ಅಸಹ್ಯವಾಗಿ ವರ್ತಿಸುತ್ತಾರೆ. ಅಂತೆಯೇ ಈ ಮಹಿಳೆಯರನ್ನು ರಕ್ಷಿಸುವುದು ಕಲೋನಿಯಲ್ (ವಸಾಹತುಶಾಹಿ) ಆಡಳಿತದಿಂದ ಮಾತ್ರ ಸಾಧ್ಯ ಎಂದು ಹೇಳಿದರು. 'ಕ್ಲಾರಿಸ್ ಬಾದರ್ಸ್' ಎಂಬಾಕೆ ಆಧುನಿಕ ಪಶ್ಚಿಮಕ್ಕೆ ಸಮಾನವಾಗಿ ಆರ್ಯ ಮಹಿಳೆಯ ಉದಾತ್ತ ಗುಣಗಳನ್ನು ಸರಿಸಮಾನವಾಗಿ ತರಲು ಮುಂದಾದಳು.[೩೫]

೧೯ನೆಯ ಶತಮಾನದ ಅಂತ್ಯದಲ್ಲಿ ರಾಷ್ಟ್ರೀಯ ಹೋರಾಟವು ಬಲಪಡಿಸಿಕೊಂಡಾಗಲೂ ಮಹಿಳೆಯರನ್ನು 'ಭಾರತೀಯ ಸಂಸ್ಕೃತಿಯ ರಕ್ಷಕಿ' ಎಂದೇ ಗುರಿತಿಸಲಾಯಿತು. ಅದೇ ಹೊತ್ತಿನಲ್ಲಿ ಸ್ತ್ರೀಯರ ಸಂಬಂಧದ ಪ್ರಶ್ನೆಗಳನ್ನು ಸಹ ಚರ್ಚಿಸಲಾಯಿತು. ಭಾರತೀಯತೆಯನ್ನು ಪ್ರತಿನಿಧಿಸುವ ಎಲ್ಲಾ ಬಾಹ್ಯ ಸಂಕೇತಗಳನ್ನು ಕಾಪಾಡಿಕೊಂಡು ಬರುವ ಹೊಣೆಗಾರಿಕೆ ಮಹಿಳೆಯರದ್ದೆ ಎನ್ನಲಾಯಿತು. ಅಲ್ಲದೆ ಮಹಿಳೆಯರನ್ನು ಪ್ರತ್ಯಕ್ಷ ದೇವತೆ ಎಂದೇ ರಾಷ್ಟ್ರೀಯವಾದಿಗಳು ಭಾವಿಸಿಕೊಂಡರು.

ವಸಾಹತುಶಾಹಿ ಆಕ್ರಮಣಕಾರರಿಂದ ರಕ್ಷಿಸಿಕೊಳ್ಳಬೇಕಾದ ತಾಯಿ ಭಾರತಿ ಬೇರೆಯಲ್ಲ, ಭಾರತಮಾತೆ ಬೇರೆಯಲ್ಲ. ಹೀಗೆ ದೈವೀಕರಣದಿಂದ ನಿಜವಾದ ಮನುಷ್ಯ ವಾಸ್ತವಿಕ ಸ್ತ್ರೀ ಸಮುದಾಯ ಅರಿತುಕೊಂಡು ಹೆಣ್ಣಿನ ಸಾಂಕೇತಿಕ ವ್ಯಕ್ತಿತ್ವ ಮೆರೆಯಿತು. ಇದರಿಂದಲೇ ಕಾಳಿ, ದುರ್ಗೆ ದೇವರನ್ನು ಪೂಜಿಸಿದರೆ, ಗೃಹಿಣಿಯರನ್ನು ಹೊಡೆಯುವ, ದಹನ ಮಾಡುವುದು ಸಾಧ್ಯವಾಗುತ್ತದೆ. ರಾಷ್ಟ್ರೀಯವಾದಿಗಳು ಮಹಿಳೆಯರನ್ನು ದೇವತೆ ಎಂದು ಹೊಗಳುತ್ತ ಅವರು ರಾಷ್ಟ್ರೀಯ ಚಳವಳಿಯಲ್ಲಿ ಪಾಲ್ಗೊಳ್ಳದಂತೆ ನೋಡಿಕೊಂಡದ್ದು. ಭೌತಿಕವಾಗಿ ಹೀನಸ್ಥಾನ ಮತ್ತು ಆಧ್ಯಾತ್ಮಿಕವಾಗಿ ಉನ್ನತ ಮಾನಗಳನ್ನು ನೀಡುತ್ತಾ ರಾಷ್ಟ್ರೀಯತೆಯು ಹೆಣ್ಣನ್ನು ಹೊಸ ಬಗೆಯ ಅಂಕೆಯಲ್ಲಿರಿಸಿಕೊಂಡಿತು.

ಕಲ್ಕತ್ತಾ ಮೂಲದ 'ಅಲಕ್ಷಿತ ವಲಯಗಳ ಅಧ್ಯಯನವು' ಮಹಿಳೆಯ ಚರಿತ್ರೆಯನ್ನು ರಚಿಸುವಾಗ ಉಂಟಾದ ಹೊಸ ಸಮಸ್ಯೆಗಳನ್ನು ಗುರುತಿಸಿದೆ. ೧೯೮೨ರಲ್ಲಿ 'ಅಲಕ್ಷಿತ ಅಧ್ಯಯನ' ವಲಯಗಳ ಮೊದಲ ಸಂಪುಟ ಪ್ರಕಟವಾಗಿ ಈ ವಲಯದ ಚರಿತ್ರೆಕಾರರು ವಸಾಹತುಶಾಹಿ ಕಾಲಘಟ್ಟದಲ್ಲಿ ಅವರಿಗೆ ಬೇಕಾದಂತೆ, ಅನುಕೂಲವೆನಿಸುವ ನಾಟಕಗಳಾಗಿ ಚರಿತ್ರೆಯನ್ನು ಬರೆದರು ಎಂದು ತಿಳಿಸಿದರು. ಅಧಿಕಾರದ ಪ್ರಕ್ರಿಯೆಗಳನ್ನು ಹೇಳುವಾಗ ಅಲಕ್ಷಿತ ಜನವರ್ಗದ ಕತೆಗಳನ್ನು ಶೋಧಿಸಿ ಪ್ರಚಾರಕ್ಕೆ ತಂದರು. ಇದೇ ಹೊತ್ತಿನಲ್ಲಿ ಹೆಣ್ಣಿನ ದೃಷ್ಟಿಯಿಂದಲೂ ನೋಡಿರುವುದಾದರೂ ಮಹಿಳೆಯರ ಜೀವನ ಅಲಕ್ಷ್ಯಕ್ಕೆ ಒಳಗಾದದ್ದನ್ನು ಗುರುತಿಸುವುದಿಲ್ಲ. ಈ ವಲಯದ ಗಾಯತ್ರಿ ಸ್ಪಿವಾಕ್ ಎಂಬಾಕೆ 'Can the Subaltern Speak' ಎನ್ನುವ ಗಂಭೀರವಾದ ಲೇಖನ ಪ್ರಕಟಿಸಿದಳು. ವಸಾಹತುಶಾಹಿ ಸ್ತ್ರೀಯರ ಚರಿತ್ರೆಯನ್ನು ರಚಿಸುವಾಗ ಎಷ್ಟು ಸಮಸ್ಯೆಗಳನ್ನು ಎದುರಿಸಬೇಕು ಎನ್ನುವುದನ್ನು ತಿಳಿಸಿದ್ದಾಳೆ. ''ಅಲಕ್ಷಿತರಲ್ಲಿ ಮಹಿಳೆ ಮತ್ತಷ್ಟು ಅಲಕ್ಷಿತಳಾಗಿ ಇನ್ನೂ ಬೆಳಕನ್ನು ಕಾಣದವಳಾಗಿದ್ದಾಳೆ''[೩೬] ಎಂದು ಈಕೆ ಆರೋಪಿಸಿದ್ದಾಳೆ. ಜೇಮ್ಸ್ ಸ್ಕಾಟ್ ಅವರು ಏಷ್ಯಾದ ಪ್ರತಿದಿನದ ಜೀವನ ಪ್ರತಿರೋಧಗಳನ್ನು ಕುರಿತಂತೆ ಅಧ್ಯಯನ ಮಾಡಿದ್ದಾರೆ. ಡಗ್ಲಾಸ್ ಹೇಯ್ನ್ಸ್ ಮತ್ತು ಗ್ಯಾನ್ ಪ್ರಕಾಶರು ದಕ್ಷಿಣ ಏಷ್ಯಾದಲ್ಲಿ ಲಿಂಗವ್ಯವಸ್ಥೆಯ ವಿಷಯಗಳನ್ನು ಅಧ್ಯಯನ ಮಾಡಿದ್ದಾರೆ. ವಿಭಿನ್ನವಾದ, ವಾಸ್ತವದ ಘರ್ಷಣೆಗಳೇನು ಆಗದಿದ್ದವನ್ನು ಪ್ರತಿರೋಧಗಳು ಮತ್ತು ಸ್ಪರ್ಧಾತ್ಮಕ ಎನಿಸುವ ಚಟುವಟಿಕೆಗಳನ್ನು ಪ್ರಧಾನವಾಗಿಸಿಕೊಂಡಿರುತ್ತಾರೆ. ಬ್ರಿಟಿಶ್ ಭಾರತದ ಚರಿತ್ರೆಕಾರರು ವಸಾಹತುಶಾಹಿ ಆಡಳಿತದಲ್ಲಿ ಸ್ತ್ರೀಯರಿಗೆ ಉಂಟಾದ ಅನುಭವಗಳೇನು ಮತ್ತು ಅವರ ಜೀವನದ ಮೇಲೆ ಉಂಟುಮಾಡಿದ ಪ್ರಭಾವಗಳೇನು, ಅಲ್ಲದೆ ಮಹಿಳೆಯರು ಹಾಗೂ ಮಹಿಳಾ ಪ್ರಶ್ನೆಗಳು ವಸಾಹತುಶಾಹಿ ರಾಜಕಾರಣವನ್ನು ಹೇಗೆ ಪ್ರಭಾವಿಸಿದವು ಎಂಬ ವಿಚಾರಗಳನ್ನು ಕುರಿತಂತೆ ಬರೆಹಗಳನ್ನು ಪ್ರಕಟಿಸುತ್ತಿದ್ದಾರೆ. ಮಿರಿಯಂ ಶ್ನೀರ್ 'ಸ್ತ್ರೀವಾದ : ಮುಖ್ಯ ಐತಿಹಾಸಿಕ ಬರೆಹಗಳು' ಎಂಬ ಕೃತಿ ರಚಿಸಿದ್ದಾಳೆ. ಇದರಲ್ಲಿ ಹಿಂದೂ ಪರದಾ ಪದ್ಧತಿ ಅಥವಾ ಇಸ್ಲಾಂ ಧರ್ಮದ ಘೋಷಾ ಪದ್ಧತಿಗಳಂಥವುಗಳ ಹಿನ್ನೆಲೆಯಲ್ಲಿ ಸ್ತ್ರೀಪರ ನೆಲೆಯಿಂದ ಕೃತಿ ರಚಿಸುವುದು ಸುಲಭವೇನೂ ಅಲ್ಲ. ಇಂಥ ಪದ್ಧತಿಗಳು ಬೌದ್ಧಿಕ ಬೆಳವಣಿಗೆಗೆ ಇಲ್ಲವೆ ಅಭಿವ್ಯಕ್ತಿಗೊಳಿಸಲು ಸಾಧ್ಯವಾಗುವುದಿಲ್ಲ[೩೭] ಎಂದು ಅಭಿಪ್ರಾಯಪಟ್ಟಿದ್ದಾಳೆ.

## ಅಡಿಟಿಪ್ಪಣಿಗಳು


೧. ಚರಿತ್ರೆ ವಿಶ್ವಕೋಶ, ಪು. ೫೪

೨. ಧೋಗಂಡೆ ಅಶ್ವಿನಿ (ಮೂಲ), ಗಾಯಕ್ವಾಡ್ ವಿಠಲರಾವ್ (ಅನು), ಸ್ತ್ರೀವಾದಿ ವಿಮರ್ಶೆ ಸ್ವರೂಪ ಮತ್ತು ಪರಿಕಲ್ಪನೆಗಳು, ಪು. ೨೪

೩. ಹರ್ಬರ್ಟ್ ಮರ್ಡರ, **Feminism and Art, A Study of Virginia Woolf**, ಪು. ೭

೪. ಮಾರ್ಗರೆಟ್ ಫೇರ್ ಗೇಯಲ ಗ್ರಾಹಯ ಮೇಟ್, **'What Woman What'**, ಪು. ೩೪

೫. ಚಿತ್ರಾ ಘೋಷಾ, **Changing role of Women towards emancipection** ಲೇಖನ, Role and Status of Women in Indian Society, P. ೫೩

೬. Kamala Bhasin, Nighat said Khan, **Some questions on Feminism and its relevance in South Asia**, P. ೨

೭. ಅದೇ, ಪು. ೩

೮. ಅದೇ, ಪು. ೩

೯. ಅದೇ, ಪು. ೨

೧೦. ಅದೇ, ಪು. ೨

೧೧. ಸುಮಿತ್ರಾಬಾಯಿ ಬಿ.ಎನ್, ಗಾಯತ್ರಿ ಎನ್, ಸ್ತ್ರೀವಾದಿ ಪ್ರವೇಶಿಕೆ, ಪು. ೩೪

೧೨. ಅಚಲ, ಮೇ ೮, ೧೯೯೩

೧೩. ಶುಭಚಂದ್ರ ಪ್ರೀತಿ, ಮಹಿಳಾ ಅಧ್ಯಯನದ ತಾತ್ವಿಕ ನೆಲೆಗಳು ಮತ್ತು ಚಳವಳಿಗಳು, ಪು. ೨೦೪

೧೪. ಅದೇ, ಪು. ೨೦೭

೧೫. ಉಷಾ ಎಂ, ಸಂಸ್ಕೃತಿ ಚಿಂತನೆ ಮತ್ತು ಭಾರತೀಯ ಸ್ತ್ರೀವಾದ, ಪು. ೫

೧೬. ವೀಣಾ ಬನ್ನಂಜೆ, ಕೆಲಸ ಮತ್ತು ಬಿಡುವಿನ ಪರಿಕಲ್ಪನೆ, ಉದಯವಾಣಿ ದೈನಿಕ, ಪು. ೫

೧೭. ಮನು ಚಕ್ರವರ್ತಿ ಎನ್, ಭಾರತೀಯ ಸ್ತ್ರೀವಾದ, ಪು. ೯

೧೮. ಮಹಿಳಾ ಅಧ್ಯಯನ, ಜುಲೈ ೯೯, ಪು. ೯೬

೧೯. ಮಹಿಳಾ ಅಧ್ಯಯನದ ತಾತ್ವಿಕ ನೆಲೆಗಳು ಮತ್ತು ಚಳವಳಿಗಳು, ಪು. ೨೦೧

೨೦. ಅನಿಕೇತನ, ೧೯೯೮, ಪು. ೧೦೫

೨೧. Woolf, **A Room of one's own**, P. ೪೫-೪೬

೨೨. ಮಹಿಳಾ ಅಧ್ಯಯನದ ತಾತ್ವಿಕ ನೆಲೆಗಳು ಮತ್ತು ಚಳವಳಿಗಳು, ಪು. ೧೦೫

೨೩. ಸ್ತ್ರೀವಾದಿ ಪ್ರವೇಶಿಕೆ, ಪು. ೭೨

೨೪. ಶಿಂತ್ರಿ ಸರೋಜಿನಿ, ಮಹಿಳೆ ನಡೆದು ಬಂದ ದಾರಿ, ಪು. ೭೦

೨೫. ಐ.ಎನ್.ಸಿ.ಯ ವಿಶೇಷ ಅಧಿವೇಶನದ ವರದಿ, ಮುಂಬಯಿ, ಆಗಸ್ಟ್ ೧೯-೨೧ ಮತ್ತು ಸೆಪ್ಟೆಂಬರ್ ೧, ೧೯೧೮, ಪು. ೧೦೯-೧೧೦

೨೬. ಐ.ಎನ್.ಸಿ.ಯ ೨೨ನೆಯ ಅಧಿವೇಶನದ ವರದಿ, ದೆಹಲಿ, ಡಿಸೆಂಬರ್ ೨೬-೩೧, ೧೯೧೮, ಪು. ೧೧೮-೧೨೧

೨೭. ಮನು ಚಕ್ರವರ್ತಿ, ಭಾರತೀಯ ಸ್ತ್ರೀವಾದ, ಪು. ೨೬-೨೭

೨೮. ಮನು ಚಕ್ರವರ್ತಿ, ಅದೇ, ಪು. ೧೨೭-೧೨೮

೨೯. ಬಿಸಿಲು ಬದುಕು, ಜನವರಿ ೧೯೯೯, ಪು. ೨೦

೩೦. Sandra Harding, **Introduction to her**, edited volume Feminism and methodology Bloomigaton: Indiana Univ. Press, 1987, p.8.

೩೧. Gayle Greene and Coppelia Kahn, **introduction to making a difference** : Feminist literary criticism London : Methuen 1985, p. 13-14.

೩೨. Joan Kelly, **The Social relations of the sexes : Methodological Implications of Women's History**, signs Vol. 1 no. 4 summer 1976.

೩೩. Tejaswini Niranjana, **Siting Translation : History, post-structuralism and the colonial context**, Berkely : Univ. of California Press 1992.

೩೪. Surie Tharu and K. Lalitha, **Reading Against the orientalist Grain**, Editors Introduction, women writing in India, New Delhi Oxford Univ. Press 1991, p. 45.

೩೫. Uma Chakravarthi "Whatever Happened to the Vedic Dais Orientalism, Nationalism and a script for the past" in **Recasting women : Essays in colonial History**, ed: Kumkum Sangari and Sudesh vaid New Delhi, Kali for women 1989.

೩೬. ಗಾಯತ್ರಿ ಚಕ್ರವರ್ತಿ ಸ್ಪಿವಾಕ್ "**can the subaltern speak?** Marxism and the interpretation of culture, ಪು. ೨೭೧-೩೧೩.

೩೭. ಮಿರಿಯಂ ಶ್ನೀರ್ (ಸಂ), **Feminism : The essential Historical writings**, ಪು. xix


✤✤

ಅಧ್ಯಾಯ - ೩

# ಪ್ರಾಚೀನ ಕರ್ನಾಟಕ ಮತ್ತು ಮಹಿಳೆ

೩.೧ ಹಿನ್ನೆಲೆ

೩.೨ ಪ್ರಾಚೀನ ಪಠ್ಯಗಳು ಮತ್ತು ಮಹಿಳೆ

ಅ. ೧. ವೇದಗಳು ೨. ಉಪನಿಷತ್ತುಗಳು ೩. ಸ್ಮೃತಿಗಳು ೪. ಮಹಾಕಾವ್ಯಗಳು

ಆ. ೧. ಶಿಕ್ಷಣ ಮತ್ತು ಮಹಿಳೆ

೩.೩. ಸಮಾಜ ಮತ್ತು ಮಹಿಳೆ

೧. ಕುಟುಂಬ ೨. ಜಾತಿ ೩. ವಿವಾಹ ೪. ವಧುಪರೀಕ್ಷೆ ೫. ಉಡುಗೊರೆ ೬. ಮಾಂಗಲ್ಯ ೭. ಬಹುಪತ್ನಿತ್ವ ೮. ಪಾತಿವ್ರತ್ಯ ೯. ಅತ್ತೆ ಸೊಸೆಯರ ಸಂಬಂಧ ೧೦. ತಾಯಿತನ ೧೧. ವಿಚ್ಛೇದನ ೧೨. ವಿಧವೆಯರು ೧೩. ಸತಿ ಸಹಗಮನ ೧೪. ವೇಲವಾಳಿ ೧೫. ಸೂಳೆಯರು ೧೬. ತೊತ್ತುಗಳು

೩.೪. ರಾಜಕಾರಣ ಮತ್ತು ಮಹಿಳೆ

ಅ. ಪಿರಿಯರಸಿ ಪಟ್ಟಮಹಾದೇವಿ ಆ. ಆಡಳಿತ ಅಧಿಕಾರಿಗಳು ಇ. ಯುದ್ಧ ಮತ್ತು ಮಹಿಳೆ

೩.೫. ಧರ್ಮ ಮತ್ತು ಮಹಿಳೆ

ಬೌದ್ಧ-ಜೈನ-ವೈಷ್ಣ-ಶೈವ ಧರ್ಮಗಳು

೩.೬. ಆರ್ಥಿಕತೆ ಮತ್ತು ಮಹಿಳೆ

ದಾನ-ದತ್ತಿಗಳು

ಅಧ್ಯಾಯ - ೩

# ಪ್ರಾಚೀನ ಕರ್ನಾಟಕ ಮತ್ತು ಮಹಿಳೆ

## ೩.೧ ಹಿನ್ನೆಲೆ

ಭೂಮಿಯ ಹುಟ್ಟಿನೊಂದಿಗೆ ಅಸಂಖ್ಯ ಜೀವಿಗಳು ಹುಟ್ಟಿದವು. ಆದರೆ ಮಾನವ ಜೀವಿ ಮಾತ್ರ ಅನೇಕಾನೇಕ ವರ್ಷಗಳ ನಂತರ ಜನಿಸಿದ. ಆರಂಭದ ದಿನಗಳಲ್ಲಿ ಸ್ತ್ರೀ-ಪುರುಷರು ಒಟ್ಟಿಗೆ ಬದುಕುವ ಕಲ್ಪನೆ ಇರಲಿಲ್ಲ. ಆ ಕಾಲಘಟ್ಟದಲ್ಲಿನ ಮಾನವ ಮತ್ತು ಇತರೆ ಪ್ರಾಣಿಗಳ ಬದುಕು ಒಂದೇ ಬಗೆಯದು. ಆದರೆ ಮಾನವನಲ್ಲಿ ಎರಡು ಪ್ರಧಾನ ಕಾರ್ಯಗಳು ಅಸ್ತಿತ್ವದಲ್ಲಿದ್ದವು. ಅವುಗಳಲ್ಲಿ ಮೊದಲನೆಯದು ಆಹಾರದ ಹುಡುಕಾಟ. ಎರಡನೆಯದು ಸ್ವರಕ್ಷಣೆ. ಅನಂತರದ ದಿನಗಳಲ್ಲಿ ಬಿಲ್ಲು-ಬಾಣ, ಬೆಂಕಿ, ಮನೆಗಳ ನಿರ್ಮಾಣ ಇತ್ಯಾದಿಗಳು ಆವಿಷ್ಕಾರಗಳಾದವು. ಆಗಲೇ ಮಾನವ ಸಂಘ ಜೀವನ ಆರಂಭಿಸಿದ್ದು. ಬಿಲ್ಲು-ಬಾಣಗಳು ಬಳಕೆಗೆ ಬಂದುದರಿಂದಾಗಿ ಬೇಟೆಯು ಪ್ರಧಾನ ಕಾರ್ಯವಾಯಿತು. ಈ ಬೇಟೆಯು ವೈಯಕ್ತಿಕವಾಗಿಯೂ ಹಾಗೂ ಸಾಂಘಿಕವಾಗಿಯೂ ನಡೆಯುತ್ತಿತ್ತು. ಸಾಂಘಿಕ ಬೇಟೆಯ ಕಾರ್ಯಗಳಲ್ಲಿ ಹೆಣ್ಣು ಭಾಗವಹಿಸುತ್ತಿದ್ದಳು. ಬೇಟೆಯ ಸುಳಿವು ನೀಡುವುದು ಮತ್ತು ಬೇಟೆಯ ಸಮಯದಲ್ಲಿ ಉಂಟಾದ ಗಾಯಗಳಿಗೆ ಗಿಡಮೂಲಿಕೆಗಳಲ್ಲಿನ ಔಷಧಿಗಳನ್ನು ಹಚ್ಚುವುದು ಅವಳ ಪ್ರಧಾನ ಕಾರ್ಯಗಳಾಗಿದ್ದವು. ಅಲ್ಲದೆ ಬೇಟೆಯಲ್ಲಿ ದೊರೆತ ಮಾಂಸ ಇತ್ಯಾದಿಗಳನ್ನು ಕೆಡದಂತೆ ರಕ್ಷಿಸುವುದು, ಬೇಯಿಸುವುದೂ ಇವಳ ಭಾಗದ ಕಾರ್ಯವಾಗಿತ್ತು. ಈ ದಿನಗಳಲ್ಲಿ ಗಂಡು-ಹೆಣ್ಣುಗಳಲ್ಲಿ ಯಾವುದೇ ಲೈಂಗಿಕ ಕಟ್ಟುಪಾಡುಗಳು ಇರಲಿಲ್ಲ. ಬದಲಾಗಿ ಮುಕ್ತವಾಗಿದ್ದರು. ಬೇಟೆ ಸಂಸ್ಕೃತಿಯ ಕಾಲದಲ್ಲಿ ಹೆಣ್ಣಿನಿಂದ ಮಕ್ಕಳನ್ನು ಗುರುತಿಸುವ ರೂಢಿಯಲ್ಲಿತ್ತು. ಇದು ಮಾತೃಪ್ರಧಾನ ಸಮಾಜದ ಅಸ್ತಿತ್ವಕ್ಕೆ ನಾಂದಿಯಾಯಿತೆನ್ನಬಹುದು. ನಂತರದ ದಿನಗಳಲ್ಲಿ ಕೃಷಿ, ಪಶುಪಾಲನೆಗಳು ಅಭಿವೃದ್ಧಿಯಾಗಿ ಪ್ರಧಾನ ಉದ್ಯೋಗಗಳಾದವು. ಹೆಣ್ಣು ಆಹಾರ ಸಿದ್ಧಪಡಿಸಿ, ಮಕ್ಕಳ

ಲಾಲನೆ-ಪಾಲನೆ ಮಾಡಿದರೆ, ಗಂಡು (ಆಹಾರ ಹುಡುಕುವ) ಬೇಟೆ, ಕೃಷಿಗೆ ಬೇಕಾದ ಆಯುಧ ಉಪಕರಣಗಳನ್ನು ಸಿದ್ಧಪಡಿಸುತ್ತಿದ್ದ. ಕೃಷಿ ಪಶುಪಾಲನೆ ಅಭಿವೃದ್ಧಿಯಾಗಿ ಅವು ಸಂಪತ್ತಾಗಿ ಬದಲಾದವು. ಈ ಸಂಪತ್ತಿನ ಪರಿಕಲ್ಪನೆ ಮಕ್ಕಳನ್ನು ತಂದೆಯಿಂದ ಗುರುತಿಸುವ ತಾರತಮ್ಯಕ್ಕೆ ದೂಡಿತು. ಇದರಿಂದಾಗಿ ಸಂಪತ್ತೆಲ್ಲಾ ಖಾಸಗಿ ಆಸ್ತಿಯಾಗುವುದಕ್ಕೆ ಕಾರಣವಾಯಿತು. ಈ ಖಾಸಗಿ ಆಸ್ತಿಯ ಬೆಳವಣಿಗೆ ಮಾತೃಪ್ರಧಾನ ಕುಟುಂಬಗಳ ನಾಶಕ್ಕೂ ಕಾರಣವಾಯಿತು. ಪಿತೃಪ್ರಧಾನ ಸಮಾಜ ಅಸ್ತಿತ್ವಕ್ಕೆ ಬಂದ ನಂತರ ಹೆಣ್ಣಿನ ಶೋಷಣೆಗೆ ಹಾಗೂ ಮಾತೃಪ್ರಧಾನ ವ್ಯವಸ್ಥೆಯ ಪತನಕ್ಕೆ ನಾಂದಿಯಾಯಿತು. ಈ ಘಟನೆ ಜಗತ್ತಿನ ಸಾಮಾಜಿಕ ಚರಿತ್ರೆಯ ಮೇಲೆ ಮಹತ್ತ್ವದ ಪರಿಣಾಮಗಳನ್ನು ಉಂಟುಮಾಡಿತು. ಇಡೀ ಸಂಪತ್ತಿನ ಒಡೆಯನಾಗಬೇಕೆಂಬ ಪುರುಷನ ಅಭೀಪ್ಸೆ ಹೆಣ್ಣಿನ ಬದುಕಿನ ಮೇಲೆ ನಿಯಂತ್ರಣ ಸಾಧಿಸಿತು. ಇದರಿಂದಾಗಿ ಹೆಣ್ಣು ಅವನ ಅಧೀನಳಾಗಿ ದಾಸಿಯಂತೆ ಜೀವಿಸಲಾರಂಭಿಸಿದಳು. ಇದನ್ನು ಎಂಗೆಲ್ಸ್ "ಗಂಡಸು ಮನೆಯಲ್ಲಿಯೂ ಅಧಿಕಾರ ಸೂತ್ರ ವಹಿಸಿಕೊಂಡ ಹೆಂಗಸು ಪರಾಧೀನೆಯಾಗಿ ಕೇವಲ ಗಂಡಸಿನ ಕಾಮಲಾಲನೆಯ ವಸ್ತುವಾಗಿ, ಮಕ್ಕಳನ್ನು ಹೆರುವ ಯಂತ್ರವಾಗಿ ಪರಿಣಮಿಸಿದಳು"[7] ಎಂದಿದ್ದಾನೆ. ಉತ್ಪಾದನೆಯ ಅಂಶಗಳನ್ನೆಲ್ಲಾ ಪುರುಷ ತನ್ನ ಅಧೀನಕ್ಕೆ ತೆಗೆದುಕೊಂಡಷ್ಟೇ ಸುಲಭವಾಗಿ ಸಂಪತ್ತಿನ ಒಡೆಯನಾಗಿ ತನ್ನ ಹೆಂಡತಿ, ಮಕ್ಕಳನ್ನು ಅಧೀನವಾಗಿಸಿಕೊಂಡ. ಇವನು ಮಾಡುವ ಕಾರ್ಯ ಮನೆಯಾಚೆಯದಾಗಿದ್ದರಿಂದ ಆತ ಸಾಮಾಜಿಕವಾಗಿ ಹೆಚ್ಚು ಗೌರವಕ್ಕೆ ಪಾತ್ರನಾದ. ಆದರೆ ಹೆಣ್ಣು ಮನೆ ಕೆಲಸ ಮಾಡುವುದರೊಂದಿಗೆ ಕುಟುಂಬದೊಳಗೆ ತನಗೆ ಗೌರವ ಇಲ್ಲದಂತೆ ಮಾಡಿಕೊಂಡಳು.

'ಹೆಣ್ಣು' ಎಂದರೆ ಹೆರುವವಳು, ಮಕ್ಕಳ ಲಾಲನೆ-ಪಾಲನೆ, ಅಡುಗೆ ಇತ್ಯಾದಿ ಮನೆ ಕೆಲಸಗಳಿಗೆ ಸೀಮಿತಗೊಂಡವಳು. ಈ ಅಂಶವೇ ಒಬ್ಬ ಗಂಡಸು ಅನೇಕ ಹೆಂಡಂದಿರನ್ನು ಪಡೆಯಲು ಮೂಲವಾಯಿತು. ಹೆಚ್ಚು ಹೆಂಡಂದಿರು ಇದ್ದರೆ ಆತನ ಸುಖ ಮತ್ತು ಸಂಪತ್ತು ವರ್ಧಿಸುತ್ತಿದ್ದವು. ಹೆಂಡಂದಿರೆಂದರೆ ಅನೇಕ ಮಕ್ಕಳೂ ಹೌದು. ತಿನ್ನುವ ಬಾಯಿಗಳು ಹೆಚ್ಚಾದಂತೆ ದುಡಿಯುವ ಕೈಗಳು ಹೆಚ್ಚುತ್ತಿದ್ದವು. ಒಂದು ವೇಳೆ ಯುದ್ಧದ ಪ್ರಸಂಗ ಬಂದಲ್ಲಿ ಹೋರಾಡಲು ಸಹಾಯಕವಾಗುತ್ತಿದ್ದರು. ಈ ಕಾರಣಕ್ಕೆ ಸಮಾಜದಲ್ಲಿ ಬಹುಪತ್ನಿತ್ವ ಪದ್ಧತಿ ಬೆಳೆಯಲು ಕಾರಣವಾಯಿತು. ಕುಟುಂಬ ಹಾಗೂ ಸಮಾಜದ ನಿರ್ಬಂಧಗಳು ಅವಳಿಗೆ ಗಡಿರೇಖೆಗಳಾಗಿ ಮಾರ್ಪಟ್ಟವು. ಆ ರೇಖೆ ದಾಟಿದವರನ್ನು ನಡತೆಗೆಟ್ಟವಳೆಂದು ಸಮಾಜದ ನೆಮ್ಮದಿಯನ್ನು ಹಾಳುಮಾಡುವವಳು ಎಂದು ಕರೆಯಲಾಯಿತು. ಅಂಥವರಿಗೆ ಸಮಾಜದಲ್ಲಿ ಗೌರವ ಸಿಗದೆ ಹೋಯಿತು. ಹೆಣ್ಣು ಹುಟ್ಟುವುದು ಪುರುಷನಿಗಾಗಿ, ಆಕೆಯ ಕಾರ್ಯಕ್ಷೇತ್ರ ಗಂಡ ಮಕ್ಕಳು ಮನೆ ಎಂದು ಗುರುತಿಸಲಾಯಿತು. ಆಕೆಯನ್ನು ಹಲವು ಮೂಢನಂಬಿಕೆಗಳು ಆವರಿಸಿದವು. ಇದರಿಂದ ಹೆಣ್ಣು ತಾನು ಕಾಣುವ ವ್ಯವಸ್ಥೆಯೇ ಒಳ್ಳೆಯದು, ಗೌರವವಾದದ್ದು ಮತ್ತು ವಾಸ್ತವವಾದದ್ದು ಎಂದು ತಿಳಿದು ಅದನ್ನೇ ಪಾಲಿಸತೊಡಗಿದಳು. ಹೀಗೆ ಹೆಣ್ಣು ತನ್ನ ಶೋಷಣೆಯ ವೇದಿಕೆಗಳನ್ನು ತಾನೇ ನಿರ್ಮಿಸಿಕೊಂಡಳು. ಪುರುಷಪ್ರಧಾನ ಸಮಾಜದ ಹೊರರೂಪ ನೋಡದೆ ಗೊಂಬೆಯಾಗಿ, ಕುಟುಂಬದಲ್ಲಿ ಅಡುಗೆ ಮನೆಯ ಸೂತ್ರಧಾರಳಾಗಿ ನಿಂತ ಸ್ತ್ರೀ ಸಾಹಿತ್ಯದ ಗಂಧಗಾಳಿಯನ್ನು ಅರಿಯದಾದಳು. ಹೊರ ಪ್ರಪಂಚದ ಪರಿಚಯವಿದ್ದ ಪುರುಷ ಸಾಹಿತ್ಯಕ ಚಟುವಟಿಕೆಗಳಲ್ಲಿ ತನ್ನನ್ನು ತೊಡಗಿಸಿಕೊಂಡ. ಇಂಥ ಸೌಲಭ್ಯವನ್ನು ದೂರೀಕರಿಸಿದ ಹೆಣ್ಣು ಅಡುಗೆಮನೆಯ ಹಾಗೂ ಮಕ್ಕಳ ಲಾಲನೆ-ಪಾಲನೆಗೆ ತನ್ನ ಕೆಲಸವನ್ನು ಸೀಮಿತಗೊಳಿಸಿ, ಸಾಹಿತ್ಯವನ್ನು ತಿಳಿಯದಾದಳು.

ವೇದ ಕಾಲದ ಹೊತ್ತಿಗಾಗಲೇ ಪುರುಷ ಸಾಹಿತ್ಯ ಪ್ರಪಂಚವನ್ನು ಸಾಕಷ್ಟು ತಿಳಿದುಕೊಂಡಿದ್ದ. ಆದರೆ ಸಾಹಿತ್ಯದ ಲವಲೇಶದ ಗಾಳಿಯನ್ನು ಹೆಣ್ಣು ಅನುಭವಿಸದಾದಳು. ವೇದ ಸಾಹಿತ್ಯದಲ್ಲಿ ಮಾತ್ರ ಮೈತ್ರೇಯಿ, ಗಾರ್ಗಿಯರಂಥ ಬೆರಳೆಣಿಕೆಯಷ್ಟು ಬರಹಗಾರ್ತಿಯರನ್ನು ಕಾಣಬಹುದೇ ಹೊರತು, ಹೆಚ್ಚಿನ ಬರಹಗಾರ್ತಿಯರೂ ಕಂಡುಬರುವುದಿಲ್ಲ.

ಪ್ರಾಚೀನ ಕಾಲದಲ್ಲಿ 'ಹೆಣ್ಣು' ಅಡುಗೆ ಮನೆಯ ಆಳು ಎಂಬ ಒಂದೇ ಮಾತಿನಲ್ಲಿ ಅವಳ ಸರ್ವಸ್ವವೂ ಅಡಗಿದೆ. ಅಂದರೆ ಅಡುಗೆ ಮನೆಯ ಆಳಾಗಿ ದುಡಿಯುವ ಮಹಿಳೆ ಸಾಹಿತ್ಯದ ಜ್ಞಾನ, ಆರ್ಥಿಕತೆಯ ಲಾಭ ಧಾರ್ಮಿಕತೆಯ ಹಾಗೂ ರಾಜಕಾರಣದ ನೀತಿಗಳನ್ನು ಪುರುಷಪ್ರಧಾನ ಸಮಾಜ ದೂರೀಕರಿಸಿತು. ಮಾತೃಪ್ರಧಾನ ವ್ಯವಸ್ಥೆಯಿಂದ ಪಿತೃಪ್ರಧಾನ ವ್ಯವಸ್ಥೆಗೆ ಅಂಟಿಕೊಂಡು, ನಂತರ ವರದಕ್ಷಿಣೆ ತರುವ ಕಲ್ಪವೃಕ್ಷವಾದಳೇ ಹೊರತು, ಹಣ ಗಳಿಸುವ ಯಜಮಾನಿ ಆಗಲಿಲ್ಲ. ಕೂಲಿ ಮಾಡಿ ಜೀವಿಸುವ ಹಾಗೂ ಕೂಲಿಯನ್ನು ಗಂಡನ ಕೈಗಿತ್ತು ಅಡುಗೆ ಮಾಡುವ ಆಳಾದಳೇ ಹೊರತು, ಖರ್ಚು ಮಾಡುವ ಅಧಿಕಾರ ಪಡೆಯಲಿಲ್ಲ. ಪಶುಪಾಲನೆ, ಹೈನುಗಾರಿಕೆ ಮೊದಲಾದ ಲಾಭದಾಯಕ ಚಟುವಟಿಕೆಗಳು ಅವಳ ಪಾಲಿಗೆ ಲಾಭವಾಗದೆ ಹೋದವು.

ವೇದಕಾಲದ ಪೂರ್ವದಲ್ಲಿ ಅವಳ ಧಾರ್ಮಿಕ ಜ್ಞಾನ ಪುರುಷನಿಗೆ ಹೋಲಿಸಿದರೆ ಅಷ್ಟಕಷ್ಟೆ. ಧರ್ಮ ಹೆಣ್ಣಿಗೆ ಹೆಣ್ಣು ಹೇಗಿರಬೇಕು ಎಂಬ ನೀತಿಯನ್ನು ಹೇಳಿವೆಯೇ ಹೊರತು ಧರ್ಮದ ಕುರಿತಾದ ಅಭಿಪ್ರಾಯವನ್ನು ಹೆಣ್ಣಿನಿಂದ ಬಯಸಲಿಲ್ಲ. ಹೀಗಾಗಿ ಧರ್ಮದೊಂದಿಗೆ ಹೆಣ್ಣು ಅಲ್ಪಸ್ವಲ್ಪ ಬೆಸೆದುಕೊಂಡದ್ದು ವೇದ ಕಾಲದಲ್ಲಿ. ಪ್ರಾಚೀನ ಮಹಿಳೆಗಷ್ಟೇ ಅಲ್ಲ ಇಂದಿನ ಮಹಿಳೆಗೂ ಕಬ್ಬಿಣದ ಕಡಲೆ ಆಗಿರುವ ವಿಚಾರ ಎಂದರೆ ರಾಜಕಾರಣ. ರಾಜಕೀಯ ಹೆಣ್ಣಿಗೆ ಶಾಪವೆಂದೇ ಪರಿಗಣಿಸಬೇಕಾಗಿದೆ. ಪ್ರಾಚೀನ ಕಾಲದಲ್ಲಿ ಮತಾಧಿಕಾರದಿಂದಲೇ ವಂಚಿತಳಾಗಿದ್ದ ಇವಳಿಗೆ ಪ್ರಾತಿನಿಧಿತ್ವ ಕನಸೇ ಆಗಿತ್ತು.

### ೩.೨ ಪ್ರಾಚೀನ ಪಠ್ಯಗಳು ಮತ್ತು ಮಹಿಳೆ

ಸಾಹಿತ್ಯ ನಮಗೆ ಸಮಾಜದ ಸ್ಥಿತಿಗತಿಗಳ ಜೊತೆಗೆ ಮಹಿಳೆಯರನ್ನು ಕುರಿತಂತೆ ವಿವರಣೆಗಳನ್ನು ಕೊಡುವುದರಿಂದ ಸಾಹಿತ್ಯವನ್ನು ಸಮಾಜದ ಕನ್ನಡಿ ಎನ್ನಲಾಗಿದೆ. ವೇದಗಳ ಕಾಲದ ಸಮಾಜ ಮತ್ತು ಮಹಿಳೆ ತಿಳಿಯಲು ವೇದಗಳು, ಉಪನಿಷತ್ತುಗಳು, ಸ್ಮೃತಿಗಳು, ಮಹಾಕಾವ್ಯಗಳು ಆಧಾರಗಳಾಗಿವೆ. ಈ ಆಧಾರಗಳು ಸಮಗ್ರವಾದ ಮಾಹಿತಿಯನ್ನು ಒದಗಿಸದಿದ್ದರೂ, ಅಂದಿನ ಸ್ತ್ರೀ ಜೀವನದ ಬಗ್ಗೆ ಅಲ್ಪ-ಸ್ವಲ್ಪ ವಿವರಗಳನ್ನು ನೀಡುತ್ತವೆ.

#### ಅ. ೧. ವೇದಗಳು

ವೇದ ಕಾಲದ ಸಮಾಜವು ಚಾತುರ್ವರ್ಣಗಳನ್ನು ಆಶ್ರಯಿಸಿತ್ತು. ಅಂತೆಯೇ ಜಾತಿಯ ಆಧಾರದಿಂದ ವೃತ್ತಿಗಳು ನಿರ್ಮಾಣ ಆಗಿದ್ದವು. ಜಾತಿ ಪದ್ಧತಿಯು ಅನೇಕ ಕಟ್ಟು-ಪಾಡುಗಳನ್ನು ಒಳಗೊಂಡಿದ್ದರೂ ಸಹ ಅಂತರ್ಜಾತೀಯ ವಿವಾಹಗಳು ಆಚರಣೆಯಲ್ಲಿದ್ದವು. ಋಷಿಯಾದ ಚ್ಯವನನು ಸುಕನ್ಯಾಳನ್ನು ವಿವಾಹವಾಗಿದ್ದ ನಿದರ್ಶನ ಗಮನಾರ್ಹ. ಮದುವೆಯು ಧಾರ್ಮಿಕವೂ, ಸಾಮಾಜಿಕವೂ ಆದ ಕರ್ತವ್ಯವಾಗಿತ್ತು.

ಮದುವೆಯಿಂದಾಗಿ ಗೃಹಿಣಿಯಾದ `ಹೆಣ್ಣು` ಧರ್ಮಕಾರ್ಯದಲ್ಲಿ ಭಾಗವಹಿಸಲು ಅರ್ಹತೆ ಪಡೆಯುತ್ತಿದ್ದಳು. ಮದುವೆ ಹೆಣ್ಣಿಗೆ ಅತ್ಯವಶ್ಯ ಎನ್ನಿಸಿದ್ದರೂ, ಕಡ್ಡಾಯವಾಗಿರಲಿಲ್ಲ. ಬಾಲ್ಯ ವಿವಾಹದ ಆಚರಣೆ ಸಹ ಇರಲಿಲ್ಲ. ``ಅಥರ್ವಣ ವೇದವು ಗೃಹಿಣಿಯಾಗಿದ್ದಕ್ಕೆ ಗಂಡನಿಗೆ ಪ್ರಿಯಳೂ, ವಿಧೇಯಳೂ, ಆಗಿರಬೇಕೆಂದೂ, ವರದಕ್ಷಿಣೆ ಪ್ರಚಲಿತದಲ್ಲಿ ಇರುವುದನ್ನು ಸೂಚಿಸುತ್ತದೆ.''[೨] ತಂದೆ-ತಾಯಿಗಳಿಗೆ ಒಬ್ಬಳೇ ಮಗಳಿದ್ದರೆ, ಆಕೆ ವಿವಾಹದ ನಂತರವೂ ತಂದೆಯ ಮನೆಯಲ್ಲಿ ಇರಲು ಅವಕಾಶವಿತ್ತು. ಅಂಥವಳನ್ನು `ಪುತ್ರಿಕಾ` ಎಂದು ಕರೆಯುತ್ತಿದ್ದರು. ವೇದಗಳು ವಿವಾಹ ವಿಚ್ಛೇದನಕ್ಕೆ ಅವಕಾಶ ನೀಡಿರಲಿಲ್ಲ. ಪತಿ-ಪತ್ನಿಯರು ಸಾವಿನಿಂದ ಮಾತ್ರ ಬೇರೆ ಆಗಬೇಕೆಂದು ತಿಳಿಸಿವೆ. ಅಲ್ಲದೆ ವಿಧವಾ ವಿವಾಹವನ್ನು ಪ್ರೋತ್ಸಾಹಿಸಿ, ಸತಿ ಸಹಗಮನವನ್ನು ತಡೆದಿದೆ. ಸತಿಸಹಗಮನ ಪದ್ಧತಿಯಂತೆ, ವಿಧವೆ ಸತಿ ಹೋಗಲು ಬಯಸದೆ, ಪತಿಯ ಶವದ ಹತ್ತಿರ ಸ್ವಲ್ಪ ಸಮಯಕಳೆದು ನಂತರ ಎದ್ದು ಬರುತ್ತಿದ್ದಳು. ಇದರಂತೆ ಎದ್ದು ಬಂದಾಕೆ ಗಂಡನ ಸಹೋದರನನ್ನಾಗಲಿ, ಸಂಬಂಧಿಯನ್ನಾಗಲಿ ಮರು ವಿವಾಹವಾಗಲು ಅವಕಾಶವಿತ್ತು. ಋಗ್ವೇದದ ಹದಿನೆಂಟನೆಯ ಪರಿಚ್ಛೇದದ ಎಂಟನೆಯ ಶ್ಲೋಕವು ಸತಿಸಹಗಮನ ಪದ್ಧತಿಯನ್ನು ತಡೆಯಲು ಅವಕಾಶವಿರುವುದನ್ನು ವ್ಯಕ್ತಪಡಿಸುತ್ತದೆ. ``ವಿಧವೆಯೊಬ್ಬಳು ಗಂಡನ ಚಿತೆ ಹತ್ತಿರ ಹೋಗುವಾಗಲೇ ಗಂಡನ ಸಹೋದರ ಆಕೆಯನ್ನು ತಡೆದು ಮರು ವಿವಾಹ ಮಾಡಿಕೊಂಡಿರುವುದನ್ನು ಗಮನಿಸಬಹುದು.''[೩] ಇದರಿಂದಾಗಿ ವೇದಗಳ ಸಂದರ್ಭದಲ್ಲಿ ವಿಧವಾ ವಿವಾಹ ಅಸ್ತಿತ್ವದಲ್ಲಿತ್ತೆಂದು ತಿಳಿಯಬಹುದಾಗಿದೆ.

ವೇದ ಕಾಲದ ಸ್ತ್ರೀಯರು ಸಭೆ-ಸಮಾರಂಭಗಳಲ್ಲಿ ವಿವಿಧ ಚಟುವಟಿಕೆಗಳಲ್ಲಿ ಭಾಗಿಯಾಗುತ್ತಿದ್ದರು ಎನ್ನುವುದಕ್ಕೆ ಋಗ್ವೇದದ ಒಂದು ಶ್ಲೋಕ ನಿದರ್ಶನವಾಗಿದೆ. ಈ ಶ್ಲೋಕವು ಗಂಡ-ಹೆಂಡತಿಯರಿಬ್ಬರೂ ಮಾಡಿದ ಯಜ್ಞವು ಅವರಿಗೆ ಒಳ್ಳೆಯದನ್ನು ಮಾಡಲಿ ಎಂದು ಹೇಳುತ್ತದೆ. ಅಲ್ಲದೆ ಅಪಲಾ, ಘೋಷಾ, ಇಂದ್ರಾಣಿ, ಶಚಿ, ಲೋಪಾಮುದ್ರ, ವಿಶ್ವವರಾ ಮುಂತಾದ ಮಹಿಳೆಯರೂ ಶ್ಲೋಕಗಳನ್ನು ರಚಿಸಿದರೆಂದು ಕಂಡುಬರುತ್ತದೆ.

ಸಮೂಹ ಸಮೂಹಗಳ ನಡುವೆ ಆಗಾಗ ಯುದ್ಧ ಜರುಗುತ್ತಲಿತ್ತು. ಆ ಯುದ್ಧಗಳಲ್ಲಿ ಮಹಿಳೆಯರೂ ಭಾಗವಹಿಸುತ್ತಿದ್ದರು. ಇದಕ್ಕೆ ಆಧಾರವಾಗಿ 'ರಾಜಖೇಲನ ಹೆಂಡತಿ 'ವಿಶಾಪಾಲ' ಯುದ್ಧದಲ್ಲಿ ಭಾಗವಹಿಸಿ ಕಾಲು ಮುರಿದುಕೊಂಡು ಕಬ್ಬಿಣದ ಕಾಲನ್ನು ಹಾಕಿಸಿಕೊಂಡಿದ್ದಳು. ಇಂದ್ರಸೇನನ ಹೆಂಡತಿಯಾದ 'ಮುದ್ಗಲಾ' ಕಳ್ಳರು ಹಸುಗಳನ್ನು ಕದ್ದುಕೊಂಡು ಹೋಗುವಾಗ ತಾನೆ ರಥವನ್ನು ನಡೆಸಿ ಬಿಲ್ಲು-ಬಾಣಗಳಿಂದ ಕಳ್ಳರನ್ನು ಸೋಲಿಸಿದ್ದ ಪ್ರಸಂಗ ಉಲ್ಲೇಖನಾರ್ಹವಾದುದು.'[೪] ಈ ಉಲ್ಲೇಖಗಳಿಂದ ಹೆಣ್ಣು ಯುದ್ಧವಿದ್ಯೆ, ಬಿಲ್ಲು-ಬಾಣಗಳ ಪ್ರಯೋಗಿಸುವಿಕೆಯನ್ನು ಕಲಿಯುತ್ತಿದ್ದಳೆಂದು ಪುರುಷನ ಜೊತೆಗೆ ಇಲ್ಲವೇ ತಾವೇ ಯುದ್ಧ ಕಾರ್ಯಗಳಲ್ಲಿ ಮುನ್ನುಗ್ಗುತ್ತಿದ್ದರು ಎಂದು ತಿಳಿಯಬಹುದು. ಇಂಥ ಅಂಶಗಳನ್ನು ಸ್ತ್ರೀವಾದಿ ನೆಲೆಯಿಂದ ಮತ್ತಷ್ಟು ಶೋಧಿಸಬೇಕಾಗಿದೆ. ಹೆಣ್ಣನ್ನು ಪಣಕ್ಕೆ ಇಡುವ ಇಲ್ಲವೆ ವಿನಿಮಯದ ವಸ್ತುವನ್ನಾಗಿ ಉಪಯೋಗಿಸುತ್ತಿದ್ದರು. ಸಮೂಹಗಳ ನಡುವೆ ಯುದ್ಧಗಳಾಗಿ ಸೋತವರು ತಮ್ಮ ಸಂಪತ್ತು ಮತ್ತು ಸ್ತ್ರೀಯರನ್ನು ಗೆದ್ದವರಿಗೆ ಬಿಟ್ಟುಕೊಡುತ್ತಿದ್ದರು. ಇಂಥ ಸ್ತ್ರೀಯರು ಗೆದ್ದವರ ದಾಸಿಯರಾಗಿ, ವೇಶ್ಯೆಯರಾಗಿ ಬದುಕುತ್ತಿದ್ದರು.

ಮಹಿಳೆಯರು ಮುಂಜಾನೆಯಿಂದ ಸಂಜೆಯವರೆಗೆ ಗೃಹ ಸಂಬಂಧಿ ಕೆಲಸಗಳನ್ನು ಮಾಡುತ್ತಿದ್ದರು. ಅವುಗಳಲ್ಲಿ ದೇವರ ಜ್ಯೋತಿಯು ನಂದದಂತೆ ನೋಡಿಕೊಳ್ಳುವುದು, ಅತಿಥಿಗಳ ಸತ್ಕಾರ, ನೀರು-ಸೌದೆಯ ಸಂಗ್ರಹ ಮೊದಲಾದವು. ಹೆಣ್ಣು ಪರರ ಒಡವೆ, ಗಂಡು ತಮ್ಮ ಸಂತಾನವನ್ನು ಮುಂದುವರೆಸಿಕೊಂಡು ಹೋಗುವವ ಎಂಬ ರೂಢಿ ಇತ್ತು. ಹಾಗೂ ಹಿರಿಯರ ಆತ್ಮಕ್ಕೆ ಶಾಂತಿ ದೊರಕಿಸಿಕೊಡುವವ ಎಂಬ ಭಾವನೆ ಪ್ರಚಲಿತದಲ್ಲಿದ್ದು, ಹೆಣ್ಣುಮಗುವಿನ ಹುಟ್ಟಿಗೆ ಅಷ್ಟಾಗಿ ಮಹತ್ವವಾಗಲಿ, ಹಂಬಲವಾಗಲಿ ಇರಲಿಲ್ಲ. ಹೀಗಾಗಿ ಗಂಡುಮಗುವಿನ ಹಂಬಲ ಹೆಚ್ಚಾಗಿ, ಅದಕ್ಕಾಗಿ ಯಜ್ಞ-ಯಾಗಗಳು ಬಳಕೆಗೆ ಬಂದಿದ್ದವು. ಭ್ರೂಣದಲ್ಲಿರುವ ಮಗುವು ಗಂಡಾಗಲಿ ಎಂದು ಪ್ರಾರ್ಥಿಸುವ ಶ್ಲೋಕಗಳು ರಚಿತಗೊಂಡವು. ಇಂಥ ಹಲವಾರು ಆಚರಣೆಗಳು ರೂಢಿಗೆ ಬಂದು, ಹೆಣ್ಣು ಇನ್ನಷ್ಟು ಅಲಕ್ಷ್ಯ ಅಗೌರವಕ್ಕೆ ಒಳಗಾಗಬೇಕಾಯಿತು. ಇವುಗಳ ಜೊತೆಗೆ ಹೆಣ್ಣು ಅಲ್ಪಮತಿ, ಅಧಿಕಾರ ಚಲಾಯಿಸಲು ಯೋಗ್ಯಳಲ್ಲ ಎಂಬ ನಂಬಿಕೆ ರೂಢಿಗಳು ಹುಟ್ಟಿಕೊಂಡಿದ್ದು. ವಿಶ್ವಾಮಿತ್ರ ಕೂಡಾ ಹೆಣ್ಣೇ ಮನೆಯೆಂದು ಹೇಳಿದ್ದ. ಹೀಗೆ ಹೆಣ್ಣು ಗೌರವ-ಅಗೌರವ, ರಕ್ಷಣೆ-ಶೋಷಣೆ ಎರಡನ್ನು ಅನುಭವಿಸತೊಡಗಿದಳು. ಆದರೆ ವೇದ ಕಾಲದ ಸಾಮಾನ್ಯ ಮಹಿಳೆಯರ ಬದುಕು ಹೇಗೆ ಇತ್ತು? ಎಂಬಂಥ ವಿವರಣೆಗಳಾಗಲಿ, ದಾಖಲೆಗಳಾಗಲಿ ಅಷ್ಟಾಗಿ ದೊರತಿಲ್ಲವಾದ್ದರಿಂದ ಇಂಥ ಅಂಶಗಳನ್ನು ಸ್ತ್ರೀವಾದಿ ನೆಲೆಯಿಂದ ಅಧ್ಯಯನ ಕೈಗೊಳ್ಳುವ ಜರೂರು ಇದೆ.

## ೨. ಉಪನಿಷತ್ತುಗಳು

ಉಪನಿಷತ್ತುಗಳ ಕಾಲದಲ್ಲಿ ಸ್ತ್ರೀಯರು ಸಂತೋಷದಿಂದ ಇದ್ದರೆಂದು ಹೇಳಲಾಗಿದೆ. ಪುರುಷರ ಸರಿಸಮವಾಗಿ ಎಲ್ಲಾ ಕಾರ್ಯಗಳಲ್ಲೂ ನಿರತರಾಗಿದ್ದರು. ಅಲ್ಲದೆ ತಾತ್ವಿಕ ಚಿಂತನೆಗಳಲ್ಲಿಯೂ ಪುರುಷನಿಗಿಂತ ತಾವು ಕಡಿಮೆ ಇಲ್ಲ ಎಂಬುದನ್ನು ಅಭಿವ್ಯಕ್ತಿಸಿದ್ದಾರೆ. ಇದಕ್ಕೆ ಆಧಾರವಾಗಿ ಬೃಹದಾರಣ್ಯಕ ಉಪನಿಷತ್ತು ಮಾಹಿತಿ ನೀಡಿದೆ. ಜನಕ ರಾಜನ ಆಸ್ಥಾನದಲ್ಲಿ ಗಾರ್ಗಿ ಯಾಜ್ಞವಲ್ಕನನ್ನು ವಾದವೊಂದರಲ್ಲಿ ಸೋಲಿಸಿದ್ದಳು. ಸೋತ ಯಾಜ್ಞವಲ್ಕ ಸಭೆಯಲ್ಲಿಯೇ ಗಾರ್ಗಿಯನ್ನು ಬಾಯಿ ಮುಚ್ಚುವಂತೆ ಆದೇಶ ಮಾಡಿದ. ಹೆಣ್ಣು ಬುದ್ಧಿವಂತಳಾಗಿದ್ದರೂ ಪುರುಷನ ಅಧಿಕಾರದ ದರ್ಪ ಆಕೆಯನ್ನು ನಿಯಂತ್ರಿಸುತ್ತಿತ್ತು. ಇಂಥವುಗಳು ಚರಿತ್ರೆಯುದ್ದಕ್ಕೂ ಕಂಡುಬರುತ್ತವೆ. ಇವುಗಳೇ ಹೆಣ್ಣಿನ ಬೆಳವಣಿಗೆ, ಕ್ಷೇಮವನ್ನು ಬಯಸದೆ, ಪುರುಷನಿಗೆ ಅಧೀನವಾಗಿಸಿದ್ದದ್ದು ತಿಳಿದುಬಂದಿರುತ್ತದೆ. ಆಸ್ಥಾನದಲ್ಲಿಯೇ ಯಾಜ್ಞವಲ್ಕನ ದರ್ಪ ಹೆಣ್ಣನ್ನು ಅಸಮಾನತೆಯಿಂದ ಕಾಣುವ ಸ್ಥಿತಿಯಂತೂ ಇದ್ದೇ ಇತ್ತು. ಇನ್ನು ಸಾಮಾನ್ಯ ಮಹಿಳೆಯರು ಕುಟುಂಬಗಳಲ್ಲಿ ಪುರುಷನಿಂದ ಇನ್ನೂ ಹೆಚ್ಚಿನ ಬಗೆಯಲ್ಲಿ ಶೋಷಿತರಾಗಿದ್ದರೂ ಎನ್ನಬಹುದಾಗಿದೆ. ಉಪನಿಷತ್ತುಗಳ ಕಾಲದಲ್ಲಿಯೂ ಹೆಣ್ಣನ್ನು ವಿನಿಮಯದ ವಸ್ತುವಾಗಿ, ಕಾಣಿಕೆ ಕೊಡುವ ವಸ್ತುವಾಗಿ ಉಪಯೋಗಿಸಿದ್ದ ಉಲ್ಲೇಖಗಳು ಕಂಡುಬರುತ್ತವೆ. ಜನಶೃತಿ ಎಂಬ ಶ್ರೀಮಂತ ಶೂದ್ರನೊಬ್ಬ ಬ್ರಹ್ಮವಿದ್ಯೆ ಕಲಿಯಲು ಹಂಬಲಿಸಿ, 'ರೈಕ್ವ' ಎಂಬ ಮುನಿಯ ಬಳಿಗೆ ಹೋಗಿ ಮುನಿಗೆ ಸಾವಿರ ಆಕಳುಗಳನ್ನು, ಚಿನ್ನದ ಸರವನ್ನು, ಎರಡು ಬಲಿಷ್ಠ ಹೋರಿಗಳಿಂದ ಎಳೆಯುವ ರಥವನ್ನು ವಿದ್ಯೆಯ ಶುಲ್ಕವಾಗಿ ಕೊಡುವುದಾಗಿ ಹೇಳಿದ. ಆದರೂ ಮುನಿಯು ಒಪ್ಪಲಿಲ್ಲ. ಕೊನೆಗೆ ಜನಶ್ರುತಿ ತನ್ನ ಮಗಳನ್ನು ಕೊಡುತ್ತೇನೆ ಎಂದು ಹೇಳಿದ. ಶೂದ್ರನ ಮಗಳನ್ನು ವಿವಾಹವಾದ ಮುನಿ ಜನಶ್ರುತಿಗೆ ಬ್ರಹ್ಮವಿದ್ಯೆ ಕಲಿಸಿದ. ಪುರುಷ ತನ್ನ ಸುಖ-ಸಂತೋಷ, ಬೆಳವಣಿಗೆ, ಕೀರ್ತಿ,

ಶ್ರೇಯಸ್ಸಿಗಾಗಿ ಹೆಣ್ಣನ್ನು 'ಬಲಿ' ಎಂದು ಉಪಯೋಗಿಸಿದ್ದಾನೆ. ಹೆಣ್ಣು ಕೂಡ ಅವನ ತಾಳಕ್ಕೆ ತಕ್ಕಂತೆ ಹೆಜ್ಜೆ ಹಾಕಿ, ನಿರ್ಜೀವ ವಸ್ತುವಿನಂತೆ ನಡೆದುಕೊಂಡಿದ್ದಾಳೆ.

**೩. ಸ್ಮೃತಿಗಳು**

ಸ್ಮೃತಿಗಳನ್ನು ಧರ್ಮಶಾಸ್ತ್ರಗಳೆಂದು ಪರಿಗಣಿಸಲಾಗಿದೆ. ಈ ಸ್ಮೃತಿಗಳ ವಿಚಾರಕ್ಕೂ, ವೇದಗಳ ವಿಚಾರಕ್ಕೂ ತುಂಬಾ ಅಂತರವಿದೆ. ಈ ಸ್ಮೃತಿಗಳ ಕಾಲದಲ್ಲಿ ಹೆಣ್ಣನ್ನು ಪುರುಷನಿಗೆ ಎಷ್ಟು ಅಧೀನವಾಗಿಸಲು ಸಾಧ್ಯವೋ ಅದಕ್ಕಿಂತ ಹೆಚ್ಚಾಗಿ ಅಧೀನಳನ್ನಾಗಿಸಿ ಶೋಷಿಸಿದವು. ಗಂಡನೆ ಹೆಂಡತಿಯ ಜೀವಾಳ ಎನ್ನುವ ರೂಢಿ ಬಂದಿತ್ತು. ಶಿಕ್ಷಣ ಸಾರ್ವತ್ರಿಕವಾಗಿರದೆ ಮೇಲು ವರ್ಗಕ್ಕೆ ಮಾತ್ರ ಮೀಸಲಾಗಿದ್ದು, ಬಾಲಕಿಯರಿಗೆ ಮನೆಯಲ್ಲಿಯ ಸಂಬಂಧಿಕರಿಂದ ಶಿಕ್ಷಣ ಕೊಡಿಸುವ ವ್ಯವಸ್ಥೆಗಳು ಹುಟ್ಟಿದವು. ಸ್ಮೃತಿಗಳು ಹೆಣ್ಣನ್ನು ಯಾವಾಗಲೂ ಗಂಡಿನ ನೆರಳಿನಲ್ಲಿ ಇಡಲು ಬಯಸಿ, ಹೆಣ್ಣು ಯಾವುದೇ ಕಾರ್ಯ ಕೈಗೊಂಡರೂ ಗಂಡಿನ ಜೊತೆಯಲ್ಲಿ ಕೈಗೊಳ್ಳಲು ಸೂಚಿಸಿದವು. ಕೆಲವು ಸಂದರ್ಭಗಳಲ್ಲಿ ಹೆಣ್ಣು ಅಪವಿತ್ರಳೆಂದೂ ಆಗ ಯಾವುದೇ ಪವಿತ್ರ ಕಾರ್ಯಗಳನ್ನು ಕೈಗೊಳ್ಳದಂತೆ ನಿರ್ಬಂಧ ಹೇರಿದ್ದು ಸಹ ತಿಳಿದುಬರುತ್ತದೆ.

ಬಾಲ್ಯವಿವಾಹವು ಆಚರಣೆಗೆ ಬಂದಿದ್ದೇ ಸ್ಮೃತಿಗಳ ಕಾಲದಲ್ಲಿ. ತಂದೆ ತಾಯಂದಿರು ತಮ್ಮ ಹೆಣ್ಣು ಮಕ್ಕಳಿಗೆ ಬಾಲ್ಯದಲ್ಲಿಯೇ ವಿವಾಹ ಮಾಡಿ ಸ್ವರ್ಗ ಪಡೆಯಬೇಕೆಂಬ ನಂಬಿಕೆಗಳು ಚಾಲ್ತಿಗೆ ಬಂದವು. ಎಂಟು ವರ್ಷದ ಗೌರಿಯನ್ನು ಮದುವೆ ಮಾಡಿದರೆ ಸ್ವರ್ಗ ಎಂದೂ, ಒಂಬತ್ತು ವರ್ಷದ ರೋಹಿಣಿಯನ್ನು ಕೊಟ್ಟರೆ ವೈಕುಂಠವೆಂತಲೂ, ಹತ್ತು ವರ್ಷದ ಕನ್ಯೆಯನ್ನು ಕೊಟ್ಟರೆ ಬ್ರಹ್ಮಲೋಕವೆಂತಲೂ, ಹನ್ನೆರಡು ವರ್ಷದ ವೈಶಾಲಿಯನ್ನು ಕೊಟ್ಟರೆ ಗೌರವ ಪ್ರಾಪ್ತಿ ಎಂಬ ಕಟ್ಟುಪಾಡುಗಳನ್ನು ರೂಪಿಸಲಾಯಿತು. ವಶಿಷ್ಟ ಋಷಿಯು ಬಾಲ್ಯ ವಿವಾಹ ಕುರಿತು "ಮಗು ಬೆತ್ತಲೆ ಇರುವಾಗಲೇ ಮದುವೆ ಮಾಡಬೇಕೆಂದು" ಆದೇಶಿಸಿದ್ದ. ಇದಕ್ಕೆ ಕಾರಣಗಳು ಭಿನ್ನವಾಗಿದ್ದರೂ ಸ್ವರ್ಗ, ಗೌರವ ಎಂಬುವುಗಳನ್ನು ಮುಗ್ಧ ಜನರಿಗೆ ತೋರಿಸಿ, ಹೆಣ್ಣನ್ನು ಅಧೀನವಾಗಿಸಲು ಪುರುಷ ಪ್ರಧಾನ ಸಮಾಜ ಮಾಡಿದ ಕುಟಿಲ ತಂತ್ರವೇ ಇದು ಎಂದು ತಿಳಿಯಬಹುದಾಗಿದೆ.

ಬಾಲ್ಯವಿವಾಹದಿಂದಾಗಿ ಹೆಣ್ಣು ಶಿಕ್ಷಣದಿಂದ ವಂಚಿತಳಾಗುವಂತೆ ಮಾಡಿದ ಸಮಾಜವೇ ಆಕೆಯನ್ನು ಕುರಿತು ಹೆಣ್ಣಿನ ಬುದ್ಧಿ ಮೊಳಕಾಲು ಕೆಳಗೆ ಎಂದಿತು. ಈ ಬಾಲ್ಯ ವಿವಾಹದಿಂದ ಹೆಣ್ಣು ತನ್ನ ಬಾಳ ಸಂಗಾತಿಯನ್ನು ಆಯ್ಕೆ ಮಾಡಿಕೊಳ್ಳುವ ಹಕ್ಕನ್ನು ಕಳೆದುಕೊಂಡಳು. ಬಾಲ್ಯ ವಿವಾಹದಿಂದಾಗಿ ಅನೇಕ ಮಹಿಳೆಯರು ಪ್ರಾಪ್ತ ವಯಸ್ಸಿಗೆ ಬರುವುದಕ್ಕೆ ಮೊದಲೇ ಬಾಲ್ಯ ವಿಧವೆಯರಾಗಿದ್ದು, ಅಷ್ಟೇ ಅಲ್ಲದೆ ವಿವಾಹ ಹೆಣ್ಣಿಗೆ ಕಡ್ಡಾಯವಾಗಿತ್ತು. ಅದರಲ್ಲೂ ಬಾಲ್ಯ ವಿವಾಹವನ್ನು ತಂದೆ-ತಾಯಂದಿರು ಮಾಡುತ್ತಿದ್ದರಿಂದ 'ವರ'ನಿಗೆ ಬೇಡಿಕೆ ಅಧಿಕವಾಗಿತ್ತು. ಬಾಲ್ಯವಿವಾಹದಿಂದಾಗಿ ವರದಕ್ಷಿಣೆ ಪದ್ಧತಿ ವ್ಯಾಪಕವಾಗಲೂ ಕಾರಣವಾಯಿತು. ಈಗಾಗಲೇ ಹಲವು ಕಾರಣಗಳಿಂದಾಗಿ ಹೆಣ್ಣು ನಿರ್ಲಕ್ಷ್ಯಕ್ಕೆ ಒಳಗಾಗಿದ್ದು, ವರದಕ್ಷಿಣೆಯಿಂದ ಮತ್ತೆ ನಿರ್ಲಕ್ಷ್ಯಕ್ಕೆ, ಅತೃಪ್ತಿಗೆ ಒಳಗಾಗಲು ಕಾರಣವಾಯಿತು. ಬಡವರು ತಮ್ಮ ಹೆಣ್ಣು ಮಕ್ಕಳನ್ನು ಬಾಲ್ಯದಲ್ಲೇ ವಿವಾಹ ಮಾಡಲು ಬಯಸಿದರೂ ಅವರಿಗೆ ವರದಕ್ಷಿಣೆ ಸಮಸ್ಯೆ ಎದುರಾಯಿತು. ಈ ಸಮಸ್ಯೆಯಿಂದ ಬಿಡುಗಡೆ ಪಡೆಯಲು ಮತ್ತು ಸ್ವರ್ಗಕ್ಕೆ ಹೋಗಲು ಹಂಬಲಿಸಿ, ತಮ್ಮ ಹೆಣ್ಣುಮಕ್ಕಳನ್ನು ವೃದ್ಧರಿಗೂ ಕೊಟ್ಟು ವಿವಾಹ

ಮಾಡಿದರು. ಇಂಥ ವಿಷಮ ವಿವಾಹಗಳಿಂದಲೂ ವಿಧವೆಯರ ಸಂಖ್ಯೆ ಹೆಚ್ಚಾಗಲು ಕಾರಣವಾಯಿತು. ಈ ಬಾಲ್ಯ ವಿಧವೆಯರು ಸಮಾಜದಲ್ಲಿ ವಿಭಿನ್ನ ತೊಂದರೆಗಳನ್ನು ಎದುರಿಸಿ ಬದುಕಬೇಕಾಯಿತು. ಋತುಮತಿಯಾದ ಹೆಣ್ಣನ್ನು ಬ್ರಾಹ್ಮಣ ವಿವಾಹವಾದರೆ, ಶೂದ್ರ ಕನ್ಯೆಯನ್ನು ವಿವಾಹವಾದಂತೆ ಎಂದು ತಿಳಿಸಲಾಯಿತು. ಹೀಗೆ ಬಾಲ್ಯವಿವಾಹ ಮಾಡಲು ಪ್ರೇರಣೆಯಾಗಿ ಅನೇಕ ನಂಬಿಕೆ, ರೂಢಿಗಳನ್ನು ಪುರುಷ ಪ್ರಧಾನ ಸಮಾಜ ಜಾರಿಗೆ ತಂದಿತು. ಬಾಲ್ಯವಿವಾಹವಾಗುವ ಹುಡುಗಿ ಋತುಮತಿಯಾದ ನಂತರವೇ ಗಂಡನ ಮನೆಗೆ ಹೋಗಬೇಕಾಗಿತ್ತು. ಈ ಪದ್ಧತಿಯನ್ನು ಮೊದಲು ಬ್ರಾಹ್ಮಣರು ಆಚರಿಸುತ್ತಿದ್ದರೂ ಬರಬರುತ್ತ ಇತರೆ ವರ್ಗಗಳೂ ಸಹ ಇದನ್ನು ಆಚರಿಸಲು ಪ್ರಾರಂಭಿಸಿದವು. ಈ ಬಾಲ್ಯ ವಿವಾಹದಿಂದಾಗಿ ಅನೇಕ ತೊಂದರೆಗಳು ಹುಟ್ಟಿದ್ದು ಹೆಣ್ಣನ್ನು ಬೌದ್ಧಿಕ, ಭೌತಿಕ, ಮಾನಸಿಕವಾಗಿ ಶೋಷಿಸಿದವು. ಈ ಬಾಲ್ಯ ವಿವಾಹಗಳು ಹೆಣ್ಣಿನ ಸ್ವಾತಂತ್ರ್ಯವನ್ನು ನಿರ್ಬಂಧಿಸಿದ್ದವು ಎಂದು ಹೇಳಬೇಕಾಗಿದೆ. ಹೆಣ್ಣಿಗೆ ಯಾವುದೇ ಬಗೆಯ ಆಯ್ಕೆ ಸ್ವಾತಂತ್ರ್ಯಗಳು ಇರಲಿಲ್ಲ. ಇದನ್ನು -

> "Women was allowed no choice in the selection of her husband, and she was married at an age, when she was incapable of understanding, the real significance of marriage and excercising her own judgement and discretion. womanhood was sacrificed at the altar of supported social convenience and purity and out of its ashes rose a race of cabined, cribbed and delicate creatures too fragile for the propagation of life, too ethereal to be of any earthly use. With woman's degeneration began the degeneration of the people which has continued to the present time with rapid and disastrous acceleration."[೫]

ಎಂಬ ಉಲ್ಲೇಖದಿಂದಲೂ ತಿಳಿಯಬಹುದಾಗಿದೆ. ವಿವಾಹಕ್ಕೆ ಹೆಣ್ಣನ್ನು ನೋಡಲು, ಹುಡುಗಿಯ ಅದೃಷ್ಟ ತಿಳಿಯಲು ಅಶ್ವಲಾಯನನು ಈ ಕೆಳಗಿನ ಪರೀಕ್ಷೆಗಳನ್ನು ಮಾಡಲು ಹೇಳಿದ್ದಾನೆ. ಈ ಸಂದರ್ಭದಲ್ಲಿ "ಎಂಟು ಬಗೆಯ ಮಣ್ಣಿನ ಮುದ್ದೆಯನ್ನು ಇರಿಸುತ್ತಿದ್ದರು. ಯಾವ ಮುದ್ದೆಯನ್ನು ಮುಟ್ಟುವಳೋ ಅದರ ಮೇಲೆ ಅವಳ ಅದೃಷ್ಟ ನಿರ್ಧರಿಸುತ್ತಿದ್ದರು. ಅವುಗಳೆಂದರೆ -

೧. ಎರಡು ಬೆಳೆಗಳನ್ನು ಕೊಡುವ ಮಣ್ಣು (ಸಂತಾನವತಿಯಾಗುವಳೆ ಇಲ್ಲವೇ ಎಂಬುದನ್ನು ತಿಳಿಯಲು)

೨. ಸಗಣಿಮುದ್ದೆ (ದನ ಕರುಗಳ ಸಾಕಣೆ ಅವಳ ಜಾತಕದಲ್ಲಿದೆಯೇ ಎಂದು ನೋಡಲು)

೩. ಪವಿತ್ರವಾದ ಮಣ್ಣು (ಅವಳಿಗೆ ಆಧ್ಯಾತ್ಮಿಕ ಚಿಂತನೆ ಇದೆಯೋ ಇಲ್ಲವೋ)

೪. ನೀರಿನೊಳಗಿನ ಮಣ್ಣು

೫. ಜೂಜಾಡುವ ಸ್ಥಳದ ಮಣ್ಣು

೬. ನಾಲ್ಕು ರಸ್ತೆ ಕಲೆಯುವ ಜಾಗದ ಮಣ್ಣು

೭. ಸೌಳು ಮಣ್ಣು (ಬಂಜೆಯಾಗುವ ಸೂಚನೆ)

೮. ಸ್ಮಶಾನ ವಾಟಿಯಲ್ಲಿನ ಮಣ್ಣು" ಗಳನ್ನು ಇಡುತ್ತಿದ್ದರು.೬

ಈ ಮೇಲಿನ ಅಂಶಗಳಲ್ಲಿ ಮೊದಲಿನ ಮೂರು ಬಗೆಯ ಮಣ್ಣು ಮುಟ್ಟಿದ ಕನ್ಯೆಯನ್ನು ವಿವಾಹವಾಗಲು ಯಾವ ಅಡ್ಡಿಯೂ ಇಲ್ಲ ಎಂಬ ನಂಬಿಕೆ ಇತ್ತು. ಇಂಥ ಪರೀಕ್ಷೆಯು ಅವಳಿಗೆ ಸಾಮಾನ್ಯವಾಗಿತ್ತು. ಇದು ಮೂಢನಂಬಿಕೆಯಾಗಿದ್ದರೂ ಸಹ ತಿರಸ್ಕರಿಸುವ ಹಕ್ಕು ಅವಳಿಗಿರಲಿಲ್ಲ. ಮಣ್ಣಿನ ಮುದ್ದೆಗೂ ಅವಳ ಮನಸ್ಸಿಗೂ ಸಂಬಂಧವಿರದ ಚಟುವಟಿಕೆಗಳ ಗೊಂಬೆಯಾಗಿ ವರ್ತಿಸಬೇಕಾಗಿತ್ತು.

ವಿಧವೆಯರ ಜೀವನ ಉತ್ತಮವಾಗಿರಲಿಲ್ಲ. ಆಕೆ ಗೆಡ್ಡೆ-ಗೆಣಸುಗಳನ್ನು ತಿಂದು ದೇವರ ಸಾನಿಧ್ಯದಲ್ಲಿ ಕಾಲ ಕಳೆಯಬೇಕಾಗಿತ್ತು. ಬಾಲ್ಯ ವಿವಾಹಗಳಿಂದ ಬಾಲ್ಯ ವಿಧವೆಯರು ಹೆಚ್ಚಾಗಿದ್ದರು. ಈ ವಿಧವೆಯರು ತರುಣಿಯರಾಗಿದ್ದರಿಂದ ಸಮಾಜದ ಅನ್ಯ ಪುರುಷನ ಕಾಮಕ್ಕೂ ಬಲಿಯಾಗುತ್ತಿದ್ದರು. ಇನ್ನೂ ಕೆಲವರು ಅನೈತಿಕ ಸಂಬಂಧಗಳನ್ನು ಹೊಂದಿ ಇತರ ಸಂಸಾರಗಳಿಗೆ ತೊಂದರೆ ಕೊಡುತ್ತಿದ್ದರು. ಹೀಗೆ ಅನೇಕ ಸಮಸ್ಯೆಗಳು ಇವರಿಂದ ಹುಟ್ಟಿಕೊಂಡಿದ್ದವು. ಅದಕ್ಕಾಗಿ ವಿಧವೆಯರನ್ನು ದೇಹ ದಂಡಿಸಲು ಹಣ್ಣು, ಗೆಡ್ಡೆ ಗೆಣಸುಗಳನ್ನು ತಿನ್ನುವಂತೆ ಅಲ್ಲದೆ ದೇವರ ಕಾರ್ಯಗಳಲ್ಲಿ ನಿರತಳಾಗುವಂತೆ ಮಾಡಲಾಗಿತ್ತು. ಈ ವಿಧವೆಯರಿಂದ ಉಂಟಾದ ತೊಂದರೆ, ಸಮಸ್ಯೆಗಳಿಂದ ಅವರು ಸತಿ ಸಹಗಮನ ಎಂಬ ಪದ್ಧತಿಗೆ ಒಳಗಾಗಬೇಕಾಯಿತು. ಈ ಪದ್ಧತಿಯು ವಿಧವಾ ವಿವಾಹವನ್ನು ನಿರಾಕರಿಸಿತ್ತು. ಇಂಥ ಪದ್ಧತಿಗಳ ಆಚರಣೆ ಕೂಡಾ ಹೆಣ್ಣು ಮಗುವಿನ ಜನನವನ್ನು ಪ್ರೋತ್ಸಾಹಿಸದೆ ಹೆತ್ತವರಿಗೆ ನಿರಾಸೆಯನ್ನು, ಅಸಮಾಧಾನವನ್ನು ತಂದವು. ಹೆಣ್ಣುಮಗು ಹುಟ್ಟಿದರೆ ಹಲವಾರು ತೊಂದರೆ, ಸಮಸ್ಯೆಗಳನ್ನು ಎದುರಿಸಬೇಕಾಗಿದ್ದರಿಂದ ಅಷ್ಟಾಗಿ ಹೆಣ್ಣು ಮಗುವನ್ನು ಬಯಸದೇ, ಗಂಡು ಮಗುವಿನ ಹಂಬಲ ಹೆಚ್ಚಾಯಿತು. ಇದರಿಂದಾಗಿ ಹೆಣ್ಣು ಕನಿಷ್ಠ, ಗಂಡು ಶ್ರೇಷ್ಠ ಎನ್ನುವಂಥ ಆಚರಣೆಗಳು ಹುಟ್ಟಿಕೊಂಡವು. ಅದಕ್ಕಾಗಿ ಪ್ರತಿ ಹೆಣ್ಣು ಗಂಡು ಮಗುವನ್ನು ಹೆರಬೇಕೆಂದು ತಿಳಿಸಿದ ಪುರುಷ ಪ್ರಧಾನ ಸಮಾಜ ಮತ್ತೊಂದು ಹೊಸದಾದ ಪದ್ಧತಿಯನ್ನು ಪರಿಚಯಿಸಿತು. ಈ ಪದ್ಧತಿಯೇ 'ನಿಯೋಗ' ಪದ್ಧತಿ ಆಗಿದ್ದು, ಹೆಣ್ಣು ಗಂಡು ಸಂತಾನ ಪಡೆಯಲು ಬೇರೆ ಪುರುಷನೊಬ್ಬನ ಸಂಬಂಧ ಹೊಂದಬೇಕಾಗಿತ್ತು. ಹೀಗೆ ಹೆಣ್ಣು ಪುರುಷನ ಸಂತಾನವನ್ನು ಬೆಳಸಿದ್ದಾಳೆ ಹಾಗೂ ಅವನ ಕೈಗೊಂಬೆಯಾಗಿ ಅವನು ಆಡಿಸಿದಂತೆ ಆಡುತ್ತಾ ಬಂದಿದ್ದಾಳೆ. ಕೆಲವೊಮ್ಮೆ ತನ್ನದೇ ನೆಲೆಯಲ್ಲಿ ಪ್ರತಿಕ್ರಿಯೆ ವ್ಯಕ್ತಪಡಿಸಿದರೂ ಅದಕ್ಕೆ ಬೆಂಬಲ ಸಿಗದೆ, ಅವುಗಳು ಮಂಜಿನಂತೆ ಕರಗಿ ಹೋಗಿರುತ್ತವೆ. ಆರಂಭದಲ್ಲಿನ ನಿಯೋಗ ಪದ್ಧತಿ ಗಂಡು ಮಗುವನ್ನು ಪಡೆಯಲು ಎಂದೇ ಇತ್ತಾದರೂ ಕ್ರಮೇಣ ಅದು ಹೆಣ್ಣಿನ ಶೋಷಣೆಗೆ ಕಾರಣವಾಯಿತು. ಜೊತೆಗೆ ಅನೇಕ ಸಮಸ್ಯೆಗಳ ಸೃಷ್ಟಿಗೂ ನಾಂದಿಯಾಯಿತು. ಆದ್ದರಿಂದ ನಿಯೋಗ ಪದ್ಧತಿಯನ್ನು ನಿಲ್ಲಿಸಲು ಪತಿ ನಿಷ್ಠೆಯುಳ್ಳ ವ್ರತವನ್ನು ಜಾರಿಗೆ ತಂದಿತು. ಹೀಗೆ ಹೆಣ್ಣಿನ ಶೋಷಣೆ, ಅಧೀನತೆಗೆ ಹೊಸ ಹೊಸ ಸಂಚುಗಳನ್ನು ಪುರುಷ ಪ್ರಧಾನ ಸಮಾಜ ಮಾಡುತ್ತಲೇ ಸಾಗಿತ್ತು. ಇಂದಿಗೂ ಸ್ತ್ರೀ ಮೇಲೆ ಪುರುಷ ಪ್ರಧಾನ ಸಮಾಜ ಪ್ರಹಾರಗಳನ್ನು ಮಾಡುತ್ತಲೇ ಬಂದಿದೆ.

೪. ಮಹಾಕಾವ್ಯಗಳು

ಮಹಾಕಾವ್ಯಗಳಾದ ರಾಮಾಯಣ, ಮಹಾಭಾರತಗಳ ಕೇಂದ್ರ ಬಿಂದು ಸಹ ಹೆಣ್ಣೆ. ಈ ಎರಡು ಕಾವ್ಯಗಳಲ್ಲಿ ಹೆಣ್ಣು ವೈವಿಧ್ಯಮಯವಾಗಿ ಚಿತ್ರಿತಗೊಂಡಿದ್ದಾಳೆ. ಈ ಕಾವ್ಯಗಳ ಕಾಲಘಟ್ಟದಲ್ಲಿಯೂ ಹೆಣ್ಣನ್ನು ಕದ್ದು ಒಯ್ಯುವ, ಪಣಕ್ಕೆ ಇಡುವ, ದಾನವಾಗಿ ಕೊಡುವ ವಸ್ತುವಾಗಿದ್ದಳು. ಜೊತೆಗೆ ಹೆಣ್ಣಿಗೆ ವಿವಾಹ ಕಡ್ಡಾಯ ಎಂಬ ಧಾರ್ಮಿಕ ನಿರ್ಬಂಧ ಸಹ ಬಂದಿತ್ತು. ಇದರೊಂದಿಗೆ ಎಂಟು ಬಗೆಯ ವಿವಾಹ ಪದ್ಧತಿಗಳು ರೂಢಿಯಲ್ಲಿದ್ದವು. ಅಲ್ಲದೆ ಪ್ರತಿಯೊಂದು ಅನುಲೋಮ ವಿವಾಹಗಳು ಆಚರಣೆಯಲ್ಲಿ ಬಂದಿದ್ದವು. ಏಕಪತ್ನಿ, ಬಹುಪತ್ನಿತ್ವ ಪದ್ಧತಿಯು ಜಾರಿಯಲ್ಲಿ ಇತ್ತು. ಆದರೆ ಬಾಲ್ಯ ವಿವಾಹಕ್ಕೆ ಅವಕಾಶ ಕೊಡದೆ ವಿಧವಾ ವಿವಾಹವನ್ನು ಅಷ್ಟಾಗಿ ಬಳಕೆಯಲ್ಲಿ ತಂದಿರಲಿಲ್ಲ. ಸತಿ ಸಹಗಮನ ಪದ್ಧತಿ ಆಚರಣೆಯಲ್ಲಿತ್ತು ಎನ್ನುವುದಕ್ಕೆ ಉಲ್ಲೇಖಗಳು ಕಂಡುಬಂದಿರುತ್ತವೆ. ಉದಾಹರಣೆಗೆ 'ಮಾದ್ರಿ'ಯ ಸಹಗಮನ. ಅಂದಿನ ಸಮಾಜದ ಆಚರಣೆಯಲ್ಲಿ ಸಹಗಮನ ಇತ್ತು ಎಂದು ತಿಳಿಯಲು ಆಧಾರವಾಗಿದೆ. ಗಂಡು ಮಗುವಿಗಾಗಿ ನಿಯೋಗ ಪದ್ಧತಿಯು 'ಪಾತಿವ್ರತ್ಯ'ದಂಥ ಪದ್ಧತಿಗಳೆಂದು ಏಕ ಕಾಲದಲ್ಲಿ ಮಾನ್ಯ ಪಡೆದಿದ್ದುದು ಕಂಡುಬಂದಿರುತ್ತದೆ. ಅಲ್ಲದೆ ಅತಿಥಿಗಳ ಸತ್ಕಾರಕ್ಕಾಗಿ ಗೃಹಿಣಿ ಸಿದ್ಧವಿರಬೇಕೆಂದು ಸತ್ಕಾರದ ವೇಳೆ ದೈಹಿಕ ಸಂಬಂಧ ಹೊಂದಿದರೂ ಪಾಪಕರವಲ್ಲ ಎಂದು ಹೇಳಿದರೂ ಐದು ಮಹಿಳೆಯರನ್ನು ಮಾತ್ರ ಮಹಾ ಪಾತಿವ್ರತ್ಯೆಯರು ಎಂದು ಗುರುತಿಸಲಾಗಿದೆ. ಹಾಗಾದರೆ ಉಳಿದ ಸ್ತ್ರೀಯರು ಏನು? ಎಂದು ಸ್ತ್ರೀವಾದ ಪ್ರಶ್ನಿಸಿದೆ ಮತ್ತು ಪುರುಷ ಪ್ರಧಾನ ಸಮಾಜ ತಂದ ಪದ್ಧತಿ, ಆಚರಣೆಗಳನ್ನು, ಸಮಾಜೀಕರಣದಿಂದ ಬಂದಿರುತ್ತವೆ ಎಂದು ತೋರಿಸಿದೆ.

ರಾಮಾಯಣ ಕಾಲಘಟ್ಟದಲ್ಲಿಯೂ ಹೆಣ್ಣು ಕದ್ದು ಒಯ್ಯುವ ವಸ್ತುವಾಗಿದ್ದಾಳು. ಏಕ, ಬಹುಪತ್ನಿತ್ವ ಪದ್ಧತಿಗಳೆರಡು ರೂಢಿಯಲ್ಲಿದ್ದವು. ಮುಂದೆ ಮಹಾಭಾರತದ ಕಾಲದಲ್ಲಿಯೂ ಇವೇ ಆಚರಣೆಗಳು ಮುಂದುವರೆದವು. ಆದರೆ ಸೀತೆಯನ್ನು ಅಗ್ನಿಪರೀಕ್ಷೆಗೆ ಒಳಪಡಿಸಿದ್ದನ್ನು ಮತ್ತು ಮಂಡೋದರಿಯು ತಾನೇ ಸೀತೆಯ ಬಳಿಗೆ ಹೋಗಿ ರಾವಣನನ್ನು ವಿವಾಹವಾಗುವಂತೆ ಕೇಳಿಕೊಂಡಿದ್ದಳು ಎಂಬ ಉಲ್ಲೇಖಗಳಿವೆ. ಹೆಣ್ಣು ತನಗೆ ಸವತಿಯರು ಬರುತ್ತಾರೆ ಎಂದು ಚಿಂತಿಸಲು ಅವಕಾಶ ಕೊಟ್ಟಿಲ್ಲ. ಹೀಗಿದ್ದಾಗ ಇನ್ನು ಪ್ರಶ್ನಿಸುವ ಮಾತು ಬಹುದೂರವೇ ಸರಿ. ಒಟ್ಟಿನಲ್ಲಿ ಈ ಎರಡು ಕಾವ್ಯಗಳಲ್ಲಿ ಹೆಣ್ಣು ಸಮಸ್ಯೆಗಳಲ್ಲಿ ಸಿಕ್ಕು ಬಲಿಯಾಗಲು ಮತ್ತು ಆ ಸಮಸ್ಯೆಗಳಿಂದ ಬಿಡುಗಡೆ ಪಡೆಯಲು ಗಂಡು ಪ್ರಮುಖ ಸೂತ್ರಧಾರನಾಗಿರುವನು. ಇದನ್ನೇ ಸ್ತ್ರೀವಾದ ಇಂದು ಮರುಚಿಂತನೆಗೆ ಒಳಪಡಿಸಿದೆ.

ಸ್ತ್ರೀ ಶಿಕ್ಷಣಕ್ಕೆ ಎಲ್ಲ ಬಗೆಯ ಅವಕಾಶಗಳಿದ್ದವು. ಇದಕ್ಕೆ ಆಧಾರವಾಗಿ ದ್ರೌಪದಿಯನ್ನು ಪಂಡಿತೆ ಎಂತಲೂ ಕರೆಯಲಾಗಿತ್ತು. ಕೌಶಲ್ಯೆ ರಾಮನ ಪಟ್ಟಾಭಿಷೇಕಕ್ಕೆ ಮೊದಲೇ ಮಂತ್ರಗಳನ್ನು ಪಠನೆ ಮಾಡಿರುವ ಉಲ್ಲೇಖವಿದೆ. ಇದರಂತೆ ಲವ-ಕುಶಲರ ಜೊತೆ 'ಅತ್ರೇಯಿ' ಎಂಬ ಬಾಲಕಿ ವ್ಯಾಸಂಗ ಮಾಡಿದ್ದಳು ಎಂಬ ಉಲ್ಲೇಖಗಳು ಕಂಡುಬಂದಿವೆ. ಹೆಣ್ಣಿನ ಛಲ, ಕೋಪ, ತಾಪಗಳನ್ನು ಸಹ ಮಹಾಭಾರತ ತಿಳಿಸುವುದು. ಪರ ಸ್ತ್ರೀ ವ್ಯಾಮೋಹ, ಅಪಹರಣಗಳು ಧರ್ಮಕ್ಕೆ ವಿರುದ್ಧ ಎಂದು ಪರಿಗಣಿಸಲಾಗಿತ್ತು. ಆದರೂ ಸೀತೆಯನ್ನು ರಾವಣ ಅಪಹರಣ ಮಾಡಿರುವುದು ಕಂಡುಬಂದಿರುತ್ತದೆ. 'ಹೆಣ್ಣಿಗೆ ಹೆಣ್ಣೇ ಶತ್ರು' ಎಂದು ಹೇಳಲು, ರಾಮನ ವನವಾಸವನ್ನು ವ್ಯಕ್ತಪಡಿಸಿ ಅದಕ್ಕೆ ಸವತಿ ಮತ್ಸರವೇ ಕಾರಣವೆಂದು ಪುರುಷಪ್ರಧಾನ ಸಮಾಜವು ನಿರ್ವಚಿಸಿದೆ.

ಇದನ್ನೇ ಸ್ತ್ರೀವಾದ ವಿರೋಧಿಸಿ ಹೆಣ್ಣಿಗೆ ಹೆಣ್ಣು ಶತ್ರು ಅಲ್ಲ, ಇಂಥ ನಂಬಿಕೆ, ರೂಢಿಗಳು ಪುರುಷನಿಂದ ನಿರ್ವಚಿಸಲ್ಪಟ್ಟಿರುವವು ಹಾಗೂ ಹೆಣ್ಣಿನ ಅಧೀನತೆಗೆ ಕಾರಣವಾಗುವ ಪುರುಷನ ಕುತಂತ್ರವಿದು ಎಂದು ತೋರಿಸಿದೆ.

ಒಟ್ಟಿನಲ್ಲಿ ಧರ್ಮಶಾಸ್ತ್ರಗಳು, ಸ್ಮೃತಿಗಳು ಬಾಲ್ಯ ವಿವಾಹವನ್ನು ಬೆಂಬಲಿಸಿ ಹೆಣ್ಣಿನ ವ್ಯಕ್ತಿತ್ವ ವಿಕಾಸಕ್ಕೆ ಬೇಕಾದ ಶಿಕ್ಷಣ ದೊರೆಯದಂತೆ ಮಾಡಿದ್ದವು. ಕ್ರಮೇಣ ವೇದ, ಮಂತ್ರಗಳನ್ನು ಹೆಣ್ಣು ಹೇಳಬಾರದು, ಕೇಳಲೂ ಬಾರದು ಎಂದು ನಿರ್ಬಂಧ ತಂದವು. ಹೆಣ್ಣು ವಿದ್ಯಾವಂತಳಾದರೆ ಕೆಟ್ಟು ಹೋಗುತ್ತಾಳೆ ಹಾಗೂ ಓದದವಳಾಗಿದ್ದರೆ ಆಕೆಯ ಗಂಡನ ಆಯುಷ್ಯ ತುಂಬಾ ಕಡಿಮೆ. ಹೆಣ್ಣು ಕುಟುಂಬದಾಚೆ ಬರಬಾರದು, ಗಂಡನೇ ಅವಳಿಗೆ ದೇವರು ಎಂಬಂಥ ನಂಬಿಕೆಗಳನ್ನು ಹುಟ್ಟುಹಾಕಿತು. ಒಂದು ವೇಳೆ ಶಿಕ್ಷಣ ಪಡೆದಿದ್ದರೆ ಅದು ಧಾರ್ಮಿಕವಾಗಿತ್ತು. ನೃತ್ಯ, ಸಂಗೀತಗಳು ಈ ಕಾಲದಲ್ಲಿ ಇದ್ದ ಬಗ್ಗೆ ದಾಖಲೆಗಳು ದೊರೆಯದಾಗಿವೆ. ಈ ದಿಸೆಯಲ್ಲಿ ಸ್ತ್ರೀವಾದಿ ಚಿಂತಕಿಯರು ಅಧ್ಯಯನ ಮಾಡಲು ಸಾಕಷ್ಟು ಸಾಧ್ಯತೆಗಳು ಇವೆ ಎನ್ನಬಹುದು.

### ಆ. ೧. ಶಿಕ್ಷಣ ಮತ್ತು ಮಹಿಳೆ

ಪ್ರಾಚೀನ ಕರ್ನಾಟಕದ ಮಹಿಳೆಯರು ವಿದ್ಯಾಪ್ರೇಮಿಗಳು. ಕಲೆ ಮತ್ತು ಸಾಹಿತ್ಯದ, ಸಂಗೀತ-ನೃತ್ಯದ ಪೋಷಕಿಯರು, ಆಡಳಿತಗಾರ್ತಿಯರು, ವೀರನಾರಿಯರು ಆಗಿದ್ದರು. ಜೊತೆಗೆ ಸ್ವತಃ ಸಾಹಿತ್ಯ ಆಸಕ್ತಿಯುಳ್ಳವರಾಗಿದ್ದು, ಕೃತಿಗಳನ್ನು ರಚಿಸಿದ್ದಾರೆ. ಅಲ್ಲದೆ ಕವಿಗಳಿಗೂ ಆಶ್ರಯ ನೀಡುವುದರ ಮುಖೇನ ಸೇವೆ ಸಲ್ಲಿಸಿದ್ದಾರೆ. ಪ್ರಾಚೀನ ಕರ್ನಾಟಕದ ಶಿಕ್ಷಣದ ಬಗ್ಗೆ ತಿಳಿಯಲು ಶಿಲಾಲೇಖನಗಳೂ, ಭಿತ್ತಿ ಚಿತ್ರ, ಕಾವ್ಯಗಳೂ ಅಷ್ಟಿಷ್ಟು ವಿಷಯವನ್ನು ಉಲ್ಲೇಖಿಸಿವೆ. ಪ್ರಾಚೀನ ಕರ್ನಾಟಕದ ಮೊದಲ ವಿದ್ಯಾ ಸಂಸ್ಥೆಯಾಗಿ ಬೌದ್ಧ ವಿಹಾರಗಳು ಕಂಡುಬರುತ್ತವೆ. ಈ ವಿಹಾರವನ್ನು ಮೂರನೆಯ ಶತಮಾನದಲ್ಲಿಯೇ ಶಿವಸ್ಕಂದ ನಾಗಶ್ರೀಯು ಕಟ್ಟಿಸಿದ್ದಳು. ಈ ವಿಹಾರವೇ ವಿದ್ಯಾಸಂಸ್ಥೆ ಆಗಿತ್ತು ಎನ್ನಲಾಗಿದೆ. ಈ ಕಾಲಘಟ್ಟದಲ್ಲಿಯೂ ವಿದ್ಯಾದಾನಕ್ಕೆ ಹೆಚ್ಚಿನ ಪ್ರಾಮುಖ್ಯತೆ ಇತ್ತು. ಇದಕ್ಕೆ ಆಧಾರವಾಗಿ ಬನವಾಸಿಯ ಶಾಸನವೊಂದು ವಿವರಿಸುತ್ತದೆ. ''ಯಾತ್ರಾ ಸ್ಥಳಗಳಿಗೆ ಹೋಗಿ ಯಜ್ಞ-ಯಾಗಾದಿಗಳನ್ನು ಆಚರಿಸಿ ಬರುವುದರಿಂದ ದೊರಕುವ ಪುಣ್ಯಕ್ಕಿಂತ ವಿದ್ಯಾದಾನದಿಂದ ಬರುವ ಪುಣ್ಯವು ಕೋಟಿ ಪಟ್ಟು ಹೆಚ್ಚಾಗಿರುತ್ತದೆ'' ಎಂದು ಉಲ್ಲೇಖಿಸಿದೆ. ಕಂಚಿಕಬ್ಬೆ ಎಂಬಾಕೆಯೂ ಐದುನೂರು ಕಮ್ಮ ಭೂಮಿಯನ್ನು ತಪೋವನಕ್ಕಾಗಿ ದಾನ ನೀಡಿದ್ದಳು. ಈ ತಪೋವನದಲ್ಲಿ ''ಹುಲಿಗಳು ಮಿಸುಕಾಡದೆ ನಿಂತು ಧರ್ಮ ಶ್ರವಣ ಮಾಡಿದರೆ, ಗಿಳಿಗಳು ಮುನಿಗಳು ಓದುವುದನ್ನು ಕೇಳಿ ಕೇಳಿ ಹಗಲು, ರಾತ್ರಿ ಅವನ್ನೇ ಹಾಡುತ್ತಿದ್ದವೆಂದು''[೭] ಎಂದು ಹೇಳಲಾಗುತ್ತದೆ.

ಹೆಣ್ಣು ಮಕ್ಕಳಿಗೆ ಮನೆಯಲ್ಲಿಯೇ ಶಿಕ್ಷಣ ನೀಡುತ್ತಿದ್ದರು. ಪಂಪನ 'ಆದಿಪುರಾಣ'ದಲ್ಲಿ ಸ್ತ್ರೀ ಶಿಕ್ಷಣದ ಬಗ್ಗೆ ಉಲ್ಲೇಖಗಳಿವೆ. ಆದಿನಾಥನು ಬ್ರಾಹ್ಮೀ ಸುಂದರಿಯರಿಗೆ ''ಸ್ತ್ರೀಯರಿಗೆ ಶೀಲ, ವಿನಯದೊಂದಿಗೆ ವಿದ್ಯೆಯು ಅವಶ್ಯಕ ಎಂದು ಹೇಳಿ, ವಿದ್ಯೆಯಿಂದ ಜಗತ್ಪ್ರಸಿದ್ಧಿ ಹೊಂದಲು'' ಸೂಚಿಸಿರುವುದನ್ನು ಕಾಣಬಹುದಾಗಿದೆ.

ಕಾಳಿದಾಸನ 'ಕುಮಾರಸಂಭವ'ದಲ್ಲೂ ಲಿಪಿಜ್ಞಾನವನ್ನು ಬಾಲಕಿಯರಿಗೂ ಕೊಡಲಾಗುತ್ತಿತ್ತು ಎಂದು ಕಂಡುಬಂದಿದೆ. 'ವಿಕ್ರಮೋರ್ವಶೀ'ಯದಲ್ಲಿ ದಾಸಿಯು ಊರ್ವಶಿಯ ಸಂದೇಶವನ್ನು ಓದಿ ರಾಣಿಗೆ ಹೇಳುತ್ತಿದ್ದಳು. ಇಂಥ ವಿದ್ಯೆಯನ್ನು ಶ್ರವಣ ವಿದ್ಯೆ ಎನ್ನುತ್ತಿದ್ದರು.

ಬಾದಾಮಿ ಚಾಲುಕ್ಯರ ರಾಣಿಯರಲ್ಲಿ ವಿಜಯಮಹಾದೇವಿಯೇ ಪ್ರಧಾನಳು. ಈಕೆಯು ಸಂಸ್ಕೃತ ಭಾಷೆಯಲ್ಲಿ ಪಂಡಿತೆಯಾಗಿದ್ದು, 'ಕೌಮುದಿ ಮಹೋತ್ಸವ' ಎಂಬ ನಾಟಕ ರಚಿಸಿದ್ದನ್ನು ಕಾಣಬಹುದಾಗಿದೆ. ಸರಸ್ವತಿಯನ್ನು ವರ್ಣಿಸುವ ಚರ್ಚೆಯೊಂದರಲ್ಲಿ 'ದಂಡಿ' ಕವಿಯನ್ನು ಸೋಲಿಸಿದ್ದಳು. ಈ ಘಟನೆ ಜನಕ ರಾಜನ ಆಸ್ಥಾನದ ಚಿತ್ರಣವನ್ನು (ಗಾರ್ಗಿ ಮತ್ತು ಯಾಜ್ಞವಲ್ಕರ) ಹೇಳುತ್ತದೆ. ವಿಜಯಮಹಾದೇವಿಯ ಕಾವ್ಯ ರಚನಾ ವೈಖರಿಗೆ ರಾಜಶೇಖರ ಎಂಬುವವ ಮೆಚ್ಚುಗೆ ವ್ಯಕ್ತಪಡಿಸಿದ್ದನು. ಅಲ್ಲದೆ ಕಾಳಿದಾಸನ ನಂತರ ವೈದರ್ಬಿ ಶೈಲಿಯಲ್ಲಿ ಬರೆದವರಲ್ಲಿ 'ವಿಜ್ಜಿಕೆ'ಯೇ ಮೊದಲನೆಯವಳು ಎಂದು ಹೇಳಿದ್ದಾನೆ. ವಿಜಯಮಹಾದೇವಿಯೂ ಕೂಡ ತಾನು ವಾಲ್ಮೀಕಿ, ವ್ಯಾಸ, ಬ್ರಹ್ಮ ಇವರುಗಳ ನಂತರ ಯಾರಾದರೂ ತಮ್ಮ ಗದ್ಯ ಪದ್ಯ ರಚನಾ ಚಾತುರ್ಯವನ್ನು ಪ್ರದರ್ಶಿಸಿದ್ದೇ ಆದರೆ ಅಂಥವರ ತಲೆಯ ಮೇಲೆ ತನ್ನ ಪಾದಗಳನ್ನು ಇಡುವೆ ಎಂದಿದ್ದಾಳೆ. ಹೀಗೆ ಪ್ರಾಚೀನ ಕರ್ನಾಟಕದ ಚರಿತ್ರೆಯಲ್ಲಿ ಮೊಟ್ಟಮೊದಲು ಸ್ತ್ರೀ ದನಿಯೊಂದು ಪುರುಷ ಪ್ರಧಾನ ಸಮಾಜಕ್ಕೆ ಹೇಳಿರುವುದು ಗಮನಾರ್ಹ. ವಿಜಯಮಹಾದೇವಿಯಿಂದ ತಿಳಿದುಬರುವ ಪ್ರಧಾನ ಸಂಗತಿಯೆಂದರೆ ಹೆಣ್ಣಿಗೆ ವಿದ್ಯೆ ಮತ್ತು ಆರ್ಥಿಕ ಭದ್ರತೆ, ಧೈರ್ಯ ಇರಬೇಕು ಎಂಬುದು. ಸ್ತ್ರೀವಾದಿ ಚಿಂತಕಿಯರು ವಿಜಯಮಹಾದೇವಿ ಕುರಿತಂತೆ ಅಧ್ಯಯನ ಮಾಡುವ ಜರೂರು ಇದೆ.

ಅತ್ತಿಮಬ್ಬೆ ಪೊನ್ನನ 'ಶಾಂತಿಪುರಾಣ' ಕಾವ್ಯದ ಒಂದು ಸಾವಿರ ಪ್ರತಿ ಮಾಡಿಸಿ ಜನತೆಗೆ ಉಚಿತವಾಗಿ ಹಂಚಿದಳು. ಅಲ್ಲದೆ ಅತ್ತಿಮಬ್ಬೆಯು ರನ್ನನಿಗೆ ಆಶ್ರಯ ನೀಡಿ 'ಅಜಿತನಾಥ ಪುರಾಣ'ದಂಥ ರಚನೆಗೆ ಕಾರಣವಾಗಿದ್ದು ತಿಳಿದುಬರುತ್ತದೆ. ಅಲ್ಲದೆ ಹತ್ತನೆ ಶತಮಾನದ ಶಿಲಾಶಾಸನವೊಂದು ಸ್ತ್ರೀ ಶಿಕ್ಷಣದ ಬಗ್ಗೆ ವಿವರ ಕೊಡುತ್ತದೆ. ಅದರಲ್ಲಿ "ಸಕಲ ವಿದ್ಯಾ ಪ್ರವೀಣೆ ಸಾವಿನಿರ್ಮಡಿ" ಎಂದು ಉಲ್ಲೇಖ ಇರುವುದು ಕಂಡುಬರುತ್ತದೆ. ಇದರಿಂದ ಸಾವಿನಿರ್ಮಡಿ ಅನೇಕ ವಿದ್ಯೆಗಳಲ್ಲಿ ಪರಿಣಿತೆ ಪಡೆದಿದ್ದಳು ಎನ್ನಬಹುದು. ಇದರಂತೆ ಜಲಸಂಗಾವಿ ಶಾಸನವು ಸ್ತ್ರೀ ಶಿಕ್ಷಣದ ಬಗ್ಗೆ ಮಾಹಿತಿ ನೀಡುತ್ತದೆ.

'ಜಕ್ಕಿ' ಎಂಬಾಕೆ ಸಹಜ ಸರಸ್ವತಿ ಎಂತಲೂ, ಪಿರಿಯ ಕೇತಲದೇವಿ 'ಅಭಿನವ ಸರಸ್ವತಿ' ಎಂದು ಹೆಸರಾಗಿದ್ದರು. ಇವರುಗಳಲ್ಲದೆ ಪ್ರಾಚೀನ ಕರ್ನಾಟಕವನ್ನು ಆಳಿದ ರಾಣಿಯರು ಸಹ ಆಡಳಿತ ಜ್ಞಾನವನ್ನು ಹೊಂದಿದ್ದರು ಎಂದು ಅವರ ಆಡಳಿತದ ದಕ್ಷತೆಯಿಂದ ತಿಳಿದುಬರುತ್ತದೆ. ನೃತ್ಯ ಸಂಗೀತದಲ್ಲೂ ಆಸಕ್ತಿ ಹೊಂದಿದ್ದು, ಸ್ವತಃ ತಾವೇ ನೃತ್ಯ-ಸಂಗೀತಗಳಲ್ಲಿ ಪ್ರಾವೀಣ್ಯತೆ ಪಡೆದಿದ್ದರು. ಹಾಗೂ ಅಂಥ ಕಲಾವಿದರನ್ನು ಪೋಷಿಸಿರುವರು. ಲೋಕಮಹಾದೇವಿಯು ನೃತ್ಯ ಕಲಾವಿದ 'ಅಚಲನ್' ಎಂಬುವವನಿಗೆ ಆಶ್ರಯ ನೀಡಿದ್ದಳು. ಹಾಲನ 'ಗಾಥಸಪ್ತಸತಿ'ಯಲ್ಲಿ ಸ್ತ್ರೀಯರು ಹಾಡುವ, ನರ್ತಿಸುವ ವರ್ಣನೆ ಇದೆ. ಚಂದಲದೇವಿ ನೃತ್ಯವಿದ್ಯಾಧರಿ ಎಂದು ಗುರುತಿಸಿಕೊಂಡಿದ್ದಳು. ಇದರಿಂದ ಪ್ರಾಚೀನ ಕರ್ನಾಟಕದ ಸ್ತ್ರೀಯರು ನೃತ್ಯ ಸಂಗೀತಗಳಲ್ಲಿ ಅಭಿರುಚಿ ಇದ್ದವರು ಎಂದು ತಿಳಿಯಬಹುದಾಗಿದೆ. ಪೂರಕವಾಗಿ ಪಟ್ಟದಕಲ್ಲಿನ ಪಾಪನಾಥ ದೇವಾಲಯದ ನಂದಿಮಂಟಪದಲ್ಲಿ ಸ್ತ್ರೀಯೊಬ್ಬಳು ತಂತಿ ವಾದ್ಯವೊಂದನ್ನು ನುಡಿಸುವ ಶಿಲ್ಪವಿದ್ದು, ಇನ್ನೊಂದು ಶಿಲ್ಪ

ಕೊಳಲನ್ನು ಅಷ್ಟ ಹಿಡಿದು ಊದುತ್ತಿರುವಂತೆ ಬಿಡಿಸಲಾಗಿದೆ. ಬಾದಾಮಿಯ ಮೂರನೆಯ ಗುಹೆಯಲ್ಲಿ ಇಬ್ಬರು ಕಲಾವಿದರ ಭಿತ್ತಿಚಿತ್ರವಿದ್ದು, ಇದು ಸಹ ಕೊಳಲನ್ನು ನುಡಿಸುತ್ತಿರುವಂತಿದೆ. ಇದರಂತೆ ಅನೇಕ ಶಿಲ್ಪಗಳಲ್ಲಿಯೂ ಸಂಗೀತ, ನೃತ್ಯ, ವಾದ್ಯಗಳನ್ನು ನುಡಿಸುವಂತೆ ಕಂಡುಬಂದಿರುತ್ತವೆ.[೧೦]

ಸೂಳೆಯರಿಗೆ ನೃತ್ಯ-ಸಂಗೀತ ಇತರೆ ಕಲೆಗಳನ್ನೂ ತಿಳಿಯಬೇಕಾಗಿದ್ದುದು ಅನಿವಾರ್ಯವಾಗಿತ್ತು. ಅಂತೆಯೇ ಇವರುಗಳಿಗೆ ತರಬೇತಿ ಕೊಡಲು ಕೇಂದ್ರಗಳು ಇರುತ್ತಿದ್ದವು. 'ನಟನ' ಎಂಬುವವನು ತರಬೇತಿ ಕೊಡುವವನಾಗಿರುತ್ತಿದ್ದ. ಬಾದಾಮಿಯ ವರ್ಣಚಿತ್ರ ಮತ್ತು ಮಹಾಕೂಟದ ಅಧಿಷ್ಠಾನ ಶಿಲ್ಪಗಳು ಸ್ತ್ರೀಯರು ಸಂಗೀತ-ನೃತ್ಯದಲ್ಲಿ ತೊಡಗಿ ಆನಂದಿಸುವ ದೃಶ್ಯಗಳು ಕಂಡುಬಂದಿರುತ್ತವೆ. ಇವುಗಳಿಂದಾಗಿ ಅಂದು ಸ್ತ್ರೀಯರು ನೃತ್ಯ ಸಂಗೀತಗಳಲ್ಲಿ ಆಸಕ್ತಿಯುಳ್ಳವರು ಆಗಿದ್ದರು. ಅಂಥವುಗಳನ್ನು ಕಲಿಯಲು ಅವಕಾಶಗಳೂ ಇದ್ದವೆಂದು ಅರಿಯಬಹುದಾಗಿದೆ.

ಪ್ರಾಚೀನ ಕರ್ನಾಟಕದಲ್ಲಿ ಶ್ರೀಮಂತರು ಮನೆ ಮತ್ತು ವನಗಳಲ್ಲಿ ಮಧುಪಾನ ಕ್ರೀಡೆಗಳಲ್ಲಿ ನಿರತರಾಗಿರುತ್ತಿದ್ದುದು ಕಂಡುಬಂದಿದೆ. ಬಾದಾಮಿ ಚಾಲುಕ್ಯರ ಶಿವ ಗುಹಾಲಯದ ಸಭಾಮಂಟಪವು ಕಂಬಗಳ ಮೇಲ್ಭಾಗದಲ್ಲಿ ದಂಪತಿಗಳು ಮಧುಪಾತ್ರೆ ಹಿಡಿದು ಕುಳಿತಿರುವ ಚಿತ್ರ ಕಂಡುಬರುತ್ತದೆ. ಇದೇ ಗುಹಾಲಯದ ಮೂರನೆಯ ಮುಖಮಂಟಪದ ಕಂಬವೊಂದರ ವೃತ್ತಾಕಾರದ ಉಬ್ಬುಶಿಲ್ಪದಲ್ಲಿ ಪತಿಯು ಪತ್ನಿಯನ್ನು ತೊಡೆಯ ಮೇಲೆ ಕುಳ್ಳಿರಿಸಿಕೊಂಡು ಎಡಗೈಯಿಂದ ಪತ್ನಿಗೆ ಮಧ್ಯಪಾನ ಮಾಡಿಸುವ ಚಿತ್ರವಿದೆ. ಸ್ತ್ರೀಯರು ಮಧ್ಯಪಾನ ಮತ್ತರಾಗಿ ನಿಲ್ಲಲು ಸಾಧ್ಯವಾಗದೆ ಜೋಲಿ ಹೊಡೆಯುವ ದೃಶ್ಯವನ್ನು ಮೂರನೆ ಗುಹಾಲಯ, ನಾಗನಾಥ ಗುಡಿಯ ಕಂಬಗಳಲ್ಲಿಯೂ ಕಾಣಬಹುದು.

ಪ್ರಾಚೀನ ಕರ್ನಾಟಕದಲ್ಲಿ ಪಕ್ಷಿಗಳೊಂದಿಗೆ ಸಂವಾದ ಮಾಡುತ್ತಿರುವ ಸ್ತ್ರೀಯರ ಚಿತ್ರಗಳು ಕಾಣಬಹುದಾಗಿದೆ. ಪಟ್ಟದಕಲ್ಲಿನ ವಿರೂಪಾಕ್ಷ ದೇವಾಲಯದ ನಂದಿ ಮಂಟಪದ ದಕ್ಷಿಣ ಭಾಗದ ಕಂಬವೊಂದರ ಶಿಲ್ಪದಲ್ಲಿ ಅಂಗೈಯಲ್ಲಿ ಹಣ್ಣು ಇಟ್ಟುಕೊಂಡು ಗಿಳಿಗೆ ತಿನ್ನಿಸುತ್ತಿರುವ ಚಿತ್ರ ಇದ್ದರೆ, ಮಲ್ಲಿಕಾರ್ಜುನ ದೇವಾಲಯದ ನಂದಿಮಂಟಪದ ಕಂಬದಲ್ಲಿ ಸುಂದರಿಯೊಬ್ಬಳು ಗಿಳಿಯೊಂದಿಗೆ ಸಂವಾದಿಸುವ ಚಿತ್ರಣವಿದೆ. ಇಂಥ ಎಲ್ಲ ಶಿಲ್ಪಗಳಿಂದ ಅಂದಿನ ಸ್ತ್ರೀಯರ ಬಗ್ಗೆ ತಿಳಿಯಲು ಸಾಧ್ಯವಾಗುವುದು. ಸ್ತ್ರೀವಾದಿ ಅಧ್ಯಯನವು ಶಿಲ್ಪಕಲೆಗಳ ಈ ಕ್ಷೇತ್ರಗಳಲ್ಲಿಯೂ ಅಧ್ಯಯನ ಮಾಡುವ ಅವಶ್ಯಕತೆ ಇದೆ.

### ೩.೩ ಸಮಾಜ ಮತ್ತು ಮಹಿಳೆ

ಮಹಿಳೆ ಸಮಾಜಜೀವಿ. ಆಕೆ ಪುರುಷ ಪ್ರಧಾನ ಸಾಮಾಜಿಕ ಸಂಬಂಧಗಳ ಬಲೆಯಲ್ಲಿ ಸಿಲುಕಿದ್ದಾಳೆ. ಅಲ್ಲದೆ ತನ್ನ ಬೇಡಿಕೆಗಳನ್ನು ಸಮಾಜದಲ್ಲಿ ಈಡೇರಿಸಿಕೊಳ್ಳಲು ಸಾಧ್ಯವೆಂದುಕೊಂಡು ಸಮಾಜದ ಎಲ್ಲಾ ರೀತಿ-ನಿಯಮ ಇತ್ಯಾದಿಗಳನ್ನು ಪಾಲಿಸಿಕೊಂಡು ಬರುತ್ತಿದ್ದಾಳೆ. ಸಮಾಜವೂ ಸಹ ಒಡನಾಡಿಗಳಿಂದ ಒಳಗೊಂಡಿರುವುದೇ ಆಗಿದೆ. ಈ ಸಮಾಜ ಸದಾ ಪರಿವರ್ತನ ಶೀಲವಾದದ್ದು. ಹಾಗೂ ಸಮಾಜದಲ್ಲಿರುವವರನ್ನು ಅವರ ಸ್ವಾತಂತ್ರ್ಯ, ಅಧಿಕಾರಗಳನ್ನು ನಿಯಂತ್ರಿಸಲು ತನ್ನದೇ ಆದ ರೂಢಿಗತ ಮೌಲ್ಯ, ನೀತಿ-ನಿಯಮ, ಸಂಪ್ರದಾಯ, ಆಚರಣೆಗಳನ್ನು ರೂಪಿಸಿಕೊಂಡಿದೆ. ಅಲ್ಲದೆ ಅನೇಕ ಸಮೂಹ,

ಸಂಸ್ಥೆ, ವಿಭಾಗಗಳಿಂದ ನಿಯಂತ್ರಿಸಲ್ಪಟ್ಟಿದೆ. ಪುರುಷಪ್ರಧಾನ ಸಮಾಜ ಪುರುಷ ದೃಷ್ಟಿಕೋನದಿಂದ ರಚನೆಯಾಗಿ, ಪುರುಷನ ಏಳಿಗೆಯನ್ನು ಬಯಸುವಂಥದ್ದು. ಸ್ತ್ರೀಯನ್ನು ಯಾವಾಗಲೂ ಪುರುಷನ ಅಧೀನದಲ್ಲಿಯೇ ಇರುವಂತೆ ವ್ಯವಸ್ಥೆಯನ್ನು ನಿರ್ಮಿಸಿದೆ. ಅಂತೆಯೇ ಮಹಿಳೆಯನ್ನು ವಯಸ್ಸು, ವರ್ಗ, ಲಿಂಗ, ಜಾತಿ, ಅಧಿಕಾರ ಇತ್ಯಾದಿಗಳಿಂದ ವಿಭಜಿಸಿದೆ. ಈ ಮಹಿಳೆಯರು ಸಮಾಜದ ವಿವಿಧ ಸ್ತರಗಳಲ್ಲಿ ಹಂಚಿ ಹೋಗಿ, ಐಕ್ಯತೆಯಿಂದ ಕೂಡಿ ಬಾಳಲು ಸಾಧ್ಯವಾಗದಂತೆ ಕಟ್ಟಲಾಗಿದೆ. ಹೆಣ್ಣಿಗೆ ಹೆಣ್ಣೇ ಶತ್ರು ಎಂಬ ಮಾತಿನಂತೆ ಹೆಣ್ಣಿನೊಳಗೆ ಭೇದ-ಭಾವಗಳನ್ನು ಹುಟ್ಟುಹಾಕಿ, ಆಕೆ ಎಂದಿಗೂ ತನ್ನ ವಿಮೋಚನೆಯನ್ನು ಕುರಿತು ಚಿಂತಿಸದಂತೆ ಮಾಡಿದೆ. ಮಹಿಳೆಯು ತನ್ನ ಬಗ್ಗೆ ರೂಪಿತವಾದ ನಿಯಮಗಳೇ ನಿಜವಾದ ಜೀವನದ ಮೌಲ್ಯಗಳು ಎಂದು ಒಪ್ಪಿಕೊಂಡು ಅವುಗಳಿಂದಲೇ ತನ್ನನ್ನು ತಾನು ಗುರುತಿಸಿಕೊಂಡಿದ್ದಾಳೆ. ಪುರುಷ ಪ್ರಧಾನತೆ ಸ್ತ್ರೀಯನ್ನು ವಿಧವೆ-ಮುತ್ತೈದೆ, ತಾಯಿ-ಬಂಜೆ, ಪಾತಿವ್ರತ್ಯೆ-ವೇಶ್ಯೆ, ನಿಯೋಗ, ಸತಿಸಹಗಮನ ಇತ್ಯಾದಿ ಪದ್ಧತಿಗಳ ಪಾತ್ರಗಳಿಗೆ ಅಳವಡಿಸಿದೆ. ಆ ಪಾತ್ರಗಳಿಂದ ಆಕೆಯನ್ನು ಗೊಂಬೆಯಂತೆ ಆಟವಾಡಿಸಿ ತನಗೆ ಬೇಕಾದಂತೆ ಕುಣಿಸಿದೆ. ಹೆಣ್ಣು ಕೂಡ ಸಹಕರಿಸಿ ತಾಳಕ್ಕೆ ತಕ್ಕಂತೆ ಕುಣಿಯುತ್ತಾ ಬಂದಿರುವಳು ಎಂದರೆ ತಪ್ಪಲ್ಲ. ಪುರುಷ ತನಗೆ ಎಷ್ಟು ಸಾಧ್ಯವೋ ಅಷ್ಟು ಹೆಣ್ಣನ್ನು ಶೋಷಣೆಗೆ ಈಡು ಮಾಡಿ ಆ ಮೂಲಕ ತನ್ನ ಅಧೀನಕ್ಕೆ ಒಳಪಡಿಸಿಕೊಂಡಿದ್ದಾನೆ. ಆದರೂ ಮಹಿಳೆ ತನ್ನ ಸೀಮಿತ ನೆಲೆಯಲ್ಲಿಯೇ ಇದ್ದು ತನ್ನದೇ ಆದ ಪಾತ್ರಗಳ ಮುಖೇನ ಕೊಡುಗೆಗಳನ್ನು ನೀಡಿ ದಾಖಲಾಗಿರುವುದು ಮಹತ್ತ್ವದ್ದು.

**೧. ಕುಟುಂಬ**

ಸಮಾಜದಲ್ಲಿ ಕುಟುಂಬವೇ ಜೀವಾಳ. ನಮ್ಮ ನಾಡಿನಲ್ಲೂ ಅವಿಭಕ್ತ ಕುಟುಂಬಗಳು ಇದ್ದವು. ಕರಾವಳಿ ಪ್ರದೇಶಗಳಲ್ಲಿ ಮಾತೃಪ್ರಧಾನ ಕುಟುಂಬಗಳಿದ್ದರೆ, ನಾಡಿನ ಇತರೆ ಭಾಗಗಳಲ್ಲಿ ಪಿತೃಪ್ರಧಾನ ಕುಟುಂಬಗಳಿದ್ದವು. ಪಿತೃಪ್ರಧಾನ ಕುಟುಂಬಗಳಲ್ಲಿ ತಂದೆಯೇ ಕುಟುಂಬದ ಮುಖ್ಯಸ್ಥ. ಮಹಿಳೆಯರ ಅಭಿಪ್ರಾಯಗಳಿಗೆ ಮಾನ್ಯತೆಯಿರಲಿಲ್ಲ. ಸ್ತ್ರೀ ಕೇವಲ ಅಡುಗೆ ಕೆಲಸ, ಮಕ್ಕಳ ಲಾಲನೆ-ಪಾಲನೆಗಳಿಗೆ ಸೀಮಿತಳಾಗಿದ್ದಳು. ಗಂಡು ಕುಟುಂಬದಾಚೆಯ ಕಾರ್ಯಗಳಲ್ಲಿ ತಲ್ಲೀನನಾಗಿದ್ದ. ಅವನ ಕೃಷಿ, ಪಶುಪಾಲನೆ ಮೊದಲಾದ ಕಾರ್ಯಗಳಲ್ಲಿ ಈಕೆಯೂ ಸಹಾಯಕಳಾಗಿದ್ದಳು. ಕುಟುಂಬದ ಲಕ್ಷಣಗಳು ಪ್ರೀತಿ, ಸ್ನೇಹ, ಸಹಕಾರ ಹೊಂದಾಣಿಕೆಯಾಗಿದ್ದು, ಸತಿಯು ಪತಿಯ ಧರ್ಮ ಅರ್ಥ, ಕಾಮ, ಮೋಕ್ಷಗಳಲ್ಲಿ ಸಹಭಾಗಿಯಾಗಿ, ಗಂಡನ ಸುಖ-ದುಃಖಗಳೇ ತನ್ನವೆಂದು ಭಾವಿಸಬೇಕಿತ್ತು. ಅಲ್ಲದೆ ಪತಿಯೇ ಪರದೈವ ಅವನಿಲ್ಲದ ಬದುಕು ಅಸಾಧ್ಯವೆಂದು ಪಿತೃಪ್ರಧಾನ ಕುಟುಂಬ ಅಭಿವ್ಯಕ್ತಿಸಿದೆ. ಅಂತೆಯೇ "Husband is the Spirit of women, he is her life. Wihtout a husband she has to suffer miserably"[೧೧] ಎಂಬಲ್ಲಿ ಸತಿಗೆ ಪತಿಯ ಪ್ರಾಮುಖ್ಯತೆಯನ್ನು ಹೇಳಿದೆ. ಆದರೆ ಸತಿಯು ಕೂಡಾ ಪತಿಯಂತೆ ಪ್ರಾಮುಖ್ಯತೆ ಇರುವವಳು ಎಂದು ಹೇಳುವಲ್ಲಿ ಪಿತೃಪ್ರಧಾನ ಕುಟುಂಬ ತಾರತಮ್ಯ ಮಾಡಿದೆ. ಇದನ್ನೇ ಸ್ತ್ರೀವಾದ ಪರಿಶೀಲಿಸಿ ಸತಿಯು ಪತಿಯಷ್ಟೆ ಪ್ರಧಾನಳು ಎಂದು ಹೇಳಲು ಪ್ರಯತ್ನಿಸಿದೆ.

ಕುಟುಂಬಗಳು ಬಂಧಿಖಾನೆಗಳೂ ಹೌದು. ಕುಟುಂಬದ ಎಲ್ಲ ನೀತಿನಿಯಮಗಳು ಮಹಿಳೆಯ ಏಳಿಗೆಗೆ ಎಂದು ಹೇಳಿ, ಅವುಗಳಿಂದಲೇ ಆಕೆಯನ್ನು ಶೋಷಣೆಗೆ ಒಳಗಾಗುವಂತೆ ಮಾಡಲಾಗಿದೆ. ಹೆಣ್ಣು, ಅಡುಗೆ-ಪಾತ್ರೆ-ಪೊರಕೆಗಳಿಗೆ ಹಾಗೂ ಕುಟುಂಬದವರ ಯೋಗಕ್ಷೇಮ, ಮಕ್ಕಳ ಲಾಲನೆ-ಪಾಲನೆ ಮಾಡುತ್ತ ಕುಟುಂಬದ ಒಳಗೆ ಸೇರಿದ್ದಳು. ರಾಣಿಯರು ಸಹ ಅಂತಃಪುರದಲ್ಲಿ ಬಾರಿ ಕಾವಲುಗಾರರೊಂದಿಗೆ ಇದ್ದರು. ಈ ಕಾವಲುದಾರರು ಕುರೂಪಿಗಳು, ನಪುಂಸಕರು, ಕುಬ್ಜರು, ವಾಮನರು, ಪತಿತರು ಆಗಿದ್ದರು. ಹೆಣ್ಣು ಬೇರೆ ಪುರುಷನನ್ನು ಬಯಸದಂತೆ ಆಕೆಯ ಬದುಕನ್ನು ನಿಯಂತ್ರಿಸಲು ಮಾಡಿದ ವ್ಯವಸ್ಥೆಯೇ ಇದಾಗಿತ್ತು ಎನ್ನಬಹುದಾಗಿದೆ. ರಾಣಿಯರು ಸೂರ್ಯನ ಬೆಳಕನ್ನೇ ಕಾಣದಷ್ಟು ಸುರಕ್ಷಿತವಾಗಿ ಅರಮನೆಯ ಅಂತಃಪುರದಲ್ಲಿ ಇರುತ್ತಿದ್ದುದು ಕಂಡುಬಂದಿದೆ. ಇದನ್ನೇ ಪಾಣಿನಿ "ಅಸೂರ್ಯಂ ಪಶ್ಯೆಯರಾಗಿರಲಿಲ್ಲ" ಎಂಬ ಮಾತುಗಳಲ್ಲಿ ಸೂರ್ಯನ ಬೆಳಕನ್ನು ನೋಡದವರು ವೇಶ್ಯೆಯರಾಗುತ್ತಿರಲಿಲ್ಲ ಎಂದು ಹೇಳಿರುವುದನ್ನು ಗಮನಿಸಬಹುದು. ಈ ರಾಣಿಯರಿಗೆ ಹೊರಗಿನ ಗಾಳಿ, ಬೆಳಕು ಕಾಣದಾಗಿತ್ತು. ಅಪರೂಪಕ್ಕೊಂದು ವಿಹಾರಕ್ಕೆ ಹೋಗುತ್ತಿದ್ದರು. ಅವರ ಸಂಗಡ ದಾಸಿಯರು, ಕಾವಲುಗಾರರು ಇರುತ್ತಿದ್ದದ್ದು ತಿಳಿದುಬರುತ್ತದೆ. ಈ ರಾಣಿಯರ ಅಂತಃಪುರಕ್ಕೆ ಅಪ್ಪಣೆ ಪಡೆದು ಪ್ರವೇಶಿಸಬೇಕಾಗಿತ್ತು. ರಾಣಿಯರನ್ನು ಕೆಲವು ವ್ಯಕ್ತಿಗಳಿಂದ ದೂರ ಇಟ್ಟಿದ್ದರು. ಅವರುಗಳೆಂದರೆ ಮಾಲೆಗಾರ್ತಿಯರು, ಮುಂಡೆಯರು ಮೊದಲಾದವರಿಂದ ದೂರ ಇರಬೇಕಾಗಿದ್ದು, ರಾಣಿ ಅರಸನೊಂದಿಗೆ ಸಭೆ, ಸಮಾರಂಭಕ್ಕೂ ಮತ್ತು ಧಾರ್ಮಿಕ ಚಟುವಟಿಕೆಗಳಲ್ಲಿಯೂ ಭಾಗವಹಿಸುತ್ತಿದ್ದಳು. ಅಲ್ಲದೆ ರಾಜ್ಯದ ಬಗ್ಗೆ ಅರಸನೊಂದಿಗೆ ಆಸಕ್ತ ರಾಣಿಯರು ಮಾತ್ರ ಚರ್ಚಿಸಿದ್ದು ಉಂಟು. ಸಾಮಾನ್ಯ ವರ್ಗದ ಮಹಿಳೆಯರು ಕುಟುಂಬದ ಹೊರಗಡೆ ದುಡಿಯಲು ಹೋಗುತ್ತಿದ್ದರು.

### ೨. ಜಾತಿ

ಸಮಾಜದಲ್ಲಿ ಅತಿ ಬಿಗುವಿನಿಂದ ಕೂಡಿದ ಹಾಗೂ ಅನೇಕ ಕಟ್ಟುಪಾಡುಗಳನ್ನು ಒಳಗೊಂಡಿರುವ ವ್ಯವಸ್ಥೆ ಎಂದರೆ ಜಾತಿ ವ್ಯವಸ್ಥೆ. ಜಾತಿಯ ಆಧಾರದ ಮೇಲೆ ಉದ್ಯೋಗ, ಆಹಾರ, ಉಡುಗೆ, ತೊಡುಗೆ ನಿರ್ಧರಿತವಾಗುತ್ತಿದ್ದವು ಎಂಬುದು ಗಮನಾರ್ಹ. ಮೇಲು ವರ್ಗದವರಿಗೆ ಜಾತಿಯನ್ನು ಅದಲು-ಬದಲು ಮಾಡಲು ಅವಕಾಶವಿತ್ತು. ಆದರೆ ಶೂದ್ರರಿಗೆ ಇಂಥ ಅವಕಾಶಗಳು ಕಡಿಮೆ ಇದ್ದವು. ಜಾತಿಯ ಅದಲು ಬದಲಿನಿಂದ ವರ್ಣ ವ್ಯವಸ್ಥೆಯನ್ನು ಶುದ್ಧ ರೂಪದಲ್ಲಿ ಉಳಿಸಲು ಆಗಲಿಲ್ಲ. ವಿಭಿನ್ನ ವರ್ಣಗಳವರು ವಿಭಿನ್ನ ವರ್ಣಗಳ ಸ್ತ್ರೀಯರ ಸಂಪರ್ಕ ಹೊಂದಿದ್ದರು. ಇದೇ ವರ್ಣ ಸಂಕರ ಉಂಟುಮಾಡಿತ್ತು. ಈ ಅಂಶವನ್ನು ಮನು ಸಹ "ವಿಭಿನ್ನ ಜಾತಿಗಳ ಸ್ತ್ರೀಯರ ಸಂಪರ್ಕದಿಂದಾಗಿ ವಿಭಿನ್ನ ಜಾತಿಗಳು ಹುಟ್ಟಿದವು" ಎಂದು ಅಭಿಪ್ರಾಯಪಟ್ಟಿದ್ದಾನೆ. ಜಾತಿ ವ್ಯವಸ್ಥೆಯಿಂದಾಗಿ ಸ್ತ್ರೀಯರು ವಿಭಿನ್ನ ಸ್ತರಗಳಲ್ಲಿ ಹಂಚಿಹೋಗಿದ್ದು, ವಿಭಿನ್ನ ಶೋಷಣೆಗಳನ್ನು ಅನುಭವಿಸಿದ್ದರು. ಜಾತಿ ವ್ಯವಸ್ಥೆಯಿಂದ ಉತ್ತಮ ಅವಕಾಶಗಳನ್ನು ಕಳೆದುಕೊಂಡ ಕೆಳವರ್ಗದ ಮಹಿಳೆಯರು ತಮ್ಮ ಪೂರ್ವಜರ ವೃತ್ತಿಗಳನ್ನು ಮುಂದುವರಿಸಿಕೊಂಡು ಹೋಗಬೇಕಾಗಿತ್ತು. ಇಂಥ ವೃತ್ತಿಗಳಲ್ಲಿ ವೇಶ್ಯೆಯರು ತಮ್ಮ ವೃತ್ತಿಗಳಲ್ಲಿ ಮುಂದುವರೆಯಬೇಕಿತ್ತು. ಈ ವೇಶ್ಯೆಯರು ಮೇಲುವರ್ಗದ, ಜಮೀನುದಾರರ, ಊರ ಪ್ರಮುಖರ ಶೋಷಣೆಗೆ ಒಳಗಾಗುತ್ತಿದ್ದರು. ಇದು ಸಮಾಜದ ವಿಮುಖತೆಗೆ ದಾರಿಯಾಗುತ್ತಿದ್ದದ್ದು ಒಂದೆಡೆಯಾದರೆ, ಇನ್ನೊಂದೆಡೆ ಸಮಾಜದ ರೀತಿ-ರಿವಾಜುಗಳನ್ನು ಸಡಿಲಗೊಳಿಸುತ್ತಿತ್ತು.

## ೩. ವಿವಾಹ

ವಿವಾಹವು ಸಾರ್ವತ್ರಿಕವಾಗಿ ಒಪ್ಪಲ್ಪಟ್ಟ ಚಟುವಟಿಕೆ. ಸ್ತ್ರೀ ಪುರುಷರಿಬ್ಬರಿಗೂ ಅತಿ ಅವಶ್ಯಕವಾದುದು. ಮಾನವನ ಲೈಂಗಿಕ ಸ್ವಚ್ಛಂದತೆಯನ್ನು ನಿಯಂತ್ರಿಸಿ ಲೈಂಗಿಕ ಬಯಕೆಯ ಪೂರೈಕೆಗೆ ಕ್ರಮಬದ್ಧವಾದ ವ್ಯವಸ್ಥೆಯೊಂದನ್ನು ನಿರ್ಮಿಸಲು ವಿವಾಹ ಹುಟ್ಟಿಕೊಂಡಿದೆ. ವಿವಾಹದ ಮೂಲಕ ಸ್ತ್ರೀ ಪುರುಷರ ದೇಹ-ಮನಸ್ಸು, ಹೃದಯಗಳು ಒಂದಾಗಿ ಬೆಸೆದುಕೊಳ್ಳಲು ಸಾಧ್ಯವೆಂದೂ ಪ್ರತಿಯೊಬ್ಬರು ಮೋಕ್ಷಕ್ಕಾಗಿಯಾದರೂ ವಿವಾಹ ಆಗಲೇಬೇಕು ಎಂಬ ರೂಢಿ ಜಾರಿಗೆ ಬಂದಿತು. ಅವಿವಾಹಿತರಿಗೆ ಸಮಾಜದಲ್ಲಿ ಗೌರವವಿರಲಿಲ್ಲ. ಅವಿವಾಹಿತರು ಸತ್ತರೆ ಅಂಥವರ ಶವಕ್ಕಾದರೂ ಮದುವೆಯ ಶಾಸ್ತ್ರ ಮಾಡಿಸುತ್ತಿದ್ದರು. "ಭಾರತದ ತೋರೆಂಬ ಆದಿವಾಸಿಗಳು ಅವಿವಾಹಿತಳಾಗಿ ಸಾಯುವ ಕನ್ಯೆಗೆ ಶವಸಂಸ್ಕಾರ ನಿರಾಕರಿಸಿ, ಶವಕ್ಕೆ ಸಾಂಕೇತಿಕವಾಗಿ ವಿವಾಹಶಾಸ್ತ್ರ ಮಾಡಿ ಸಂಸ್ಕಾರ ಮಾಡುವುದು"[೧೪] ದಾಖಲಾರ್ಹವಾದುದು. ಅದೇ ರೀತಿ ಹಿಂದೂ ಸಂಪ್ರದಾಯದಲ್ಲಿ ಕೆಲವೆಡೆ ಮದುವೆಯಾಗದ ಸ್ತ್ರೀ-ಪುರುಷರನ್ನು ಬೋರಲಾಗಿ ಮಲಗಿಸಿ ಸಮಾಧಿ ಮಾಡುವ ಪದ್ಧತಿ ರೂಢಿಯಲ್ಲಿದೆ. ವಿವಾಹವು ಸ್ತ್ರೀ-ಪುರುಷರು ಒಬ್ಬರನ್ನೊಬ್ಬರು ಅರಿಯಲು ಇರುವ ವೇದಿಕೆ. ಆದರೆ ಧರ್ಮಶಾಸ್ತ್ರಗಳು ವಿವಾಹವನ್ನು ಹೆಣ್ಣಿಗೆ ಕಷ್ಟಾಯ ಎಂದೂ, ಅದರಲ್ಲಿಯೂ ಬಾಲ್ಯ ವಿವಾಹವನ್ನು ಆಚರಣೆಗೆ ತಂದು ಸ್ತ್ರೀ ಬೆಳವಣಿಗೆಯನ್ನು ಕುಂಠಿತ ಮಾಡಿದ್ದವು. ಭಾರತಕ್ಕೆ ಬಂದ ಪ್ರವಾಸಿಗರ ಗ್ರಂಥಗಳಿಂದಲೂ ಬಾಲ್ಯವಿವಾಹ ಕುರಿತಂತೆ ವಿಪುಲ ಮಾಹಿತಿಗಳಿವೆ. ಅಲ್ಬೆರೂನಿಯು "ಹಿಂದೂಗಳು ಚಿಕ್ಕ ವಯಸ್ಸಿನಲ್ಲಿಯೇ ವಿವಾಹವಾಗುವರು"[೧೫] ಎಂದಿದ್ದಾನೆ. ಅಲ್ಲದೆ ಕೊಡಗೂಸಿನ ಕತೆಯಿಂದಲೂ ಬಾಲ್ಯವಿವಾಹದ ಬಗ್ಗೆ ಮಾಹಿತಿ ದೊರೆಯುತ್ತದೆ. ಇವೆಲ್ಲವುಗಳಿಂದ ಬಾಲ್ಯವಿವಾಹ ಆಚರಣೆಯಲ್ಲಿತ್ತು ಎಂದು ತಿಳಿಯಬಹುದಾಗಿದೆ.

ಎಂಟು ಬಗೆಯ ವಿವಾಹ ಪದ್ಧತಿಗಳಿದ್ದವು. ಅವುಗಳೆಂದರೆ ಬ್ರಹ್ಮ, ಅಸುರ, ದೈವ, ಆರ್ಷ, ಪ್ರಜಾಪತಿ, ರಾಕ್ಷಸ, ಗಾಂಧರ್ವ, ಪೈಶಾಚಿಕ ವಿವಾಹಗಳು. ಇವುಗಳಲ್ಲದೆ ಆಗಾಗ ಸ್ವಯಂವರ ವಿವಾಹವೂ ಆಚರಣೆಯಲ್ಲಿತ್ತು. ಇಂಥ ಸ್ವಯಂವರ ವಿವಾಹಗಳಲ್ಲಿ ಹೆಣ್ಣು ತನಗೆ ಇಷ್ಟ ಇರಲಿ, ಇಲ್ಲದಿರಲಿ ಪಣದಲ್ಲಿ ಗೆದ್ದವನನ್ನು ವರಿಸಬೇಕಾಗಿತ್ತು. ಇದರಿಂದಾಗಿ ಹೆಣ್ಣಿಗೆ ಬಾಳಸಂಗಾತಿಯ ಆಯ್ಕೆಯ ಸ್ವಾತಂತ್ರ್ಯ ಇರಲಿಲ್ಲ. ಹೆಣ್ಣು ಪಣಕ್ಕೆ ಇಡುವ ವಸ್ತುವಾಗಿದ್ದಳು. ಉದಾಹರಣೆಗೆ ಶಿಲಹಾರರ ಚಂದಲದೇವಿ ಕಲ್ಯಾಣಿ ಚಾಲುಕ್ಯರ ಆರನೆ ವಿಕ್ರಮಾದಿತ್ಯನನ್ನು ಸ್ವಯಂವರದ ಮೂಲಕ ವಿವಾಹವಾಗಿದ್ದಳು ಎಂದು ಬಿಲ್ಹಣನು ವಿಕ್ರಮಾಂಕದೇವ ಚರಿತ್ರೆಯಲ್ಲಿ ದಾಖಲಿಸಿದ್ದಾನೆ. ಆಗಾಗ ಅನುಕೂಲಕ್ಕೆ ತಕ್ಕಂತೆ ಗಾಂಧರ್ವ ವಿವಾಹಗಳು ಆಗುತ್ತಿದ್ದವು. ಕರ್ನಾಟಕದಲ್ಲಿ ಹಿರಿಯರು ನಿಶ್ಚಯಿಸಿದ ವಿವಾಹಗಳು ಆಚರಣೆಯಲ್ಲಿದ್ದ ಬಗ್ಗೆ ಉಲ್ಲೇಖಗಳು ದೊರೆಯುತ್ತವೆ.

ರಕ್ತ ಸಂಬಂಧದಂಥ ವಿವಾಹಗಳೂ ರೂಢಿಯಲ್ಲಿದ್ದವು. 'ವಡ್ಡಾರಾಧನೆ'ಯ ಮೋದಾಳಿ ಕಥೆಯು ರಕ್ತಸಂಬಂಧದ ವಿವಾಹವನ್ನು ಉಲ್ಲೇಖಿಸಿದೆ. ಮೋದಾಳಿ ತಾಯಿಯ ಗರ್ಭದಲ್ಲಿ ಇರುವಾಗಲೇ ಆಕೆಯನ್ನು ಸೋದರ ಮಾವನ ಹಿರಿಯ ಮಗನಿಗೆ ಕೊಡಲು ನಿಶ್ಚಯಿಸಿದ್ದರು. ಆದರೆ ಹನ್ನೆರಡು ವರುಷವಾದರೂ ವ್ಯಾಪಾರಕ್ಕೆಂದು ಹೋದವ (ಮಾವನ ಹಿರಿಯ ಮಗ) ಹಿಂತಿರುಗಿ ಬರಲಿಲ್ಲ. ಇದರಿಂದ ಮೋದಾಳಿಯನ್ನು ಅವನ ತಮ್ಮನಿಗೆ ಕೊಡಲು ನಿಶ್ಚಯಿಸಿದರು. ಆದರೆ ಅಣ್ಣನ ಹೆಂಡತಿಯನ್ನು ನಾನು ವಿವಾಹವಾಗುವುದಿಲ್ಲವೆಂದು ತಮ್ಮ ನಿರಾಕರಿಸಿದ್ದ. ಹೀಗೆ ಹೆಣ್ಣು ತನ್ನ ಅಸ್ತಿತ್ವ ಕಳೆದುಕೊಂಡ ಪರಿಸ್ಥಿತಿಗಳಿಗೆ ಹೊಂದಿಕೊಂಡು

ಬದುಕಬೇಕಾಗಿತ್ತು. ಮೋದಾಳಿ ಗರ್ಭದಲ್ಲಿ ಇರುವಾಗಲೇ ಮಾವನ ಮಗನ ಜೊತೆ ವಿವಾಹವನ್ನು ನಿಶ್ಚಯಿಸಿದ್ದನ್ನು ಗಮನಿಸಿದಾಗ ಇಂದಿನಂತೆ ಪ್ರಾಚೀನ ಸಮಾಜದಲ್ಲಿ ಭ್ರೂಣ ಪರೀಕ್ಷೆಗಳೇನಾದರೂ ಇರುತ್ತಿದ್ದವೇ? ಮೊದಲಾದ ಪ್ರಶ್ನೆಗಳ ಮೂಲಕ ಅಧ್ಯಯನ ನಡೆಯಬೇಕಿದೆ.

ರಾಕ್ಷಸ ವಿವಾಹಗಳು ಸಹ ಆಚರಣೆಯಲ್ಲಿದ್ದವು. ರಾಕ್ಷಸ ವಿವಾಹಗಳನ್ನು ಕುರಿತಂತೆ ಶಾಸನಗಳು, ಕನ್ನಡ ಕಾವ್ಯಗಳು ವಿವರ ನೀಡುತ್ತವೆ. 'ಪಂಪಭಾರತ'ದಲ್ಲಿ ಭೀಷ್ಮನು ಕಾಶೀರಾಜನ ಮಕ್ಕಳಾದ ಅಂಬೆ, ಅಂಬಿಕೆ, ಅಂಬಾಲಿಕೆಯರನ್ನು ಅಪಹರಿಸಿಕೊಂಡು ಬಂದು ತಮ್ಮನಿಗೆ ಲಗ್ನ ಮಾಡಿಸಿದ್ದನೆಂದು ತಿಳಿದುಬರುತ್ತದೆ. ಅಲ್ಲದೆ ಪಂಪಭಾರತದಲ್ಲಿ ಅರಿಕೇಸರಿ ಪಡೆದ 'ಪ್ರಿಯಗಳ್ಳ' ಎಂಬ ವಿಶೇಷಣ ರಾಕ್ಷಸ ವಿವಾಹವನ್ನು ಉದಾಹರಿಸುತ್ತದೆ. ಕ್ರಿ.ಶ. ೮೭೧ರ ಸಂಜಾನ ತಾಮ್ರ ಶಾಸನ ಚಾಲುಕ್ಯ ರಾಜಕುಮಾರಿಯನ್ನು ಇಂದ್ರರಾಜ ಎಂಬುವವ ಶೆಟ್ಟಕ ಮಂಡಲದ ಯುದ್ಧದಲ್ಲಿ ಅಪಹರಿಸಿದ್ದ[೧೬] ಎಂದು ಉಲ್ಲೇಖಿಸಿದೆ. ಇಂಥ ರಾಕ್ಷಸ ವಿವಾಹಗಳಿಂದ ಹೆಣ್ಣನ್ನು ಪುರುಷನ ಆಸ್ತಿ ಎಂದು ಪರಿಗಣಿಸಲಾಗಿತ್ತು. ಹೀಗೆ ಹೆಣ್ಣು ಚರಿತ್ರೆಯುದ್ದಕ್ಕೂ ಪುರುಷನ ಅಧಿಕಾರ, ದರ್ಪ, ದಬ್ಬಾಳಿಕೆಗೆ ಒಳಗಾಗಿದ್ದು ತಿಳಿದುಬರುತ್ತದೆ.

ಅನುಲೋಮ, ಪ್ರತಿಲೋಮ ವಿವಾಹಗಳು ಕೂಡಾ ಜರುಗುತ್ತಿದ್ದವು. ಆದರೆ ಅವುಗಳು ಗೌರವಕ್ಕೆ ಅರ್ಹತೆ ಪಡೆದಿರಲಿಲ್ಲ. 'ಗೊಂಕ' ಎಂಬುವವ ದೇವಸ್ಥಾನದ ಪಾತ್ರದವಳನ್ನು ವಿವಾಹವಾಗಿದ್ದು ಕಂಡುಬಂದಿದೆ. ಒಟ್ಟಿನಲ್ಲಿ ವಿವಾಹಗಳು ವರ್ಗ, ವರ್ಣಗಳಿಂದ ಜರುಗುತ್ತಲ್ಲಿದ್ದವು. ಅಂತರಜಾತಿಯ ವಿವಾಹಗಳಿಗೆ ಮನ್ನಣೆ ಕೊಟ್ಟಿರಲಿಲ್ಲ. ಆದರೆ ರಾಣಿ ಮನೆತನಗಳಲ್ಲಿ ಅಂತರಜಾತಿಯ ವಿವಾಹಗಳು ಬಳಕೆಯಲ್ಲಿರುವುದು ಕಂಡುಬಂದಿದೆ. ಜೈನ, ವೈಷ್ಣವ, ಶೈವ, ಬೌದ್ಧ ಧರ್ಮದವರು ವಿವಾಹ ಒಪ್ಪಂದಗಳಿಗೆ ಬದ್ಧರಾಗಿದ್ದರು.

**೪. ವಧು ಪರೀಕ್ಷೆ**

ವಿವಾಹಕ್ಕೆ ಕನ್ಯೆಯನ್ನು ನಿಶ್ಚಯಿಸುವಾಗ ಹಲವಾರು ಬಗೆಯ ಪರೀಕ್ಷೆಗಳಿಗೆ ಒಳಪಡಿಸಲಾಗುತ್ತಿತ್ತು. ಕನ್ಯೆಯು ಉತ್ತಮ ಕೌಟುಂಬಿಕ ಹಿನ್ನೆಲೆ ಹೊಂದಿರಬೇಕಿತ್ತು. ಆಕೆ ನೋಡಲು ಸುಂದರವಾಗಿ, ಉನ್ನತ ಸ್ತನ, ಅಗಲವಾದ ನಿತಂಬ, ತೆಳುವಾದ ನಡುವು, ಆಕರ್ಷಕ ಕಣ್ಣುಗಳನ್ನು ಹಾಗೂ ತಾಯಿಯಾಗುವ ಅರ್ಹತೆಯನ್ನು, ನಾಚಿಕೆ ಸ್ವಭಾವ ಮೊದಲಾದ ಗುಣಲಕ್ಷಣಗಳಿಂದ ತುಂಬಿದವಳಾಗಿರಬೇಕಿತ್ತು. ತನಗಿಂತ ಸುಂದರಿಯಾದ ಸಹೋದರಿಯನ್ನು ಹೊಂದಿರಬಾರದಿತ್ತು ಹಾಗೂ ಪರ ಪುರುಷನ ಸಂಪರ್ಕ ಸಹ ಪಡೆದಿರಬಾರದಿತ್ತು. ಜೊತೆಗೆ ಹೆಣ್ಣು ಗಂಡಿಗಿಂತ ಕಡಿಮೆ ಎತ್ತರ ಮತ್ತು ವಯಸ್ಸು ಹೊಂದಿರಬೇಕಿತ್ತು. ವಾತ್ಸ್ಯಾಯನನ ಅಭಿಪ್ರಾಯದಂತೆ "ಮದುವೆ ಆಗಲಿರುವ ಹೆಣ್ಣಿನ ವಯಸ್ಸು ಗಂಡಿಗಿಂತ ಮೂರು ವರ್ಷ ಕಡಿಮೆ ಇರಬೇಕು" ಎಂದು ಹೇಳಿದ್ದಾನೆ. ವಿಷ್ಣು ಪುರಾಣವು ಸಹ "ಗಂಡಿನ ವಯಸ್ಸಿನ ಮೂರನೆ ಒಂದು ಭಾಗದಷ್ಟು ಹೆಣ್ಣಿನ ವಯಸ್ಸಿರಬೇಕು" ಎಂದು ಉಲ್ಲೇಖಿಸಿದೆ.[೧೭] ಇಂಥ ಅಂಶಗಳೇ ಹೆಣ್ಣಿನ ಸಮಾನತೆಯನ್ನು ನಿರಾಕರಿಸಿದ್ದವು ಎಂದು ಸ್ತ್ರೀವಾದ ತಿಳಿಸುತ್ತದೆ ಹಾಗೂ ಹೆಣ್ಣಿನ ಅಧೀನಕ್ಕೆ ಕಾರಣವು ಕೂಡಾ ಎಂದು ತೋರಿಸಿಕೊಟ್ಟಿದೆ. ಇಂಥ ವಧು ಪರೀಕ್ಷೆಗಳು ಸ್ತ್ರೀಯರಿಗಷ್ಟೇ ಏಕೆ? ಎಂದು ಪ್ರಶ್ನಿಸಿದೆ.

ಮದುವೆಗಳಿಂದಾಗಿ ಹೆಣ್ಣು ಒಂದು ನಾಡಿನ ಆಚಾರ-ವಿಚಾರ, ಸಂಸ್ಕೃತಿ ಮೊದಲಾದವುಗಳನ್ನು ಇನ್ನೊಂದು ನಾಡಿಗೆ ವರ್ಗಾಯಿಸುವ ರಾಯಭಾರಿಯಂತೆ ಕಾರ್ಯ ನಿರ್ವಹಿಸಿದ್ದಾಳೆ. ಜೊತೆಗೆ ಪುರುಷ ಮತ್ತು ಅವನ ಜನಾಂಗದ ಎಲ್ಲ ಬಗೆಯ ಬೆಳವಣಿಗೆಗಳಿಗೆ ಕೂಡ ಕಾರಣವಾಗಿದ್ದಳು. ಎರಡು ಮನೆತನಗಳ ನಡುವೆ ಉಂಟಾದ ದ್ವೇಷ, ಅಸೂಯೆಗಳನ್ನು ಅಳಿಸಲು ಸಂಧಾನಕಾರಳಾಗಿಯೂ ಕಾರ್ಯ ನಿರ್ವಹಿಸಿದ್ದಾಳೆ. ಇಂಥ ಎಲ್ಲ ಸಾಧನೆಗಳನ್ನು ಚರಿತ್ರೆಯಲ್ಲಿ ದಾಖಲಿಸಿಲ್ಲ. ಇದನ್ನೇ ಸ್ತ್ರೀವಾದ ಗುರುತಿಸಿ, ಹೆಣ್ಣಿನ ಸಾಧನೆ, ಕ್ರಿಯೆ-ಪ್ರತಿಕ್ರಿಯೆಗಳನ್ನು ದಾಖಲಿಸಲು ಹೊರಟಿರುವುದು. ವಿವಾಹದಿಂದ ಹೆಣ್ಣು ಗಂಡಿನ ಆಸ್ತಿಯಾಗಿದ್ದಳು. ಇದಕ್ಕೆ ಸಮರ್ಥನೆಯೋ ಎಂಬಂತೆ ಕೆಳಗಿನ ಸಾಲುಗಳನ್ನು ಉಲ್ಲೇಖಿಸಬಹುದು.

> "A married womans inability to own property in her own name reflected the fact that in many ways. The prejudices of mankind had made women the property of their husbands. A wife was as much a man's property as his horse as ass"[೧೮]

ವಿವಾಹ ಬಹು ಶಾಸ್ತ್ರ ಪದ್ಧತಿಗಳಿಂದ ಕೂಡಿರುತ್ತಿತ್ತು. ಇದರಿಂದಾಗಿ ಬಹು ದಿನಗಳವರೆಗೆ ನಡೆಯುತ್ತಿದ್ದವು. ರಾಣಿಯರ ಮತ್ತು ಶ್ರೀಮಂತ ಮಹಿಳೆಯರ ವಿವಾಹಗಳು ವಿಜೃಂಭಣೆಯಿಂದ ಆಚರಿಸಲ್ಪಟ್ಟರೆ, ಸಾಮಾನ್ಯ ಮಹಿಳೆಯರ ವಿವಾಹಗಳು ಅವರವರ ಅಂತಸ್ತಿಗೆ ಅನುಸಾರವಾಗಿ ನಡೆಯುತ್ತಿದ್ದವು. 'ಆದಿಪುರಾಣ'ವು ಹೆಣ್ಣು ದಾನ ಕೊಡುವ ವಸ್ತುವಾಗಿದ್ದರಿಂದ ಆಕೆಯನ್ನು ಧಾರೆಯೆರೆದು ಕೊಡಬೇಕೆಂದು ಸೂಚಿಸಿತ್ತು. ಆದ್ದರಿಂದ ತಂದೆ-ತಾಯಂದಿರು ತಮ್ಮ ಮಗಳ ವಿವಾಹದ ಸಂದರ್ಭದಲ್ಲಿ 'ಅಳಿಯನ' ಪಾದಗಳನ್ನು ತೊಳೆಯುವ ಮುಖೇನ ಕನ್ಯೆಯನ್ನು ಧಾರೆ ಎರೆದು ಕೊಡುತ್ತಿದ್ದರು. ಇಲ್ಲಿ ಅಳಿಯನ ಪಾದಗಳನ್ನು ಹೆತ್ತವರು ತೊಳೆಯುವುದು, ಗಂಡಿನ ಶ್ರೇಷ್ಠತೆಯನ್ನು ತಿಳಿಸುತ್ತದೆ. ಜೊತೆಗೆ ಹೆಣ್ಣು ಅಬಲೆ, ಕನಿಷ್ಠದಾಕೆ, ಆಕೆ ಗಂಡಿನ ಆಶ್ರಯದಲ್ಲಿ ಇರಬೇಕೆಂದು ಪರೋಕ್ಷವಾಗಿ ತಿಳಿಸುವುದಾಗಿದೆ. ಹೀಗೆ ಹೆಣ್ಣು ಪುರುಷನ ಅಧೀನಳಾಗಿರಬೇಕಾಗಿತ್ತು. ಇಂಥ ಎಷ್ಟೋ ಆಚಾರ-ಪದ್ಧತಿಗಳು ಹೆಣ್ಣನ್ನು ಕನಿಷ್ಠ ಎಂದು ಸಾರಿವೆ. ಅಂಥವುಗಳನ್ನು ಶೋಧಿಸಿ, ಮಹಿಳೆ ಕನಿಷ್ಠಳೇನೂ ಅಲ್ಲ ಎಂದು ತೋರಿಸುವ ನಿಟ್ಟಿನಲ್ಲಿ ಸ್ತ್ರೀವಾದಿ ಅಧ್ಯಯನಗಳು ನಡೆಯಬೇಕಿದೆ.

### ೫. ಉಡುಗೊರೆ

ವಿವಾಹಗಳಲ್ಲಿ ಉಡುಗೊರೆ ನೀಡುವ ರೂಢಿ ಇತ್ತು. ಈ ಉಡುಗೊರೆ ಅವರವರ ಅಂತಸ್ತಿಗೆ ಅನುಸಾರವಾಗಿ ಚಾಲನೆಯಲ್ಲಿತ್ತು. ರಾಣಿಯರು, ಶ್ರೀಮಂತರ ವಿವಾಹದ ವೇಳೆಗೆ ಉಡುಗೊರೆಯಾಗಿ ಕೆಲವು ಪ್ರದೇಶಗಳನ್ನು ನೀಡುತ್ತಿದ್ದರು. ಇದು ಅವರ ಸಾಮ್ರಾಜ್ಯ ವಿಸ್ತರಣೆಯನ್ನು ಸೂಚಿಸುವಂಥದ್ದು. ಉದಾಹರಣೆಗೆ ರೇವಕ್ಕ ರಾಷ್ಟ್ರಕೂಟರ ರಾಜಕುಮಾರಿ. ಈಕೆ ಗಂಗರ ಬೂತುಗನನ್ನು ವಿವಾಹವಾಗಿ ಪುಲಿಗೆರೆ-ಮುನ್ನೂರು, ಕಿಸುಕಾಡು-ಎಪ್ಪತ್ತು, ಬೆಳ್ವೊಲ-ಮುನ್ನೂರು ಪ್ರದೇಶಗಳನ್ನು ಉಡುಗೊರೆಯಾಗಿ[೧೯] ತಂದಿದ್ದಳು. ಇಂಥ ಉಡುಗೊರೆಗಳೇ ಅಲ್ಲದೆ ಸಂಪತ್ತು, ದಾಸಿಯರನ್ನು ಉಡುಗೊರೆ ರೂಪದಲ್ಲಿ ನೀಡುತ್ತಿದ್ದರು. ಮಧ್ಯಮ ವರ್ಗದ ಗೌರಕ್ಕ ದೇವಸೆಟ್ಟಿಯನ್ನು ವಿವಾಹವಾಗಿ ಪುಳುಮದಲು, ಮುಟ್ಟಿವಾಳ ಗ್ರಾಮಗಳನ್ನು ಪಡೆದಳು ಎಂದು ನಂಜನಗೂಡು ಶಾಸನ ತಿಳಿಸುತ್ತದೆ.[೨೦]

ಬಾಲ್ಯವಿವಾಹ ಮಾಡಬೇಕಾಗಿದ್ದರಿಂದ ಉಡುಗೊರೆಯನ್ನು ಹೆಚ್ಚಾಗಿಯೂ ನೀಡಿ ಹೆಣ್ಣುಮಕ್ಕಳ ಮದುವೆ ಮಾಡುತ್ತಿದ್ದರು. ಇನ್ನೂ ಕುರೂಪಿಗಳಂಥ ಹೆಣ್ಣುಮಕ್ಕಳಿಗೆ ಉಡುಗೊರೆಯನ್ನು ವಿಪುಲವಾಗಿ ನೀಡುತ್ತಿದ್ದರು. ಮುಂದೆ ಈ ಉಡುಗೊರೆಯು 'ವರದಕ್ಷಿಣೆ' ರೂಪ ಪಡೆಯುವುದರ ಜೊತೆಗೆ ಸಾಮಾಜಿಕ ಪಿಡುಗಾಗಿ ಬದಲಾಯಿತು. ಇಂಥವುಗಳಿಂದಲೂ ಹೆಣ್ಣಿನ ಶೋಷಣೆ, ಅಧೀನತೆಗಳು ವ್ಯಾಪಕವಾದವು. ಇಂಥ ಅಂಶಗಳನ್ನು ಸ್ತ್ರೀವಾದ ಎತ್ತಿ ತೋರಿಸಿದೆ.

### ೬. ಮಾಂಗಲ್ಯ

ವಿವಾಹಿತಳು ತನ್ನನ್ನು ಗುರುತಿಸಿಕೊಳ್ಳಲು ಓಲೆ, ಕಡಗಗಳನ್ನು ಧರಿಸುತ್ತಿದ್ದಳು. ಪ್ರಾಚೀನ ಕಾಲದಲ್ಲಿ ಓಲೆ ಕಡಗಗಳೇ ಮುತ್ತೈದೆಯ ಸಂಕೇತಗಳಾಗಿದ್ದವು. ಮಾಂಗಲ್ಯ ಒಂದು ಆಭರಣವಾಗಿತ್ತು ಎಂದು 'ಪಂಪಭಾರತ' ಉಲ್ಲೇಖಿಸಿದೆ.

### ೭. ಬಹುಪತ್ನಿತ್ವ

ಪ್ರಾಚೀನ ಕಾಲದ ಸಮಾಜದಲ್ಲಿ ಬಹುಪತ್ನಿತ್ವಕ್ಕೆ ಅವಕಾಶವಿತ್ತು. ಅಲ್ಲದೆ ಗೌರವವನ್ನು ಪಡೆದಿತ್ತು. ಇದು ಸಹ ಪುರುಷನ ಪ್ರತಿಷ್ಠೆಯ ದ್ಯೋತಕ ಹಾಗೂ ಸ್ತ್ರೀ ಶೋಷಣೆಯ ಇನ್ನೊಂದು ಮುಖವಾಗಿದೆ. ಇಂಥ ಪದ್ಧತಿಯಿಂದಲೇ ಮಹಿಳೆಯರು ಪುರುಷನ ಅಧೀನಕ್ಕೆ ಒಳಪಡುತ್ತಿದ್ದರು. ವಿಭಿನ್ನ ಪ್ರದೇಶಗಳ ಧರ್ಮಗಳು ತಮ್ಮ ಸಂಸ್ಕೃತಿಯ ಮಹಿಳೆಯರು ಅರಸನನ್ನು ವಿವಾಹವಾಗಿ ಅವನ ಸಾಮಾಜಿಕ-ಆರ್ಥಿಕ ಭದ್ರತೆಯನ್ನು ಹೆಚ್ಚಿಸುತ್ತಿದ್ದರು. ಜೊತೆಗೆ ಅಪಾಯದಂಥ ಸಂದರ್ಭಗಳಲ್ಲಿ ಸೈನಿಕ ನೆರವು ಸಿಗುವಂತೆ ನೆರವಾಗಿದ್ದರು. ಯುದ್ಧಗಳಲ್ಲಿ ಸೆರೆಸಿಕ್ಕವರ ಮಹಿಳೆಯರು ಮತ್ತು ಯುದ್ಧ ನಿಲುಗಡೆಗಾಗಿ ಕಾಣಿಕೆ ರೂಪದಲ್ಲಿ ಬಂದ ಮಹಿಳೆಯರು ರಾಜನ ಅಂತಃಪುರ ಸೇರುತ್ತಿದ್ದರು. ಸುಂದರವಾದ ವಸ್ತುಗಳು ಎಲ್ಲ ಅರಸನ ಅಧೀನ. ಅಂತೆಯೇ ಸುಂದರವಾಗಿದ್ದ ಸ್ತ್ರೀಯರು ಅವನ ಅಧೀನರಾಗಿ ಅಂತಃಪುರಕ್ಕೆ ಬರುತ್ತಿದ್ದರು. ಹೀಗೆ ವಿಭಿನ್ನ ಕಾರಣಗಳಿಂದ ಮಹಿಳೆಯರು ರಾಜನ ಅಂತಃಪುರದಲ್ಲಿನ ನಾಲ್ಕು ಗೋಡೆಗೆ ಸೀಮಿತಗೊಳ್ಳುತ್ತಿದ್ದರು. ಚರಿತ್ರೆಯಲ್ಲಿ ಬರುವ ಬಹುಪಾಲು ರಾಣಿಯರು ಬಹುಪತ್ನಿತ್ವದವರು. ಆದ್ದರಿಂದ 'ರಾಣಿಯರು ಎಂದರೆ ಬಹುಪತ್ನಿತ್ವದವರೆ' ಎನ್ನುವಂತೆ ರೂಢಿಯಿತ್ತು. ಅಂತಃಪುರದಲ್ಲಿ ವಿಭಿನ್ನ ಮಹಿಳೆಯರ ದಂಡೇ ಇದ್ದುದರಿಂದ ಅನೇಕ ವೇಳೆ ರಾಜಕೀಯ, ಸಾಮಾಜಿಕ ಮೊದಲಾದ ಸಮಸ್ಯೆಗಳಿಗೆ ಪರಿಹಾರಗಳು ದೊರೆಯುತ್ತಿದ್ದವು. ಜೊತೆಗೆ ಅರಸನ ಜ್ಞಾನ ಅಭಿವೃದ್ಧಿಗೂ ಚಾಲನೆ ದೊರೆಯುತ್ತಿತ್ತು. ಅಂತಃಪುರದಲ್ಲಿ ಈ ಸ್ತ್ರೀಯರು ಹೆಚ್ಚಾಗಿದ್ದರಿಂದ ಅರಸನೂ ಇವರಿಗೆಲ್ಲಾ ಅಪರೂಪದವನಾಗಿದ್ದ. ಅಂತೆಯೇ ಈ ಮಹಿಳೆಯರು ಅರಸನ ಸ್ನೇಹ, ಪ್ರೀತಿ, ಸಂಬಂಧ ಬೆಳೆಸಿಕೊಳ್ಳಲು ಹಂಬಲಿಸಿ, ತಮ್ಮ ರೂಪ, ಲಾವಣ್ಯ, ಸೌಂದರ್ಯಗಳನ್ನು ಹೆಚ್ಚಿಸಿಕೊಂಡು ಅರಸನ ಮನಸ್ಸನ್ನು ತಮ್ಮ ಕಡೆ ಸೆಳೆಯುವಂತೆ ಮಾಡುತ್ತಿದ್ದರು. ಒಂದೊಂದು ಸಾರಿ ಇವರಲ್ಲಿಯೇ ಸ್ಪರ್ಧೆ ಉಂಟಾಗುತ್ತಿತ್ತು. ಇದು ಸವತಿ ಮತ್ಸರಕ್ಕೂ ಅವಕಾಶ ನೀಡಿತ್ತು. ಸವತಿ ಮತ್ಸರ ಕೆಲವೊಂದು ಸಲ ಧರ್ಮಬಾಹಿರ ರಾಕ್ಷಸ ಪ್ರವೃತ್ತಿಗಳಿಗೂ ಎಡೆಮಾಡಿ ಕೊಡುತ್ತಿತ್ತು. ಅರಸನೊಬ್ಬ ಬಹುದಿನಗಳ ಕಾಲ ಬಿಟ್ಟು ರಾಣಿಯಲ್ಲಿಯೇ ಇರುತ್ತಿದ್ದರೆ ಅಂಥ ರಾಣಿಗೆ ಇತರೆ ರಾಣಿಯರು ಆಹಾರದಲ್ಲಿ ವಿಷ ಪ್ರಯೋಗ ಮಾಡಿ ಕೊಲ್ಲುತ್ತಿದ್ದರು.

ಇಲ್ಲವೆ ವಿಹಾರಕ್ಕೆಂದು ಆ ರಾಣಿಯನ್ನು ಕರೆದುಕೊಂಡು ಹೋಗಿ ಅರಣ್ಯದಲ್ಲಿ ಬಿಟ್ಟುಬರುವ ಇಲ್ಲವೆ ನದಿ, ಬೆಟ್ಟ, ಕಣಿವೆಯಲ್ಲಿ ನೂಕಿ ಬರುತ್ತಿದ್ದರು. ಇನ್ನೂ ಕೆಲವು ಬಾರಿ ಅನ್ಯ ಪುರುಷನ ಸಂಬಂಧದ ಆರೋಪವನ್ನು ಹೇರಿ ರಾಣಿಯನ್ನು ಅರಸನಿಂದ ಬೇರ್ಪಡಿಸುತ್ತಿದ್ದರು. ಇದು 'ಹೆಣ್ಣಿಗೆ ಹೆಣ್ಣೇ ಶತ್ರು' ಎಂಬಂತೆ ಕಂಡುಬರುತ್ತಿದ್ದರೂ ಇದಕ್ಕೆಲ್ಲ ಕಾರಣ ಪುರುಷನೆಂದೇ ಹೇಳಬೇಕಾಗಿದೆ. ಮಹಿಳೆಯರ ಸಮಸ್ಯೆಗಳ ಸೃಷ್ಟಿಗೂ ಮತ್ತು ಅವುಗಳ ನಾಶಕ್ಕೂ ಪುರುಷನೇ ಕಾರಣನಾಗಿದ್ದಾನೆ. ಇಂಥ ಮಾಹಿತಿಯನ್ನೆಲ್ಲಾ ಸ್ತ್ರೀವಾದ ತೋರಿಸಿದೆ.

ರಾಜನ ಅಪರೂಪದ ಭೇಟಿಯ ಸಾಕ್ಷಿಗಾಗಿ ರಾಣಿಯರು ತಮ್ಮ ವಕ್ಷಸ್ಥಳದ ಮೇಲಿದ್ದ ಅವನ ಉಗುರುಗಳ ಗೆರೆಗಳನ್ನು ವಿಲಾಸವತಿಯರು ಕುಪ್ಪಸ ಬಿಚ್ಚಿ ಹೆಮ್ಮೆಯಿಂದ ಇತರೆ ರಾಣಿಯರಿಗೆ ತೋರಿಸುತ್ತಿದ್ದರು.[೨೮] ಅಂತಃಪುರದಲ್ಲಿನ ಬಹು ಪತ್ನಿಯರಿಂದಾಗಿ ಅವನ ಮಕ್ಕಳ ಬಗ್ಗೆ ಸರಿಯಾಗಿ ತಿಳಿದುಕೊಳ್ಳಲು ಆಗುತ್ತಿತ್ತು ಇಲ್ಲವೊ ಇದಕ್ಕೆ ಆಧಾರವಾಗಿ ಅರಸನೊಬ್ಬ ತನಗೆ ಮಗ ಹುಟ್ಟಿದನೇ ಎಂದು ಕೇಳಲು ಸೇವಕನನ್ನು ಕಳಿಸಿದ್ದ. ಆಗ ರಾಣಿಯರು ತಮಗೆಲ್ಲಾ ಅರಸನ ಸೂಳಿಯ ಪಾಳಿ ಸಿಕ್ಕಿಲ್ಲ. ಇನ್ನು ನಮಗೆ ಎಲ್ಲಿ ಬಸಿರು, ಮಕ್ಕಳು ಎಂದು ಅಸಮಾಧಾನವಾಗಿ ಪ್ರಶ್ನಿಸಿದ್ದರೆಂಬ ಉಲ್ಲೇಖಗಳು ಕಂಡುಬಂದಿರುತ್ತವೆ.[೨೯] ರಾಣಿಯರು ಅರಮನೆಯ ವೈಭವ ಭೋಗ ಜೀವನವಿದ್ದರೂ ಅವರಿಗೆ ಅರಸನಿಂದ ದಾಂಪತ್ಯ ಸುಖ ಅಷ್ಟಾಗಿ ದೊರೆಯುತ್ತಿರಲಿಲ್ಲ. ಅಂತೆಯೇ ಯಶೋಧರ ಚರಿತ್ರೆಯ 'ಅಮೃತಮತಿ'ಯಂಥ ಮಹಿಳೆಯರು ಇದ್ದರು. ಇನ್ನೂ ಕೆಲವು ಸಲ ರಾಣಿಯರು ಕಾಯಿಲೆ ಎಂದು ಮಲಗುತ್ತಿದ್ದರು. ಕಾಯಿಲೆ ಚಿಕಿತ್ಸೆಗಾಗಿ ವೈದ್ಯರು ಅಂತಃಪುರಕ್ಕೆ ಹೋಗಿ ರಾಣಿಯ 'ನಾಡಿ' ಪರೀಕ್ಷೆ ಮಾಡುವ ಸಂದರ್ಭದಲ್ಲಿ ವೈದ್ಯನ ಮುಂಗೈಯನ್ನು ರಾಣಿಯರು ಚುಂಬಿಸುತ್ತಿದ್ದರೆಂದು ಉಲ್ಲೇಖಗಳಿವೆ. ಇಂಥ ಹಲವಾರು ಉಲ್ಲೇಖಗಳಿಂದ ರಾಣಿಯರು ಕೆಲವು ಕೊರತೆಗಳಿಂದ ಬಳಲುತ್ತಿದ್ದರು ಎಂದು ತಿಳಿಯಬಹುದಾಗಿದೆ.

ಕುತೂಹಲದ ಸಂಗತಿ ಎಂದರೆ ರಾಣಿಯರು ಅರಸನಿಂದ 'ಸವತಿ ಗಂಧವಾರಣೆ' ಎಂಬ ಬಿರುದನ್ನು ಪಡೆಯಲು ಬಯಸುತ್ತಿದ್ದುದು. ರಾಣಿಯರು ಇಂಥ ಬಿರುದುಗಳನ್ನು ಪಡೆದಿದ್ದನ್ನು ಶಾಸನಗಳು ಉಲ್ಲೇಖಿಸಿವೆ. "ಚಾಲುಕ್ಯ ಮೈಳಲದೇವಿಯು ಸವತಿಮದಭಂಜನೆ ಸಮಸ್ತಾನಪ್ಪರ ಮುಖಮಣ್ಣೆ" ಎಂದೂ, ತ್ರಿಭುವನಮಲ್ಲನ ರಾಣಿ ಚಂದಲದೇವಿ-'ದುಷ್ಟದರ್ಪಿಷ್ಟಾ ಸವತಿ ಶಿರೋವಜ್ರ ಮುಷ್ಟಿ'ಯೆಂದೂ, ಕುಂದಲದೇವಿ 'ಪೆರ್ಮಾತಿನ ಸವತಿಯರ ಬೆನ್ನಚಮ್ಮಡಿಕೆ ಸವತಿಗಜಕೇಸರಿ' ಎಂದು, ಅಭಿನವ ಕೇತಲಮಹಾದೇವಿ 'ಸವತಿ ಮೃಗಶಾರ್ದೂಳೆ' ಎಂಬ ಬಿರುದುಗಳನ್ನು ಪಡೆದಿದ್ದರೆಂದು[೩೦] ಶಾಸನಗಳು ಉಲ್ಲೇಖಿಸಿವೆ. ಬಹುಪತ್ನಿತ್ವದ ಸನ್ನಿವೇಶದಲ್ಲಿ ಹಿರಿಯ ರಾಣಿಯೇ ಅಗ್ರಮಹಿಷಿ ಅಥವಾ ಪಿರಿಯರಸಿ ಪಟ್ಟಮಹಾದೇವಿ ಆಗಿರುತ್ತಿದ್ದಳು. ಐದುನೂರು ರಾಣಿಯರು ಗುಣದತ್ತಭಟಾರಕರಿಗೆ ಉಪರಿಚನಿಗೆ, ತೊಂಬತ್ತಾರು ಸಾವಿರ ರಾಣಿಯರು, ಭರತ ಚಕ್ರವರ್ತಿಗೆ, ಗುಂಡಮಬ್ಬೆ, ಅತ್ತಿಮಬ್ಬೆ, ನಾಗದೇವನನ್ನು ಕಾಳಿಯಬ್ಬೆ, ಮಲ್ಲಿಯಬ್ಬೆ, ಪೊಲೆಯಮ್ಮನನ್ನು[೩೧] ಸೋವೆ ಮಾಚವೆ ನಾಯಕಿತಿರು, ತಿಪ್ಪೆಯ ನಾಯಕನನ್ನು[೩೨] ವಿವಾಹವಾಗಿದ್ದರು. ಹೀಗೆ ಪ್ರಾಚೀನ ಕರ್ನಾಟಕದ ಚರಿತ್ರೆಯಲ್ಲಿ ಇಂಥ ಬಹುಪತ್ನಿತ್ವ ಹೆಚ್ಚಾಗಿತ್ತು. ಬಹುತೇಕವಾಗಿ ಬಾದಾಮಿ ಚಾಲುಕ್ಯರ ರಾಣಿಯರು, ಕಲ್ಯಾಣಿ ಚಾಲುಕ್ಯರ ರಾಣಿಯರು ಮೊದಲಾದವರು ಬಹುಪತ್ನಿತ್ವದವರೇ ಆಗಿದ್ದರು. ಬಹುಪತ್ನಿತ್ವ ಪದ್ಧತಿ ಮಧ್ಯಮ ವರ್ಗದಲ್ಲಿಯೂ ರೂಢಿಯಲ್ಲಿತ್ತು. ಕಾಳಿದೇವಿ, ಮಾಳಲದೇವಿಯರು ಕಾವಲಾನನ್ನು, ದೇವಕವೆ ಮತ್ತು

ಚಾಮವ್ವೆಯರು, ಮರಿಯಾನೆ ದಂಡನಾಯಕನನ್ನು, ಮಾರವ್ವೆ, ಬಮ್ಮವ್ವೆಯರು ಹೆಗ್ಗಡೆ ಮಾಚಿಗಾವುಂಡನನ್ನು ವಿವಾಹವಾಗಿದ್ದರು. ಇಂಥ ಉಲ್ಲೇಖಗಳು ಬಹುಪತ್ನಿತ್ವ ಪ್ರಚಲಿತದಲ್ಲಿತ್ತೆಂದು ತಿಳಿಯಪಡಿಸುತ್ತವೆ. ಇದಕ್ಕೆ ಇನ್ನೂ ಆಧಾರವಾಗಿಯೆಂದರೆ ಕರ್ನಾಟಕದಲ್ಲಿ ದೊರೆಯುವ ಜೋಡು ಕೈ, ಬಹು ಕೈ, ಮಾಸ್ತಿಶಿಲ್ಪಗಳು ಪ್ರಧಾನವಾದವು. ಹೆಣ್ಣಿನ ಶೋಷಣೆಗೆ ಕಾರಣವಾದ ರೂಢಿಗಳಲ್ಲಿ ಈ ಬಹುಪತ್ನಿತ್ವ ಒಂದಾಗಿದ್ದು, ಸ್ತ್ರೀವಾದಿ ಚಿಂತಕಿಯರಿಗೆ ಅಧ್ಯಯನ ಕೈಗೊಳ್ಳಲು ಅವಕಾಶಗಳಿವೆ.

### ೮. ಪಾತಿವ್ರತ್ಯ

ಹೆಣ್ಣನ್ನು ಬಂಧಿಸುವ, ಶೋಷಿಸುವ ಪದ್ಧತಿಗಳಲ್ಲಿ ಪಾತಿವ್ರತ್ಯವು ಒಂದಾಗಿದೆ ಹಾಗೂ ಪುರುಷಪ್ರಧಾನ ಸಮಾಜದ ಕುಟಿಲ ನೀತಿಗಳಲ್ಲಿಯೂ ಒಂದು. ಹೆಣ್ಣು ಕಾಯಾ, ವಾಚಾ, ಮನಸಾ ಪತಿಯನ್ನು ಬಯಸಬೇಕು ಮತ್ತು ಪತಿಗೆ ನಿಷ್ಠೆಯಿಂದ ಇರಬೇಕು ಎಂಬುದು ಇದರ ಉದ್ದೇಶವಾಗಿತ್ತು. ಒಟ್ಟಿನಲ್ಲಿ ಹೆಣ್ಣಿನ ಲೈಂಗಿಕ ಬದುಕನ್ನು ನಿಯಂತ್ರಿಸಿತ್ತು. ಹೆಣ್ಣಿನ ಶೀಲದ ಬಗ್ಗೆ ಸಂಶಯ ಬಂದಾಗ ಆಕೆಯನ್ನು ಹಲವು ಬಗೆಯ ಪರೀಕ್ಷೆಗಳಿಗೆ ಒಳಪಡಿಸುತ್ತಿದ್ದರು. ಹೆಣ್ಣು ಪರೀಕ್ಷೆಗಳ ಮುಖೇನ ತನ್ನ ಪಾತಿವ್ರತ್ಯವನ್ನು ವ್ಯಕ್ತಪಡಿಸುತ್ತಿದ್ದಳು. ಇಂಥ ಪರೀಕ್ಷೆಯ ಬಗ್ಗೆ ತೊರಗಲ್ಲು ಶಾಸನ ವಿವರಿಸಿದೆ. "ಸುಗ್ಗಲದೇವಿ ತನ್ನ ಪಾತಿವ್ರತ್ಯವನ್ನು ಘಟಸರ್ಪ ಪವಾಡದ ಮುಖೇನ ವ್ಯಕ್ತಪಡಿಸಿದ್ದಳು"[೨೬] ಎಂದು ಉಲ್ಲೇಖವಿದೆ. ಚಾಕಲದೇವಿಯು ಚಾಲುಕ್ಯ ಆರನೇ ವಿಕ್ರಮಾದಿತ್ಯನನ್ನು ಪರೀಕ್ಷೆಯೊಂದರ ಮೂಲಕ ಸೋಲಿಸಿದ್ದಳೆಂದು ದಾಖಲೆಗಳು ತಿಳಿಸುತ್ತವೆ.

ಪುರುಷಪ್ರಧಾನ ಸಮಾಜ ಕತೆ, ಕಾವ್ಯ, ಹಾಡುಗಳ ಮೂಲಕವೂ ಪಾತಿವ್ರತ್ಯವನ್ನು ವ್ಯಾಪಕವಾಗಿ ಪ್ರಚಾರ ಮಾಡಿತು. ಪಾತಿವ್ರತ್ಯ ಪದ್ಧತಿಗೆ ಒಳಪಟ್ಟವುಗಳನ್ನು ವಿಶೇಷ ಗೌರವದಿಂದ ಕಂಡು ಕ್ರಮೇಣ ಆಕೆಯನ್ನು 'ದೇವತೆ' ಎಂದು ಪೂಜಿಸಲು ತೊಡಗಿತು. ಇದಕ್ಕೆ ವಿರುದ್ಧವಾಗಿ ಬದುಕುತ್ತಿದ್ದವಳನ್ನು ನಡತೆಗೆಟ್ಟವಳೆಂದು ಕರೆದು, ಸಮಾಜದ ನಿಂದನೆಗೆ ಗುರಿಮಾಡುತ್ತಿತ್ತು. ಅಮೃತಮತಿ ಮತ್ತು ಈಕೆಯಂತೆ ಇರುವ ಮಹಿಳೆಯರು ಅಪವಾದಕ್ಕೆ ಗುರಿಯಾಗಿದ್ದಾರೆ. ಸ್ತ್ರೀವಾದ ಇಂಥ ಪಾವಿತ್ರ್ಯದ ಏಮ್ಮುಖ ಹೇರಿಕೆಯನ್ನು ವಿರೋಧಿಸಿದೆ. ಅಂಥ ನಿಂದನೆಗೆ ಗುರಿಯಾದ ಮಹಿಳೆಯರ ಬಗ್ಗೆ ಕನಿಕರ ವ್ಯಕ್ತಪಡಿಸಿದೆ.

### ೯. ಅತ್ತೆ-ಸೊಸೆಯರ ಸಂಬಂಧ

ವಿವಾಹಿತಳಾದ ಹುಡುಗಿ ಗಂಡನ ಮನೆಗೆ ಹೋಗುವಾಗ ಹಿರಿಯರು ಉಪದೇಶದ ಮಾತುಗಳನ್ನು ಹೇಳುತ್ತಿದ್ದರು. "ಹೆಣ್ಣು ಬೆದರಿ ಬೆಚ್ಚಿ ಇರಬೇಕು, ತವರಿಗೆ ಹೆಸರು ತರಬೇಕು" ಎಂದೂ ಹಾಗೂ "ಕುಲಕ್ಕೆ ಕೆಟ್ಟ ಹೆಸರು ತಂದರೆ ಮಗಳು ಅಲ್ಲ" ಎಂಬ ಮಾತುಗಳಿವೆ.[೨೭] ಇವೆಲ್ಲವುಗಳಿಂದ ಹೆಣ್ಣು ಅತ್ತೆಯ ಮನೆಯಲ್ಲಿ ಏನನ್ನು ಪ್ರಶ್ನಿಸದೆ ತೊತ್ತಿನಂತೆ ಜೀವಿಸಬೇಕಾಗಿತ್ತು. ಗೃಹಿಣಿಯೊಬ್ಬಳು ಹಸಿದವರಿಗೆ ಅನ್ನ ಕೊಟ್ಟಿದ್ದಕ್ಕಾಗಿ ಅತ್ತೆಯಿಂದ ಬೈಗಳು ಪಡೆದು, ಮನೆಯಾಚೆ ಹಾಕಲ್ಪಟ್ಟ ಉಲ್ಲೇಖಗಳು ಇವೆ. ಇದರಿಂದಾಗಿ ಸಾಮಾನ್ಯ ಮಹಿಳೆಯರು ಅತ್ತೆಯೊಂದಿಗೆ ಅಷ್ಟು ಉತ್ತಮ ಸಂಬಂಧ ಇಟ್ಟುಕೊಂಡಿರಲಿಲ್ಲ ಎಂದು ತಿಳಿಯಬಹುದು. ಅರಮನೆಯಲ್ಲಿ ರಾಜಮಾತೆ-ರಾಣಿಯರ ಸಂಬಂಧ ಸಾಮಾನ್ಯವಾಗಿ ಉತ್ತಮವಾಗಿರುತ್ತಿತ್ತು.

## ೧೦. ತಾಯಿತನ

ಪ್ರತಿ ಹೆಣ್ಣು ತಾಯಿಯಾಗಲೂ ಬಯಸುತ್ತಿದ್ದಳು. ಮಕ್ಕಳಿಂದಲೇ ಜನ್ಮ ಸಾರ್ಥಕ ಎನ್ನುವ ರೂಢಿಯಿತ್ತು. ತಾಯಿತನದ ವಿಷಯದಲ್ಲಿ ಹೆಣ್ಣಿಗೆ ವಿಶೇಷ ಮರ್ಯಾದೆ ಗೌರವಗಳಿದ್ದವು. ಕರ್ನಾಟಕ ಕಾದಂಬರಿಯು ತಾಯಿತನದ ಆಸೆಯನ್ನು ಭಿನ್ನ ವ್ರತಗಳಿಂದಲೂ ತುಂಬಿಕೊಳ್ಳುತ್ತಿದ್ದರು ಎಂಬುದನ್ನು ವಿವರಿಸುತ್ತದೆ. ಮಕ್ಕಳಿಗಾಗಿ ಹಂಬಲಿಸಿ ದೇವರಿಗೆ ಹರಕೆ, ಅಶ್ವತ್ಥ ವೃಕ್ಷ ಸುತ್ತುವುದು, ಬಲಿಕೊಡುವ, ಮಾತೃ ಮಂಡಲ ಪೂಜೆ ಇತ್ಯಾದಿಗಳನ್ನು ಮಾಡುವ ಪರಿಪಾಠ ಬೆಳೆದುಬಂದಿತ್ತು. ಕುತೂಹಲಕರ ಸಂಗತಿ ಎಂದರೆ ಗಂಡು ಮಗುವಿಗಾಗಿಯೇ ಹೆಚ್ಚಿನ ಪ್ರಾರ್ಥನೆಗಳು, ಆಚರಣೆಗಳು ಹುಟ್ಟಿಕೊಂಡಿರುವುದು. ತಾಯಿ ಆಗುವವಳು ಸಹ ಪುತ್ರವತಿ ಎನ್ನಿಸಿಕೊಳ್ಳಲು ಬಯಸುತ್ತಿದ್ದಳು[೨೮] ಎಂದು ಶಾಸನಗಳು ಹೇಳುತ್ತವೆ. ತಾಯಿಯೇ ಮಗುವಿನ ಲಾಲನೆ-ಪಾಲನೆಯಲ್ಲಿ ಬಹುಪಾಲು ಸಮಯವನ್ನು ಕಳೆಯುತ್ತಿದ್ದರಿಂದ ಮಗುವಿನ ಮೊಟ್ಟಮೊದಲ ಶಿಕ್ಷಕಿಯಾಗಿದ್ದಳು ಎಂದು ಶಾಸನಗಳು ದಾಖಲಿಸಿವೆ.[೨೯] ಮಗುವನ್ನು ಹೆರದವಳು ಸಮಾಜದಲ್ಲಿ ಬಂಜೆ ಎಂದು ಕರೆಸಿಕೊಳ್ಳುತ್ತಿದ್ದಳು. ಇಂಥ ಮಹಿಳೆಯರು ಸಮಾಜದ ನಿಂದನೆಗಷ್ಟೇ ಅಲ್ಲದೆ ಗಂಡನಿಂದ ವಿವಾಹ ವಿಚ್ಛೇದನಕ್ಕೂ ಒಳಗಾಗುತ್ತಿದ್ದರು. ಬಂಜೆಯನ್ನು ಕುರಿತು -

“ಕೈಗನ್ನಡಿಯ ವೊಲೆಲ್ಲರ ಕೈಗೊಪ್ಪುವ
ಮಗನನೆತ್ತಿ ಪುಳಕಾಂಕುರಮಂ ಮೃಗಗ್ಗ
ಳಿಸದ ಕಾಂತೆಯೆ ಕೈಗಮದೇಂ
ಬೇದಮುಂಟೆ ಸೀರೆಯ ಕೈಗಂ
ಗರ್ಭ ಬೆಳೆಯದ ಬಾಳಕಿಯ
ಬಸಿರನರ್ಥ ಕಮಲ್ತೇ”[೩೦] ಎನ್ನಲಾಗಿದೆ.

ಅಂದಿನ ಸಮಾಜ ಹಾಗೂ ಮಹಿಳೆ ಇಬ್ಬರೂ ಗಂಡು ಮಗುವನ್ನೇ ಬಯಸುತ್ತಿದ್ದರು. ಗರ್ಭಿಣಿ ಸ್ತ್ರೀಯರನ್ನು ಹರಸುವಾಗ ‘ಪುತ್ರವತಿ’ ಎಂತಲೇ ಹರಸುತ್ತಿದ್ದುದು ಉಂಟು. ಇದರಿಂದ ಅಂದಿನ ಸಮಾಜದಲ್ಲಿ ಹೆಣ್ಣು ಮಗು ಅಷ್ಟಾಗಿ ಮಹತ್ತ್ವ ಪಡೆದಿರಲಿಲ್ಲ ಎನ್ನಬಹುದು. ಗಂಡು ಮಗು ಪಿತೃ ವಂಶದ ಉದ್ಧಾರಕ, ಹಿರಿಯರ ಆಸ್ತಿ ಕಾಪಾಡುವವ, ವೃದ್ಧಾಪ್ಯದಲ್ಲಿ ತಂದೆ ತಾಯಿಯರನ್ನು ನೋಡಿಕೊಳ್ಳುವ ಜವಾಬ್ದಾರಿ ಹೊರುತ್ತಾನೆ ಎಂಬ ನಂಬಿಕೆ ಇತ್ತು. ಅಂತೆಯೇ ಮೃತರಾಗಿದ್ದ ಪೂರ್ವಜರ ಆತ್ಮಕ್ಕೆ ಮೋಕ್ಷ ತರಲು, ಧಾರ್ಮಿಕ ಕ್ರಿಯೆಗಳನ್ನು ಮಾಡಲು ಗಂಡು ಸಂತಾನ ಅನಿವಾರ್ಯವಾಗಿತ್ತು. ರಾಣಿಯರು ಸಹ ಗಂಡು ಮಗುವನ್ನು ಬಯಸುತ್ತಿದ್ದುದೇ ಹೆಚ್ಚು. ಅರಸನ ಪ್ರೀತಿ, ಸ್ನೇಹ ಗಳಿಸಿಕೊಳ್ಳಲು ಮತ್ತು ‘ಪಟ್ಟದರಸಿ’ ಪಟ್ಟ ಪಡೆಯಲು ಗಂಡುಮಗು ಬೇಕೆಂದು ಹಂಬಲಿಸುತ್ತಿದ್ದರು. ತಂದೆ ತಾಯಂದಿರು ಕೂಡಾ ತಮ್ಮ ಮಗಳು ಗಂಡು ಮಗುವಿಗೆ ಜನ್ಮ ನೀಡಬೇಕೆಂದು ಹಾಗೂ ಪಟ್ಟದ ರಾಣಿ ಆಗಬೇಕೆಂದೇ ಬಯಸುತ್ತಿದ್ದರು. ರಾಣಿಯರು ಬಹುಪತ್ನಿತ್ವವುಳ್ಳವರಾಗಿದ್ದರಿಂದ ಅವರಿಗೆಲ್ಲಾ ಅರಸನ ಸಂಪರ್ಕ ಸಿಗುತ್ತಿದ್ದುದು ಅಪರೂಪವೇ ಆಗಿತ್ತು. ಆದ್ದರಿಂದ ತಾಯಿತನಕ್ಕೆ ಹಂಬಲಿಸಿದ ರಾಣಿಯರು ಅರಸನನ್ನು ಕಾಯ್ದುಕೊಂಡು ಇರುತ್ತಿದ್ದುದು ಉಂಟು. ತಮಗೆ ಗಂಡು ಮಗುವಿನ ತಾಯಿಯಾಗುವ ಭಾಗ್ಯವೆಂದು ಬರುತ್ತದೆ ಎಂದು ಚಿಂತಿಸುತ್ತಿದ್ದ ಉದಾಹರಣೆಗಳಿವೆ.

ಗಂಡು ಮಗುವಿಗಾಗಿ ಹರಕೆ ಹೊತ್ತು ಪ್ರಾರ್ಥಿಸಿದಾಗ ಹೆಣ್ಣು ಮಗು ಜನಿಸಿದ್ದಲ್ಲಿ, ಆ ಮಗುವನ್ನು ಹಿಂತಿರುಗಿಸಿದ್ದನ್ನು ನೇಮಿನಾಥ ಪುರಾಣ ತಿಳಿಸುತ್ತದೆ. ಇಷ್ಟಾದರೂ ಹೆಣ್ಣು ಮಗುವನ್ನು ಕೆಲವರಾದರೂ ಸ್ವಾಗತಿಸುತ್ತಿದ್ದರು. ಇದನ್ನು ಶಾಸನಗಳು ಉಲ್ಲೇಖಿಸಿವೆ. ಚಂದಯ್ಯ ಮತ್ತು ಮಲ್ಲಿಯು ತಮ್ಮ ಮಗಳನ್ನು ಕುಲದೀಪಕಿ, ಕುಲಪುತ್ರಿಕೆ ಎಂದು ಕರೆದುಕೊಂಡಿದ್ದಾರೆ. ಇವರಂತೆ "ಚುಂಗವ್ವೆ ಈಕೆಯ ಗಂಡ ಬೆಳ್ಳಪ್ಪನಾಯಕರು ಹೆಣ್ಣು ಮಗು ಹುಟ್ಟಿದ್ದರಿಂದ ತಮ್ಮ ಜನ್ಮ ಸಾರ್ಥಕವಾಯಿತು ಎಂದಿದ್ದರು" ಎಂದು ಚನ್ನರಾಯಪಟ್ಟಣ ಶಾಸನ ತಿಳಿಸಿದೆ. ಕೆಲವು ಮಹಿಳೆಯರು ತಾಯಿತನ ಪಡೆಯದೆ, ಬೇರೆಯವರ ಮಕ್ಕಳಿಗೆ ತಾಯಂದಿರಾಗಿ ಪಾತ್ರ ವಹಿಸಿದ್ದರು. ಅಂಥ ಮಹಿಳೆಯರನ್ನು 'ದಾದಿ'ಯರು ಎಂದು ಕರೆಯುತ್ತಿದ್ದರು. ಉದಾಹರಣೆಗೆ ಬಾಗಿಯಬ್ಬೆ ಎಂಬಾಕೆ ಚಾಲುಕ್ಯ ತೈಲಪನನ್ನು ಸಲುಹಿದ್ದುದು.

ಪ್ರಾಚೀನ ಸಮಾಜ ಹೆಣ್ಣು ಮದುವೆಯಾಗಿ ಮನೆಗೆ ಬಂದರೆ ತಮ್ಮ ಮನೆಗೆ ಹೆಣ್ಣಾಳು ಬಂದಿತು ಎನ್ನುತ್ತಿದ್ದರು. ಇದು ಸಹ ಗಂಡು ಮಗುವಿನ ಹುಟ್ಟನ್ನು ಪ್ರೋತ್ಸಾಹಿಸಿತು. ಒಟ್ಟಾರೆಯಾಗಿ ಪ್ರಾಚೀನ ಸಮಾಜ ಗಂಡುಮಗುವನ್ನು ಬಯಸಿತ್ತು. ಸ್ತ್ರೀವಾದ ಗಂಡು ಮಗುವಿನ ಹುಟ್ಟನ್ನು ಸ್ವಾಗತಿಸಿದ್ದು ಮತ್ತು ಹೆಣ್ಣನ್ನು ನಿರ್ಲಕ್ಷಿಸಿದ್ದಕ್ಕೆ ವಿರೋಧ ವ್ಯಕ್ತಪಡಿಸಿದೆ. ಸ್ತ್ರೀವಾದಿ ಚಿಂತನೆ ಲಿಂಗ ತಾರತಮ್ಯ ಮಾಡದಂತೆ ನಿರ್ವಚಿಸಿ, ಹೆಣ್ಣು ತಾಯಿತನ ಭಾಗ್ಯ ಪಡೆಯದಿದ್ದರೆ 'ಬಂಜೆ' ಎನ್ನುವ ಪುರುಷ ಪ್ರಧಾನ ಸಮಾಜ ಗಂಡು ತಂದೆಯಾಗುವ ಅರ್ಹತೆ ಇಲ್ಲದಾಗ ಅವನನ್ನು ಏನು ಎನ್ನಬೇಕು? ಎಂದು ಪ್ರಶ್ನಿಸಿದೆ. ಜೊತೆಗೆ ತಾಯಿತನವು ಸೃಷ್ಟಿಯ ನೈಸರ್ಗಿಕ ಕ್ರಿಯೆ ಎಂಬುದನ್ನು ಸಾಬೀತುಗೊಳಿಸಿದೆ.

## ೧೧. ವಿಚ್ಛೇದನ

ವಿವಾಹ ವಿಚ್ಛೇದನಕ್ಕೂ ಪ್ರಾಚೀನ ಸಮಾಜ ಅವಕಾಶ ನೀಡಿತ್ತು. ವಿಚ್ಛೇದನಕ್ಕೆ ಬಲವಾದ ಕಾರಣಗಳು ಆಧಾರವಾಗಿರಬೇಕಿತ್ತು. ವಧು ಪರೀಕ್ಷೆಯಲ್ಲಿ ದೊರೆತ ಮಾಹಿತಿಗಳು ಸುಳ್ಳೆಂದು ತಿಳಿದರೆ, ಹೆಣ್ಣು ರೋಗ-ರುಜಿನಗಳಿಗೆ ಒಳಗಾಗಿದ್ದರೆ, ತಾಯಿತನ ಪಡೆಯುವ ಅರ್ಹತೆ ಕಳೆದುಕೊಂಡಾಗ, ಬರೀ ಹೆಣ್ಣು ಮಕ್ಕಳಿಗೆ ಜನ್ಮ ನೀಡುತ್ತಿದ್ದರೂ ಮತ್ತು ಅನೈತಿಕ ಸಂಬಂಧಗಳನ್ನು ಹೊಂದಿದ್ದರೆ, ಅಧಿಕ ಹಣವನ್ನು ಖರ್ಚು ಮಾಡುವವಳಾಗಿದ್ದರೆ ಇನ್ನೂ ಮೊದಲಾದ ಕಾರಣಗಳಿಂದಾಗಿ ಗಂಡು ವಿವಾಹ ವಿಚ್ಛೇದನ ಪಡೆಯುತ್ತಿದ್ದ. ಅಂತೆಯೇ ಹೆಣ್ಣಿಗೂ ಸಹ ವಿಚ್ಛೇದನ ಕೈಗೊಳ್ಳಲು ಅವಕಾಶ ಕಲ್ಪಿಸಿತ್ತು. ಗಂಡನ ದುರಾಚಾರ, ದುರ್ನಡತೆ, ದಬ್ಬಾಳಿಕೆಗೆ ಬೇಸತ್ತು ಹೆಂಡತಿಯರು ವಿವಾಹ ವಿಚ್ಛೇದನ ಪಡೆಯುತ್ತಿದ್ದರು. ಆದರೆ ಇಂಥ ನಿರ್ಣಯಗಳು ಸ್ತ್ರೀಯೊಬ್ಬಳು ತೆಗೆದುಕೊಳ್ಳುತ್ತಿದ್ದುದು ತುಂಬ ವಿರಳ.

## ೧೨. ವಿಧವೆಯರು

ಸಾಮಾನ್ಯವಾಗಿ ರಾಜ ಮತ್ತು ಅವನ ಆಸ್ಥಾನಿಕರು ಬಹುಪತ್ನಿತ್ವವುಳ್ಳವರಾಗಿದ್ದವರೇ ಆಗಿರುತ್ತಿದ್ದರು. ಯುದ್ಧದಂಥ ಸಂದರ್ಭದಲ್ಲಿ ಮರಣ ಹೊಂದುವವರು ಬಹುಪಾಲು ಯುವಕರೆ. ಹೀಗಾಗಿ ಇವರ ಹೆಂಡತಿಯರು ವಿಧವೆಯರಾಗಬೇಕಾಗಿತ್ತು. ಈ ವಿಧವೆಯರಲ್ಲಿ ಕೆಲವರು ಸತಿ ಸಹಗಮನ ಮಾಡಿದರೆ ಮತ್ತೆ ಕೆಲವರು ತಮ್ಮ ಧರ್ಮಕ್ಕೆ ಅನುಸಾರವಾಗಿ ಜೀವಿಸುತ್ತಿದ್ದರು. ಮಕ್ಕಳ ಲಾಲನೆ-ಪಾಲನೆ ಮಾಡುತ್ತ ಧಾರ್ಮಿಕ

ಕಾರ್ಯಗಳಲ್ಲಿ ನಿರತರಾಗಿದ್ದರು. ಅಲ್ಲದೆ ಯುವರಾಜನಿಗೆ ಆಡಳಿತದಲ್ಲಿ ಸಲಹೆ ನೀಡುವ ರಾಜಮಾತೆಯಾಗಿಯೂ ಇರಬಹುದಿತ್ತು. ಮತ್ತೆ ಕೆಲವರು ಸ್ವತಃ ತಾವೇ ಆಡಳಿತ ನೋಡಿಕೊಂಡಿರುವ ಉದಾಹರಣೆಗಳೂ ಇವೆ. ಅವುಗಳಲ್ಲಿ ಅತ್ತಿಮಬ್ಬೆ ಅನೇಕ ಧಾರ್ಮಿಕ ಕಾರ್ಯಗಳನ್ನು ಕೈಗೊಂಡರೆ, ವಿಜಯಮಹಾದೇವಿ ತಾನೇ ಆಡಳಿತ ಮಾಡಿದಳು. 'ಆದಿಪುರಾಣ'ದಲ್ಲಿ ವಿಧವೆಯೊಬ್ಬಳು ಗುರು ಪಂಚಕವನ್ನು ನೆನೆಯುತ್ತ ಪ್ರಾಣ ಬಿಟ್ಟಿದ್ದನ್ನು ತಿಳಿಸುತ್ತದೆ. ಇದರಂತೆ ಚಾವುಂಡರಾಯ ಪುರಾಣ 'ವೈಧವ್ಯ ವ್ರತ' ಎಂದು ಹೇಳಿದೆ. ವಿಧವೆಯರನ್ನು ಕುರಿತು ಸ್ತ್ರೀವಾದಿ ಅಧ್ಯಯನದ ನೆಲೆಗಳು ಇನ್ನಷ್ಟು ವಿಸ್ತೃತಗೊಳ್ಳುವ ಅವಶ್ಯಕತೆ ಇದೆ.

**೧೩. ಸತಿ ಸಹಗಮನ**

ಗಂಡನಾದವನು ಯಾವುದೇ ಕಾರಣಗಳಿಂದ ಮೃತನಾದರೂ ಹೆಂಡತಿ ಅವನ ಜೊತೆ ಮರಣವನ್ನು ಹೊಂದಲು ಅಗ್ನಿ ಪ್ರವೇಶ ಮಾಡುತ್ತಿದ್ದಳು. ಇಂಥ ಸತಿ 'ಮಹಾಸತಿ' ಎಂದು ಹೆಸರು ಪಡೆಯುತ್ತಿದ್ದಳು. ಮುಂದೆ ಮಹಾಸತಿಯು ಬದಲಾಗಿ 'ಮಾಸ್ತಿ' ಎಂಬ ತದ್ಭವ ಶಬ್ದ ಆಗಿದೆ. ಪುರುಷ ಪ್ರಧಾನ್ಯತೆಯ ಶೋಷಣೆಗಳಲ್ಲಿ ಅತಿ ಅಮಾನವೀಯ ಕ್ರೂರ ಪದ್ಧತಿ ಇದಾಗಿದ್ದು, ಆರಂಭದಲ್ಲಿ ಬ್ರಾಹ್ಮಣ ವರ್ಗದಲ್ಲಿ ಜಾರಿಯಲ್ಲಿತ್ತು. ನಂತರದ ದಿನಗಳಲ್ಲಿ ಕ್ಷತ್ರಿಯರು ಈ ಪದ್ಧತಿಯನ್ನು ಆಚರಿಸುತ್ತಿದ್ದರು. ಸತಿ ಹೋದವರ ನೆನಪಿಗಾಗಿ ಕಲ್ಲುಗಳನ್ನು ನಡೆಸಲಾಗುತ್ತಿತ್ತು. ಕೆಲವೆಡೆ 'ಮಾಸ್ತಿಕಲ್ಲು' ಮತ್ತು 'ವೀರಗಲ್ಲು'ಗಳ ಚಿತ್ರಗಳು ಒಂದೇ ಶಿಲೆಯಲ್ಲಿ ಚಿತ್ರಿತವಾಗಿದೆ. ಅನೇಕ ಭಾಗಗಳಲ್ಲಿ ದೊರೆತ ಮಾಸ್ತಿಕಲ್ಲುಗಳಿಂದಾಗಿ ಇಲ್ಲಿಯೂ ಸಹಗಮನ ಆಚರಣೆಯಲ್ಲಿತ್ತು ಎಂದು ಅರಿಯಬಹುದು. ಪತಿ ಸತ್ತ ನಂತರ ಎಲ್ಲಾ ಮಹಿಳೆಯರು ಸತಿ ಹೋಗುತ್ತಿರಲಿಲ್ಲ. ಬದಲಾಗಿ ಆಯಾ ಧರ್ಮಕ್ಕೆ ಅನುಗುಣವಾಗಿ ಆಚರಿಸುತ್ತಿದ್ದರು. ಈ ಪದ್ಧತಿಯ ಕಾರಣಗಳು ಹಲವು. ಅವುಗಳೆಂದರೆ -

೧. ಹೆಣ್ಣು ಪುರುಷನ ಸ್ವತ್ತು ಎಂದು ತೋರಿಸಲು
೨. ವಿಧವೆಯರಿಗೆ ಮರು ವಿವಾಹವನ್ನು ನಿರಾಕರಿಸಿದ್ದಕ್ಕಾಗಿ
೩. ಮುನ್ನೂರು ಕೋಟಿ ವರುಷಗಳ ಕಾಲ ಪತಿಯೊಂದಿಗೆ ಸ್ವರ್ಗದಲ್ಲಿ ಇರುತ್ತೇವೆ ಎಂಬ ಮೂಢನಂಬಿಕೆ
೪. ವಿಧವೆ ತನ್ನ ಮಾನ-ಪ್ರಾಣ ರಕ್ಷಣೆ ಮಾಡಿಕೊಳ್ಳಲು
೫. ಸತ್ತವನ ಪ್ರಿಯ ವಸ್ತುಗಳಲ್ಲಿ ಹೆಂಡತಿಯು ಒಬ್ಬಳು ಎನ್ನುವುದಕ್ಕೆ
೬. ಪುರೋಹಿತರು ಮತ್ತು ಅರಸು ಪ್ರಭುತ್ವ ವಿಧವೆಯ ಆಸ್ತಿ, ಸಂಪತ್ತು ಪಡೆಯಲು
೭. ವಿಧವೆಯ ಲೈಂಗಿಕ ಬದುಕನ್ನು ನಿಯಂತ್ರಿಸಲು
೮. ವಿಧವೆಯಾದವಳು ಸಮಾಜದಲ್ಲಿ ನಿಂದನೆಗೆ ಗುರಿಯಾಗಿ ಯಾವುದೇ ಶುಭ ಕಾರ್ಯಗಳಲ್ಲಿ ಭಾಗವಹಿಸಲು ಅವಕಾಶವಿರಲಿಲ್ಲ. ಆಕೆಯನ್ನು ಪ್ರಾಣಿಗಳಿಗಿಂತಲೂ ಕೀಳಾಗಿ ಕಾಣಲಾಗುತ್ತಿತ್ತು. ಇಂಥ ಅಮಾನವೀಯ ಬದುಕುಗಿಂತ ಮರಣವೇ ಲೇಸು ಎಂದು ನಿರ್ಧರಿಸಿದ್ದು ಸರ್ವೆ ಸಾಮಾನ್ಯವಾಗಿತ್ತು.

ಹೆಂಡತಿ ಪತಿಗಾಗಿ ಮರಣ ಹೊಂದಲು ಎರಡು ಮಾರ್ಗಗಳಿದ್ದವು. ಅವುಗಳೆಂದರೆ ಮೊದಲನೆಯದು 'ಸತಿ ಸಹಗಮನ' ಪದ್ಧತಿ. ಈ ಪದ್ಧತಿಯಂತೆ ಸತಿಯು ನೇರವಾಗಿ ಪತಿಯ ಶವದೊಡನೆ ಅಗ್ನಿ ಪ್ರವೇಶ ಕೈಗೊಳ್ಳುವುದೇ ಆಗಿತ್ತು. ಎರಡನೆಯದು 'ಅನುಗಮನ' ಪದ್ಧತಿ. ಈ ಪದ್ಧತಿಯಂತೆ ಪತಿಯು ಎಲ್ಲಿಯೋ ದೂರದಲ್ಲಿ ಮೃತನಾದರೆ ಅವನ ಸಾವಿನ ಸುದ್ಧಿ ಕೇಳಿದ ಸತಿಯು ಆತನಿಗೆ ಪ್ರಿಯವಾದ ವಸ್ತುಗಳೊಂದಿಗೆ ಅಗ್ನಿಪ್ರವೇಶ ಮಾಡುವುದು ಅನುಗಮನವಾಗಿತ್ತು. ಸತಿ ಸಹಗಮನ ಕೇವಲ ಭಾರತ-ಕರ್ನಾಟಕಗಳಿಗೆ ಮಾತ್ರ ಸೀಮಿತವಾಗಿರಲಿಲ್ಲ. ಬದಲಾಗಿ ಜಗತ್ತಿನ ಇತರೆ ಜನಾಂಗಗಳಲ್ಲಿಯೂ ಆಚರಣೆಯಲ್ಲಿತ್ತೆಂಬುದನ್ನು ಅಲ್ಟೇಕರರ ಮಾತುಗಳಲ್ಲಿ ಅರಿಯಬಹುದು. "ಸತಿ ಸಹಗಮನ ಇಂಡೋ ಯುರೋಪಿಯನ್ನರಲ್ಲಿಯೂ, ನಾರ್ವೆ ಚೀನಾಗಳಲ್ಲಿಯೂ ಆಚರಣೆಯಲ್ಲಿತ್ತು. "In China it a widow killed herself in order to follow her husband to heaven her cropse was taken out in a great procession" ಎಂದು ಹೇಳಲಾಗಿದೆ.[೨೧]

ಈ ಸತಿ ಸಹಗಮನ ಪದ್ಧತಿ ನಮ್ಮ ನಾಡಿನಲ್ಲಿ ಕ್ರಿ.ಶ. ನಾಲ್ಕನೆಯ ಶತಮಾನದಿಂದ ಹೆಚ್ಚು ಪ್ರಚಾರದಲ್ಲಿ ಬಂದಿತು. ಹೆಂಡತಿ ಗಂಡನ 'ಸಹಭಾಗಿನಿ' ಆಗಿದ್ದರಿಂದ ಆಕೆ ಗಂಡನ ಶವದ ಜೊತೆ ಮೃತಳಾಗಬೇಕು ಎನ್ನುವ ರೂಢಿಯಿತ್ತು. "ಸತಿ ಮೃತಳಾಗಿ ಪತಿಯಲ್ಲಿ ಅನುರಕ್ತಳಾಗಲು ಸತಿ ಸಹಗಮನ ಮಾಡಬೇಕಾಗಿತ್ತು" ಎಂದು ತಿಳಿದುಬರುತ್ತದೆ. ಬಹುಪತ್ನಿತ್ವ ಪದ್ಧತಿ ಜಾರಿಯಲ್ಲಿ ಇರುವುದರಿಂದ ಹಿರಿಯ ಹೆಂಡತಿ ಮಾತ್ರ ಪತಿಯೊಡನೆ ನೇರವಾಗಿ ಅಗ್ನಿ ಪ್ರವೇಶಿಸಲು ಅವಕಾಶ ಇತ್ತು. ಉಳಿದವರು ಬೇರೆ ಅಗ್ನಿ ಕುಂಡದೊಂದಿಗೆ ಸಹಗಮನ ಮಾಡುತ್ತಿದ್ದರು. ಗರ್ಭಿಣಿಯರಿಗೆ ಚಿಕ್ಕ ಮಕ್ಕಳಿರುವ ತಾಯಂದಿರಿಗೆ ಈ ಪದ್ಧತಿಯಲ್ಲಿ ರಿಯಾಯಿತಿ ಇತ್ತು.

ಕದಂಬರ ರವಿವರ್ಮನ ರಾಣಿಯ ಸಹಗಮನವೇ ಮೊದಲನೆಯದು. ಇದಾದ ಮೇಲೆ "ಕ್ರಿ.ಶ. ೯೦೮ರಲ್ಲಿ ಮತ್ತೆ ಸಹಗಮನದ ಉಲ್ಲೇಖ ದೊರೆಯುತ್ತದೆ. ಬಳಕ್ಕ ಎಂಬಾಕೆಯ ಗಂಡ ಹೆಗ್ಗಡೆ ತೊಮ್ಮನೆಂಬುವ ಯುದ್ಧದಲ್ಲಿ ಮೃತನಾಗುತ್ತಾನೆ. ಆಗ ಬಳಕ್ಕ ಸಹಗಮನ ಮಾಡಿದ್ದಳು"[೨೨] ಎಂದು ತಿಳಿಯುತ್ತದೆ. 'ಅಜಿತನಾಥ ಪುರಾಣ', 'ಪಂಪಭಾರತ'ದಂತಹ ಕೃತಿಗಳು ಸಹ ಸಹಗಮನದ ಬಗ್ಗೆ ವಿವರಗಳನ್ನು ನೀಡಿವೆ. ಪಂಪಭಾರತವು "ಯುದ್ಧದ ಶಿಬಿರದಲ್ಲಿನ ಸೈನಿಕನೊಬ್ಬ ತಾನು ನಾಳೆ ದೇವಲೋಕದ ಕನ್ಯೆಯರೊಡನೆ ಇರುವೆ ಎಂದು ಹೆಂಡತಿಗೆ ಹೇಳಿದರೆ ಆಕೆ ನಾನು ದೇವಲೋಕಕ್ಕೆ ನಿನಗಿಂತ ಮೊದಲೆ ಹೋಗಿ ನಿನ್ನನ್ನು ಕಾಯುತ್ತೇನೆ ಎಂದು ಹೇಳಿದ್ದಳು." ಇಂಥ ಉಲ್ಲೇಖಗಳನ್ನು ಗಮನಿಸಿದಾಗ ಮುಗ್ಧ ಜನರಿಗೆ ಸ್ವರ್ಗದ ಮತ್ತು ದೇವಲೋಕದ ಕನ್ಯೆಯರ ಸಂಬಂಧದ ಆಮಿಷದಿಂದ ಸಹಗಮನ ಮಾಡಲು ಪ್ರೇರಣೆಗಳಿವೆ. ಹೆಂಡತಿಯರು ತಮ್ಮ ಪತಿ ದೇವಲೋಕದ ಅನ್ಯ ಕನ್ಯೆಯರೊಡನೆ ಕೂಡದೆ ತನ್ನ ಜೊತೆಯಲ್ಲಿಯೇ ಇರಬೇಕೆಂಬ ಆಮಿಷಗಳು ಸಹಗಮನಕ್ಕೆ ಪ್ರೇರಣೆ ನೀಡುತ್ತಿದ್ದುದು ತಿಳಿದುಬರುತ್ತದೆ. ಅಜಿತಪುರಾಣವು ಗುಂಡಮಬ್ಬೆಯ ಸಹಗಮನವನ್ನು ಉಲ್ಲೇಖಿಸಿದೆ. ೯೭೨ರ ಶಾಸನವು "ಜಕ್ಕರ್ಬೆ ತನ್ನ ಗಂಡನಾದ ಬಿದಿಯಣ್ಣ ಸಾಯಲು ಅವನೊಡನೆ ಸಹಗಮನ ಮಾಡಿದರೆ ಜಾಚೆ ಎಂಬಾಕೆ ಜಕ್ಕರ್ಬೆಯ ಸಹೋದರಿ ಜಾಚೆ ಅಕ್ಕನ ನೆನಪಿಗಾಗಿ ಮಾಸ್ತಿಕಲ್ಲನ್ನು ನಿಲ್ಲಿಸಿದ್ದಳು"[೨೩] ಎಂದು ವಿವರಿಸುತ್ತದೆ.

ಪಂಚ ನಮಸ್ಕಾರ ಪದ್ಧತಿಯಿಂದ ಸತಿ ಹೋದ ಬಗ್ಗೆ ಉಲ್ಲೇಖಗಳು ದೊರತಿವೆ.[೬೪] ಹಾಗೂ ನಾಗಮ್ಮ ಬೋಗಾರ ಕರಡಿಸೆಟ್ಟಿಯ ಮೆದವಳಿಯು ಸಹಗಮನ ಮಾಡಿದ್ದನ್ನು ೧೦೫೧ರ ಶಾಸನ ಉಲ್ಲೇಖಿಸಿದೆ.[೬೫]

'ಅನುಗಮನ ಪದ್ಧತಿ'ಯ ಮೂಲಕ ಸಹಗಮನ ಮಾಡಿದ ದೇಕಬ್ಬೆ ಕುರಿತು ಬೆಳತೂರಿನ ಶಾಸನ ಮಾಹಿತಿ ನೀಡಿದೆ. ದೇಕಬ್ಬೆಯ ತಂದೆ-ತಾಯಂದಿರು ಅನುಗಮನ ಮಾಡಲು ಅಡ್ಡಿ ಮಾಡಿದರು. ಆದರೂ ಆಕೆ ತನ್ನ ಸಂಪತ್ತನ್ನೆಲ್ಲಾ ದೇವರಿಗೆ ದಾನ ಮಾಡಿ ಅನುಗಮನ ಕೈಗೊಂಡಳು[೬೬] ಎಂದು ಉಲ್ಲೇಖಿಸಿದೆ. ಕ್ಷತ್ರಿಯರಷ್ಟೇ ಅಲ್ಲದೆ ಶೂದ್ರ ಜಾತಿಯ ದೇಕಬ್ಬೆ ಅನುಗಮನ ಮಾಡಿದ್ದು ಸಹ ಮೊದಲನೆಯ ಉಲ್ಲೇಖವೇ ಆಗಿದೆ. ಸತಿ ಹೋದವರ ನೆನಪಿಗಾಗಿ ಶಿಲೆ ನಿಲ್ಲಿಸುವ ರೂಢಿಯಿತ್ತು. ಆದ್ದರಿಂದ ನಾಡಿನ ಅನೇಕ ಭಾಗಗಳಲ್ಲಿ ಮಹಾಸತಿ ಕಲ್ಲುಗಳು ದೊರೆತಿವೆ. ಇಂಥ ಸತಿಯರ ಹೆಸರಿನಲ್ಲಿ ದೇವಾಲಯಗಳು ನಿರ್ಮಾಣವಾಗಿರುವುದುಂಟು.[೬೭] ಈ ಕುರಿತಂತೆ ಕರ್ನಾಟಕದ ಚರಿತ್ರೆಯಲ್ಲಿ ಸ್ತ್ರೀವಾದಿ ಅಧ್ಯಯನಕ್ಕೆ ವಿಪುಲ ಅವಕಾಶಗಳು ಇವೆ.

### ೧೪. ವೇಲವಾಳಿ

ಒಡೆಯನಿಗಾಗಿ ಸೇವಕ-ಸೇವಕಿಯರು ಮರಣ ಹೊಂದುವುದಕ್ಕೆ 'ವೇಲವಾಳಿ' ಎನ್ನುವರು. ಈ ಪದ್ಧತಿಯ ಮುಖೇನ ಮರಣ ಹೊಂದಿದವರನ್ನು ಕುರಿತ ಮುಳ್ಳೂರು ಶಾಸನ ಮಾಹಿತಿಯನ್ನು ನೀಡುತ್ತದೆ. ಸ್ತ್ರೀವಾದಿ ನೆಲೆಯಿಂದ ಇಂಥ ಪದ್ಧತಿಯ ಅಧ್ಯಯನ ಕೈಗೊಳ್ಳಲು ಅವಕಾಶಗಳು ಇವೆ.

### ೧೫. ಸೂಳೆ

ಎಲ್ಲಾ ಸಮಾಜಗಳಲ್ಲಿಯೂ ದೇವರು, ಧರ್ಮದ ಬಗ್ಗೆ ನಂಬಿಕೆ, ಭಯ, ಭಕ್ತಿ ಆಚರಣೆಗಳಿವೆ. ಇಂಥ ಆಚರಣೆಗಳು ಪದ್ಧತಿಗಳು ಅಸಂಖ್ಯ. ಧರ್ಮ ಜನರನ್ನು ಒಂದುಗೂಡಿಸಿದಂತೆ ವಿಭಜಿಸಲು ಸಾಧ್ಯ ಇದೆ. ಒಳ್ಳೆಯ ಆಚರಣೆಗಳಂತೆ ಕೆಟ್ಟ ಆಚರಣೆಗಳು ಇವೆ. ಪುರುಷ ಸ್ತ್ರೀಯನ್ನು ಹತೋಟಿಯಲ್ಲಿಡಲು ಹಾಗೂ ಆಕೆಯನ್ನು ಸಮಾಜದಿಂದ ಪ್ರತ್ಯೇಕಿಸಲು ಧರ್ಮವನ್ನು ಉಪಯೋಗಿಸಿದ್ದಾನೆ. ಅದರ ಪರಿಣಾಮವೆ 'ದೇವದಾಸಿ ಪದ್ಧತಿ'. 'ವಿವಾಹ' ಎಂಬ ಸಂಸ್ಥೆ ರೀತಿಯಲ್ಲಿಯೇ ದೇವದಾಸಿ ಪದ್ಧತಿ ಬೆಳೆದುಬಂದಿತ್ತು. ಇದು ವೇದಗಳ ಕಾಲದಿಂದಲೂ ಜಾರಿಯಲ್ಲಿ ಇತ್ತು. "ಋಗ್ವೇದದಲ್ಲಿ 'ಜಾರ', 'ನಟಿ' ಎಂಬ ಸಾಧಾರಣ ಪದಗಳು, ಸ್ಕಂದ ಪುರಾಣದಲ್ಲಿ ಅಪ್ಸರೆಯರ ವಂಶಜರು[೬೮] ಎಂತಲೂ", ಮತ್ಸ್ಯ ಪುರಾಣವು "ದೇವತೆಗಳ ಹೆಂಡಂದಿರು ದಾನವರ ಬಲತ್ಕಾರಕ್ಕೆ ಒಳಗಾಗಿ ಅರಮನೆ ಹಾಗೂ ದೇವಾಲಯಗಳಲ್ಲಿ ವೇಶ್ಯೆಯರಾದರು" ಎಂದಿದೆ.[೬೯]

ಕುತೂಹಲಕರ ಸಂಗತಿ ಅಂದರೆ ದೇವದಾಸಿ, ವೇಶ್ಯೆ, ಸೂಳೆ, ಬಸವಿ, ಪಾತರದವಳು, ಹಾಡುವವಳು ಎಂಬ ಅನೇಕ ಹೆಸರುಗಳು ಒಂದೇ ಅರ್ಥದಲ್ಲಿ ಬಳಕೆ ಆಗಿರುವುದು. ಈ ಪದ್ಧತಿಗೆ ಒಳಗಾಗಿರುವವರೆಲ್ಲ ಕೆಳವರ್ಗದ ಹೆಣ್ಣುಮಕ್ಕಳು ಎಂಬುದು ಗಮನಾರ್ಹ. ಇವರು ರಾಜ, ಪಾಳೆಯಗಾರ, ಜಮೀನುದಾರರ ಅನುಗ್ರಹದಲ್ಲಿ ಪೋಷಿತರಾಗಿದ್ದರು. ಪ್ರಾಚೀನ ಕಾಲದಲ್ಲಿ ಪುರುಷನೊಬ್ಬ ಹೊಂದಿರಬಹುದಾದ ವೇಶ್ಯೆಯರ ಸಂಖ್ಯೆಗೆ ಅನುಗುಣವಾಗಿ ಅವನ ಪ್ರತಿಷ್ಠೆಗಳು ನಿಂತಿದ್ದವು. ಅಂತೆಯೇ ಶಾಸನಗಳಲ್ಲಿ "ಪುರುಷರು ತಮ್ಮನ್ನು

ವೇಶ್ಯಾಭುಜಂಗ,[೪೦] ವಿಟಚಕ್ರವರ್ತಿಗಳೆಂದು[೪೧] ಕರೆದುಕೊಂಡಿದ್ದಾರೆ. ಈ ಪದ್ಧತಿಯ ಅಸ್ತಿತ್ವಕ್ಕೆ ಕಾರಣಗಳು ಹಲವು. ಅವುಗಳಲ್ಲಿ ಬಡತನ, ಗಂಡನ ಮನೆಯ ಶೋಷಣೆ, ಏಕಪುತ್ರಿ ಸಮಸ್ಯೆ, ದೇವರ ಹರಕೆ, ಪ್ರಭುತ್ವದ ದಬ್ಬಾಳಿಕೆ, ಬಲತ್ಕಾರ ಮೊದಲಾದವು ಪ್ರಧಾನ. ಈ ಪದ್ಧತಿಗೆ ನಡೆದುಕೊಂಡವಳು ತಂದೆಯ ಮನೆಯಲ್ಲಿ ಮಗನಂತೆ ಜೀವಿಸಿ ಅದೇ ವಂಶದ ಹೆಸರಿನಿಂದ ತನ್ನ ಮಕ್ಕಳನ್ನು ಗುರುತಿಸಿಕೊಳ್ಳುತ್ತಿದ್ದಳು. ಅಲ್ಲದೆ ಮನೆಯಲ್ಲಿನ ಸಹೋದರರಿಗೆ ಈಕೆ ಸಮಾನಳಾಗಿ, ತಂದೆಯ ಆಸ್ತಿಯಲ್ಲಿ ಭಾಗ ಪಡೆಯುತ್ತಿದ್ದಳು. ಈಕೆಗೆ ಸಮಾಜದಲ್ಲಿ ಗೌರವದ ಸ್ಥಾನಗಳಿದ್ದವು. 'ನಿತ್ಯ ಸುಮಂಗಳೆ' ಎಂಬ ವಿಶೇಷ ಗೌರವದ ಜೊತೆಗೆ ಮದುವೆ ಸಮಾರಂಭದಲ್ಲಿ ತಾಳಿಯ ಕರಿಮಣಿಗಳನ್ನು ಪೋಣಿಸುವ ಮನ್ನಣೆ ನೀಡಲಾಗಿತ್ತು.

ಈ ಸೂಳೆಯರನ್ನು ಅಧ್ಯಯನದ ಅನುಕೂಲಕ್ಕಾಗಿ ಮೂರು ಭಾಗಗಳಲ್ಲಿ ವಿಂಗಡಿಸಬಹುದು. ಅವುಗಳೆಂದರೆ -

ಅ. ಆಸ್ಥಾನಿಕ ಸೂಳೆಯರು

ಆ. ದೇವಾಲಯದ ಸೂಳೆಯರು

ಇ. ಸಮಾಜ ಸೂಳೆಯರು

**ಅ. ಆಸ್ಥಾನಿಕ ಸೂಳೆಯರು**

ಈ ವರ್ಗದ ಸೂಳೆಯರು ಅರಸ ಮತ್ತು ಆಸ್ಥಾನಿಕರಿಗೆ ಮಾತ್ರ ಮೀಸಲು. ಇವರು ಅರಸನಿಗೆ ಬಹಳ ಆಪ್ತರಾಗಿದ್ದರು. ಎಲ್ಲ ಅರಮನೆಗಳಲ್ಲೂ ಇವರು ಇರುತ್ತಿದ್ದರು. ಅರಸನಿಗೆ ರಾಜಕೀಯ ಸಮಸ್ಯೆಗಳ ಅಥವಾ ಇನ್ನಾವುದೇ ಬಗೆಯ ಸಮಸ್ಯೆಗಳಲ್ಲಿ ಭಾಗಿಗಳಾಗುತ್ತಿದ್ದರು. ಸೂಳೆಯರಿಲ್ಲದೆ ಅಂದಿನ ಅರಸ, ಅರಮನೆ, ಆಸ್ಥಾನಿಕರು ಇರಲಿಲ್ಲ ಎನ್ನಬಹುದು. ಇದರ ಸಮರ್ಥನೆಗಾಗಿ ಈ ಕೆಳಗಿನ ಸಾಲುಗಳನ್ನು ಗಮನಿಸಬಹುದು.

> "They were considered the glory of the country and every prominet city had a courtesan consecrated in to office by a formal ceremany"[೪೨]

ಆಸ್ಥಾನಿಕ ಸೂಳೆಯರನ್ನು ಕುರಿತಂತೆ ಉಲ್ಲೇಖಗಳು ಮೊಟ್ಟ ಮೊದಲಿಗೆ ಕಂಡುಬರುವುದು ಚಾಲುಕ್ಯರ ವಂಶಜರಲ್ಲಿ. ವಿಜಯಮಹಾದೇವಿ ಎಂಬಾಕೆಯೊಂದಿಗೆ ಚಾಲುಕ್ಯ ಚಂದ್ರಾದಿತ್ಯನ ಸಂಬಂಧಗಳಿದ್ದುದು ಕಂಡುಬರುತ್ತದೆ. ಅನಂತರ ಆಕೆಯನ್ನು ಅವನು ವಿವಾಹವಾದ. ಶಾಸನಗಳು ಈಕೆಯನ್ನು ಕುರಿತು -

> "ಚಂದ್ರಾದಿತ್ಯ ಪ್ರಿಥಿವೀವಲ್ಲಭ ಮಹಾರಾಜಾಧಿ ರಾಜಸ್ಥಸ್ಯ
> ಪ್ರಿಯಮಹಿಷಿ ಕಲಿಕಾಲ ಪ್ರತಿ ಪಕ್ಷಭೂತಾ ಶ್ರೀ ವಿಜಯ
> ಮಹಾದೇವಿ ಬೊಡ್ಡಿ ಪೊಡ್ಡಿ ಸರ್ವಾನಾಜ್ಞಾಪಯತಿ"[೪೩]

- ಎಂದು ಕರೆದಿವೆ. ಇಲ್ಲಿ ಬೊಡ್ಡಿ, ಪೊಡ್ಡಿ ಪದಗಳು ಸೂಳೆಯರಿಗೆ ಮಾತ್ರ ಇದ್ದದ್ದು. ಪ್ರಿಯ ಮಹಿಷಿ ಎನ್ನುವುದಿಲ್ಲಿ ಚಂದ್ರಾದಿತ್ಯನು ವಿವಾಹವಾಗಿ ಮಹಿಷಿಯನ್ನಾಗಿಸಿಕೊಂಡ ಎಂಬುದರ ಅರ್ಥಗ್ರಹಿಕೆ. ವಿವಾಹಪೂರ್ವ ವಿಜಯಾದಿತ್ಯ ಸತ್ಯಾಶ್ರಯನ ಸ್ವಾಗವಲ್ಲಭೆ ಆಗಿದ್ದಳು. ಈ ಕುರಿತಂತೆ ಮಹಾಕೂಟ ಶಾಸನವು

"ವಿಜಯಾಧಿತ್ಯ ಸತ್ಯಾಶ್ರಯ ಶ್ರೀ ಪ್ರಿಥಿವೀವಲ್ಲಭ ಮಹಾರಾಜಾಧಿರಾಜ ಪರಮೇಶ್ವರ ಭಟಾರರಾ ಪ್ರಾಣವಲ್ಲಬೆ ವಿನಾಪೊಟೆಗಳೆ ನ್ಬೊರ್ ಸೂಳೆಯರ್"[೪೪] ಎಂದು ತಿಳಿಸುತ್ತದೆ. ಸೂಳೆಯರ ಸೂಳೆತನ ವಂಶಪಾರಂಪರ್ಯವಾಗಿ ನಡೆದು ಬರುತ್ತಿತ್ತು. ಇದಕ್ಕೆ ಸಮರ್ಥನೀಯವಾಗಿ "ಮಯ್ದು ಮರಸರ ಸೂಳೆ ಕಾಡಬ್ಬೆ. ಕಾಡಬ್ಬೆಯ ಮಗಳು ಕಾಡಬ್ಬೆ. ಈಕೆಯ ಮಗಳು ಅಯ್ದಬ್ಬೆ. ಅಯ್ದಬ್ಬೆಯ ಮಗಳು ಕಳಿಂಗಬ್ಬೆ" ಎಂಬ ವಂಶಾವಳಿಯ ಉಲ್ಲೇಖಗಳನ್ನು[೪೫] ನೋಡಬಹುದು.

ಜೋಗಬ್ಬೆ, ಬೀರಕ್ಕ, ಬಿಯ್ಯಳ ಎಂಬುವವರು ಆಸ್ಥಾನಿಕ ಸೂಳೆಯರಾಗಿದ್ದರು. ಈ ಆಸ್ಥಾನಿಕ ಸೂಳೆಯರು ಅರಸನಿಗೆ ರಾಜಕೀಯ, ಧಾರ್ಮಿಕ ಹಾಗೂ ಇನ್ನಿತರೆ ಕ್ಷೇತ್ರಗಳಲ್ಲಿಯೂ ಸಹಾಯಕರಾಗಿದ್ದು, ಅರಸನಿಂದ ಊರಿನ ಪ್ರಮುಖರಿಂದ ಕಾಣಿಕೆಗಳನ್ನು ಪಡೆಯುತ್ತಿದ್ದರು. ಅಲ್ಲದೆ ಸ್ವತಃ ಇವರುಗಳೇ ದಾನ-ದತ್ತಿ, ದೇವಾಲಯ ಇತ್ಯಾದಿ ಕಾರ್ಯಗಳಿಗೆ ತಮ್ಮ ಗಳಿಕೆಯ ಕಾಣಿಕೆಯ ಆದಾಯವನ್ನು ಖರ್ಚು ಮಾಡುತ್ತಿದ್ದುದು ಉಂಟು. ವಾತ್ಸ್ಯಾಯನನ 'ಕಾಮಸೂತ್ರ', ಆಸ್ಥಾನಿಕ ಸೂಳೆಯರ ಜೀವನ ಶೈಲಿಗಳ ಬಗ್ಗೆ ವಿಪುಲ ಮಾಹಿತಿಗಳನ್ನು ನೀಡುತ್ತದೆ. ಪ್ರಾಚೀನ ಕಾಲದಲ್ಲಿ ಮನೆಗಳು ಎರಡು ಭಾಗಗಳಿಂದ ಕೂಡಿರುತ್ತಿದ್ದವೆಂದು, ಒಂದು ಭಾಗ ಹೆಂಡತಿ ಮಕ್ಕಳಿಗೆ ಇದ್ದರೆ, ಇನ್ನೊಂದು ಭಾಗ ಮನೆಯ ಯಜಮಾನನ ಸ್ನೇಹಿತರು, ಆಪ್ತರು, ಊರಿನ ಗಣ್ಯ ಸೂಳೆ ಮೊದಲಾದವರಿಗೆ ಇರುತ್ತಿತ್ತು. ಈ ಸೂಳೆಯರು ತಮಗೆ ಬೇಕಾದವರೊಂದಿಗೆ ಸಂಪರ್ಕ ಬೆಳೆಸಿ ಸಂಗೀತ, ನೃತ್ಯ ಮೊದಲಾದ ಕಾರ್ಯಕ್ರಮಗಳಲ್ಲಿ ಪಾಲ್ಗೊಳ್ಳಬಹುದಾಗಿತ್ತು. ಹೊಸದಾಗಿ ಸೂಳೆಯರ ಗೃಹಕ್ಕೆ ಸೇರಿದವರು ನೃತ್ಯ, ಸಂಗೀತಗಳನ್ನು ಪ್ರದರ್ಶಿಸುತ್ತಿದ್ದರು. ಅಲ್ಲದೆ ಸುಖವಿಹಾರಕ್ಕೆಂದು ನದಿಯ ದಂಡೆಗೆ, ಹೂದೋಟಗಳಿಗೆ ಹೋಗುತ್ತಿದ್ದರು. ಈ ಆಸ್ಥಾನ ಸೂಳೆಯರು ರಾಜನನ್ನು, ಶ್ರೀಮಂತರನ್ನು, ಊರಿನ ಗಣ್ಯರನ್ನು ಆಕರ್ಷಣೆಗೆ ಒಳಪಡಿಸಿಕೊಳ್ಳುವ ಅರವತ್ತುನಾಲ್ಕು ಕಲೆಗಳನ್ನು ಅರಿತವರಾಗಿದ್ದರು.

ಆಸ್ಥಾನಿಕ ಸೂಳೆಯರ ಕುರಿತು 'ವಡ್ಡಾರಾಧನೆ' ಹಾಗೂ 'ಅನಂತನಾಥ ಪುರಾಣ' ಮೊದಲಾದವು ಮಾಹಿತಿಗಳನ್ನು ನೀಡುತ್ತವೆ. "ಪೆಂಡವಾಸದ ಸೂಳೆಯರಿರ್ಬರ ಪೆರಗೆರಿರ್ಕ್ಕೆಲದೊಳಂ ಚಾಮರಂಗಳನ್ ಇಕ್ಕುತಂ ಬರೆ" ಎಂಬ[೪೬] ಉಲ್ಲೇಖ 'ವಿದ್ಯುಚೋರನ ಕತೆ'ಯಲ್ಲಿಯೂ ಇದೆ. "ರಾಣಿವಾಸ, ಪೆಂಡಾವಾಸ್ ಪದಗಳು"[೪೭] ಆಸ್ಥಾನಿಕ ಸೂಳೆಯರನ್ನು ಕುರಿತಂತೆ ಮಾಹಿತಿಗಳನ್ನು ನೀಡುವಂಥವು. ಈ ಸೂಳೆಯರಲ್ಲಿ ಕೆಲವರು ವಿವಾಹವಾಗಿದ್ದರು. ಉದಾಹರಣೆಗೆ ವಿಜಯಮಹಾದೇವಿ ಚಂದ್ರಾದಿತ್ಯನನ್ನು, ಚಾವುಣ್ಣಬ್ಬೆ ಸಿಗೆನಡ ಪೆರ್ಮಾಡಿಗಾವುಣ್ಣನನ್ನು ವಿವಾಹವಾಗಿದ್ದರು. ಇಂಥ ಸಂದರ್ಭಗಳು ವಿರಳವಾಗಿದ್ದವು.

### ಆ. ದೇವಾಲಯದ ಸೂಳೆ

ದೇವರು ಮತ್ತು ದೇವಾಲಯದ ಕಾರ್ಯಕ್ಕಾಗಿ ದಾಸಿಯರನ್ನು ನೀಡಲಾಗುತ್ತಿತ್ತು. ದಾಸಿಯರನ್ನು ದೇವರಿಗೆ, ದೇವಾಲಯಕ್ಕೆ ನೀಡಿದರೆ ಸ್ವರ್ಗ ಲಭಿಸುವುದು ಎಂಬ ಭಾವನೆಯು ಇತ್ತು. ಇಂಥ ದಾಸಿಯರಿಗೆ 'ದೇವದಾಸಿ' ಎನ್ನಲಾಗುತ್ತಿತ್ತು. ಪ್ರಾಚೀನ ಕಾಲದಲ್ಲಿ ಏಳು ಬಗೆಯ ದಾಸಿಯರು ಇರುತ್ತಿದ್ದರು ಎಂದು Edger ತಮ್ಮ ಗ್ರಂಥದಲ್ಲಿ ತಿಳಿಸಿದ್ದಾರೆ. ಅವರುಗಳೆಂದರೆ ತಮ್ಮನ್ನು ತಾವು ದೇವಸ್ಥಾನಕ್ಕೆ ಅರ್ಪಿಸಿಕೊಳ್ಳುವವರು,

ವಿಕೃತ ಉದ್ದೇಶಗಳಿಗಾಗಿ ತನ್ನನ್ನು ತಾನು ಮಾರಿಕೊಳ್ಳುವವಳು. ಹರಕೆ ಮತ್ತು ಮೂಢನಂಬಿಕೆಗಳಿಂದಾಗಿ ಕುಟುಂಬಕ್ಕೆ ಹಿತವನ್ನು ಹಂಬಲಿಸುವವರು, ದೇವಾಲಯಕ್ಕೆ ಸೇವಕಿಯಾಗಿ ಬರುತ್ತಿದ್ದಳು. ದೇವರ ಮೇಲಿನ ಅತಿಯಾದ ಭಕ್ತಿಯಿಂದಲೂ ದೇವಾಲಯಕ್ಕೆ ದಾಸಿಯರು ಬರುತ್ತಿದ್ದರು. ಕೆಲವರು ಹಣ, ಕೀರ್ತಿಯನ್ನು ಮತ್ತು ಹೆಸರನ್ನು ಪಡೆಯುವ ಆಸೆಯಿಂದಲೂ, ಸುಂದರವಾಗಿ, ಆಕರ್ಷಕವಾಗಿಯೂ ಅಲಂಕಾರದಲ್ಲಿ ನಿಪುಣೆಯುಳ್ಳ ಮಹಿಳೆಯರನ್ನು ಅರಸನೇ ದಾನವಾಗಿ ದೇವಾಲಯಕ್ಕೆ ನೀಡುತ್ತಿದ್ದ. ದೇವಾಲಯದ ಸಂಗೀತ-ನೃತ್ಯ ಸೇವೆಗಳಿಗಾಗಿಯೂ ದಾಸಿಯರು ಬರುತ್ತಿದ್ದರು ಎಂದು ಕಂಡುಬರುತ್ತದೆ. ಆರಂಭದಲ್ಲಿ ದೇವರಿಗೆ ಎಂದು ನೇಮಕವಾದ ಈ ದಾಸಿಯರು ದೇವರ ಪ್ರತಿನಿಧಿಯಾದ ಪುರೋಹಿತನ ಸೇವೆಯನ್ನೂ ಮಾಡಬೇಕಾಗಿತ್ತು. ದೇವರು ಪುರುಷನಾಗಿರುವುದರಿಂದ ಪುರುಷನ ಎಲ್ಲ ಬಗೆಯ ಆಸೆ-ಬಯಕೆಗಳ ತೃಪ್ತಿಗಾಗಿ ಎಂದು ಪುರೋಹಿತನಿಗೆ ಸೇವೆ ಮಾಡಬೇಕಾಗಿತ್ತು. ಪುರೋಹಿತನು ರಾಜಕೀಯ ನೆಲೆಯಲ್ಲಿ ಭದ್ರವಾಗಿ ನಿಂತು ಧಾರ್ಮಿಕ ನಂಬಿಕೆಗಳಿಂದ ಹೆಣ್ಣನ್ನು ವಶಪಡಿಸಿಕೊಂಡ. ದೇವರಿಗೆ ಸೇವೆ ಮಾಡಬೇಕಾದ ಹೆಣ್ಣು ಪುರೋಹಿತನಿಗೆ, ಆತನ ಆಪ್ತರಿಗೂ ಸೇವೆ ಮಾಡಬೇಕಾಯಿತಲ್ಲದೆ ಭೋಗದ ವಸ್ತುವಾಗಿಯೂ ಕಾರ್ಯನಿರ್ವಹಿಸಬೇಕಾಯಿತು. ಹೀಗೆ ಹೆಣ್ಣನ್ನು ಲೈಂಗಿಕವಾಗಿ ಶೋಷಣೆ ಮಾಡಲು ಆರಂಭಿಸಿತು. ದೇವರನ್ನು ಸದಾ ಜಾಗ್ರತೆಯಿಂದ ಇರುವಂತೆ ಮಾಡಲು ದಾಸಿಯರು ನರ್ತನ ಮಾಡಬೇಕು ಎಂದು ಹೇಳಿ ಆಕೆಯಿಂದ ನರ್ತನವನ್ನು ಮಾಡಿಸಲು ಮುಂದಾದರು. ಈಕೆ ದೇವರ, ದೇವಾಲಯದ ಸೇವೆಗಳಿಗೆ ಮಾತ್ರ ಮೀಸಲಾಗಿದ್ದವಳು. ದೇವರ ಪ್ರತಿರೂಪದ ವಸ್ತುಗಳನ್ನು ಮಾತ್ರ ವಿವಾಹ ಮಾಡಿಕೊಳ್ಳುತ್ತಿದ್ದಳು. ದೇವಾಲಯದ ಯಜ್ಞ, ಪೂಜೆ, ಉತ್ಸವಗಳಲ್ಲಿ ಭಾಗಿಯಾಗುವುದು ಇವಳ ದಿನಚರಿ. ಎಲ್ಲಾ ಭಾಗಗಳಲ್ಲಿಯೂ ಈ ಪದ್ಧತಿ ಜಾರಿಯಲ್ಲಿತ್ತು. ಇವರನ್ನು ದಕ್ಷಿಣ ಕನ್ನಡ ಜಿಲ್ಲೆಯಲ್ಲಿ 'ಕೊತಾಡುವ ಬಾಕನೆಂಗೆ' ಎನ್ನುತ್ತಿದ್ದರು. ಈ ದೇವಾಲಯದ ಸೂಳೆಯರ ಬಗ್ಗೆ 'ಮೇಘದೂತ', 'ರಾಜತರಂಗಿಣಿ' ಕಾವ್ಯಗಳು ಮಾಹಿತಿ ನೀಡುತ್ತವೆ. "ಉಜ್ಜಯನಿಯ ಮಹಾಕಾಲ ದೇವಸ್ಥಾನದ ಸಂಜೆಯ ಪೂಜೆಗೆ ದೇವದಾಸಿಯರು ಇದ್ದು, ನೃತ್ಯ ಮಾಡುತ್ತಿದ್ದರು" ಎಂದು ಹಾಗೂ ಕ್ರಿ.ಶ. ಏಳನೆಯ ಶತಮಾನದಲ್ಲಿ ದೇವದಾಸಿ ಪದ್ಧತಿ ವ್ಯಾಪಕವಾಗಿ ಕಾಶ್ಮೀರದಲ್ಲೂ ಇತ್ತೆಂದು ತಿಳಿದುಬರುತ್ತದೆ."

ಚೀನಿ ಯಾತ್ರಿಕರು ಮುಲ್ತಾನದ ಬಳಿ ಸೂರ್ಯ ದೇವಾಲಯದಲ್ಲಿ ಅನೇಕ ನರ್ತಕಿಯರು ಇರುವುದನ್ನು ನೋಡಿದ್ದರು. ಈ ಪದ್ಧತಿ ವಿಶಿಷ್ಟವಾಗಿತ್ತು. ನಂತರದ ದಿನಗಳಲ್ಲಿ ಎಲ್ಲಾ ಪಂಥಗಳ ದೇವಾಲಯಗಳಲ್ಲಿಯೂ ಈ ಪದ್ಧತಿ ರೂಢಿಗೆ ಬಂದಿತು. ದೇವಾಲಯದ ಪ್ರತಿಷ್ಠೆ, ಸಂಪತ್ತುಗಳಿಗೆ ಅನುಗುಣವಾಗಿ ಅಲ್ಲಿಯ ದೇವದಾಸಿಯರ ಸಂಖ್ಯೆ ಇರುತ್ತಿತ್ತು ಎಂಬುದು ಮುಖ್ಯವಾದ ಸಂಗತಿ.

ಕರ್ನಾಟಕದ ಹಲವು ಭಾಗಗಳಲ್ಲಿ ಪವಿತ್ರ ದೇವದಾಸಿಯರ ಒಂದು ದೊಡ್ಡ ಸಮುದಾಯವೇ ಇತ್ತು. ಇವರೆಲ್ಲರೂ ನರ್ತಕಿಯರಾಗಿರಲಿಲ್ಲ. ಮಾದಿಗ, ವೆಚ್ಚ, ಬೇಡ, ಕುರುಬ, ಗೊಲ್ಲ ಜಾತಿಗಳಲ್ಲಿನ ತಂದೆ-ತಾಯಂದಿರು ಗಂಡು ಸಂತಾನ ಇಲ್ಲದ್ದರಿಂದ ಉತ್ತರ ಕ್ರಿಯೆ ಮಾಡಲು, ವೃದ್ಧಾಪ್ಯದಲ್ಲಿ ನೋಡಿಕೊಳ್ಳುವುದಕ್ಕೆ ಮತ್ತು ತಮ್ಮ ವಂಶ ಮುಂದುವರೆಸಿಕೊಂಡು ಹೋಗಲು ತಮ್ಮ ಮನೆತನದ ಕನ್ಯೆಯರನ್ನು ದೇವರಿಗೆ ಅರ್ಪಿಸುವುದು ವಾಡಿಕೆಯಲ್ಲಿತ್ತು. ಇಂಥವರನ್ನು "ಬಸವಿ"ಗಳೆಂದೂ ಕರೆಯುತ್ತಿದ್ದರು. ಕರ್ನಾಟಕದಲ್ಲಿ ದೇವಾಲಯದ ಸೂಳೆಯರ ಬಗ್ಗೆ ಎಂಟನೆಯ ಶತಮಾನದ ಪಟ್ಟದಕಲ್ಲು ಶಿಲಾಶಾಸನವೊಂದು 'ಬಿಜೇಶ್ವರ

ದೇಗುಲದ ಗೋಯಿನ್ನ ಪೊಡ್ಡಿ ಬಾದಿ(ಲಿ) ಪೊಡ್ಡಿಯರೇ ಕರ್ನಾಟಕದ ಮೊದಲ ದೇವಾಲಯದ ಸೂಳೆಯರು'' ಎಂಬ ವಿಚಾರವನ್ನು ಹೊರಗೆಡಹುತ್ತಿದೆ.[೪೯] ಹಾಗೆಯೇ ಪಟ್ಟದಕಲ್ಲು, ಮಂಣೆ, ನ್ಯಾಮತಿ, ಸೂಡಿ, ಲಕ್ಕುಂಡಿ, ಬಾಗಳಿ, ಹಿರೇಮಂಗಳಗೇರಿ, ಮೋರಿಗೆರೆ, ಹೂವಿನಹಡಗಲಿ, ಹಳಗೊಂದಿ, ನಾಲತವಾಡ, ಹುನಗುಂದದ ಅರಸಿಬೀದಿ, ನಂದವಡಗಿ, ಹೊಳೆ ಆನವೇರಿ ಮೊದಲಾದ ಊರುಗಳಲ್ಲಿನ ದೇವಾಲಯಗಳಲ್ಲಿ ಸೂಳೆಯರಿದ್ದರೆಂಬ ಉಲ್ಲೇಖಗಳು ಗಮನಾರ್ಹ. ಇದೇ ತೆರನಾದ ದೇವಾಲಯದ ಸೂಳೆ ``ಕ್ರಿ.ಶ. ೮೦೦ರ ವಿಜಮೇಶ್ವರದ ಸೂಳೆ ಚಲಬ್ಬೆ'' ಎಂಬ ಉಲ್ಲೇಖವನ್ನು ಗಮನಿಸಬಹುದು.[೫೦] ದೇವಾಲಯಗಳಿಗೆ ಕನ್ಯೆಯರನ್ನು ದಾನವಾಗಿ ಕೊಡುವುದರಿಂದ 'ಸ್ವರ್ಗ' ದೊರೆಯುವುದು ಎಂಬ ನಂಬಿಕೆ ಜನರಲ್ಲಿ ಗಾಢವಾಗಿತ್ತು. ಈ ಕನ್ಯೆಯರೇ ದೇವಾಲಯದ ಸೂಳೆಯರಾಗಿ ಜೀವಿಸಬೇಕಾಗಿತ್ತು. ಸ್ವರ್ಗ ಪಡೆಯಬೇಕೆಂದು ಶ್ರೀಮಂತರು, ಗಣ್ಯರು, ಇತರರು ದೇವಾಲಯಕ್ಕೆ ಹೆಚ್ಚಿನ ಸಂಖ್ಯೆಯಲ್ಲಿ ಸೂಳೆಯರನ್ನು ದಾನ ಮಾಡುವ ಪರಿ ಬೆಳೆಯುತ್ತಾ ಹೋಯಿತು. ಇದರಿಂದ ಸೂಳೆಯರ ಸಂಖ್ಯೆ ಹೆಚ್ಚಾಯಿತು. ನಂತರದ ದಿನಗಳಲ್ಲಿ ಇವರನ್ನು ದೇವರ ವಿವಿಧ ಕಾರ್ಯಗಳಿಗೆ ವಿವಿಧ ಸೂಳೆಯರೆಂದು ಗೊತ್ತು ಮಾಡಬೇಕಾಗಿ ಬಂದಿತು. ಅವರುಗಳಲ್ಲಿ ಅಂಗಭೋಗ ಮತ್ತು ರಂಗಭೋಗ ಸೂಳೆಯರು, ಕಂಬದ ಸೂಳೆಯರು, ಮಾಡದ ಸೂಳೆಯರು, ಚಾಮರದ ಸೂಳೆಯರು, ಪಾತ್ರದ, ಓಲಗದ ಹಾಡುವ ಸೂಳೆಯರು, ಧೂಪ, ದೀಪ, ಆರತಿಯ ಸೂಳೆಯರು ಎಂಬ ಪ್ರಕಾರಗಳು ಹುಟ್ಟಿಕೊಂಡವು. ಪುರುಷ ಪ್ರಧಾನ ಸಮಾಜ ಹೆಣ್ಣನ್ನು ಶೋಷಿಸಲು ಮಾಡಿದ ವಿಂಗಡಣೆಗಳಲ್ಲಿ ಇದೂ ಒಂದು.

'ಅಂಗಭೋಗ'ದವರು ದೇವರ ಅಂಗಗಳ ಕಾರ್ಯಗಳಿಗೆ ನೇಮಕವಾದವರು. ಅಂದರೆ ದೇವರ ಸ್ನಾನ, ಪೂಜೆ, ನೈವೇದ್ಯಗಳಿಗೆ ಮಾತ್ರ ಅಂಗಭೋಗದವರು ಸೀಮಿತ. ಅಲ್ಲದೆ ದೇವರ ಗರ್ಭಗೃಹದಲ್ಲಿ ಇವರಿಗೆ ಮಾತ್ರ ಪ್ರವೇಶ ಅನ್ಯರಿಗೆ ಪ್ರವೇಶವಿರಲಿಲ್ಲ. ಬಾಗಳಿ[೫೧] ಮತ್ತು ಬೇತೂರು[೫೨] ಗ್ರಾಮಗಳಲ್ಲಿ ಹನ್ನೆರಡು ಸ್ತ್ರೀಯರು ಅಂಗಭೋಗದ ಸೂಳೆಯರಾಗಿದ್ದರು. ಇದರಂತೆ ಬಸರಾಳುವಿನ ಮಲ್ಲಿಕಾರ್ಜುನ ದೇವರಿಗೆ ದೇವರಾರತಿಯ ಸೂಳೆಯರು,[೫೩] ಬೆಲ್ತುರುವದ ಮೂಲಸ್ತಾನ ಮಹದೇವ ದೇವರಭೋಗಕ್ಕೆ ಅವರ ತೆರೆಯೊಳಗಾಗಿ ಬಿಟ್ಟ ಸೂಳೆಯರ ಸಂಖ್ಯೆ ಹನ್ನೆರಡು.[೫೪] ಸೊಂಡಿಯ ನಾಗೇಶ್ವರ ದೇಗುಲದ ಗರ್ಭಗೃಹದಲ್ಲಿ ಪಿರಿಯರವಾಳ ಮತ್ತು ಪೆರ್ಗಡೆವಾಳ ಸೂಳೆಯರ ಉಲ್ಲೇಖಗಳಿವೆ.[೫೫] ಕ್ರಿ.ಶ. ೧೦೪೮ರ ಹೊಳೆ ಆನೆವೇರಿಯ ಶಾಸನ ಪೆರ್ಗಡೆವಾಳ ಕಾಮಲತೆಯನ್ನು ಆಯ್ತುವರ್ಮನ ಸೊಸೆ ಪಿರಿಯರ ಚಟ್ಟಬ್ಬೆಯನ್ನು ಹೆಸರಿಸಿವೆ.[೫೬]

ದೇವಾಲಯದ ರಂಗಮಂಟಪದ ಸೂಳೆಯರನ್ನು 'ರಂಗಭೋಗ'ದವರೆಂದು ಕರೆಯಲಾಗುತ್ತಿತ್ತು. ಇವರು ದೇವಾಲಯದ ಪ್ರಮುಖ ಆಕರ್ಷಣೆಗೆ ಒಳಪಟ್ಟವರು. ದೇವಾಲಯದ ಕಂಬಗಳಿಗೆ ಒಬ್ಬೊಬ್ಬರನ್ನು ನಿಲ್ಲಿಸಿ ದೇವರ ಪೂಜೆ ಮಾಡುತ್ತಿದ್ದರು. ಇಂಥವರನ್ನು ಕಂಬದ ಸೂಳೆಯರೆಂದು ಗುರುತಿಸುತ್ತಿದ್ದರು. ಪ್ರಾಚೀನ ದೇವಾಲಯಗಳ ಕಂಬಗಳ ಕೆಳಗೆ ಅನೇಕ ಸ್ತ್ರೀಯರ ವಿಗ್ರಹಗಳು ಕಂಡುಬರುತ್ತವೆ. ಈ ವಿಗ್ರಹಗಳು ಕಂಬದ ಸೂಳೆಯರನ್ನು ಪ್ರತಿನಿಧಿಸುತ್ತವೆ. ಸಾಮಾನ್ಯವಾಗಿ ನಾಲ್ಕು ಜನ ಕಂಬಗಳ ಸೂಳೆಯರ ಉಲ್ಲೇಖಗಳು ಇರುತ್ತವೆ. ಅವರುಗಳೆಂದರೆ ಚಾವುಂಡಬ್ಬೆ, ಅಗಸಬ್ಬೆ, ರೇವಕಬ್ಬೆ, ಕಾಳಬ್ಬೆ ಮೊದಲಾದವರು[೫೭] ಇವರು ದೇವಾಲಯದಲ್ಲಿ ಕಂಬಗಳಂತೆ ನಿಲ್ಲಬೇಕಾಗಿತ್ತು. ದೇವರಿಗೆ ಚಾಮರದ ಸೇವೆ ಮಾಡುವವರು ಚಾಮರದ ಸೂಳೆಯರಾಗಿದ್ದರು. ಉದಾಹರಣೆಗೆ ಕೇತಲಬ್ಬೆ, ಕಾಳಬ್ಬೆ ಬಗ್ಗೆ ಶಾಸನಗಳು ಉಲ್ಲೇಖಿಸಿವೆ.[೫೮] ದೇವಾಲಯದಲ್ಲಿ ಪಾತ್ರ ಮಾಡುವ

ಸೂಳೆಯರು ಇದ್ದರು. ಇಂಥವರನ್ನು ಪಾತ್ರದ ಸೂಳೆಯರು ಎಂದು ಹೇಳಲಾಗುತ್ತಿತ್ತು.[೫೯] ಸಿರುಗುಪ್ಪೆ, ಬಾಗಳಿ, ಹೂವಿನ ಹಡಗಲಿ, ಬಳ್ಳಿಗಾವಿ ಮೊದಲಾದ ದೇವಾಲಯಗಳಲ್ಲಿ ಪಾತ್ರದ ಸೂಳೆಯರಿದ್ದರು. ಜೊತೆಗೆ ಹರಪನಹಳ್ಳಿಯ ಕಲಿದೇವರಿಗೆ 'ಸಿರಿಯಸೀಮೆಯು' ಅಂಕೇಶ್ವರ ದೇಗುಲಕ್ಕೆ 'ವಕ್ಕಬೆ' ಎಂಬುವವರು ಪಾತ್ರದ ಸೂಳೆಯರಾಗಿದ್ದರು ಎಂಬುದು ತಿಳಿದುಬರುತ್ತದೆ. ಇವರಂತೆ ಓಲಗದ ಸೂಳೆಯರು ಸಹ ಪ್ರಮುಖರಾಗಿದ್ದರು. ಇವರು ದೇವರಿಗೆ ಸಂಗೀತ ಸೇವೆ ಸಲ್ಲಿಸುತ್ತಿದ್ದರು. ಅಂತೆಯೇ ಇವರನ್ನು ಹಾಡುವವರು ಎಂದು ಶಾಸನಗಳು ಕರೆದಿವೆ. ಉದಾಹರಣೆಗೆ ಕಲಿದೇವರ ತೊತ್ತು ನಾಗವ್ವೆಯ ಮಗಳು ಹಾಡುವ ಕಾಮವ್ವೆಯ ಉಲ್ಲೇಖ ಬಾಗಳಿ ಶಾಸನದಲ್ಲಿದೆ. ಅಂತೆಯೇ ಸಿರುಗುಪ್ಪೆಯ ಕೇತಲೇಶ್ವರ ದೇವಾಲಯದಲ್ಲಿಯೂ ಕುಕನೂರಿನ ಶ್ರೀಪತಿನಾಯಕ ದೇವಾಲಯದಲ್ಲಿಯೂ ಓಲಗದ ಸೂಳೆಯರು ಇದ್ದರು. ಇವರಂತೆ ದೇವಾಲಯದ ಮಾಡಕ್ಕೂ ಒಬ್ಬೊಬ್ಬ ಸೂಳೆಯರು ಇರುತ್ತಿದ್ದರು. ಇಂಥವರನ್ನು 'ಮಾಡದ ಸೂಳೆಯರು' ಎಂದು ಹೇಳಲಾಗುತ್ತಿತ್ತು. ಮಾಡದ ಸೂಳೆಯರು ಇದ್ದ ಬಗ್ಗೆ ದಾಖಲೆಗಳು ಕಂಡು ಬಂದಿರುತ್ತವೆ.

ಒಟ್ಟಾರೆಯಾಗಿ ಹೇಳಬೇಕೆಂದರೆ ದೇವಾಲಯದ ಸೂಳೆಯರು ಆರಂಭದಲ್ಲಿ ದೇವರು ಮತ್ತು ದೇವರ ಕಾರ್ಯಗಳಿಗೆ ಮೀಸಲಾದವರು. ಕ್ರಮೇಣ ದೇವರ ಪ್ರತಿರೂಪದ ವ್ಯಕ್ತಿ, ವಸ್ತುಗಳು ಇತ್ಯಾದಿಗಳೊಂದಿಗೆ ಸಂಬಂಧ ಇಟ್ಟುಕೊಂಡಿದ್ದರು. ದೇವಾಲಯದಲ್ಲಿನ ಮೊದಲಿರುವ ವಾತಾವರಣವೇ ಬದಲಾಯಿತು. ಮೊದಲಿನ ಗೌರವ-ಮರ್ಯಾದೆಗಳು ಸಹ ಕ್ರಮೇಣವಾಗಿ ಇಲ್ಲವಾದವು. ಇವರ ಬಗ್ಗೆ ಕೀಳು ಅಭಿಪ್ರಾಯಗಳು ರೂಢಿಗೆ ಬಂದಿದ್ದವು.

**ಇ. ಸಮಾಜ ಸೂಳೆಯರು**

ಆಸ್ಥಾನಿಕ ಮತ್ತು ದೇವಾಲಯದ ಸೂಳೆಯರಂತೆ 'ಸಮಾಜ ಸೂಳೆಯರು' ಸಹ ಇರುತ್ತಿದ್ದರು. ಇವರು ಸಾರ್ವಜನಿಕರೊಂದಿಗೆ ಮುಕ್ತವಾಗಿದ್ದು ಸಂಬಂಧಗಳನ್ನು ಇರಿಸಿಕೊಂಡಿದ್ದರು. ಈ ಸೂಳೆಯರ ಕುರಿತು ಕಾವ್ಯಗಳು ಹೆಚ್ಚಿನ ಮಾಹಿತಿಗಳನ್ನು ನೀಡುತ್ತವೆ. ಕವಿರಾಜಮಾರ್ಗದಲ್ಲಿ 'ಪರವಾರ ನಾರಿಯೊಳ್ ' ಎಂಬ ಮಾತು ಸೂಳೆಯರ ಬಗೆಗೆ ಹೇಳಿದ್ದು ತಿಳಿದುಬರುತ್ತದೆ.

ಈ ಎಲ್ಲ ಸೂಳೆಯರು ಅವರವರ ವರ್ಗಗಳಿಗೆ ಅನುಗುಣವಾಗಿ ಬದುಕುತ್ತಿದ್ದರು. ಸೂಳೆಯರು ವಾಸಿಸುವ ಸ್ಥಳಗಳಿಗೆ "ಸೂಳೆಗೇರಿ"ಗಳು ಎಂದು ಕರೆಯುತ್ತಿದ್ದರು. ಶಾಸನಗಳಲ್ಲಿ ಸೂಳೆಗೇರಿಗಳನ್ನು 'ಪುರ' ಎಂತಲೂ ಕರೆದಿರುತ್ತವೆ. ಕಲ್ಯಾಣಿ ಚಾಲುಕ್ಯರ ಅಕ್ಕಾದೇವಿ ನಾಗೇಶ್ವರ ದೇವಾಲಯದ ಎರಡು ಬದಿಯಲ್ಲಿಯೂ ಸೂಳೆಗೇರಿಗಳನ್ನು ನಿರ್ಮಿಸಿದ್ದಳು.[೬೦] ಹಾಗೂ ಸೌದತ್ತಿಯ ಅಂಕೇಶ್ವರ, ಕುರುಗೋಡಿನ ದೇವಾಲಯಗಳಲ್ಲಿಯೂ ಸೂಳೆಗೇರಿಗಳಿದ್ದವು ಎಂದು ತಿಳಿದು ಬಂದಿರುತ್ತದೆ.

ಈ ಸೂಳೆಯರಿಗೆ ನೃತ್ಯ, ಸಂಗೀತ, ಪಾತ್ರ ಇತ್ಯಾದಿಗಳನ್ನು ಕಲಿಸಲು ಕಲಾ ತರಬೇತಿಯ ಕೇಂದ್ರಗಳು ಇರುತ್ತಿದ್ದವು. ಇವುಗಳನ್ನು "ನಾಗವಾಸ" ಎಂದು ಕರೆಯುತ್ತಿದ್ದರು. ಸಮಾಜದಲ್ಲಿನ ಹೆಣ್ಣಿನ ವಿವಿಧ ಚಿತ್ರಣಗಳ ಅವರಲ್ಲೂ ಸೂಳೆಯರನ್ನೇ ಕುರಿತಂತೆ ಸೂಕ್ಷ್ಮವಾದ ಸ್ತ್ರೀವಾದಿ ಅಧ್ಯಯನಗಳು ಆಗಬೇಕಿದೆ. ಈ ದಿಸೆಯಲ್ಲಿ ಕೆಲವು ಮಾಹಿತಿಗಳನ್ನು ಈ ಅಧ್ಯಾಯ ನೀಡಲು ಪ್ರಯತ್ನಿಸಿದೆ.

## ೧೬. ತೊತ್ತುಗಳು

ಯುದ್ಧಗಳಲ್ಲಿ ಸೋತವರ ಮಹಿಳೆಯರನ್ನು 'ತೊತ್ತು' ಎಂದು ಗೆದ್ದವರು ನೇಮಕ ಮಾಡಿಕೊಳ್ಳುತ್ತಿದ್ದರು. ತೊತ್ತುಗಳು ಶ್ರೀಮಂತರ, ಅರಸರ ಮನೆಯಲ್ಲಿ ಇರುತ್ತಿದ್ದು ಎಲ್ಲ ಬಗೆಯ ಕೆಲಸಗಳನ್ನು ಮಾಡುತ್ತಿದ್ದರು. ಒಮ್ಮೊಮ್ಮೆ ಮನೆಯ ಒಡೆಯನ ಲೈಂಗಿಕ ತೃಪ್ತಿ ನೀಡುವವರಾಗಿಯೂ ಸೇವೆ ಮಾಡುತ್ತಿದ್ದರು. ತೊತ್ತುಗಳು ತಪ್ಪು ಮಾಡಿದರೆ ಬೀದಿ ಪಾಲಾಗುವ ಸಂಭವಗಳು ಇರುತ್ತಿದ್ದವು. ಈ ತೊತ್ತುಗಳು ಒಡೆಯನಿಗೆ ಮಕ್ಕಳನ್ನು ನೀಡುವವರಾಗಿಯೂ ಇಲ್ಲವೆ ಒಡೆಯರ ಮಕ್ಕಳಿಗೆ ಹಾಲು ಕೊಡುವವರಾಗಿಯೂ ಕೆಲಸ ಮಾಡುತ್ತಿದ್ದರು. ಶಾಂತಿಪುರಾಣ, ಆದಿಪುರಾಣ, ಕರ್ನಾಟಕ ಕಾದಂಬರಿಯಲ್ಲಿಯೂ ತೊತ್ತುಗಳ ಕುರಿತಂತೆ ಉಲ್ಲೇಖಗಳು ಕಂಡುಬರುತ್ತವೆ.

## ೩.೪ ರಾಜಕಾರಣ ಮತ್ತು ಮಹಿಳೆ

ರಾಜಕಾರಣ ಮತ್ತು ಮಹಿಳೆ ಎನ್ನುವುದು ಮಹಿಳೆ ಪಡೆದ ವಿಭಿನ್ನ ರೀತಿಯ ಅಧಿಕಾರವನ್ನು ಕುರಿತದ್ದು. ಮನು ಮಹರ್ಷಿ 'ಸ್ತ್ರೀ ಸ್ವಾತಂತ್ರ್ಯಕ್ಕೆ ಅರ್ಹಳಲ್ಲ', ಆಕೆ ಯಾವಾಗಲೂ ಪುರುಷನ ಅಧೀನದಲ್ಲಿ ಇರಬೇಕು ಎಂದು ಅಪ್ಪಣೆ ಕೊಡಿಸಿದ್ದಾನೆ. ಆದರೂ ಕನ್ನಡ ನಾಡಿನಲ್ಲಿರುವ ಮಹಿಳೆಯರು ತಮಗೆ ಕೊಟ್ಟ ಸ್ವಲ್ಪ ಅವಕಾಶ, ಸ್ವಾತಂತ್ರ್ಯಗಳನ್ನು ಉಪಯೋಗಿಸಿಕೊಂಡು ತಮ್ಮ ಶಕ್ತಿ ಸಾಮರ್ಥ್ಯ, ಬುದ್ಧಿವಂತಿಕೆಯ ಮೂಲಕ ತಮ್ಮದೇ ಆದ ಸಾಧನೆಗಳನ್ನು ಮಾಡಿ ತೋರಿಸಿದ್ದಾರೆ. ಅಂತಃಪುರದ ವೈಭವದ ಜೀವನದಲ್ಲಿ ಇದ್ದರೂ ನಾಡಿನ ಪ್ರಜೆಗಳ ಕ್ಷೇಮಾಭಿವೃದ್ಧಿ ಕುರಿತು ಚಿಂತಿಸಿ ಶ್ರಮಿಸಿದ್ದಾರೆ. ಅಂತೆಯೇ ಕನ್ನಡ ಮಹಿಳೆಯರು 'ಶಯನೇಷು ರಂಭಾ' ಅಷ್ಟೇ ಆಗಿರದೆ, 'ಕಾರ್ಯೇಷು ಮಂತ್ರಿ'ಯೂ ಆಗಿದ್ದಾರೆ ಎನ್ನಬಹುದು. ರಾಜ್ಯದ ಮುನ್ನಡೆಗೆ ರಾಣಿಯ ಪಾತ್ರ ಪ್ರಧಾನವಾದದ್ದು. ಪ್ರಜೆಗಳಿಗೆ ರಾಣಿ ಮಾತೃ ಸ್ವರೂಪಿಣಿ. ಆದಿಪುರಾಣ, ಶಾಂತಿಪುರಾಣಗಳು ರಾಣಿಯ ಪ್ರಾಮುಖ್ಯತೆಯನ್ನು ಗುರುತಿಸಿ, ಆಕೆಯನ್ನು "ಕುಲ ಲಲನೆದೇವಿ, ಅಷ್ಟಪ್ರಧಾನ ದೇವಿ, ಅರಸನ ಪಟ್ಟದರಸಿ, ಪಿರಿಯರಸಿ ಪಟ್ಟ ಮಹಾದೇವಿ, ಅಗ್ರಮಹಿಷಿ" ಮೊದಲಾದ ಹೆಸರುಗಳಿಂದ ಕರೆದಿವೆ.

### ಅ. ಪಿರಿಯರಸಿ ಪಟ್ಟಮಹಾದೇವಿ

ರಾಣಿಯು ಪಂಚ ಪ್ರಧಾನರಲ್ಲಿ ಒಬ್ಬಳು. ಅಂತಃಪುರದಲ್ಲಿ ಹಲವಾರು ರಾಣಿಯರಿದ್ದರೂ ಅವರಲ್ಲಿ ಹಿರಿಯ ರಾಣಿಯೇ ಪಟ್ಟದ ಪಿರಿಯರಸಿ ಆಗುತ್ತಿದ್ದಳು. ಈ ಪದವಿ ತುಂಬಾ ಉನ್ನತವಾಗಿದ್ದು, ಗೌರವದ್ದು ಆಗಿತ್ತು. ಅಂತೆಯೇ ವಡ್ಡಾರಾಧನೆ, ನೇಮಿನಾಥ ಪುರಾಣಗಳಲ್ಲಿ ಈ ಪದವಿ ತುಂಬಾ ಗೌರವಾರ್ಹವಾದುದು ಎಂದು ಚಿತ್ರಿತವಾಗಿದೆ. ಈ ಪಿರಿಯರಸಿಯ ಮಗನೆ ಮುಂದಿನ ರಾಜನಾಗುತ್ತಿದ್ದ. ಇಂಥ ಪದವಿ ಪಡೆಯಲು ರಾಣಿಯು ಮೂಲಭೂತ ಅರ್ಹತೆಗಳನ್ನು ಹೊಂದಿರಬೇಕಾಗಿತ್ತು. ಅವುಗಳೆಂದರೆ -

ಅ. ರಾಣಿಯು ಆಚಾರ-ವಿಚಾರಗಳಲ್ಲಿ ರೂಪ-ಲಾವಣ್ಯಗಳಲ್ಲಿ ಎತ್ತರದ ಸ್ಥಾನದಲ್ಲಿರಬೇಕು.

ಆ. ಮೊದಲು ಗಂಡು ಮಗುವಿನ ತಾಯಂದಿರಾಗಬೇಕು.

ಇ. ಪಂಡಿತೆಯು, ವಿವೇಕಯುಳ್ಳವಳೂ, ಕಲೆಯ ಜ್ಞಾನ ಅರಿತವಳಾಗಿರಬೇಕು.

ಈ. ರಾಜನ ಸರ್ವ ಭಾಗ್ಯಕ್ಕೂ ಆಕೆಯೇ ಕಾರಣ ಆಗಿರಬೇಕು.

ಉ. ಧಾರ್ಮಿಕ ಸಹಿಷ್ಣುತೆಯುಳ್ಳವಳು ಆಗಿರಬೇಕು.

ಊ. ರಾಜ್ಯಕ್ಕೆ ಹಿತ, ಸಂತೋಷಗಳನ್ನು ತರುವಂತವಳು ಆಗಿರಬೇಕು.[61]

ಈ ಎಲ್ಲ ಅರ್ಹತೆಗಳನ್ನು ಪಡೆದ ರಾಣಿ ವಿಶೇಷ ಗೌರವಕ್ಕೆ ಪಾತ್ರಳಾಗಿದ್ದಳು. ಈ ಅರ್ಹತೆಯುಳ್ಳ ರಾಣಿಗೆ 'ಪಿರಿಯರಸಿ'ಗಾಗಿ ಪಟ್ಟಾಭಿಷೇಕ ಆಚರಣೆ ನಡೆಯುತ್ತಿತ್ತು. ಪಂಚ ರತ್ನಗಳಿಂದ ಖಚಿತವಾದ ವಜ್ರದ ಪ್ರಕಾಶಮಾನವಾದ ಪಟ್ಟ ವಸ್ತ್ರವನ್ನು ರಾಣಿಗೆ ಕಟ್ಟುವ ಮುಖೇನ ಕಳಸಕ್ಕೆ ಅಭಿಷೇಕ ಮಾಡುತ್ತಿದ್ದರು. ಇಂಥ ಪಟ್ಟಾಭಿಷೇಕಗಳನ್ನು ಕುರಿತು ಚಾವುಂಡರಾಯ ಪುರಾಣ ಉಲ್ಲೇಖಿಸಿದೆ. ಈ ಪಿರಿಯರಸಿ ಪಟ್ಟಮಹಾದೇವಿಗೆ ಪ್ರತ್ಯೇಕ ಚಿಹ್ನೆಗಳು ಇರುತ್ತಿದ್ದವು. ಅವುಗಳ ಮುಖೇನ ಗುರುತಿಸಲಾಗುತ್ತಿತ್ತು. ಅವುಳೆಂದರೆ "ದವಳ, ಸಂಶ, ಉದ್ದಂಡ, ಫಂಡರಿಕ, ಕನಕದಂಡ, ಚಾಮರ ಸ್ತೋಮಗಳು" ಆಗಿದ್ದವು.[62] ಉದಾಹರಣೆಗೆ ದುರ್ಲಭದೇವಿ ಬಾದಾಮಿಚಾಲುಕ್ಯರ ಮೊದಲನೆ ಪುಲಕೇಶಿಗೆ, ಶೀಲಮಹಾದೇವಿ, ರಾಷ್ಟ್ರಕೂಟರ ಧ್ರುವನಿಗೆ, ಮಲಯಮತಿ ಮಹಾದೇವಿ ಕಲ್ಯಾಣಿ ಚಾಲುಕ್ಯರ ಆರನೆಯ ವಿಕ್ರಮಾದಿತ್ಯನಿಗೆ ಮೊದಲಾದವರು ಸಹ ಪಿರಿಯರಸಿಯರಾಗಿದ್ದರು. ಇದನ್ನು ಶಾಸನಗಳು ಉಲ್ಲೇಖಿಸುತ್ತವೆ. "೧೦೪೯ರ ಶಾಸನ ಶ್ರೀ ಮತ್ರೈಲೋಕ್ಯಮಲ್ಲದೇವ ವಿಶಾಳ ವಕ್ಷಸ್ಥಳ ನಿವಾಸಿನಿಯರಪ್ಪ ಶ್ರೀಮತ್ಪಿರಿಯರಸಿಯಮ್ಮೈಳಲದೇವಿಯರ ಉಲ್ಲೇಖವಿದೆ.[63] ಹಾಗೆಯೇ ಕ್ರಿ.ಶ. ೧೦೫೩ರ[64] ಹಾವನೂರು, ಕ್ರಿ.ಶ. ೧೦೫೭ರ[65] ನಂದಿಕೋಟಕೂರಿನ ಎರಡು ಶಾಸನಗಳು. ಕ್ರಿ.ಶ. ೧೦೫೮ರ ಕೊಟ್ಟಪಲ್ಲೆ ಶಾಸನ ಮೈಳಲದೇವಿಯನ್ನು ಪಿರಿಯರಸಿ"[66] ಎಂದು ಕರೆದಿವೆ.

ಪಿರಿಯರಸಿ ಪಟ್ಟದರಾಣಿಗೆ ಹಲವು ಪ್ರಧಾನ ಕರ್ತವ್ಯಗಳು ಇರುತ್ತಿದ್ದವು. ಅರಸನ ಜೊತೆ ರಾಜಕೀಯ ವಿಷಯ ಕುರಿತು ಚರ್ಚಿಸುವುದು, ಸಲಹೆ ಸೂಚನೆ ಕೊಡುವ, ರಾಜ್ಯಕ್ಕೆ ಕಪ್ಪ ಕೊಡದವರ ವಿವರಗಳನ್ನು ಹೇಳಬೇಕಾಗಿತ್ತು. ರಾಜನೊಂದಿಗೆ ಮತ್ತು ವೈಯಕ್ತಿಕವಾಗಿ ಸಾಮಾಜಿಕ, ಧಾರ್ಮಿಕ, ಆರ್ಥಿಕ ಕ್ಷೇತ್ರಗಳಲ್ಲಿ ಭಾಗವಹಿಸುತ್ತಿದ್ದಳು. ಅರಸನು ರಾಜ್ಯದಲ್ಲಿ ಇಲ್ಲದಿದ್ದಾಗ ಇಲ್ಲವೆ ಮೃತನಾದರೆ ಇಡೀ ರಾಜ್ಯದ ವ್ಯವಸ್ಥೆಯನ್ನು ನೋಡಿಕೊಂಡಿರಬೇಕಿತ್ತು. ಅಂತಃಪುರದಲ್ಲಿ ಪ್ರಧಾನಳಾಗಿ, ಸವತಿಯರಲ್ಲಿ ಮತ್ಸರ ಉಂಟಾಗದಂತೆ ನೋಡಿಕೊಳ್ಳುವುದರ ಜೊತೆಗೆ ಕೆಲವು ಕಾರಣಗಳಿಂದ ಒಮ್ಮೊಮ್ಮೆ ಪಿರಿಯರಸಿ ಪಟ್ಟದೇವಿಯ ಸ್ಥಾನವನ್ನು ಬಿಟ್ಟು ಕೊಡಬೇಕಾದ ಪ್ರಸಂಗಗಳು ಬರುತ್ತಿದ್ದವು.

### ಆ. ಆಡಳಿತ ಅಧಿಕಾರಿಗಳು

ರಾಜ್ಯದ ಆಡಳಿತದಲ್ಲಿ ಪಿರಿಯರಸಿ ಇತರೆ ರಾಣಿಯರು ಭಾಗವಹಿಸುತ್ತಿದ್ದರು. ಕೆಲವರು ಸ್ವ ಆಸಕ್ತಿಯಿಂದ ಆಡಳಿತಕ್ಕೆ ಬಂದಿದ್ದು ಉಂಟು. ಮತ್ತೆ ಕೆಲವರು ಮಾತ್ರ ಸ್ವತಂತ್ರವಾಗಿ ಆಳ್ವಿಕೆ ನಡೆಸಿದ್ದಾರೆ. ಇನ್ನು ಕೆಲವರು ಯಾವುದೋ ಇತರೆ ಕಾರಣಗಳಿಂದ ಆಡಳಿತ ನೋಡಿಕೊಳ್ಳುತ್ತಿದ್ದರು. ಇನ್ನೂ ಕೆಲವರು ಅರಸನಿಗೆ ಸಲಹೆ, ಸೂಚನೆ ಕೊಡುವುದರ ಜೊತೆಗೆ ಇತರೆ ಕ್ಷೇತ್ರಗಳಲ್ಲಿ ಇರುತ್ತಿದ್ದರು. ಆಡಳಿತದ ಅನುಕೂಲಕ್ಕಾಗಿ ತಮಗೆ ಬೇಕಾದ ರೀತಿಯಲ್ಲಿ ರಾಜ್ಯವನ್ನು ವಿಭಾಗಿಸಿಕೊಂಡು ದಕ್ಷವಾಗಿ ಆಡಳಿತ ನಿರ್ವಹಿಸಿರುವ ಉದಾಹರಣೆಗಳಿವೆ.

ಒಂದು ರಾಜ್ಯ ಹೆಚ್ಚು ಪ್ರಸಿದ್ಧವಾಗಿ ಅಭಿವೃದ್ಧಿ ಆಗುತ್ತಿದ್ದರೆ, ಅದಕ್ಕೆ ಕಾರಣ ಆ ನಾಡಿನ ರಾಣಿಯರು ಮತ್ತು ಮಹಿಳೆಯರ ಶ್ರಮವಿದ್ದೇ ಇರುತ್ತಿತ್ತು. ಆದರೆ ಬಹುಪಾಲು ದಾಖಲೆಗಳು ಇದನ್ನು ಉಲ್ಲೇಖಿಸಿಲ್ಲ. ಕಾರಣ 'ಹೆಣ್ಣು' ಎಂಬ ಉದಾಸೀನ ಭಾವನೆಯೋ ಇಲ್ಲವೇ ತಾನೊಬ್ಬನೇ ಹೆಸರು, ಕೀರ್ತಿ ಪಡೆಯಬೇಕು ಎನ್ನುವ ಗಂಡಿನ ದರ್ಪವೋ. ಒಟ್ಟಿನಲ್ಲಿ ರಾಜನಷ್ಟೇ ರಾಣಿಯರು ಆಡಳಿತದ ಚುಕ್ಕಾಣಿ ಹಿಡಿದು, ತಾವು ಸಾಧನೆಗಳನ್ನು ಮಾಡಿ ರಾಜನ ಕೀರ್ತಿಗೆ ಪ್ರತ್ಯಕ್ಷವಾಗಿ, ಪರೋಕ್ಷವಾಗಿ ಕಾರಣವಾಗಿರುವುದುಂಟು. ರಾಣಿಯರು ಹಲವು ಪ್ರಾಂತ್ಯಗಳನ್ನು ನೋಡಿಕೊಳ್ಳುವುದರೊಂದಿಗೆ ಅರಸನೊಂದಿಗೆ ಸುಖದಿಂದ ಇರುತ್ತಿದ್ದರು. ಇದನ್ನು ಅನೇಕ ಶಾಸನಗಳು ಉಲ್ಲೇಖಿಸಿವೆ. ಉದಾಹರಣೆಗೆ ದುರ್ಲಭದೇವಿಯ ರಾಜ ಬಾದಾಮಿ ಚಾಲುಕ್ಯರ ಒಂದನೆ ಪುಲಕೇಶಿ. ದುರ್ಲಭದೇವಿ ಬಾದಾಮಿಯ ಸುತ್ತಮುತ್ತ ಪ್ರದೇಶಗಳನ್ನು ಆಳುತ್ತಿದ್ದಳು.[೧೭] ವಿಜಯ ಮಹಾದೇವಿಯ ರಾಜ, ಚಾಲುಕ್ಯರ ಚಂದ್ರಾದಿತ್ಯ. ವಿಜಯಮಹಾದೇವಿ ಆಡಳಿತದಲ್ಲಿ ಆಸಕ್ತಿಯುಳ್ಳವಳಾಗಿದ್ದಳು. ಚಂದ್ರಾದಿತ್ಯನ ಮರಣದ ನಂತರ ನೇರವಾಗಿ, ಸ್ವತಂತ್ರವಾಗಿ ತಾನೇ ರಾಜ್ಯಭಾರ ಕೈಗೊಂಡಿದ್ದಳು. ಆದ್ದರಿಂದ ಈಕೆಯನ್ನು "ಸ್ವರಾಜ್ಯ ಪಂಚಮ ಸಂವತ್ಸರೆ" ಎಂದು ಕ್ರಿ.ಶ. ೬೪೫ರ[೧೮] ಕೋಚ್ರೆ ಮತ್ತು ಕ್ರಿ.ಶ. ೬೫೯ರ[೧೯] ನೆರೂರು ತಾಮ್ರಶಾಸನಗಳು ಕರೆದಿವೆ. ಸರಮಬ್ಬೆಯು ಬೂತುಗನನ್ನು ವರಿಸಿದ್ದು, ಕುರ್ಗಲ್ಲನ್ನು ಆಳುತ್ತಿದ್ದಳು.[೨೦]

ಶೀಲಮಹಾದೇವಿಯ ರಾಜ ರಾಷ್ಟ್ರಕೂಟರ ಧ್ರುವ. ಈಕೆಯು ಆಡಳಿತದಲ್ಲಿ ಸಹಭಾಗಿಯಾಗಿ ಕಾರ್ಯ ನಿರ್ವಹಿಸಿದ್ದಾಳೆ. ಶಾಸನಗಳು ಈಕೆಯನ್ನು ವಿವರಿಸುತ್ತ -

> "ಮಹಾರಾಜಾಧಿರಾಜ ಪರಮೇಶ್ವರ ಧಾರವರ್ಷ
> ಶ್ರೀ ಧ್ರುವರಾಜಸ್ಯ ಮಹಾದೇವೊ, ಸರ್ವಲೋಕಶ್ರೀಯ
> ವಿಷ್ಣುವರ್ಧನ ಶ್ರೀ ವಿಟ್ಟರಸದುಹಿತಾ ಪರಮೇಶ್ವರಿ
> ಪರಮಭಟ್ಟಾರಿಕಾ ಶ್ರೀ ಶೀಲಮಹಾದೇವಿ" ಎಂದು ಹೇಳುವುದರ ಜೊತೆಗೆ
> "ಶ್ರೀ ಮಹಾದೇವಿ ಕುಶಲಿನಿ" ಎಂತಲೂ ಕರೆದಿವೆ.[೨೧]

ಕೆಸರಬಾವಿಯ ಶಾಸನವು ರೇವಕ್ಕ ನಿರ್ಮಡಿಯ ಬಗ್ಗೆ ತಿಳಿಸುತ್ತ ಈಕೆಯ ತಂದೆ ರಾಷ್ಟ್ರಕೂಟರ ಮೂರನೆ ಅಮೋಘವರ್ಷ ಎಂದೂ, ಕ್ರಿ.ಶ. ೮೩೭ರಲ್ಲಿ ರೇವಕ್ಕ ಎಡದೊರೆ, ತುಳ್ಬ, ಸೆಂಗಳ ಪ್ರದೇಶಗಳ ಮೇಲ್ವಿಚಾರಣೆ ಮಾಡುತ್ತಿದ್ದಳು[೨೨] ಎಂದು ದಾಖಲಿಸುತ್ತದೆ. ಅಕ್ಕಾದೇವಿ ಕಲ್ಯಾಣಿ ಚಾಲುಕ್ಯರ ರಾಜಕುಮಾರಿ. ಕದಂಬರ ಮಯೂರವರ್ಮನನ್ನು ವರಿಸುವದರೊಂದಿಗೆ ಕದಂಬ ರಾಣಿಯಾದಳು. ಈಕೆಯ ಬಗ್ಗೆ ಸುಮಾರು ಹತ್ತು ಶಾಸನಗಳಿವೆ. ಕ್ರಿ.ಶ. ೧೦೧೦ರ[೨೩] ಮತ್ತು ಕ್ರಿ.ಶ. ೧೦೭೭ರ[೨೪] ಶಾಸನಗಳು ಕಿಸುಕಾಡು-ಎಪ್ಪತ್ತರ ಆಡಳಿತವನ್ನು ಹೇಳುತ್ತವೆ. ೧೦೩೭ರ ಶಾಸನವು "ಅಕ್ಕಾದೇವಿಯರ ವಾನವಾಸೆ ಪನ್ನಿರ್ಚ್ಛಾಸಿರಮುಮಂ ಸುಖಸಂಕಥಾ ವಿನೋದದಿಂ ಆಳುತ್ತಮಿರೆ" ಎಂದು ಹೇಳುವುದರ ಜೊತೆಗೆ -

> "ಬನವಾಸಿಯ ಪುರರೇಶ್ವರಂ ಹರಿಕಾಂಶನಸಿಂಗ
> ಪನ್ನಿರ್ಚ್ಛಾಸಿರಮುಮಂ ಪಾನುಂಗಲ್ಲೈ
> ನೂರುಮನ್ ಏಕಾಯತ್ ಪದಿನಾಳ್ಬು
> ಸುಖಸಂಕಥಾ ವಿನೋದದೊಳಿಕೆ" ಎಂದಿದೆ.[೨೫]

ಅಕ್ಕಾದೇವಿ ಕೆಲಕಾಲ ಬನವಾಸಿಯಲ್ಲಿ ಇದ್ದರೂ ಅನಂತರ ಆಕೆ ಕಿಸುಕಾಡು ಪ್ರದೇಶವನ್ನು ಕೇಂದ್ರವಾಗಿ ಮಾಡಿಕೊಂಡಿದ್ದಳು. ಇದಕ್ಕೆ ಆಧಾರವಾಗಿ ಕ್ರಿ.ಶ. ೧೦೫೦ರ ಶಾಸನ -

"ಶ್ರೀ ಮದಕ್ಕಾ ಮಾಸವಾದಿ ನೂರನಾಲ್ವತ್ತುಮಂ
ದುಷ್ಟ ನಿಗ್ರಹ ವಿಶಿಷ್ಟ ಪ್ರತಿಪಾಳನದಿಂ
ಸಲುತ್ತಮಿರೆ" ಎಂದಿದೆ. [೭೬]

ಕೋರಲಹಳ್ಳಿ ಶಾಸನವು ಕಿಸುಕಾಡು, ಬಾಗಡೆಗೆ, ತೊರೆಗಲೆ, ಮಾಸೆಯವಾಡಿ ಪ್ರಾಂತ್ಯಗಳನ್ನು ವಶಪಡಿಸಿಕೊಂಡಿದ್ದನ್ನು ಉಲ್ಲೇಖಿಸಿದೆ.[೭೭] ಅಕ್ಕಾದೇವಿ ಕ್ರಿ.ಶ. ೧೦೧೦ ರಿಂದ ಕ್ರಿ.ಶ. ೧೦೫೦ರ ಕಾಲಕ್ಕೆ ತೊರೆಗಲೆ, ಮಾಸೆಯವಾಡಿ, ಬಾಗಡೆಗೆ ಪ್ರಾಂತ್ಯಗಳನ್ನು ವಶಪಡಿಸಿಕೊಂಡಿದ್ದಳು. ಸ್ವತಂತ್ರವಾಗಿ ನೇರವಾಗಿ ಆಳ್ವಿಕೆ ಮಾಡಿದ ಕನ್ನಡ ರಾಣಿಯರಲ್ಲಿ ಈಕೆಯೂ ಒಬ್ಬಳು. ಸುಗ್ಗಲದೇವಿ ಕಲ್ಯಾಣಿ ಚಾಲುಕ್ಯರ ರಾಜಕುಮಾರಿ. ಈಕೆ ಕಿಸುಕಾಡು-ಎಪ್ಪತ್ತರ ನಿಡಗುಂಡಿಯ ಆಡಳಿತವನ್ನು ನೋಡಿಕೊಳ್ಳುತ್ತಿದ್ದಳು.[೭೮]

ಕೇತಲದೇವಿ, ಲಚ್ಚಲಮಹಾದೇವಿ, ಚಾಮಲದೇವಿ, ಮೈಳಲದೇವಿ, ಹೊಯ್ಸಳ ದೇವಿಯರು ಚಾಲುಕ್ಯರ ಒಂದನೇ ಸೋಮೇಶ್ವರನನ್ನು ವಿವಾಹವಾಗಿದ್ದರು. ಕೇತಲದೇವಿ ಅಗ್ರಹಾರ ಹೊನ್ನವಾಡವನ್ನು ಆಳುತ್ತಿದ್ದಳು[೭೯] ಎಂದೂ ಕರಡಕಲ್ಲ ಮುನ್ನೂರನ್ನು ಆಳುತ್ತಿದ್ದ ಉಲ್ಲೇಖಗಳು[೮೦] ಇವೆ. ಲಚ್ಚಲಮಹಾದೇವಿ 'ಊರು' ಆಳ್ವಿಕೆ ಮಾಡಿದ್ದನ್ನು[೮೧] ಹಾನಗಲ್ಲು ಶಾಸನ ಹೇಳುತ್ತದೆ. ಚಾಮಲದೇವಿಯ ಹೆಸರಿನಲ್ಲಿ ಬಲ್ಲಟಗಿಯಲ್ಲಿ ಮೂರು, ಕಪ್ಪುಗಲ್ಲುಗಳಲ್ಲಿ ಒಂದು, ಬಾಗಲವಾಡದಲ್ಲಿ ಒಂದು ಶಾಸನಗಳು ಸಿಕ್ಕಿರುತ್ತವೆ. ಇವುಗಳು ಈಕೆಯ ಆಡಳಿತಕ್ಕೆ ಒಳಪಟ್ಟ ಪ್ರದೇಶಗಳು ಆಗಿರಬಹುದು. ಒಟ್ಟಿನಲ್ಲಿ ಚಾಮಲದೇವಿ ಆಡಳಿತದ ಪ್ರಮುಖ ಅಧಿಕಾರಿ ಆಗಿದ್ದಳು ಎಂಬುದರಲ್ಲಿ ಸಂಶಯವಿಲ್ಲ. ಹೊಯ್ಸಳದೇವಿ ಕೂಡಾ ಆಡಳಿತದಲ್ಲಿ ಸಹಭಾಗಿಯಾಗಿದ್ದಳು. ಮೈಳಲದೇವಿಯ ಕುರಿತಂತೆ ಹಾವನೂರು ಶಾಸನ -

"ತ್ರೈಲೋಕ್ಯಮಲ್ಲ ದೇವರರ್ದ್ಧಾಂಗನೆ ಶ್ರೀಮತಿ
ಪಿರಿಯರಸಿ ಮೈಳಲದೇವಿಯರ ಬನವಾಸಿ
ಪನ್ನಿಚ್ಛಾಸಿರಮುಮಂ ಆಳುತ್ತಿರೆ" [೮೨] ಎಂದು ದಾಖಲಿಸಿದೆ.

ಹೊನ್ನಾಳಿ ಶಾಸನವು ಹೊಯ್ಸಳರಾಣಿ ಬಗ್ಗೆ ವಿವರಿಸುತ್ತ ಈಕೆ ಕಲ್ಯಾಣದಲ್ಲಿ ಸುಖ-ಸಂತೋಷದಿಂದ ರಾಜ್ಯ ಆಳುತ್ತಿದ್ದಳು[೮೩] ಎಂದು ಉಲ್ಲೇಖಿಸುತ್ತದೆ.

ಲಕ್ಷ್ಮೀದೇವಿ, ಸಾವಳದೇವಿ, ಚಂದಲದೇವಿ, ಜಾಕಲದೇವಿ, ಪಿರಿಯಕೇತಲದೇವಿ, ಅಬ್ಬಲದೇವಿ, ಮೈಳಲದೇವಿ, ಮಲಯಮತಿಮಹಾದೇವಿ, ಪದ್ಮಲದೇವಿ, ಶ್ರೀಯಾದೇವಿ ರಾಣಿಯರು ಎಲ್ಲ ಕಲ್ಯಾಣಿ ಚಾಲುಕ್ಯರ ಆರನೆಯ ವಿಕ್ರಮಾದಿತ್ಯನನ್ನು ವಿವಾಹವಾಗಿದ್ದರು. ಲಕ್ಷ್ಮೀದೇವಿ ಧ್ರೋಣಪುರ ಆಡಳಿತವನ್ನು ಬಹುಕಾಲ ನೋಡಿಕೊಂಡಿದ್ದಳು.[೮೪] ಎಂದೂ, ೧೦೮೪ರ ಶಾಸನ 'ಅನವದ್ಯಾ ಮಂಗಜ ರಾಜ್ಯಲಕ್ಷ್ಮಿ' ಎಂದು ಕರೆಯುವುದರ ಜೊತೆಗೆ ಕಲ್ಯಾಣದ ನೆಲೆವೀಡಿನ ಆಳ್ವಿಕೆ ಮಾಡಿದ್ದನ್ನು[೮೫] ಸಾಬೀತು ಪಡಿಸುತ್ತದೆ. ೧೧೨೫ರಲ್ಲಿ ಪಿರಿಯರಸಿಯಾಗಿ ಪದಿನೆಂಟು ಅಗ್ರಹಾರಮುಮಂ ಧರ್ಮಪುರಮುಮಂ ಆಳುತ್ತಿದ್ದಳು[೮೬] ಎಂದು ಉಲ್ಲೇಖಿಸಿದೆ.

ದೋಣಿ, ಸೂಡಿ, ಹದಿನೆಂಟು ಅಗ್ರಹಾರ, ಡಂಬಳ ಪ್ರದೇಶಗಳವರೆಗೆ ಈಕೆ ಆಳ್ವಿಕೆ ನಡೆಸಿದ್ದಾಳೆ. ನಂತರ ೧೦೯೬-೯೭ರಲ್ಲಿ ದ್ರೋಣಿಕಾಪುರವನ್ನು[೮೭] ೧೧೧೧-೧೨ರಲ್ಲಿ ಸಿಟ್ಟಸಂಗಿಯನ್ನು ಆಳುತ್ತಿದ್ದಳು[೮೮] ಎಂದು ಶಾಸನಗಳು ಸಮರ್ಥಿಸುತ್ತವೆ.

ಸಾವಳದೇವಿ ನರೇಗಲ್ಲನ್ನು ಉಪಜೀವನಕ್ಕಾಗಿ ಪಡೆದುಕೊಂಡು ನೇರವಾಗಿ ಆಡಳಿತ ಮಾಡುತ್ತಿದ್ದಳು ಎಂದೂ,[೮೯] ಚಂದಲದೇವಿ ಅಲಂದೆ ಸಾಸಿರ ಪ್ರಮುಖಾವನೇಕ ಭತ್ತ ಗ್ರಾಮಗಳುಮಂಗಳನ್ನು ದುಷ್ಟರ ನಿಗ್ರಹಕ್ಕೆ, ಶಿಷ್ಟರ ರಕ್ಷಣೆಗಾಗಿ ಆಳುತ್ತಿದ್ದಳು. ಜೊತೆಗೆ ಭತ್ತಗ್ರಾಮ ಪೊಳುಗುಂದದ ಆಡಳಿತವನ್ನು ನೋಡಿಕೊಳ್ಳುತ್ತಿದ್ದಳು[೯೦] ಎಂದು ಶಾಸನಗಳು ಹೇಳುತ್ತವೆ. ಪಿರಿಯಕೇತಲದೇವಿ ಬಲ್ಲಕುಂದೆ ಮುನ್ನೂರರ ಬಳಿಯ ಸಿರುಗಪ್ಪೆ, ತೆಕ್ಕೆಕಲ್ಲು, ಕೊಳನೂರು ಭತ್ತ ಗ್ರಾಮಗಳನ್ನು,[೯೧] ಅಬ್ಬಲದೇವಿ ಕಂಡಿಕಲ್ಲಾನೂರರ ಭತ್ತಗ್ರಾಮವನ್ನು,[೯೨] ಮೆಳ್ಳೆಲದೇವಿ ಅಗ್ರಹಾರ ಕನ್ನವಳ್ಳಿಯನ್ನು,[೯೩] ಜಾಕಲದೇವಿ ಅರಲ್ ಮುನ್ನೂರಳಗಿನ ಇಂಗಳಿಯ ರಾಜ್ಯದ ಆಡಳಿತವನ್ನು,[೯೪] ಮಲಮತಿದೇವಿ ಅಗ್ರಹಾರ ದಿಗ್ಗವಿಗೆಯ ಮೇಲಾಳಿಕೆ ಸಿನ್ದವಾಡಿನಾಡಿನ ಅಗ್ರಹಾರ ತುಂಬಳದ ಆಡಳಿತವನ್ನು,[೯೫] ಜೊತೆಗೆ ಎಲೆಯ ಪೂರ್ವದವಳ್ಳಿವರೆಗೆ[೯೬] ಪದ್ಮಲದೇವಿ ಮಾಂಗೋಳ ಅಗ್ರಹಾರವನ್ನು[೯೭] ಹೀಗೆ ಅನೇಕ ಪ್ರಾಂತ್ಯಗಳನ್ನು ರಾಣಿಯರು ಆಳ್ವಿಕೆ ಮಾಡಿದ್ದಾರೆ. ಸ್ತ್ರೀವಾದ ಈ ರಾಣಿಯರ ದಾಖಲೆಗಳನ್ನು ಹೊರತಂದು, ಚರಿತ್ರೆಯಲ್ಲಿ ಸೇರಿಸಲು ತಿಳಿಸುತ್ತದೆ.

ಮೈಳಲದೇವಿ ಕಲ್ಯಾಣಿ ಚಾಲುಕ್ಯರ ರಾಣಿ. ಕದಂಬರ ಜಯಕೇಸಿಯನ್ನು ವಿವಾಹವಾಗುವುದರ ಜೊತೆಗೆ ಅವನ ಆಡಳಿತದಲ್ಲಿ ಸಹಭಾಗಿಯಾಗಿ ಕಾರ್ಯ ನಿರ್ವಹಿಸಿದ್ದಾಳೆ. ಈಕೆಯನ್ನು ೧೧೨೫ರ[೯೮] ನರೇಂದ್ರ ಶಾಸನ, ೧೧೨೫ರ[೯೯] ಭಾವಿನಹಾಳು ಶಾಸನ, ೧೧೨೬-೨೭ರ[೧೦೦] ನರೇಂದ್ರ ಶಾಸನಗಳು ವಿವರಿಸುತ್ತವೆ. ಕೆಲವು ಬಾರಿ ಸ್ವತಂತ್ರಳಾಗಿಯೂ ಆಳ್ವಿಕೆ ನಡೆಸಿದ ಕೀರ್ತಿ ಈಕೆಯದು.

ಕನ್ನಡದ ರಾಣಿಯರು ಸೀಮಿತ ನೆಲೆಯಲ್ಲಿಯೇ ನಿಂತು ತಮ್ಮ ತಮ್ಮ ರಾಜ್ಯಗಳನ್ನು ವಿಸ್ತರಿಸಿ, ರಕ್ಷಿಸಿದ್ದಾರೆ. ಆದರೆ ಇಂಥ ರಾಣಿಯರ ಆಡಳಿತ, ಆಳ್ವಿಕೆ ಕುರಿತ ದಾಖಲೆಗಳು ಅಷ್ಟಾಗಿ ಇನ್ನೂ ದೊರೆತಿಲ್ಲ. ಜೊತೆಗೆ ಎಲ್ಲಾ ಅರಸರ ರಾಣಿಯರನ್ನು ಕುರಿತಂತೆ ವಿವರಣೆಗಳು ಮುಚ್ಚಿಹೋಗಿವೆ. ಅರಸನೊಬ್ಬನಿಗೆ ರಾಣಿಯರು ಇರಲೇಬೇಕಾಗಿತ್ತು. ಬಹುತೇಕ ಚರಿತ್ರೆಯ ಪುಸ್ತಕಗಳಲ್ಲಿ ಬರೀ ಅರಸರನ್ನು ಕುರಿತಂತೆ ಮಾತ್ರ ಹೇಳುತ್ತವೆ. ಆದರೆ ರಾಣಿ, ಸಾಮಾನ್ಯ ಮಹಿಳೆ, ಆಸ್ಥಾನದ ದೇವಾಲಯದ ಸೂಳೆಯರ ಬಗ್ಗೆ ಯಾವ ವಿವರಗಳು ಇರುವುದಿಲ್ಲ. ಹೀಗಾಗಿ 'ಚರಿತ್ರೆ' ಎಂದರೆ ರಾಜ, ಮಂತ್ರಿ ಅವರುಗಳ ಆಡಳಿತ, ದಿಗ್ವಿಜಯ, ಬಿರುದುಗಳು, ನೆನಪಿಗೆ ಬರುತ್ತವೆ. ಆದ್ದರಿಂದ ಸ್ತ್ರೀವಾದಿ ಚಿಂತನೆಯ ದೃಷ್ಟಿಯಿಂದ ಚರಿತ್ರೆಯನ್ನು ಪುನರ್‌ರಚಿಸುವ, ವ್ಯಾಖ್ಯಾನಿಸುವ ಜರೂರು ಇದೆ. ಅಲ್ಲದೆ ಮುಚ್ಚಿಹೋಗಿರುವ, ದಾಖಲಾಗದ, ನಗಣ್ಯವಾಗಿರುವ ರಾಣಿಯರನ್ನು ಕುರಿತಂತೆ ಸ್ತ್ರೀವಾದಿ ಅಧ್ಯಯನಗಳು ವಿಶೇಷವಾಗಿ ನಡೆಯಬೇಕಾಗಿದೆ.

### ೯. ಯುದ್ಧ ಮತ್ತು ಮಹಿಳೆ

ಯುದ್ಧಗಳು ವಿಭಿನ್ನ ಕಾರಣಗಳಿಂದಾಗಿ ಆಗಾಗ ನಡೆಯುತ್ತಿದ್ದವು. ಇಂಥ ಯುದ್ಧಗಳಲ್ಲಿನ ಗೆಲುವನ್ನು ಕೂಡಾ ಹೆಣ್ಣಿಗೆ ಹೋಲಿಸಿ, ಅದನ್ನು 'ಜಯಲಕ್ಷ್ಮಿ' ಎಂದೂ ಕರೆಯಲಾಗಿತ್ತು. ಯುದ್ಧಕ್ಕೆ ಸೈನಿಕರು ಹೋಗುವಾಗ

ಪ್ರೋತ್ಸಾಹಿಸಲು ಪ್ರೇರಣೆಯಾಗಿ ಮಹಿಳೆಯನ್ನೇ ಬಳಸಿಕೊಂಡಿದ್ದರು. ಸಾಮಾನ್ಯ ಸೈನಿಕರಿಗೆ ಭೂಮಿಯ ಮೇಲಿನ ಸುಂದರಿಯರು ನಿಲುಕುತ್ತಿರಲಿಲ್ಲ. ಸೈನಿಕನೊಬ್ಬನು ಯುದ್ಧದಲ್ಲಿ ಗೆದ್ದು, ಜಯಲಕ್ಷ್ಮಿಯನ್ನು ಹೊಂದಿದ್ದರೆ ಅನೇಕ ಸುಂದರಿಯರು ಅವನ ಬಳಿಗೆ ಹೋಗುತ್ತಿದ್ದರು ಎಂದು ಹೇಳಲಾಗಿತ್ತು. ಯುದ್ಧದಲ್ಲಿ ಸೋತು ಸತ್ತರೆ ದೇವಲೋಕದ ಸುಂದರಿಯರು ಕರೆದುಕೊಂಡು ಹೋಗುತ್ತಾರೆ ಎಂಬ ನಂಬಿಕೆಯನ್ನು ಪುರುಷಪ್ರಧಾನ ಸಮಾಜ ಹುಟ್ಟು ಹಾಕಿತು. ಇದರಿಂದಾಗಿ ಸೈನಿಕರು ದೇವಲೋಕದ ಸುಂದರಿಯರನ್ನು ಸೇರಲು ಇಲ್ಲವೇ ಭೂಮಿಯ ಮೇಲಿರುವ ಸುಂದರಿಯನ್ನು ಪಡೆಯಲು ಯುದ್ಧದಲ್ಲಿ ಭಾಗವಹಿಸಿ, ಸೋಲು-ಗೆಲುವುಗಳಿಗೆ ಕಾರಣರಾಗಿದ್ದರು.

ಯುದ್ಧಗಳಲ್ಲಿ ಕೆಲವೆಡೆ ಸೂಳೆಯರನ್ನು ಬಳಸಿಕೊಂಡಿರುವುದು ತಿಳಿದುಬರುತ್ತದೆ. ಶತ್ರುಗಳ ಕಾರ್ಯ ಚಟುವಟಿಕೆ ತಿಳಿದುಕೊಂಡು ಬರಲು ಮತ್ತು ಶತ್ರುಗಳ ಸೈನಿಕರನ್ನು ನಾಶಮಾಡಲು ಬಳಸಿಕೊಳ್ಳಲಾಗಿದೆ. ಶತ್ರುಗಳು ತಿನ್ನುವ ಆಹಾರದಲ್ಲಿ ಇಲ್ಲವೆ ತಾಂಬೂಲದಲ್ಲಿ ವಿಷಬೆರೆಸಿ ಅದನ್ನು ಸೂಳೆಯರೊಂದಿಗೆ ಕಳಿಸಿಕೊಡುತ್ತಿದ್ದರು. ಈ ಕಾರಣದಿಂದ ಅರಮನೆಗಳಲ್ಲಿ ಅರಸ ಮತ್ತು ಅವನ ಪರಿವಾರದವರು ಉಪಯೋಗಿಸುತ್ತಿದ್ದ ವಸ್ತು, ತಿನ್ನುವ ಆಹಾರ ಹಾಗೂ ಪಾನೀಯಗಳನ್ನು ಮೊದಲು ಬೇರೊಬ್ಬರು ತಿಂದು, ಪರೀಕ್ಷಿಸಿ ಅರಸನಿಗೆ ಕೊಡುತ್ತಿದ್ದರು. ಯುದ್ಧಗಳಿಂದ ಬೇಸತ್ತ ಅರಸನಿಗೆ ಹಾಗೂ ಅವರ ಸೈನಿಕರಿಗೆ ಸೂಳೆಯರು ನೃತ್ಯ ಮತ್ತು ಗಾಯನಗಳ ಮೂಲಕ ಮನರಂಜನೆ ಕೊಡುತ್ತಿದ್ದರು. ಜೊತೆಗೆ ಅವರುಗಳಿಗೆ ದೈಹಿಕ, ಮಾನಸಿಕ ಸುಖವನ್ನು ನೀಡುತ್ತಿದ್ದರು. ಇವರುಗಳಂತೆ ವಿಷಕನ್ಯೆಯರನ್ನು ಶತ್ರುಗಳ ದಮನಕ್ಕೆ ಉಪಯೋಗಿಸುತ್ತಿದ್ದರು. ಆದರೆ ಪ್ರಾಚೀನ ಕರ್ನಾಟಕದಲ್ಲಿ ವಿಷಕನ್ಯೆಯರ ಕುರಿತಂತೆ ದಾಖಲೆಗಳು[೧೦೧] ಮೌನವಾಗಿವೆ. ಆದ್ದರಿಂದ ಸ್ತ್ರೀವಾದಿ ಚಿಂತಕಿಯರಿಗೆ ಈ ಕ್ಷೇತ್ರದಲ್ಲಿ ಅಧ್ಯಯನ ಕೈಗೊಳ್ಳಲು ಹೆಚ್ಚಿನ ಸಾಧ್ಯತೆಗಳಿವೆ.

ರಾಣಿಯರು ಸಹ ಯುದ್ಧಗಳಲ್ಲಿ ಪ್ರತ್ಯಕ್ಷವಾಗಿ, ಪರೋಕ್ಷವಾಗಿ ಭಾಗವಹಿಸಿದ್ದಾರೆ. ಇದಕ್ಕೆ ಆಧಾರವಾಗಿ ಶಾಸನಗಳು, ಕಾವ್ಯಗಳು ಮಾಹಿತಿಯನ್ನು ಒದಗಿಸುತ್ತವೆ. ಉದಾಹರಣೆಗೆ ಗಂಗಮಹಾದೇವಿಯು ಚಾಲುಕ್ಯ ಮೊದಲನೆಯ ವಿಕ್ರಮಾದಿತ್ಯನೊಂದಿಗೆ ಯುದ್ಧಕ್ಕೆ ಹೋಗಿದ್ದಳು. ಈಕೆ ಯುದ್ಧ ಭೂಮಿಯಿಂದಲೇ ದಾನ ಮಾಡಿದ್ದನ್ನು ಗದ್ವಾಲ ತಾಮ್ರಪಟ ಶಾಸನ ಹೇಳುತ್ತದೆ.[೧೦೨] ಗಾಮುಂಡಬ್ಬೆಯ ಅರಸ ರಾಷ್ಟ್ರಕೂಟರ ಮೂರನೆ ಕೃಷ್ಣ. ಗಾಮುಂಡಬ್ಬೆಯು ಯುದ್ಧಭೂಮಿಯಲ್ಲಿಯೇ ಅಮೋಘವರ್ಷನಿಗೆ ಜನ್ಮ ನೀಡಿದ್ದನ್ನು ಸಂಜಾನ ತಾಮ್ರಪಟ ಶಾಸನ ತಿಳಿಸುತ್ತದೆ.[೧೦೩] ಅಕ್ಕಾದೇವಿ ಕಲ್ಯಾಣಿ ಚಾಲುಕ್ಯರ ರಾಜಕುಮಾರಿ, ಕದಂಬರ ಮಯೂರವರ್ಮನನ್ನು ವಿವಾಹವಾಗಿ ಯುದ್ಧದಲ್ಲಿ ನೇರವಾಗಿ ಭಾಗವಹಿಸಿದ್ದಳು. ಆದ್ದರಿಂದ ಈಕೆಗೆ 'ರಣಭೈರವಿ' ಎಂಬ ಬಿರುದು ಕೂಡ ಉಂಟು.[೧೦೪]

ರಾಣಿಯರು, ಸೂಳೆಯರು ಯುದ್ಧದಲ್ಲಿ ಭಾಗವಹಿಸುತ್ತಿದ್ದರು. ಸಾಮಾನ್ಯ ವರ್ಗದ ಮಹಿಳೆಯರು ವೈರಿಗಳಿಂದ ರಕ್ಷಣೆ ಪಡೆಯಲು ಮತ್ತು ಪ್ರಾಣಿ-ಪಕ್ಷಿಗಳ ಜೀವಕ್ಕೆ ಹಾನಿಯಾಗದೇ ಹೋರಾಟ ಮಾಡುತ್ತಿದ್ದರು. ಉದಾಹರಣೆಗೆ ಸಾವಿಯಬ್ಬೆ ಯುದ್ಧದಲ್ಲಿ ಭಾಗವಹಿಸಿದ್ದ ಚಿತ್ರವನ್ನು ಶ್ರವಣಬೆಳಗೊಳ ಶಾಸನ ತಿಳಿಸುತ್ತದೆ. ಈ ಶಾಸನ 'ಮೀಸೆ ಹೊತ್ತ ಗಂಡಸಿಗಿಂತ ಮೊಲೆವೆತ್ತ ಸಾವಿಯಬ್ಬೆ ಶ್ರೇಷ್ಠಳು' ಎಂದು ವಿವರಿಸುತ್ತದೆ.[೧೦೫]

ಒಟ್ಟಿನಲ್ಲಿ ರಾಣಿಯರು, ಸೂಳೆಯರು, ಸಾಮಾನ್ಯ ಮಹಿಳೆಯರು ಸಹ ಯುದ್ಧದಂಥ ಗಂಭೀರ ಕ್ಷೇತ್ರಗಳಲ್ಲಿ ಮುನ್ನಗ್ಗಿ ರಾಜ, ಸೈನಿಕರಿಗೆ ಸ್ಫೂರ್ತಿಯಾಗಿದ್ದು ರಾಜ್ಯಕ್ಕೆ ಶತ್ರುಗಳಿಂದ ಉಂಟಾಗುವ ಉಪಟಳವನ್ನು ನಿಲ್ಲಿಸಿದ್ದಾರೆ ಹಾಗೂ ಪ್ರಜೆಗಳ ನೆಮ್ಮದಿಯ ಬದುಕಿಗೂ ಕಾರಣರಾಗಿರುವರು. ಸ್ತ್ರೀವಾದಿ ನಿಲುವಿನಿಂದ ಇನ್ನಷ್ಟು ಅಧ್ಯಯನಗಳನ್ನು ಕೈಗೊಳ್ಳಲು ಅವಕಾಶಗಳಿವೆ.

### ೩.೫ ಧರ್ಮ ಮತ್ತು ಮಹಿಳೆ

'ಧರ್ಮ' ಎನ್ನುವುದು ಜೀವನ ವಿಧಾನ ಕ್ರಮ. ಅಲ್ಲದೆ ಮಾನವ ಒಂದಲ್ಲ ಒಂದು ಧರ್ಮದಿಂದ ತನ್ನನ್ನು ತಾನು ಅಭಿವ್ಯಕ್ತಪಡಿಸಿಕೊಂಡಿರುತ್ತಾನೆ. ಧರ್ಮದ ಬಗೆಗೆ ಹಲವು ವ್ಯಾಖ್ಯಾನ, ಅರ್ಥ ಗ್ರಹಿಕೆಗಳಿವೆ. 'ಧರ್ಮವನ್ನು ಯಾರು ರಕ್ಷಣೆ ಮಾಡುವರೋ, ಧರ್ಮ ಅವರನ್ನು ರಕ್ಷಿಸುತ್ತದೆ' ಎನ್ನುವ ಮೊದಲಾದ ನಂಬಿಕೆ, ರೂಢಿಗಳು ಜಾರಿಗೆ ಬಂದಿದ್ದವು. ಹೀಗಾಗಿ ಪ್ರತಿಯೊಬ್ಬರು ಧರ್ಮವನ್ನು ಕುರಿತು ಭಯ ಭಕ್ತಿಗಳನ್ನು ಪ್ರದರ್ಶಿಸಿದ್ದರು. ಕುತೂಹಲದ ಸಂಗತಿ ಎಂದರೆ ಎಲ್ಲಾ ಧರ್ಮಗಳ ಪ್ರತಿಪಾದಕರು ಪುರುಷರೇ ಆಗಿರುವುದರಿಂದ 'ಧರ್ಮ' ಎನ್ನುವುದು ಪುರುಷ ಧರ್ಮವೇ ಆಗಿದೆ. ಪುರುಷನ ಬೆಳವಣಿಗೆಗೆ ಹೆಣ್ಣಿನ ನಿರ್ಬಂಧನೆಗಾಗಿ ಹಲವು ಪದ್ಧತಿ, ಆಚಾರ-ವಿಚಾರಗನ್ನು ಜಾರಿಗೊಳಿಸಲಾಗಿದೆ. ಹೆಣ್ಣಿಗೆ ಚೌಕಟ್ಟನ್ನು ನಿರ್ಮಿಸಿ, ಸ್ವರ್ಗ-ನರಕ, ಪಾತಿವ್ರತ್ಯ-ಸೂಳೆ, ಮುತ್ತೈದೆ-ವಿಧವೆ, ಪಾತ್ರಗಳನ್ನು ಕೊಟ್ಟಿದೆ. ಇಂಥ ಪಾತ್ರಗಳ ಜೊತೆಗೆ ಮಹಿಳೆಯರು ಧರ್ಮದ ನೆಲೆಯಲ್ಲಿಯೇ ತಮ್ಮ ಎಲ್ಲ ಸಾಧನೆಗಳನ್ನು ಮಾಡಿ, ಧರ್ಮದ ಪ್ರಸಾರ, ರಕ್ಷಣೆ, ಬೆಳವಣಿಗೆಗೆ ಕಾರಣರಾಗಿದ್ದಾರೆ.

#### ಅ. ಬೌದ್ಧ ಧರ್ಮ ಮತ್ತು ಮಹಿಳೆ

ಮೌರ್ಯ ಚಕ್ರವರ್ತಿ ಅಶೋಕನ ಕಾಲದಲ್ಲಿ ಬೌದ್ಧಧರ್ಮ ಕನ್ನಡ ನಾಡನ್ನು ಪ್ರವೇಶಿಸಿದ್ದು ಚರಿತ್ರೆಗೆ ಸೇರಿ ಹೋದ ಸಂಗತಿ. ಅನಂತರ ಈ ನಾಡಿನ ಮಹಿಳೆಯರ ಮಡಿಲಲ್ಲಿ ಬೆಳದಿದೆ ಎನ್ನಬಹುದು. ಅನೇಕ ಮಹಿಳೆಯರು ಈ ಧರ್ಮದ ಅನುಯಾಯಿಗಳಾಗಿ, ಪೋಷಕಿಯರೂ ಆಗಿದ್ದರು. ಇದರಿಂದಾಗಿ ಬೌದ್ಧ ಧರ್ಮವು ಎಲ್ಲೆಡೆ ಆಚರಣೆಗೆ ಬಂದಿತು. ಇದಕ್ಕೆ ಆಧಾರವೆಂಬಂತೆ ನಮಗೆ ಕಾಣಸುವ ಬಳ್ಳಿಗಾವೆ, ಬನವಾಸಿ, ಗುಲ್ಬರ್ಗಾ ಪ್ರಧಾನ ಬೌದ್ಧ ಕೇಂದ್ರಗಳೇ[೧೦೬] ಸಾಕ್ಷಿ. ನಾಗಸಿರಿ, ನಾಗಿಯಕ್ಕ, ಅಕ್ಕಾದೇವಿ, ಮಾಳಲದೇವಿ, ಲಕ್ಷ್ಮಿದೇವಿ, ಶಾಂತಲೆ ಮೊದಲಾದ ಮಹಿಳೆಯರು ಈ ಧರ್ಮದ ಬೆಳವಣಿಗೆಗೆ ಹಾಗೂ ರಕ್ಷಣೆಗೆ ದಾನ-ದತ್ತಿ ನೀಡಿರುವ ಬಗ್ಗೆ ಉಲ್ಲೇಖಗಳಿವೆ. ಶಿವಸ್ಕಂದ ನಾಗಸಿರಿ ಬನವಾಸಿಯಲ್ಲಿ ಒಂದು ಕೆರೆ, ನಾಗ, ವಿಹಾರ ಕಟ್ಟಿಸಿದ್ದನ್ನು ಕ್ರಿ.ಶ. ೩೦೦ರ  ಶಾಸನ ವಿವರಿಸಿದೆ. ಇದೇ ವಂಶದ ರಾಣಿ ನಾಗರ್ಜುನ ಕೊಂಡದಲ್ಲಿ ಮಹೀಶಾಸಕರಿಗಾಗಿ ವಿಹಾರಗಳನ್ನು ಕಟ್ಟಿಸಿದ್ದಳು. ಅಕ್ಕಾದೇವಿಯನ್ನು ಕುರಿತ ಶಾಸನ ಜಿನಬುದ್ಧಾನಂತ ರುದ್ರಾಗಮ ನಿಗದಿತ ಧರ್ಮಗಳ ಮಾಡಿಸಿದ್ದನಂತೆ[೧೦೭] ಎಂದು ಹೇಳುತ್ತದೆ. ಬಾಪುರ ನಾಗಿಯಕ್ಕ ಎಂಬಾಕೆ ಪ್ರಬೌದ್ಧ ಬಳಾರರ ಕಾಲನ್ನು ತೊಳೆದು ಭೂಮಿದಾನ[೧೦೮] ಮಾಡಿದ್ದಾಳೆ. ಆರಂಭದಲ್ಲಿ ಬುದ್ಧ ಮಹಿಳೆಯರನ್ನು ತನ್ನ ಧರ್ಮಕ್ಕೆ ಸೇರಿಸಿಕೊಳ್ಳಲಿಲ್ಲ. ನಂತರದ ದಿನಗಳಲ್ಲಿ ಅನೇಕ ನಿರ್ಬಂಧಗಳನ್ನು ರೂಪಿಸಿ, ಭಿಕ್ಷುಣಿಯನ್ನಾಗಿ ಸೇರಿಸಿಕೊಂಡ. ಇದರಿಂದಾಗಿ ವಜ್ರಯಾನ ಪಂಥ ಬೆಳಕಿಗೆ ಬಂದಿತು. ನಂತರ ಆರಂಭದ ನೀತಿ-ನಿರ್ಬಂಧಗಳು ಸಡಿಲಗೊಂಡದ್ದು ಅದ್ದರಿಂದಲೇ 'ತಾರಾಭಗವತಿ'ಯ ಆರಾಧನೆ ರೂಢಿಗೆ ಬಂದಿದ್ದು. ಬೌದ್ಧ ಸಾಹಿತ್ಯದ

"ತಾರಾಭಗವತಿ ಹರಿ, ಕರಿ, ಶಿಖಿ

ಫಣಿ, ತಸ್ಕರ, ನಿಗಳ, ಜಳ, ಆರ್ಣವ

ಪಿಶಾಚಿಗಳ ಭಯವನ್ನು ಹೋಗಲಾಡಿಸುವವಳೆಂದು"

- ಉಲ್ಲೇಖಿಸುತ್ತದೆ.[೧೦೯] ಮಾಳಲದೇವಿ ವಿಹಾರಗಳನ್ನು ಕಟ್ಟಿಸಿದ್ದನ್ನು ಹಾನಗಲ್ಲು ಶಾಸನ ವಿವರಿಸುತ್ತಾ ಈಕೆಯನ್ನು ಬೌದ್ಧ ವಿಹಾರ ಮಹಾಭವನಗಳ ನಿರ್ಮಾಪಕಿ ಎಂದು[೧೧೦] ಗುರುತಿಸಿದೆ. ಲಕ್ಷ್ಮಿದೇವಿ ಕಲ್ಯಾಣಿ ಚಾಲುಕ್ಯರ ರಾಣಿ ಚತುಸ್ಸಮಯ ಸಮುದ್ದರಣರೆನಿಸಿದ ಹದಿನಾರು ಮಹಾನ್ ಕರಗಳನ್ನು ಡಂಬಳದ ಬೌದ್ಧ ವಿಹಾರಕ್ಕೆ, ಲೊಕ್ಕಿಗುಂಡಿಯ ತಾರಾದೇವಿ ವಿಹಾರಕ್ಕೆ ಅಲ್ಲಿಯ ಬುದ್ಧ ದೇವರ ಪೂಜೆಗಾಗಿ, ಬಿಕ್ಷುಗಳಿಗೆ ದಾನವಾಗಿ ಕೊಟ್ಟಿದ್ದಳು.[೧೧೧] ಶಾಂತಲೆಸೆಟ್ಟಿ ಎಂಬಾಕೆ 'ಚತುರೆ'ಯೆನಿಸಿದ್ದಳು[೧೧೨] ಎಂಬ ದಾಖಲೆಗಳು ಇವೆ. ಬೌದ್ಧಧರ್ಮದ ಪ್ರಸಾರಕ್ಕೆಂದು ಯೋಗಿನಿ, ಕುಸುಳಿಯರು ಇರುವುದನ್ನು ಶಾಸನಗಳು ಉಲ್ಲೇಖಿಸುತ್ತವೆ. ಬೌದ್ಧಧರ್ಮದ ಬೆಳವಣಿಗೆಗೆ ಕಾರಣರಾದ ಮಹಿಳೆಯರನ್ನು ಸ್ತ್ರೀವಾದಿ ಅಧ್ಯಯನದಿಂದ ಗುರುತಿಸಬೇಕಾಗಿದೆ.

### ಆ. ಜೈನಧರ್ಮ ಮತ್ತು ಮಹಿಳೆ

ಕರ್ನಾಟಕದ ಪ್ರಮುಖ ಧರ್ಮಗಳಲ್ಲಿ ಜೈನ ಧರ್ಮವೂ ಒಂದು. ಉತ್ತರ ಭಾರತದಲ್ಲಿ ಬರಗಾಲ ಆರಂಭವಾದಾಗ ಚಂದ್ರಗುಪ್ತಮೌರ್ಯ ಆತನ ಗುರು ಭದ್ರಬಾಹುಮುನಿ ಶ್ರವಣಬೆಳಗೊಳಕ್ಕೆ ಬಂದರು. ಇವರ ಜೊತೆಯಲ್ಲಿಯೆ ಜೈನಧರ್ಮವು ಪ್ರವೇಶಿಸಿತು. ಇದಕ್ಕೆ ಆಧಾರವಾಗಿ ನಮಗೆ ಕಾಣುತ್ತಿರುವ ಜೈನ ಕೇಂದ್ರಗಳೇ ಸಾಕ್ಷಿ. ಜೈನಧರ್ಮದ ಸನ್ಯಾಸಿನಿಯರನ್ನು ಎರಡು ಭಾಗಗಳಾಗಿ ಗುರುತಿಸಲಾಗಿದೆ. ಮೊದಲನೆಯವರು ಕಂತಿಯರೆಂದೂ, ಎರಡನೆಯವರನ್ನು ಶ್ರಾವಕಿಯರೆಂದು. ಜೀವನದಲ್ಲಿ ಜುಗುಪ್ಸೆ ಹೊಂದಿದ ಎಲ್ಲ ವರ್ಗದ ಮಹಿಳೆಯರು ಕಂತಿಯರಾಗಲು ಅವಕಾಶವಿತ್ತು. ಕಂತಿಯರು ಆಧ್ಯಾತ್ಮ ಮಾರ್ಗದಲ್ಲಿ ಜೈನ ಧರ್ಮವನ್ನು ಪ್ರಸಾರ ಮಾಡುತ್ತಿದ್ದರು. ಕಂತಿಯರು ತಾವು ಮಾಡಿದ ಪಾಪ ಕಾರ್ಯಗಳನ್ನು ಕಡಿಮೆ ಮಾಡಿಕೊಳ್ಳಲು ತಮ್ಮ ತಲೆಯಲ್ಲಿನ ಕೂದಲನ್ನು ಕಿತ್ತುಕೊಳ್ಳಬೇಕಾಗಿತ್ತು. ಶ್ರೀ ಸಾವಿಯಬ್ಬೆ ತನಗೆ ಸಾವು ಸಮೀಪಿಸಿದ್ದನ್ನು ತಿಳಿದು 'ತಲೆಯಂ ಪರಿದು ಮಾಡಿಕೊಂಡಿದ್ದಳು' ಎಂಬ ಉಲ್ಲೇಖಗಳಿವೆ.[೧೧೩] ಈ ಕಂತಿಯರು ಸನ್ಯಾಸಿನಿಯರಾಗಿ ಹೆಸರನ್ನು ಬದಲಾಯಿಸಿಕೊಂಡು ತಮ್ಮ ಹೆಸರುಗಳ ಮುಂದೆ ಕಂತಿ, ಅಬ್ಬೆ, ವೆಕನ್ತಿ, ಅಜ್ಜಿ ಎಂಬ ವಿಶೇಷಣಗಳನ್ನು ಸೇರಿಸಿಕೊಂಡಿದ್ದರು. ಕೆಲವು ಬಾರಿ ಇತರೆ ಮಹಿಳೆಯರಿಗೆ ದೀಕ್ಷೆಯನ್ನು ಕೊಟ್ಟಿದ್ದಾರೆ. ಬೂಚ್ಚವ್ವೆ ಎಂಬ ಕಂತಿ ನೆಚಟಿಮತಾಯಿಗೆ ದೀಕ್ಷೆ ಕೊಟ್ಟಿದ್ದಳು.[೧೧೪] ಇವಳಂತೆ ನಾಣಬ್ಬೆ-ಪಾಂಬಬ್ಬೆಗೆ,[೧೧೫] ಪೊಲ್ಲಬ್ಬೆ-ಸಾಯಿಬ್ಬೆಗೆ,[೧೧೬] ಶ್ರೀಮತಿಗಂತಿ-ಮಾಂಕಬ್ಬೆಗೆ,[೧೧೭] ತೊಯ್ಯಬ್ಬೆಯು-ಅಮ್ಮಬ್ಬೆಕನ್ತಿಗೆ,[೧೧೮] ಇನ್ನೂ ಮೊದಲಾದ ಕಂತಿಯರು ತಮ್ಮ ಶಿಷ್ಯರಿಗೆ ದೀಕ್ಷೆ ಕೊಟ್ಟಿದ್ದರು. 'ಆದಿಪುರಾಣ'ದಲ್ಲೂ ಸನ್ಯಾಸಿನಿಯರನ್ನು ಹೇಳುವಾಗ ಬ್ರಾಹ್ಮಿ ಮತ್ತು ಸುಂದರಿಯರು ನೇತೃತ್ವದಲ್ಲಿ ಮೂರು ಲಕ್ಷ ಸನ್ಯಾಸಿನಿಯರು ಇದ್ದರು ಎಂದು ಹೇಳುತ್ತದೆ. ಈ ಕಂತಿಯರು ಪುರುಷ ಸನ್ಯಾಸಿಗಳಿಂದ ದೀಕ್ಷೆ ಪಡೆದಿದ್ದರೂ ಕೆಲವು ಬಾರಿ ತಾವೇ ಪುರುಷರಿಗೆ ದೀಕ್ಷೆ ಕೊಟ್ಟಿದ್ದರು. ರಾತ್ರಿಮತಿಗಂತಿ ಎಂಬಾಕೆ ಜಮ್ಮಗಾವುಂಡನಿಗೆ[೧೧೯] ಪೊಳಿಯಬ್ಬೆಗಂತಿ-ಜಗಮಣಾಚಾರಿಗೆ,[೧೨೦] ಮಾಕಬ್ಬೆ-ಬೀಚಗವುಡನಿಗೆ,[೧೨೧] ಮೊದಲಾದ ಕಂತಿಯರು ಪುರುಷರಿಗೆ ದೀಕ್ಷೆ ಕೊಟ್ಟಿದ್ದು

ಕುತೂಹಲಕರವಾಗಿದೆ. ಇಂಥ ಉಲ್ಲೇಖಗಳಿಂದ ಸ್ತ್ರೀವಾದ ಈ ಕಂತಿಯರ ಸಾಧನೆಗಳನ್ನು ಗುರುತಿಸಿ, ಚರಿತ್ರೆಯಲ್ಲಿ ದಾಖಲಿಸಲು ಬಯಸುತ್ತದೆ.

ಪ್ರಾಚೀನ ಕರ್ನಾಟಕದ ಚರಿತ್ರೆಯ ಕಾಲಘಟ್ಟದಲ್ಲಿ ಕಂತಿಯರ ಸಂಖ್ಯೆ ವಿಪುಲವಾಗಿತ್ತು. ಅವರುಗಳಲ್ಲಿ ನಾಣಬ್ಬೆಕಂತಿ, ಪರಮಕಂತಿ, ಮರಮತಿಕಂತಿ, ಮಂಕಬ್ಬೆಕಾಂತಿ, ಜಾಕ್ಕಿಯಬೆಕಂತಿ, ಮೋನಿಮತಿಕಂತಿ, ಮೊಳವೆಕಂತಿ, ಚಂದ್ರಮತಿಯವ್ವೆ, ದೇವಿಯಬ್ಬೆಕಂತಿ, ಮರುದೇವಿ ಅಬ್ಬೆ ಮೊದಲಾದವರು. ಆದರೆ ಪಿ.ಬಿ.ದೇಸಾಯಿಯವರು ಕಂತಿ, ಅಜ್ಜಿಯರು ವಿಭಿನ್ನರಾಗಿದ್ದಾರೆ ಎಂದು ಹೇಳುತ್ತಾ, ಅಜ್ಜಿಯರು ಸಾಮಾನ್ಯ ವರ್ಗದ ಮಹಿಳೆಯರು ಎಂದೂ, ಕಂತಿಯರು ವಿಶೇಷ ವರ್ಗದ ಮಹಿಳೆಯರು ಎಂದಿದ್ದಾರೆ. ಒಟ್ಟಿನಲ್ಲಿ 'ಕಂತಿ'ಯರು ಜೈನಧರ್ಮದ ಎರಡೂ ಮಹಿಳಾ ಗುಂಪುಗಳಲ್ಲಿ ಇವರೂ ಒಬ್ಬರು ಎನ್ನಬಹುದಾಗಿದೆ.

ಜೈನಧರ್ಮದ ಪ್ರಸಾರದಲ್ಲಿ 'ಶ್ರಾವಕಿ'ಯರ ಪಾತ್ರ ಪ್ರಮುಖವಾಗಿತ್ತು. ಶ್ರಾವಕಿಯರು ಸಂಸಾರಿಗಳಾಗಿ, ಎಲ್ಲ ಹಂತದ ಗೃಹಣಿಯರು ಇರುತ್ತಿದ್ದರು. ಶ್ರಾವಕಿಯರು ಬಸದಿಗಳನ್ನು ನಿರ್ಮಿಸಿದ್ದಾರೆ. ಇನ್ನೂ ಕೆಲವರು ದೇವರ ಕಾರ್ಯಕ್ಕಾಗಿ ಭೂಮಿ, ಗದ್ಯಾಣ, ತೋಟ ಮೊದಲಾದವುಗಳನ್ನು ನೀಡಿದ್ದಾರೆ. ಮತ್ತೆ ಕೆಲವರು ಬಸದಿಗಳ ಜೀರ್ಣೋದ್ಧಾರ ಮಾಡಿರುವ ದಾಖಲೆಗಳಿವೆ.

ಕಂತಿ ಮತ್ತು ಶ್ರಾವಕಿಯರು 'ಸಲ್ಲೇಖನ ವ್ರತ' ಕೈಗೊಂಡು ಮರಣ ಹೊಂದುತ್ತಿದ್ದರು. ಇದಕ್ಕೆ ಆಧಾರವಾಗಿ ನಾವು ಕಾಣುತ್ತಿರುವ ಶ್ರವಣಬೆಳಗೊಳ, ಕೊಪ್ಪಳ, ಬಂಕಾಪುರ, ಸೊರಬ, ಹುಂಚ, ಚಿಕ್ಕಮಾಗಡಿ ಮೊದಲಾದ ಪ್ರದೇಶಗಳನ್ನು ಗಮನಿಸಬಹುದು. ಇಂಥ ಮರಣಗಳನ್ನು 'ಸಮಾಧಿ ಮರಣ' ಎಂದು ಕರೆಯಲಾಗುತ್ತಿತ್ತು. ಕ್ರಿ.ಶ. ೯೧೮ರ ಶಾಸನ ಜಕ್ಕಿಯಬ್ಬೆಯ ಸಮಾಧಿ ಮರಣವನ್ನು ಹೇಳುತ್ತದೆ.[೧೨೨] ಅಂತೆಯೇ ಪಾಂಬಬ್ಬೆ, ನಾಣಬ್ಬೆ, ವೈಜಬ್ಬೆ, ಬೊಪ್ಪವ್ವೆ ದೇವಿಯಕ್ಕ, ಬೋಗವ್ವೆ ಮೊದಲಾದ ಮಹಿಳೆಯರು ಸಮಾಧಿ ಮರಣವನ್ನು ಸ್ವೀಕರಿಸಿದ್ದರು.

ಸಮಾಧಿ ಮರಣವನ್ನು ಸಾಮೂಹಿಕವಾಗಿ ಕೈಗೊಳ್ಳುತ್ತಿದ್ದರು. ಯಶೋಭದ್ರೆ ಎಂಬಾಕೆ ಆಕೆಯ ಇಪ್ಪತ್ನಾಲ್ಕು ಸೊಸೆಯರು, ಕಮಳ ಶ್ರೀ ಕಂತಿಯರ ನೇತೃತ್ವದಲ್ಲಿ ಸಮಾಧಿ ಮರಣ ಹೊಂದಿದ್ದರು.[೧೨೩] ಇಂಥ ಸಮಾಧಿ ಮರಣ ಹೊಂದಿದವರ ನೆನಪಿಗಾಗಿ ಸ್ಮಾರಕಗಳನ್ನು ಕಟ್ಟಿಸಿ, ಆ ಮರಣದ ಪ್ರದೇಶಗಳನ್ನು ಪವಿತ್ರ ಹಾಗೂ ಪುಣ್ಯ ಕ್ಷೇತ್ರಗಳನ್ನಾಗಿ ಮಾಡಲಾಗುತ್ತಿತ್ತು.

ಜೈನಧರ್ಮದ ಕಂತಿಯರು, ಶ್ರಾವಕಿಯರು ಹಲವು ರಾಣಿಯರಿಂದ ಇತರೆ ಮಹಿಳೆಯರಿಂದ ಪೋಷಿತರಾಗಿದ್ದರು. ಜೊತೆಗೆ ಇವರಿಗೆ ಅಪಾರ ದಾನ-ದತ್ತಿಗಳು ಬರುತ್ತಿದ್ದವು. ಸೂಳೆಯರು ಕೂಡ ಈ ಧರ್ಮಕ್ಕೆ ಆಶ್ರಯ ನೀಡಿ, ದಾನ-ದತ್ತಿ ಕೊಟ್ಟಿದ್ದಾರೆ. ಈ ದಿಸೆಯಲ್ಲಿ ಸ್ತ್ರೀವಾದಿ ಚಿಂತಕಿಯರಿಗೆ ಹೆಚ್ಚಿನ ಅಧ್ಯಯನ ಕೈಗೊಳ್ಳುವ ಸಾಧ್ಯತೆಗಳಿವೆ.

### ೩. ವೈಷ್ಣವ, ಶೈವ ಧರ್ಮ ಮತ್ತು ಮಹಿಳೆ

ಬೌದ್ಧ, ಜೈನ ಧರ್ಮಗಳ ಜೊತೆಯಲ್ಲಿಯೇ ವೈಷ್ಣವ, ಶೈವ ಧರ್ಮಗಳು ಬೆಳೆದು ಬಂದಿದ್ದವು. ಒಂದೇ ರಾಣಿ ಮನೆತನದಿಂದಲೂ ನಾಲ್ಕು ಧರ್ಮಗಳಿಗೆ ಆಶ್ರಯ, ಪೋಷಣೆ ಸಿಕ್ಕಿದೆ. ರಾಣಿಯರು ಅಲ್ಲದೆ.

ಇತರೆ ಮಹಿಳೆಯರು ವೈಷ್ಣವ, ಶೈವ ಧರ್ಮಗಳಿಗೆ ಪ್ರೋತ್ಸಾಹ ನೀಡಿದ್ದರು. ಆದ್ದರಿಂದ ನಾಲ್ಕು ಧರ್ಮಗಳಿಗೆ ಆಶ್ರಯ ನೀಡಿ, ಚತುರ ಧರ್ಮಗಳ ಪೋಷಕಿಯರು ಎಂಬ ಹೆಸರಿಗೆ ಪಾತ್ರರಾಗಿರುವರು. ಉದಾಹರಣೆಗೆ ಅಕ್ಕಾದೇವಿ ನಾಲ್ಕು ಧರ್ಮಗಳನ್ನು ಪೋಷಿಸಿದ್ದಳು. ಸ್ತ್ರೀವಾದಿ ನೆಲೆಯಿಂದ ಅಧ್ಯಯನ ಕೈಗೊಳ್ಳಲು ಸಾಕಷ್ಟು ಅವಕಾಶಗಳು ಇವೆ.

## ೩.೭ ಆರ್ಥಿಕತೆ ಮತ್ತು ಮಹಿಳೆ

ಹಣ ಎಲ್ಲಾ ಕಾರ್ಯಗಳ ಸಿದ್ಧಿಗೂ ಕಾರಣವಾಗಿರುತ್ತದೆ. ಆರ್ಥಿಕವಾಗಿ ನೆಮ್ಮದಿ ಇದ್ದವರು ವಿಭಿನ್ನ ಕಾರ್ಯಗಳಲ್ಲಿ ತೊಡಗಲು ಸಾಧ್ಯ. ಅಂತೆಯೇ ಪ್ರಾಚೀನ ಕನ್ನಡ ಮಹಿಳೆಯರ ದಾನ-ದತ್ತಿಗಳನ್ನೂ ಕಂಡಾಗ ಅವರು ಸಂಪೂರ್ಣವಾಗಿ ಅಲ್ಲದಿದ್ದರೂ ಸ್ವಲ್ಪ ಮಟ್ಟಿಗೆಯಾದರೂ ಆರ್ಥಿಕ ಸ್ವತಂತ್ರ ಪಡೆದಿದ್ದರು. ತಮ್ಮ ತಮ್ಮ ಅಂತಸ್ತಿಗೆ ಅನುಗುಣವಾಗಿ ಅವರು ಆರ್ಥಿಕ ಚಟುವಟಿಕೆಗಳಲ್ಲಿ ನಿರತರಾಗಿದ್ದರು. ಈ ಮಹಿಳೆಯರು ನಿರ್ಮಿಸುತ್ತಿದ್ದ ಬಸದಿ, ವಿಹಾರ, ದೇವಾಲಯಗಳು ಪರೋಕ್ಷವಾಗಿ ಉದ್ಯೋಗಗಳ ಸೃಷ್ಟಿಗೆ ಕಾರಣವಾಗಿದ್ದವು. ಇದರಿಂದ ಪ್ರಜೆಗಳ ವರಮಾನ ಹೆಚ್ಚಾಗಿ, ಆರ್ಥಿಕ ಚಟುವಟಿಕೆಗಳಲ್ಲಿ ನಿರತರಾಗಲು ಸಾಧ್ಯವಾಗುತ್ತಿತ್ತು. ದೇವರ ಕಾರ್ಯಗಳಿಗಾಗಿ ನೀಡಿದ ದಾನದಿಂದ ಪೂಜಾರಿ ಅಥವಾ ಪುರೋಹಿತ ಸ್ಥಾನ (ಹುದ್ದೆ)ದ ಸೃಷ್ಟಿಯೇ ಆಗಿತ್ತು.

ಏಕಪುತ್ರಿಯರಿಂದ ಅವರ ಆಸ್ತಿ-ಸಂಪತ್ತು ಎಲ್ಲ ರಾಜನಿಗೆ ಸೇರುತ್ತಿತ್ತು. ಉದಾಹರಣೆಗೆ ಪೂನ್ನಾಡಿನ ಜ್ಯೇಷ್ಠೆಯು ಗಂಗರ ರಾಜಕುಮಾರನನ್ನು ವಿವಾಹವಾಗಿ ತನ್ನ ಆಸ್ತಿ-ಸಂಪತ್ತನ್ನೆಲ್ಲಾ ಗಂಗ ವಂಶಸ್ಥರಿಗೆ ನೀಡಿದ್ದಳು.

'ಮಿತಾಕ್ಷರ' ಕೃತಿಯು ಸ್ತ್ರೀ ಧನದ ಬಗ್ಗೆ ಹೇಳುತ್ತ ಸ್ತ್ರೀಯರ ಧನವನ್ನು ಯಾರು ಉಪಯೋಗಿಸಬಾರದು ಎಂದು ತಿಳಿಸಿ, ಅದನ್ನು ಬರಗಾಲ, ಕಾಯಿಲೆ, ಧಾರ್ಮಿಕ ಕಾರ್ಯಗಳಿಗೆ ಉಪಯೋಗಿಸಬೇಕೆಂದು ಹೇಳುತ್ತದೆ. ತಾಯಿಯಿಂದ ಮಗಳಿಗೆ ಸ್ತ್ರೀತತ್ವ ಹರಿದು ಬಂದಿರುತ್ತದೆ. ಆದ್ದರಿಂದ ತಾಯಿಯ ಸಂಪತ್ತಿಗೆ ಮಗಳು ಹಕ್ಕುದಾರಳು ಎಂದು ವಿವರಿಸಿದ್ದಾನೆ. ಹೆಣ್ಣುಮಕ್ಕಳು ಇಲ್ಲದಿದ್ದಾಗ ತಾಯಿಯ ಸಂಪತ್ತು ಸಹೋದರರಿಗೆ ಸೇರುತ್ತದೆ ಎಂದು ಹೇಳಿ, ಸ್ತ್ರೀಯರಿಗೆ ಸ್ವಲ್ಪವಾದರೂ ಆರ್ಥಿಕ ಭದ್ರತೆಯನ್ನು ನೀಡಿದ್ದಾರೆ.

ಈ ಕಾಲಘಟ್ಟದಲ್ಲಿಯೂ ಭೂಮಿಯನ್ನು ಹೆಣ್ಣಿಗೆ ಹೋಲಿಸಿದ್ದರು. ಕ್ರಿ.ಶ. ೧೧೫೩ರ ಶಾಸನವೊಂದು ಹೀಗೆ ವಿವರಿಸುತ್ತದೆ. ತನ್ನ ಗರ್ಭದಿಂದ ಹೊರಟ ಧಾನ್ಯಾದಿಗಳಿಂದ ಜನರನ್ನು ಸಾಕುವ ಭೂಮಿಯನ್ನು ತಾಯಿಯೆಂದೂ, ಬೆಳೆಗಳನ್ನು ಬೆಳೆಯುವ ರೈತರನ್ನು ಭೂದೇವಿಯ ಮಕ್ಕಳೆಂದು ಹೇಳುತ್ತದೆ.[೨೪] ಅಂದು ಕನ್ಯಾದಾನ ಶ್ರೇಷ್ಠವಾಗಿತ್ತು. ಅಂತೆಯೇ ಭೂಮಿಯೂ ಹೆಣ್ಣಾಗಿದ್ದರಿಂದ ದಾನ ಮಾಡುವುದು ಶ್ರೇಷ್ಠವೆಂದು ಭಾವಿಸಿದ್ದರು. ಅಂತೆಯೇ ದಾನ ದತ್ತಿ ಕೊಡುವಾಗ ಭೂಮಿಯನ್ನು ಕೊಟ್ಟಿದ್ದರು. ಈ ಮಹಿಳೆಯರು ನೀಡಿದ ದಾನ-ದತ್ತಿಗಳು ಹಣ, ಭೂಮಿ, ತೋಟಗಳು ಸಂಪತ್ತಿನ ರೂಪಗಳಾಗಿದ್ದವು. ಆದ್ದರಿಂದ ಅವುಗಳನ್ನೆಲ್ಲಾ ಆರ್ಥಿಕ ಮಟ್ಟದಿಂದ ನೋಡಲು ಸಾಧ್ಯವಿದೆ. ಈ ದಾನ-ದತ್ತಿಗಳಿಗೆ ಕಾರಣಗಳು ಹಲವು. ಅವು ಕೀರ್ತಿ, ಪ್ರತಿಷ್ಠೆ, ಧರ್ಮಪ್ರಸಾರ, ರಕ್ಷಣೆಗೆ ಹೀಗಲ್ಲದೆ ಮೋಕ್ಷ, ಸತ್ತವರ ನೆನಪಿಗಾಗಿ, ಸಂತೋಷವನ್ನಾಗಿ ನೀಡಿರುವುದು ಉಂಟು. ಈ ದಾನಗಳು ವೈಯಕ್ತಿಕವಾಗಿ, ಗುಂಪಾಗಿಯೂ ನೆರವೇರುತ್ತಿದ್ದವು.

ಅಕ್ಕಾದೇವಿ ರಿಷಿ, ಅಜ್ಜಿಯರ ಆಹಾರ, ಬಟ್ಟೆಗಾಗಿ ಭೂದಾನ ನೀಡಿದ್ದಳು.[೧೨೫] ಪರಳ ಪಳ್ಳಿಯ ಅರಸಿಗಾವುಂಡಿ ನಾಗಗಾವುಂಡರು ಜಿನಾಲಯದ ರಿಷಿ, ಅಜ್ಜಿಯರ ಆಹಾರಕ್ಕೆ ನಾಲ್ಕುನೂರು ಮರದ ಅಡಿಕೆಯ ತೋಟ, ಒಂದು ಮತ್ತರು ಗದ್ದೆ, ಮೂರು ಮತ್ತರು ಎರೆಭೂಮಿ ಕೊಟ್ಟಿದ್ದಳು.[೧೨೬] 'ಕುಂಕುಮ ಮಹಾದೇವಿಯು' ಪುಲಿಗೆರೆಯಲ್ಲಿ ಆನೆಸಜ್ಜೆ ಬಸದಿಯನ್ನು,[೧೨೭] ಕುಂದಜ್ಜಿ ಲೋಕತಿಲಕ ಎಂಬ ಜಿನಭವನವನ್ನು,[೧೨೮] 'ಅತ್ತಿಮಬ್ಬೆ' ಲಕ್ಕುಂಡಿಯಲ್ಲಿ ಬಸದಿಗಳನ್ನು, 'ಚೆಟ್ಟಲದೇವಿ' ಕೆರೆ ಬಾವಿಗಳೊಂದಿಗೆ ಬಸದಿಯನ್ನು,[೧೨೯] ಜಾಗಲದೇವಿ ಪದ್ಮಾವತಿ ಬಸದಿಯ ಮುಂದೆ ಮಕರತೋರಣ ಮಾಡಿಸಿದ್ದಳು.[೧೩೦] ಮಾಳಲದೇವಿಯು ಜಿನಬಸದಿ ಮಿಳಿರ್ವಪತಾಕೆ, ಮಕರತೋರಣ, ಮಾನಗಂಬ, ಚೈತ್ಯಗೃಹಗಳನ್ನು ಮಾಡಿದ್ದಳು. ಅಲ್ಲದೆ ಕುಪ್ಪಟೂರಿನಲ್ಲಿ ಪಾರ್ಶ್ವನಾಥ ಚೈತ್ಯಾಲಯವನ್ನು ನಿರ್ಮಿಸಿ, ಮಹಾ ಜನಗಳೊಂದಿಗೆ ಪೂಜಿಸಿ, 'ಬ್ರಹ್ಮಜಿನಾಲಯ' ಎಂದು ಹೆಸರಿಟ್ಟಳು. ಜೊತೆಗೆ ದೇವರ ಪೂಜೆ, ರಿಷಿಯರ ಆಹಾರಕ್ಕಾಗಿ ದತ್ತಿ ಕೊಟ್ಟಿದ್ದಳು.[೧೩೧]

ಪಿರಿಯಕೇತಲದೇವಿ ಸಿರುಗುಪ್ಪೆಯ ಕೇತಲೇಶ್ವರ ದೇಗುಲಕ್ಕೆ ಸಿರುಗುಪ್ಪೆಯ ತೋಟ ಮತ್ತರ, ಮನೆಯ ನಿವೇಶನ ಕೊಟ್ಟಿದ್ದಳು.[೧೩೨] ಪಟ್ಟಮಹಾದೇವಿ ಮಲಯಮತಿ ಅಗ್ರಹಾರ ತುಂಬುಳದ ಮಹಾಜನರಿಗೆ, ಧರ್ಮವತ್ತಳೆಯಾಗಿ ಉಪಾಧ್ಯಾಯನಿಗೆ ಎಂಟು ಗದ್ಯಾಣ, ಪುರಾಣ ಓದುವ ಭಟ್ಟನಿಗೆ ಎಂಟು ಗದ್ಯಾಣ, ಋಗ್ವೇದ, ಯಜುರ್ವೇದದ ಉಪಾಧ್ಯಾಯರಿಗೆ ಹನ್ನೆರಡು ಗದ್ಯಾಣ, ಅಗ್ನಿಷ್ಟಗೆಯ ಬ್ರಾಹ್ಮಣರಿಗೆ ಎರಡು ಗದ್ಯಾಣ ನೀಡಿದ್ದಳು.[೧೩೩] ಪದ್ಮಲಮಹಾದೇವಿ ರಂಗಪುರದ ನಾರಸಿಂಘದೇವರ ಸ್ನಾನ, ಪ್ರಸಾದಕ್ಕಾಗಿ ತೊಂದರೆ ಬರದಂತೆ ದತ್ತಿ ನೀಡಿದ್ದ ಬಗ್ಗೆ ಉಲ್ಲೇಖಗಳಿವೆ.[೧೩೪] ಮೈಳಲದೇವಿ ಗೊಗೀಕಟ್ಟೆಯಲ್ಲಿ ಕೇಶವ ದೇವರನ್ನು ಸ್ಥಾಪಿಸಿದ್ದಳು.[೧೩೫] ರೆಬ್ಬಲದೇವಿ ಹೂವಿನ ಹಡಗಲಿಯಲ್ಲಿ ಕೇಶವ ಗೃಹವನ್ನು ನಿರ್ಮಿಸಿ, ಅದಕ್ಕೆ ಭತ್ತದ ಗದ್ದೆ, ಅಡಿಕೆತೋಟ, ಭೂಮಿ ದಾನ ಮಾಡಿದ್ದಳು.[೧೩೬] ರೇವಕಬ್ಬೆ ಎಂಬಾಕೆ ಭಗವತಿ ನಾರಾಯಣದೇವರು, ಪರಿವಾರ ದೇವತೆಗಳನ್ನು ಸ್ಥಾಪಿಸಿದ್ದಳು.[೧೩೭] ಚಂದವ್ವೆ ಹೆಗ್ಗಡತಿಯು ಸಕಳೇಶ್ವರ ದೇವಾಲಯಕ್ಕೆ ಕಳಸ, ಬ್ರಾಹ್ಮಣರಿಗೆ, ತಪಸ್ಸು ಆಚರಿಸುವವರಿಗೆ ದೇವರ ನೈವೇದ್ಯಕ್ಕೆ ಇತ್ಯಾದಿಗಳಿಗಾಗಿ ಗದ್ದೆಗಳನ್ನು ಕೊಟ್ಟಿದ್ದಾಳೆ.[೧೩೮]

ಧರ್ಮಿಯಕ್ಕ ಬಾಗುಳಿಯಲ್ಲಿ ಲಕ್ಷ್ಮೀನಾರಾಯಣ ದೇವಾಲಯ ನಿರ್ಮಿಸಿ, ದೇವರ ಪ್ರಸಾದ, ಶಾಸ್ತ್ರಪುರಾಣ ಓದುವ ಉಪಾಧ್ಯಾಯರ ಜೀವನಕ್ಕೆ ವರ್ಷಕ್ಕೊಮ್ಮೆ ಏಳು ಗದ್ಯಾಣ ಹೊನ್ನು, ಬ್ರಾಹ್ಮಣರ ಆಹಾರಕ್ಕಾಗಿ ದತ್ತಿ ಕೊಟ್ಟಿದ್ದಳು.[೧೩೯] ಕಾಳಿಯಬ್ಬೆ ದೇವರದಾಸಿಮಯ್ಯ ದೇವಾಲಯಕ್ಕೆ ಹನ್ನೆರಡು ಮತ್ತರು, ಸ್ಥಾನಿಕರಿಗೆ ಐವತ್ತು ಮತ್ತರು, ಪೂಜಾರಿಗೆ ಏಳು ಮತ್ತರು, ಬ್ರಹ್ಮಪುರಿಯ ಬ್ರಾಹ್ಮಣರಿಗೆ ಎರಡು ಮತ್ತರು ಭೂಮಿ ದಾನ ಮಾಡಿದ್ದನ್ನು ಕ್ರಿ.ಶ. ೧೧೫೭ರ ಶಾಸನ ಉಲ್ಲೇಖಿಸಿದೆ.[೧೪೦] ಅರಸಿಯಕ್ಕ ಕೇಶವದೇವರ ರಂಗಭೋಗ, ನಂದಾ ದೀವಿಗೆಗೆ, ಅಗ್ರಹಾರ ತುಂಬಳ ಜನರಿಗೆ ಒಂದುನೂರು ಕಮ್ಮ ಗದ್ದೆ ದಾನ ಕೊಟ್ಟ ವಿಚಾರ ಇದೆ. ಪೋಚಾಯಕ್ಕ ಮಾಧವೇಶ್ವರ ದೇವರಿಗೆ ಭೂಮಿ ಕೊಟ್ಟಿದ್ದಳು.[೧೪೧] ಕೋಮಲದೇವಿ ಮೈದುನ ಜೊತೆ ಸೇರಿ ಪ್ರಸನ್ನ ಕೇಶವ ದೇವರಿಗೆ ಇಪ್ಪತ್ತು ಮತ್ತರು ಭೂಮಿ ನೀಡಿದ್ದಳು.[೧೪೨] ಮಾಳಿಯಕ್ಕ ಎಂಬಾಕೆ ದೇವರ ಕಾರ್ಯಕ್ಕಾಗಿ ಐದು ಮತ್ತರು ಹೊಲ, ಕಾಳು ಉತ್ಪತ್ತಿಯ ಹನ್ನೆರಡು ಮತ್ತರು ಭೂಮಿ, ದೇವ ರಂಗಭೋಗಕ್ಕೆ "ತಪ್ಪಿಂಪರೋಕ್ಷದೊಳು ಬಿಟ್ಟಂತೆ" ಎಂದು ಗದುಗಿನ ಶಾಸನ ಉಲ್ಲೇಖಿಸಿದೆ.

ಬ್ರಾಹ್ಮಣಿ ಕಂಚಿಕಬ್ಬೆ "ತಕ್ಕರ ಮಗ್ಗಿಮಕರ ಆಹಾರಕ್ಕಾಗಿ ಇತ್ಯಾದಿಗಳಿಗಾಗಿ ಐದು ಗದ್ಯಾಣ ಕೊಟ್ಟಿದ್ದಳು.[೧೪೩] ಮಹಾದೇವಿಕವ್ವೆ ವೀರಕೇಶವ ದೇವರ ರಂಗಭೋಗ ಪ್ರಸಾದಕ್ಕಾಗಿ ಅರವತ್ತು ಕಮ್ಮ ತೋಟವನ್ನು ಬಿಟ್ಟಿದ್ದಳು.[೧೪೪] ಇದನ್ನು ಕಂಡ ಮಹಾಜನರು ಕೂಡಾ ದೇವರ ನಂದಾದೀವಿಗೆಗೆ ಬಾಗುಳಿಯ ಹನ್ನೆರಡು ಹಳ್ಳಿಗಳ ದತ್ತಿಯನ್ನು ಕೊಟ್ಟಿದ್ದರು. ಹೀಗೆ ರಾಣಿಯರು, ಇತರೆ ಜನರಿಗೂ ಪ್ರೇರಿತಳಾಗಿ ಇದ್ದಳು. ಮಹಾಕೂಟ ಶಾಸನ ದುರ್ಲಭದೇವಿಯ ಬಗ್ಗೆ ವಿವರಿಸುತ್ತ, ಮಕುಟೇಶ್ವರ ದೇವಾಲಯಕ್ಕೆ ಕಿಸುವೊಳಲು, ಕೆಂದೂರು, ನಂದಿಗ್ರಾಮ, ಇತರೆ ಹತ್ತು ಗ್ರಾಮಗಳನ್ನು ನೀಡಿದ್ದನ್ನು ಉಲ್ಲೇಖಿಸುವುದು.[೧೪೫] ಪಟ್ಟದಕಲ್ಲಿನ ಶಾಸನವು ಲೋಕಮಹಾದೇವಿ,[೧೪೬] ತ್ರೈಲೋಕ್ಯ ಮಹಾದೇವಿ[೧೪೭] ಬಗ್ಗೆ ಹೇಳುತ್ತಾ, ಈ ಇಬ್ಬರು ರಾಣಿಯರು ಎರಡನೆ ವಿಕ್ರಮಾದಿತ್ಯ ಕಾಂಚಿಪಟ್ಟಣ ಗೆದ್ದ ನೆನಪಿಗಾಗಿ ದೇವಾಲಯಗಳನ್ನು ನಿರ್ಮಿಸಿದ್ದುದು, ಲೋಕಮಹಾದೇವಿ ಪಟ್ಟದಕಲ್ಲಿನಲ್ಲಿ ಲೋಕೇಶ್ವರ ದೇವಾಲಯವನ್ನು, ತ್ರೈಲೋಕ್ಯ ಮಹಾದೇವಿ ತ್ರೈಲೋಕೇಶ್ವರ ದೇಗುಲಗಳನ್ನು ನಿರ್ಮಿಸಿದ್ದರು.

ಪೊಲ್ಲಬ್ಬೆ[೧೪೮] ಮತ್ತು ಲೋಕಬ್ಬೆಯರು[೧೪೯] ಬೆಳ್ದೇವರಿಗೆ ರಾಜಮಾನದ ನಾಲ್ಕು ಮತ್ತರು ಭೂಮಿ, ತಿರಿಗೆಮ್ಮೆ ಮತ್ತು ತಳಗೆರೆ ಎಂಬ ಗ್ರಾಮಗಳನ್ನು ಕೊಟ್ಟಿದ್ದರು. ಭೋಜಬ್ಬರಸಿ ಎಂಬಾಕೆ ಭೋಜಬೇಶ್ವರ ದೇಗುಲ ನಿರ್ಮಿಸಿ ಅಲ್ಲಿರುವ ಕೆರೆಯನ್ನು ಸರಿಪಡಿಸುತ್ತ ಹಿರಿಯ ಬಿಲ ಮಾಡಿಸಿದ್ದು ಅಲ್ಲದೆ ನೊಳಂಬಕುಲಾಂತಕ ದೇವರಿಗೆ ನೂರು ಮತ್ತರು ಭೂಮಿ ಬಿಟ್ಟು ಕೊಟ್ಟಿದ್ದನ್ನು[೧೫೦] ಶಿರಪಟ್ಟಿ ಶಾಸನ ಉಲ್ಲೇಖಿಸಿದೆ. ಜೋಗಲದೇವಿಯು ಸಹ ದೇವೇಶ್ವರ ದೇವರಿಗೆ ಕರಿಯಕ್ಕೆಮ್ ರಾಜಮಾನದಲ್ಲಿ ಆರು ಮತ್ತರು ಭೂಮಿ, ದೇಗುಲದ ಕಾರ್ಯಗಳಿಗೆ ನಾಲ್ಕು ಸೂಳೆಯರನ್ನು ಬಿಟ್ಟು, ಸೂಳೆಯರು ಎಲ್ಲಿಗೂ ಹೋಗದಂತೆ ಆಜ್ಞೆ ಮಾಡಿದ್ದಳು.[೧೫೧] ಮೈಳಲದೇವಿಯು ಸೋಮಗ್ರಹಣ ಮಾಡುವಾಗ ಲಕ್ಷ ಹೋಮವನ್ನು ಮಾಡಿದ್ದು ಹಾಗೂ ಸೋಮೇಶ್ವರ ದೇಗುಲದ ದೇವಾಲಯವನ್ನು ಸರಿಪಡಿಸಿ, ಅಲ್ಲಿರುವ ಆಚಾರ್ಯರಿಗೆ ವ್ಯಾಖ್ಯಾನ ನೀಡುವವರಿಗೂ ದತ್ತಿ ಕೊಟ್ಟಿದ್ದಳು.[೧೫೨] ಕುಂದಬ್ಬರಸಿ ಕಲ್ಮೇಶ್ವರ ದೇವಾಲಯಕ್ಕೆ ಹಾಗೂ ಮಠಕ್ಕೂ ದಾನ ನೀಡಿದ್ದಳು.[೧೫೩]

ನೀಚ್ಚಕಬ್ಬರಸಿ ಸುಗಂಧವರ್ತಿಯಲ್ಲಿನ ಬಸದಿಗೆ ಒಂದುನೂರ ಐವತ್ತು ಮತ್ತರು ಭೂಮಿಯನ್ನು ಕೊಟ್ಟಿದ್ದಳು.[೧೫೪] ಅತ್ತಿಮಬ್ಬೆ ಹದಿನೈದುನೂರು ಜಿನಪ್ರತಿಗಳನ್ನು ಮಾಡಿಸಿದ್ದಳು[೧೫೫] ಎನ್ನಲಾಗಿದೆ. ಅಂತೆಯೇ ಮಾಲಬ್ಬೆಯು ಕಡಸತ ವಾಡಿಯ ತೀರ್ಥದ ಬಸದಿಗೆ ಜಿನಬಿಂಬ ಕೊಟ್ಟಿದ್ದಳು.[೧೫೬]

ವಿನಯಾವತಿ ಬ್ರಹ್ಮ, ವಿಷ್ಣು, ಮಹೇಶ್ವರರ ವಿಗ್ರಹಗಳನ್ನು ವಾತಾಪಿಯಲ್ಲಿ ಸ್ಥಾಪಿಸಿ, ಅನೇಕ ತೆರಿಗೆಗಳನ್ನು ದೇವರ ಕಾರ್ಯಗಳಿಗಾಗಿ ಬಿಟ್ಟಿದ್ದಳು.[೧೫೭] ವಿಜಯಮಹಾದೇವಿಯು ವಗೋಲಸ್ವಾಮಿಗೆ ಪಾಕುಲಕಚ್ಚಕ್ಷೇತ್ರದ ಕೊಚ್ಚೂರಕ ಗ್ರಾಮವನ್ನು ಮತ್ತು ಆರ್ಯಸ್ವಾಮಿ ದೀಕ್ಷಿತನಿಗೆ ತರಕಾಗ್ರಹಾರ ಎಂಬ ಗ್ರಾಮ ಕೊಟ್ಟಿದ್ದನ್ನು ಶಾಸನಗಳು ಹೇಳಿವೆ.[೧೫೮] ಶೀಲಮಹಾದೇವಿ ಕ್ರಿ.ಶ. ೭೮೬ರಲ್ಲಿ ಇಬ್ಬರು ಬ್ರಾಹ್ಮಣರಿಗೆ ನಂದಿಪುರ ದಾರಿಯಲ್ಲಿ ಕೋಲಿಪದ್ರ ಗ್ರಾಮವನ್ನು ಕೊಟ್ಟಿದ್ದಳು.[೧೫೯] ದೀವಳಬ್ಬರಸಿಯೂ ಪತಿಯ ಮರಣದ ನಂತರ ಅವನ ಹೆಸರಿನಲ್ಲಿ 'ಪೂಳಲೆಶ್ವರ ಮಂಗಳ ಅಗ್ರಹಾರವನ್ನು ಮಗನ ಹೆಸರಿನಲ್ಲಿ ಕೆರೆ, ವಿಷ್ಣುಗೃಹ ನಿರ್ಮಿಸಿದ್ದಳು.[೧೬೦] ಹಾಗೂ ಅವನಿಯಲ್ಲಿ ನೊಳಂಬ ನಾರಾಯಣೇಶ್ವರ ದೇವಾಲಯ ಕಟ್ಟಿಸಿ, ಮಂಟ.

ಕೊಟ್ಟಿದ್ದು, ಅಲ್ಲದೆ ಯಶನಗರವನ್ನು ಸರ್ವಬಾಧಾ ಪರಿಹಾರವಾಗಿ ದಾನ ನೀಡಿದ್ದಳು. ಲಚ್ಚಿಯಬ್ಬರಸಿ ಪಾಯಿಮ್ಮ ನೃಪತಿಯ ಮಗಳು ಇಷ್ಟು ಜನಕ್ಕೆ ಚಟ್ಟ ಸಮಯಕ್ಕೆ ಅಲ್ಲಿಯ ಜನರ ಆಹಾರಕ್ಕಾಗಿ ಇತ್ಯಾದಿಗಳಿಗಾಗಿ ನಾಲ್ಕು ಸಮಯಕ್ಕೆ ಹೊಂದಿಕೆಯಾಗುವಂತೆ ದಾನ ನೀಡಿದ್ದಳು.[೧೬೧]

ಅಕ್ಕಾದೇವಿ ವಿಕ್ರಮಪುರದ ಬ್ರಹ್ಮಪುರಿಯ ಪ್ರಮುಖ ನಲವತ್ತೆರಡು ವಿದ್ವಾಂಸರಿಗೆ ಮಹಾಜನರಿಗೆ ಹಾಗೂ ಇತರೆರಿಗೆ ಸರ್ವ ಸಮಸ್ಯೆಗಳ ಪರಿಹಾರಕ್ಕಾಗಿ ಒಂದು ಕಿಸು ಮತ್ತರು, ಎಳ್ಪತ್ತರ ಕೋಲಿನಿಂದ ನಲವತ್ತು ನಾಲ್ಕು ಮತ್ತರು ತೋಟದ ಭೂಮಿ, ಅರವತ್ನಾಲ್ಕು ಮತ್ತರು ಕಿಸುವಿನ ಭೂಮಿ ಕೊಟ್ಟಿದ್ದಳು.[೧೬೨] ಮೇಚಲದೇವಿ ಹಾರುವ ಬೇಹೂರಿನಲ್ಲಿ ವಾಸುದೇವ ಪ್ರತಿಷ್ಠಾಕಾರ್ಯ ನೆರವೇರಿಸಿ, ದೇವರ ರಂಗಭೋಗ, ಪೂಜಾ ನೈವೇದ್ಯಕ್ಕೆ ಕುಂಬಾರಹಳ್ಳಿಯನ್ನು 'ಅರಸಿಯಪುರ' ಎಂದು ಹೆಸರಿಟ್ಟಳು. ಜೊತೆಗೆ ಮೇಚಲಸಮುದ್ರ ತಟಾಕವನ್ನು ನಿರ್ಮಿಸಿದ್ದಳು.[೧೬೩]

ನೊಳಂಬಮಹಾದೇವಿ ಹೊಸಗೆರೆಯ ಮಹಾದೇವರ ಪ್ರಸಾದಕ್ಕೆ ಪೂಜಾರಿಗಳಿಗೆ ಒಂದು ಮತ್ತರು ಗದ್ದೆ, ಹನ್ನೆರಡು ಮತ್ತರು ಬೆದ್ದಲೆ, ಒಂದು ಹೂವಿನತೋಟ, ಗಾಣ ನೀಡಿದ್ದಳು.[೧೬೪] ಬರ್ಮಲದೇವಿ ಮುದುವೊಳಲಿನಲ್ಲಿ ಹರಿಹರ ಭವನ ನಿರ್ಮಿಸಿದ್ದಳು.[೧೬೫]

ಮಾಳಲದೇವಿ, ಜಾಕಲದೇವಿ, ಮೈಳಲದೇವಿ, ಲಕ್ಷ್ಮೀದೇವಿ, ಕೇತಲದೇವಿಯರು ಅರಸ ಆರನೆಯ ವಿಕ್ರಮಾದಿತ್ಯ ಮಾಳಲದೇವಿ ಯಳವಟ್ಟಿಯ ಮಾಳೇಲೇಶ್ವರ ದೇವಾಲಯ ನಿರ್ಮಿಸಿದ್ದಳು.[೧೬೬] ಜಾಕಲದೇವಿ ಹಿರೇಲಿಂಗದಹಳ್ಳಿಯ ಸ್ವಯಂಭೂದೇವರಿಗೆ ದತ್ತಿ,[೧೬೭] ಮೈಳಲದೇವಿ ದೇವರ ಕಾರ್ಯಕ್ಕೆ ಒಂದುನೂರು ಮತ್ತರು ಭೂಮಿ ಎರಡು ತೋಟ, ಎರಡು ಗಾಣಗಳನ್ನು ಬಿಟ್ಟಿದ್ದಳು.[೧೬೮] ಲಕ್ಷ್ಮದೇವಿ ಸೊಂಡಿಯ ಅಚಲೇಶ್ವರ ಸೋಮೇಶ್ವರ ಪಂಡಿತರಿಗೆ ಅಲ್ಲಿಯ ತಪೋಧನರ ಆಹಾರ, ವಿದ್ಯಾದಾನಕ್ಕೆ ದೇವರ ಭೋಗಕ್ಕಾಗಿ ಕಿಸುಕಾಡು ಎಪ್ಪತ್ತುರ ಬಳಿಯ ಪೊಂಗರಿ ಗ್ರಾಮ ಬಿಟ್ಟಿದ್ದಳು.[೧೬೯] ಪಿರಿಯ ಕೇತಲದೇವಿ ಸಿರುಗುಪ್ಪೆಯ ಕೇತಲೇಶ್ವರ ದೇವರ ಅಂಗಭೋಗ ಧೂಪ-ದೀಪ, ಪಾತ್ರ, ಪಾಕ್ಷಿಗರು, ಪಾಡುವವರಿಗೆ ಎರಡು ಮತ್ತರು ಗದ್ದೆ, ನಲವತ್ತೆರಡು ಕಪ್ಪುಭೂಮಿ, ಸಿರಿಯೂರಿನಲ್ಲಿ ಹದಿನೈದು ಮತ್ತರು ಕರಿಯಕೆಮ್ ಕೊಳನೂರಿನಲ್ಲಿ ಐದು ಕಿಸುಮತ್ತರು ಭೂಮಿ, ತೋಟ, ಎರಡು ಗಾಣ, ಎಂಟು ನಿವೇಶನಗಳನ್ನು ಬಿಟ್ಟಿದ್ದಳು.[೧೭೦] ಪಿರಿಯರಸಿ ಮೈಳಲದೇವಿ ಶ್ರೀಶೈಲ ಮಲ್ಲಿಕಾರ್ಜುನ ದೇವರಿಗೆ ಅನೇಕ ಗ್ರಾಮಗಳನ್ನು ಬಿಟ್ಟಿದ್ದಳು. ಲಚ್ಚಲದೇವಿಯು ಬಂಕಾಪುರದ ಪಂಚಮಠಸ್ಥಾನಗಳು ಇತರೆ ಕಾರ್ಯಗಳಿಗಾಗಿ ದತ್ತಿ ಕೊಟ್ಟಿದ್ದಳು.

ಒಂದು ರಾಜ್ಯದ ಮೇಲೆ ಆಗಾಗ ಅನ್ಯರಾಜರು ದಾಳಿ ಮಾಡುತ್ತಿದ್ದರು. ಆಗ ಗ್ರಾಮ ನಗರಗಳ ವ್ಯವಸ್ಥೆ ಕೆಟ್ಟು ಹೋಗುತ್ತಿದ್ದು, ನಷ್ಟವನ್ನು ಅನುಭವಿಸುತ್ತಿದ್ದವು. ರಾಣಿಯರು ಆ ವ್ಯವಸ್ಥೆಯನ್ನು ಸರಿಪಡಿಸುತ್ತಿದ್ದರು. ಅದಕ್ಕಾಗಿ ತೆರಿಗೆಗಳಲ್ಲಿ ರಿಯಾಯಿತಿ ಮಾಡುತ್ತಿದ್ದರು. ಅಕ್ಕಾದೇವಿ 'ಅಜ್ಜೆ ಅಡಿ ಇಡೀ ಕಿಸುಕಾಡು ಎಪ್ಪತ್ತಕ್ಕೆ ಅನೇಕ ಸುಂಕಗಳನ್ನು ಬಿಟ್ಟುಕೊಡಬೇಕು' ಎಂದಳು.[೧೭೧]

ಹೀಗೆ ಅನೇಕ ರಾಣಿಯರು, ಸಾಮಾನ್ಯ ಮಹಿಳೆಯರು ತಮಗೆ ಇಷ್ಟವಿದ್ದ ಕಾರ್ಯಗಳಿಗಾಗಿ ದಾನ, ದತ್ತಿ ಕೊಟ್ಟಿದ್ದು, ದೇವಾಲಯ, ಬಸದಿ, ವಿಹಾರ-ಚೈತ್ಯಾಲಯಗಳನ್ನು ನಿರ್ಮಿಸಿದ್ದರು. ಇಂಥ ಎಲ್ಲ ದಾನ-

ದತ್ತಿ, ನಿರ್ಮಾಣಗಳನ್ನು ಸ್ತ್ರೀವಾದಿ ಚಿಂತನೆ ಗುರುತಿಸಿದ್ದು ಚರಿತ್ರೆಯಲ್ಲಿ ದಾಖಲಿಸಲು ಪ್ರಯತ್ನಿಸಿದೆ. ಆದರೆ ಇಂಥ ಹಲವು ಸಾಧನೆಗಳ ದಾಖಲೆಗಳು ಮುಚ್ಚಿಹೋಗಿವೆ. ಅವುಗಳನ್ನು ಸ್ತ್ರೀವಾದಿ ಅಧ್ಯಯನಕಾರರು ಹೊರತೆಗೆದು, ಚರಿತ್ರೆಯನ್ನು ಪುನರ್ರಚಿಸಬೇಕಾದ ಜರೂರು ಇದೆ.

**ಅಡಿಟಿಪ್ಪಣಿಗಳು**

೧. ಎಂಗೆಲ್ಸ್ ಫ್ರೆಡ್ರಿಕ್, ದ ಆರಿಜನ್ ಆಫ್ ಫ್ಯಾಮಿಲಿ, ಪ್ರೈವೇಟ್ ಪ್ರಾಪರ್ಟಿ ಅಂಡ್ ದ ಸ್ಟೇಟ್, ಪು. ೧೫೮
೨. Shakuntala Rao shastri, **Woman in vedic age**, P. ೪೬, ೫೩
೩. ಶ್ರೀಮತಿ ಸರೋಜಿನಿ, ಮಹಿಳೆ ನಡೆದು ಬಂದ ದಾರಿ, ಪು. ೫೬
೪. ವೀರಣ್ಣ ಸಿ, ಕನ್ನಡ ಕಾವ್ಯದಲ್ಲಿ ಹೆಣ್ಣು, ಪು. ೧೫
೫. Das A.C. Rig vedic India, ಪು. ೫೩, ಸರೋಜಿನಿ ಶಿಂತ್ರಿರ ಮಹಿಳೆ ನಡೆದು ಬಂದ ದಾರಿ, ಉದ್ಧೃತ
೬. ನಿರುಪಮಾ, ಧರ್ಮಶಾಸ್ತ್ರಗಳು, ಸ್ತ್ರೀ ಹಾಗೂ ಶೋಷಣೆ, ಪು. ೩೮
೭. ದೀಕ್ಷಿತ್ ಜಿ.ಎಸ್, ಪ್ರಾಚೀನ ಕರ್ನಾಟಕದ ಶಿಕ್ಷಣ ಕ್ರಮ, ಪು. ೧೬
೮. ಕೋಲಾರ ಜಿಲ್ಲೆಯ ಬೌರಿಂಗ್ ಪೇಟೆ ತಾಲೂಕಿನ ಕಾರುಬೆಲೆಯಲ್ಲಿ ದೊರೆತ ನಾಲ್ಕು ಅಡಿ ಎತ್ತರ, ಎರಡೂವರೆ ಅಡಿ ಅಗಲವಿರುವ ಶಾಲೆಯ ಮೇಲ್ಭಾಗದಲ್ಲಿ ಸ್ವಸ್ತಿ ಶ್ರೀ ನಾಗಾರ್ಜುನಯ್ಯ ನಂದಿಗಬ್ಬೆಯ ಮಗಳ್ ಸಾವಿ ನಿರ್ಮಿಸಿ ಸರ್ವಶಾಸ್ತ್ರ ಪ್ರಸಿದ್ಧಿ ಶ್ರೀ ಎಂಬ ಎರಡು ಸಾಲಿನ ಶಾಸನ ಇದ್ದು, ಸಾವಿನಿರ್ಮಡಿಯ ತಾಯಿ ತಂದೆಯರ ಹೆಸರು ಕಂಡುಬರುತ್ತದೆ.
೯. EC XI, CD ೭೪
೧೦. ಪತ್ತಾರ ಶೀಲಕಾಂತ, ಬಾದಾಮಿ ಸಾಂಸ್ಕೃತಿಕ ಅಧ್ಯಯನ, ಪು. ೮೭
೧೧. Jain Jagdishchandra, Walter Margaret, **Women in Ancient Indian Titles**, P. ೫೬
೧೨. Agarawala, **Indian as know to ponini**, P. ೪೦೫
೧೩. The ordiances of manu Tr (Burnal) P. ೨೦೬-೨೦೮
೧೪. ಶಂಕರರಾವ್, ಭಾರತೀಯ ಸಮಾಜ, ಪು. ೭೮
೧೫. Sachu, **Alberunis India II**, P. ೧೪೫
೧೬. ಎ.ಇ. XVIII, ಪು. ೪೫, ಸಂಜಾನ ತಾಮ್ರಪಟ (ಕ್ರಿ.ಶ. ೮೭೧)
೧೭. Chakladar, **Social life in Ancient India** (ವಾತ್ಸ್ಯಾಯನನ ಕಾಮಶಾಸ್ತ್ರವನ್ನಾಧರಿಸಿ ಬರೆದ ಗ್ರಂಥ) P. ೮೭
೧೮. Hilda L.Smith, **Women Writers and early modern British political tradition**, P. ೧೫೮
೧೯. ಎ.ಇ. IV, ಪು. ೧೫೪, ಹೆಬ್ಬಾಳ ಶಾಸನ (ಕ್ರಿ.ಶ. ೯೭೫)
೨೦. MAR (೧೯೩೬) ೧೦೫೪ A.D. P. ೧೪೦
೨೧. ಬಸವರಾಜು ಎಲ್, ಆದಿಪುರಾಣ, ಪು. ೧೧, ೭೩
೨೨. ಧವಳಶ್ರೀ, ವಡ್ಡಾರಾಧನೆಯಲ್ಲಿ ಸ್ತ್ರೀ, ಪು. ೪೬
೨೩. ಚೆನ್ನಕ್ಕ ಎಲಿಗಾರ, ಶಾಸನಗಳಲ್ಲಿ ಕರ್ನಾಟಕದ ಸ್ತ್ರೀ ಸಮಾಜ, ಪು. ೨೫
೨೪. EC, VII, Sh ೧೦, ೧೦೮೫ A.D.
೨೫. MAR (೧೯೩೭) ೧೧೪೦, P. ೧೭೬
೨೬. IA Xii, P. ೯೫, ತೊರಗಲ್ಲು, ೧೧೮೭
೨೭. ನಾಣ್ನುಡಿ, ಗಾದೆ ಮಾತುಗಳು - ಇತ್ಯಾದಿ
೨೮. BK- II, ii, ೧೭೭, ೧೧೨೫, A.D.
೨೯. EC, VII, C೧ ೬೧, ೧೧೨೫, A.D.
೩೦. ಹಿರೇಮಠ ಆರ್.ಸಿ, ಮಲ್ಲಿನಾಥ ಪುರಾಣ, ಪು. ೩-೯೦
೩೧. ಅಲ್ತೇಕರ್, **Position of Woman in Hindu Civilization**, P. ೧೩೫
೩೨. SII, ix- ೧, ೫೬ ಕೋಗಳಿ (ತಾ) ಹಡಗಲಿ (ಕ್ರಿ.ಶ. ೯೦೮-೯)
೩೩. ಎ.ಕ. VIII, ಸೊರಬ ೪೫೭, ಬೆನ್ನೂರ
೩೪. ಎ.ಕ. VIII, ಸೊರಬ ೧೧೨, ಹಿರೇ ಆವಲಿ
೩೫. ಎ.ಕ. VII, ಶಿಕಾರಿಪುರ ೭೨, ಉತ್ತರಾಣಿಹಳ್ಳಿ (ಕ್ರಿ.ಶ. ೧೦೫೧)

೩೬. ಎ.ಕ. IV, ಹೆಗ್ಗಡದೇವನಕೋಟೆ ೧೮, ಬೆಳತೂರು (ಕ್ರಿ.ಶ. ೧೦೫೭)

೩೭. ಹುಬ್ಬಳಿಯಿಂದ ಕಾರವಾರಕ್ಕೆ ಹೋಗುವ ಮಾರ್ಗದಲ್ಲಿ ಮಾಸ್ತಿ ಗುಡಿಯಿದೆ. ಇತರೆ ಭಾಗಗಳಲ್ಲಿ ಮಾಸ್ತಿ ಹೆಸರಿನಲ್ಲಿ ಗ್ರಾಮಗಳು ರಚನೆಯಾಗಿವೆ.

೩೮. ಶ್ರೀಕಂಠಶಾಸ್ತ್ರೀ, ಭಾರತೀಯ ಸಂಸ್ಕೃತಿ, ಪು. ೨೦೪

೩೯. ಮತ್ಸ್ಯಪುರಾಣ, ಸಂಪುಟ - ೨, ಅಧ್ಯಾಯ - ೭೦, ಪು. ೨೮

೪೦. EC, VI, Mg ೨೨, ೧೧೨೯ A.D.

೪೧. SII, IX i, ೧೧೮, ೧೦೫೭ A.D.

೪೨. **Women in Ancient Indian Titles**, p. xii

೪೩. JBB RIS II, Part II, ಪು. ೨೧೧, ಕೋಚ್ರ ತಾಮ್ರಪಟ

೪೪. I.A. ii, ಪು. ೧೨೨, ಮಹಾಕೂಟ (ಕ್ರಿ.ಶ. ೭೩೩)

೪೫. ಎ.ಕ. XI, ದಾವಣಗೆರೆ ೧೭, ಕಾಡಚ್ಚಿ (ಕ್ರಿ.ಶ. ೮೮೭)

೪೬. ವಡ್ಡಾರಾಧನೆ ವಿದ್ಯುಚ್ಚೋರನ ಕಥೆ, ಪು. ೧೩೩

೪೭. ಅನಂತನಾಥ ಪುರಾಣ, ೧೨-೧೧, ಪು. ೨೪೨

೪೮. ರಾಜತರಂಗಿಣಿ, VI:೩೧

೪೯. I.A. XI, ನಂ. ೧೨೨, ಪಟ್ಟದಕಲ್ಲು (ತಾ) ಬಾದಾಮಿ (ಕ್ರಿ.ಶ. ೭೭೮-೯)

೫೦. I.A. X, ಪು. ೧೭೦, ಪಟ್ಟದಕಲ್ಲು (ಕ್ರಿ.ಶ. ೮೮೦)

೫೧. SII, IX, i ೮೦ ಬಾಗಳಿ (ತಾ) ಹರಪನಹಳ್ಳಿ (ಕ್ರಿ.ಶ. ೧೦೧೮)

೫೨. ಎ.ಕ. XI, ದಾವಣಗೆರೆ ೧೧, ಬೇತೂರು (ಕ್ರಿ.ಶ. ೧೦೬೬)

೫೩. ಎ.ಕ. iii, ಮಂಡ್ಯ, ೧೨೨, ಬಸರಾಳು (ಕ್ರಿ.ಶ. ೧೨೩೫)

೫೪. ಎ.ಕ. XI, ದಾವಣಗೆರೆ ೧೧, ಬೇತೂರು (೧೦೬೬)

೫೫. ಎ.ಇ. XV, ಪು. ೮೭, ಸೂಂಡಿ (ತಾ) ರೋಣ (ಕ್ರಿ.ಶ. ೧೦೫೮)

೫೬. SII, XViii, ೬೧, ಹೊಳೆ ಆನವೇರಿ (ತಾ) ರಾಣೇಬೆನ್ನೂರು (ಕ್ರಿ.ಶ. ೧೦೪೮)

೫೭. ಕಂಬಗಳ ಸೂಳೆಯರು ದೇವರ ಪೂಜೆ ಮುಗಿಯುವವರೆಗೆ ಅಲಂಕಾರ ಮಾಡಿಕೊಂಡು ನಿಲ್ಲುತ್ತಿದ್ದರು. ಇವರನ್ನು ಎಡ-ಬಲ ಬದಿಯ ಕಂಬಗಳ ಸೂಳೆಯರು ಎಂದು ವಿಂಗಡಿಸಿದ್ದು. ಇವರು ನಿಲ್ಲುವ ಸ್ಥಳಕ್ಕೆ ಅನುಸಾರವಾಗಿ ದತ್ತಿಗಳನ್ನು ಪಡೆಯುತ್ತಿದ್ದರು. ಸೂಂಡಿಯ ಅಕ್ಕೇಶ್ವರ ದೇಗುಲದ ಬಗ್ಗೆ ಎ.ಇ. XV, ಪು. ೮೨, ಸೂಂಡಿ (ತಾ) ರೋಣ (ಕ್ರಿ.ಶ. ೧೦೫೪) ಶಾಸನ ವಿವರಿಸಿದೆ. ಎ.ಇ. Xiii, ನಂ. ೧೪, ಬಂಕಾಪುರ (ತಾ) ಶಿಗ್ಗಾಂವ (ಕ್ರಿ.ಶ. ೧೦೫೫)ದ ಶಾಸನ ಕದಂಬೇಶ್ವರ ದೇಗುಲದ ನಾಲ್ಕು ಸೂಳೆಯರ ಬಗ್ಗೆ ಹೇಳಿರುವುದು. ಇದರಂತೆ SII, IX-i, ೧೧೩, ಹಿರೇಮಂಗಳಗೇರಿ (ತಾ) ಹರಪನಹಳ್ಳಿ ಶಾಸನ ಸ್ವಯಂಭೂದೇವರ ನಾಲ್ಕು ಕಂಬದ ಸೂಳೆಯರ ಬಗ್ಗೆ ಉಲ್ಲೇಖಿಸಿದೆ.

೫೮. SII, XVIII, ೬೧, ಹೊಳೆಆನವೇರಿ (ತಾ) ರಾಣೆಬೆನ್ನೂರು (ಕ್ರಿ.ಶ. ೧೦೪೮)ರ ಶಾಸನ ಕಾಳಬ್ಬೆ ಬಗ್ಗೆ ಇರುವುದು. ಈಕೆ ಕಂಬದ ಚಾಮರದ ಸೂಳೆ ಆಗಿದ್ದಳು. ಎ.ಇ. XV, ಪು. ೮೨, ಸೂಂಡಿ (ತಾ) ರೋಣ (ಕ್ರಿ.ಶ. ೧೦೫೫)ರ ಶಾಸನ ಸೂಂಡಿಯ ಅಕ್ಕೇಶ್ವರ ದೇಗುಲದಲ್ಲಿ ಗುಬ್ಬಿಯ ಕೇಡಬ್ಬೆ ಚಾಮರದ ಸೇವೆಯನ್ನು ತಿಳಿಸಿದೆ.

೫೯. ನರ್ತನದ ಸೂಳೆಯರನ್ನು ಪಾತ್ರದ ಸೂಳೆಯರೆಂದು ಎನ್ನಲಾಗುತ್ತಿತ್ತು. ಎ.ಇ. IV, ನಂ. ೫೦, ಹೆಬ್ಬಾಳು (ತಾ) ಶಿರಹಟ್ಟಿ, ಶಾಸನವು ಭುಜವೇಶ್ವರ ದೇಗುಲದ ಐವರು ಸೂಳೆಯರೊಂದಿಗೆ ಒಬ್ಬಳು ಪಾತ್ರದವಳು ಇದ್ದಳೆಂದು ತಿಳಿಸಿದೆ.

೬೦. ಎ.ಇ. XV, ಪು. ೮೭, ಸೂಂಡಿ (ತಾ) ರೋಣ (ಕ್ರಿ.ಶ. ೧೦೫೮)

೬೧. ಶರ್ಮ ಕೇಶವ, ಸ್ತ್ರೀ ಮತ್ತು ರಾಜಕಾರಣ, ಪು. ೪

೬೨. EC, XII, GB ೧೩, ೧೧೪೦ A.D.

೬೩. SII, XI- i, B.K. II i, ಬಾಗೇವಾಡಿ (ತಾ) ಬಾಗೇವಾಡಿ (ಕ್ರಿ.ಶ. ೧೦೪೯)

೬೪. SII, XVIII, ೬೩, ಹಾವನೂರು (ತಾ) ಹಾವೇರಿ (ಕ್ರಿ.ಶ. ೧೦೫೩)

೬೫. SII, Xii, ೧೧೯, ೧೨೧ ನಂದಿಕೋಟಕೂರು, ಕೊಟ್ಟೆಪಲ್ಲೆ (ತಾ) ಕರ್ನೂಲ್ (ಕ್ರಿ.ಶ. ೧೦೫೭)

೬೬. SII, IXI,೧೧೯, ಕೊಟ್ಟೆಪಲ್ಲೆ (ತಾ) ಕರ್ನೂಲ್

೬೭. I.A. XIX, ಪು. ೧೫, ಮಹಾಕೂಟ (ತಾ) ಬಾದಾಮಿ (ಕ್ರಿ.ಶ. ೬೦೯)

೬೮ I.A. VIII, ಪು. ೪೪, ಕೋಚ್ರೆ ತಾಮ್ರಪಟ

೬೯ I.A. VII, ಪು. ೧೬೩, ನೇರೂರು ತಾಮ್ರಪಟ

೭೦. EC, IV, HS- ೬೯, C- ೯೨೦, A.D. XIII

೭೦. A.E. XXII, ೧೭, ಜಥವಾಯಿ ತಾಮ್ರಪಟ (ಕ್ರಿ.ಶ. ೭೮೯)
೭೨. B.K.I. ೧೧೭, ಕೆಸರಬಾವಿ (ತಾ), ಹುನಗುಂದ (ಕ್ರಿ.ಶ. ೮೩೭)
೭೩. ಎ.ಐ. ೬, ಸೂಡಿ (ತಾ) ರೋಣ (ಕ್ರಿ.ಶ. ೧೦೧೦)
೭೪. I.A. XVIII, ಪು. ೨೭೦-೭೫ ಬೇಲೂರು (ತಾ) ಬಾದಾಮಿ (ಕ್ರಿ.ಶ. ೧೦೨೨)
೭೫. ಎ.ಇ. XVI II, ಹುಟ್ಟೂರು (ತಾ) ಬಂಕಾಪುರ (ಕ್ರಿ.ಶ. ೧೦೩೭)
೭೬. ಎ.ಇ. XV, ೬, ಸೂಡಿ (ತಾ) ರೋಣ (ಕ್ರಿ.ಶ. ೧೦೫೦)
೭೭. B.K.Ii, ೮೬, ಕೋರಲಹಳ್ಳಿ (ತಾ) ಮುಂಡರಗಿ (ಕ್ರಿ.ಶ. ೧೦೫೦)
೭೮. I.N.K. ೫, ನಿಡಗುಂದಿ (ಜಿ) ಬಿಜಾಪುರ (ಕ್ರಿ.ಶ. ೧೦೭೧)
೭೯. I.A. XIX, ೧೯೦, ಹೊನ್ನವಾಡ (ತಾ) ಬಿಜಾಪುರ (ಕ್ರಿ.ಶ. ೧೦೫೪)
೮೦. A.R.I.E. ೧೯೩-೩೪, B.K. ಸಂ, ೧೬೯ ಬನ್ನಿಗೋಳ (ಕ್ರಿ.ಶ. ೧೦೫೫)
೮೧. A.R.I.E. ೧೯೪-೪೭, ೨೦೪, ಬೆಳವಟ್ಟಿ (ತಾ) ಹಾನಗಲ್ಲು (ಕ್ರಿ.ಶ. ೧೦೫೪)
೮೨. SII, XVIII, ೬೩, ಹಾವನೂರು (ತಾ) ಹಾವೇರಿ (ಕ್ರಿ.ಶ. ೧೦೫೩)
೮೩. ಎ.ಕ. VII, ಹೊನ್ನಾಳಿ ೧, (ಕ್ರಿ.ಶ. ೧೦೫೫)
೮೪. SII, XIii, ೧೨೬, ದೋಣಿ (ತಾ) ಮುಂಡರಗಿ (ಕ್ರಿ.ಶ. ೧೦೮೦)
೮೫. ಎ.ಇ. XV, ೬, ಸೂಡಿ (ತಾ) ರೋಣ (ಕ್ರಿ.ಶ. ೧೦೮೪)
೮೬. I.A. X, ಪು. ೧೮೫, ಡಂಬಳ (ತಾ) ಗದಗ (ಕ್ರಿ.ಶ. ೧೦೮೫)
೮೭. SII, XI, ii, ೧೪೦, ಡೋಣಿ (ತಾ) ಮುಂಡರಗಿ (ಕ್ರಿ.ಶ. ೧೦೯೬-೯೭)
೮೮. ಧಾ.ಜಿ.ಶಾ.ಸೂ. ಹಾನಗಲ್ಲು ೨೫, ನಿಡಸಂಗಿ (೧೧೦೦-೧೨೦೦)
೮೯. A.R.I.E. ೧೯೪೬-೪೭, ೨೨೭, ಧಾ.ಜಿ.ಶಾ.ಸೂ. ಹಾನಗಲ್ಲು ೧೪, ನರೇಗಲ್ಲು (ಕ್ರಿ.ಶ. ೧೧೦೦-೧೨೦೦)
೯೦. ಜೈ.ಸೌಂ.ಇಂ.ಸಂ.ಜೈ.ಇ. ಪು. ೨೫೨ (ಕ್ರಿ.ಶ. ೧೧೯೯)
೯೧. A.R.I.E. ೧೯೬-೬೩, ಬಿ ೭೯೦, ಹೊಳಕುಂದ (ಜಿ) ಗುಲ್ಬರ್ಗ
೯೨. ಕೋರ್ಪಸ್ ಇನ್ ದಿ ಕನ್ನಡ ಡಿ.ಹೈ.ಸ್ಟಡಿ ಲಿಂಗಸೂಗೂರು (ಕ್ರಿ.ಶ. ೧೧೨೭)
೯೩. SII, XX, ಕನವಳ್ಳಿ ೭೧, ಸಿಂದಗಿ (ಕ್ರಿಶ. ೧೧೯೪)
೯೪. ಶಾ.ಸಾಂ.ಸಂ. ೪೪, ಇಂಗಳಗಿ (ತಾ) ಬಿಜಾಪುರ (ಕ್ರಿ.ಶ. ೧೧೯೪)
೯೫. A.P.A.S. ೧೭, ಗುಲ್ಬರ್ಗಾ (ಕ್ರಿ.ಶ. ೧೧೦೭)
೯೬. SII, I-i, ೧೭೫, ಚಿನ್ನತುಂಬಳ (ತಾ) ಆದೋನಿ (ಕ್ರಿ.ಶ. ೧೧೦೭)
೯೭. A.R.I.E. ೧೯೫-೬೦, -P, ನಂ. ೫೭, ಆಲಂಪುರ ೧೩, ೧೪, ೧೫, ೧೭, (ಕ್ರಿ.ಶ. ೧೧೦೮-೧೧೧೦)
೯೮. ಧಾ.ತಾ.ಶಾ. ೩೯, ನರೇಂದ್ರ (ಕ್ರಿ.ಶ. ೧೧೨೫)
೯೯. ಧಾ.ತಾ.ಶಾ. ೪೯, ಭಾವಿಹಾಳ (ಕ್ರಿ.ಶ. ೧೧೨೫)
೧೦೦. ಧಾ.ತಾ.ಶಾ. ೨೫, ನರೇಂದ್ರ (ಕ್ರಿ.ಶ. ೧೧೨೩-೨೬)
೧೦೧. ಕರ್ಮವೀರ, ದೀಪಾವಳಿ ವಿಶೇಷಾಂಕ ೧೯೯೩
೧೦೨. ಎ.ಇ. X, ಪು. ೧೦೦, ಗದ್ವಾಲ ತಾಮ್ರಪಟ (ಕ್ರಿ.ಶ. ೯೭೪)
೧೦೩. ಕರ್ನಾಟಕ ಇತಿಹಾಸ, ಪು. ೩೧೬, ಸಂಜಾನ ತಾಮ್ರಪಟ (ಕ್ರಿ.ಶ. ೮೦೮)
೧೦೪. I.A. XVIII, ೨೭೦-೭೫, ಬೇಲೂರು (ತಾ) ಬಾದಾಮಿ (ಕ್ರಿ.ಶ. ೧೦೨೨)
೧೦೫. ಎ.ಕ. II, ಶ್ರವಣಬೆಳಗೊಳ ೧೩೯, (೬೧) (ಕ್ರಿ.ಶ. ೯೫೦)
೧೦೬. ಮೋರಸ್, ಕದಂಬ ಕುಲ, ಪು. ೨೫೬
೧೦೭. I.A. XViii, ೨೭೦, ಬೇಲೂರು (ತಾ) ಬಾದಾಮಿ (ಕ್ರಿ.ಶ. ೧೦೨೨)
೧೦೮. ಎ.ಕ. Vii, ಶಿಕಾರಿಪುರ ೧೬೯, ಬಳ್ಳಿಗಾವೆ (ಕ್ರಿ.ಶ. ೧೦೬೭)
೧೦೯. ಬುದ್ದಿಸಮ್ ಇನ್ ಕಾಶ್ಮಿರ್ ಅಂಡ್ ಲಾಡಖ್, ಪು. ೧೦೪. ಜೆ.ಎನ್.ಗಣಹಾರ್ ಅಂಡ್ ಪಿ.ಎನ್.ಗಣಹಾರ
೧೧೦. SII, XX, ೪೯, ಕಲಕೇರಿ (ತಾ) ಹಾನಗಲ್ಲು (ಕ್ರಿ.ಶ. ೧೦೭೯)
೧೧೧. I.A. X, ಪು. ೧೮೫, ಡಂಬಳ (ತಾ) ಗದಗ (ಕ್ರಿ.ಶ. ೧೧೯೫)
೧೧೨. ಎ.ಕ. Xii, ಚಿಕ್ಕನಾಯಕನಹಳ್ಳಿ, ೨೧೮, ಹೆಗ್ಗೆರೆ (ಕ್ರಿ.ಶ. ೧೧೬೧)
೧೧೩. ಎ.ಕ. Viii, ನಗರ ೪೫, ಹುಂಚ (ಕ್ರಿ.ಶ. ೯೫೦)

೧೧೪.M.A.R ೧೯೩೨-೬, ಚಿಕ್ಕಮಗಳೂರು (ತಾ) ಚಿಕ್ಕಮಗಳೂರು (ಕ್ರಿ.ಶ. ೧೧೦೦)
೧೧೫.ಎ.ಕ. Vi, ಕಡೂರು ೧, ಕಡೂರು (ಕ್ರಿ.ಶ. ೯೭೧)
೧೧೬.ಎ.ಕ. ii, ಶ್ರವಣಬೆಳಗೊಳ ೨೦೩ (ಕ್ರಿ.ಶ. ೧೧೧೦)
೧೧೭.ಎ.ಕ. ii, ಶ್ರವಣಬೆಳಗೊಳ ೪೮೪ (ಕ್ರಿ.ಶ. ೧೧೧೯)
೧೧೮.ಎ.ಕ. V, ೩E, ನರಸಿಪುರ ೨೭೦, ಮುಗೂರು (ಕ್ರಿ.ಶ. ೧೦೦೦)
೧೧೯.I.A. Xii, ಪು. ೧೦೨, ಹೊನ್ನೂರು (ತಾ) ಕೊಲ್ಲಾಪುರ
೧೨೦.M.A.R ೧೯೩೨-೫, ಚಿಕ್ಕಮಗಳೂರು (ತಾ) ಚಿಕ್ಕಮಗಳೂರು (ಕ್ರಿ.ಶ. ೧೧೦೦)
೧೨೧.M.A.R ೧೯೪೨-೭೪, ಬೊಮ್ಮಲಾಪುರ (ತಾ) ಹುಣಸೂರು (ಕ್ರಿ.ಶ. ೧೧೧೩)
೧೨೨.ಎ.ಕ. Vii, ಶಿಕಾರಿಪುರ ೨೧೯, ಬಂದಳಿಕೆ (ಕ್ರಿ.ಶ. ೯೮೧)
೧೨೩.ಡಿ.ಎಲ್.ಎನ್. (ಸಂ), ವಡ್ಡಾರಾಧನೆ, ಪು. ೩೦
೧೨೪.EC, VI, KD ೨೮, ೧೧೫೩ A.D.
೧೨೫.ಎ.ಇ. XViii, ೧೦, ಅರಸೀಬೀದಿ (ತಾ) ಹುನಗುಂದ (ಕ್ರಿ.ಶ. ೧೦೪೭)
೧೨೬.SII, XViii, ೧೮೦, ನದೀಹರಳಹಳ್ಳಿ (ತಾ) ರಾಣೇಬೆನ್ನೂರು (ಕ್ರಿ.ಶ. ೧೧೬೮)
೧೨೭.SII, XX, ೪೬, ಗುಡಿಗೆರೆ (ತಾ) ಶಿರಹಟ್ಟಿ (ಕ್ರಿ.ಶ. ೧೦೭೨)
೧೨೮.ಎ.ಕ. IV, ನಾಗಮಂಗಲ ೮೫, ತೂಬಿನಕೆರೆ (ಕ್ರಿ.ಶ. ೭೭೬)
೧೨೯.ಎ.ಕ. Viii, ನಗರ ೩೫, ಹುಂಚ (ಕ್ರಿ.ಶ. ೧೦೭೭)
೧೩೦.ಎ.ಕ. Viii, ನಗರ ೪೭, ಹುಂಚ (ಕ್ರಿ.ಶ. ೧೦೬೨)
೧೩೧.ಎ.ಕ. Viii, ಸೊರಬ ೨೭೨, ಕಳಸವಳಿ (ಕ್ರಿ.ಶ. ೧೦೭೭)
೧೩೨.SII, i-i, ೧೫೯, ಸಿರುಗುಪ್ಪ (ತಾ) ಬಳ್ಳಾರಿ (ಕ್ರಿ.ಶ. ೧೧೯೨)
೧೩೩.SII, i-i, ೧೩೫, ಚಿನ್ನತುಂಬಳ (ತಾ) ಆದೋಣಿ (ಕ್ರಿ.ಶ. ೧೧೦೭)
೧೩೪.SII, i-i, ಹಡಗಲಿ (ಕ್ರಿ.ಶ. ೧೧೧೬)
೧೩೫.SII, XV, ೮, ಗೂಗಿಕಟ್ಟೆ (ತಾ) ಧಾರವಾಡ (ಕ್ರಿ.ಶ. ೧೧೨೫)
೧೩೬.**ಶಾಸನ ಸಾಹಿತ್ಯ ಸಂಚಯ**, ಹೂವಿನಹಡಗಲಿ (ಕ್ರಿ.ಶ. ೧೧೯೦)
೧೩೭.ಎ.ಕ. V, ಅರಕಲಗೂಡು ೯೫, ಚಿಕ್ಕಚಿಮ್ಮತ್ತಿ (ಕ್ರಿ.ಶ. ೧೧೯೪) ರ೧೩೮. ಎಂ.ಎ.ಆರ್. ೧೯೨೯-೭೦, ಎಡೆಕೊಪ್ಪ (ತಾ) ಸೊರಬ (ಕ್ರಿ.ಶ. ೧೧೦೦)
೧೩೮. M.A.R ೧೯೨೯-೭೦, ಎಡೆಕೊಪ್ಪ (ತಾ) ಸೊರಬ (ಕ್ರಿ.ಶ.೧೧೦೦)
೧೩೯.SII, ix-i, ೨೬೭, ಬಾಗಳಿ (ತಾ) ತರೀಕೆರೆ (ಕ್ರಿ.ಶ. ೧೧೮೧)
೧೪೦.SII, X-೫೫, ಮಸೂತಿ (ತಾ) ಬಾಗೇವಾಡಿ (ಕ್ರಿ.ಶ. ೧೧೫೭)
೧೪೧.SII, XX- ೧೧೯, ಮಲಘಾಣ (ತಾ) ಸಿಂದಗಿ (ಕ್ರಿ.ಶ. ೧೧೪೮)
೧೪೨.SII, X- ೨೪, ಮುತ್ತಿಗೆ (ತಾ) ಬಾಗೇವಾಡಿ (ಕ್ರಿ.ಶ. ೧೧೪೨)
೧೪೩.SII, i-i, ೧೫೮, ಹೂವಿನಹಡಗಲಿ (ತಾ) ಹಡಗಲಿ (ಕ್ರಿ.ಶ. ೧೧೯೨)
೧೪೪.SII, i-i, ೧೭೪, ಬಾಗಳಿ (ತಾ) ಹರಪನಹಳ್ಳಿ (ಕ್ರಿ.ಶ. ೧೧೦೭)
೧೪೫.SII, XIX. ಪು. ೯, ಮಹಾಕೂಟ (ತಾ) ಬಾದಾಮಿ (ಕ್ರಿ.ಶ. ೬೦೨)
೧೪೬.IAX, ಪು. ೧೬೩, ಪಟ್ಟದಕಲ್ಲು (ತಾ) ಬಾದಾಮಿ (ಕ್ರಿ.ಶ. ೭೫೪)
೧೪೭.ಎ.ಇ. iii, ಪು. ೬, ಪಟ್ಟದಕಲ್ಲು (ತಾ) ಬಾದಾಮಿ (ಕ್ರಿ.ಶ. ೭೫೪) ರ೧೪೮. ಪ್ರೊ. ರಿ.ಕೆ.ಆರ್.ಆಯ್. ೧೯೫೩-೫೭, ನಂ. ೬, ಶಿರಗಂಟಿ (ತಾ) ಹಿರೇಕರೂರು
೧೪೯.ಪ್ರೊ. ರಿ.ಕೆ.ಆರ್.ಆಯ್. ೧೯೫೩-೫೭, ನಂ. ೬, ಶಿರಗಂಟಿ (ತಾ) ಹಿರೇಕರೂರು
೧೫೦.SII, XX, ೨೩, ಸಿಂದಗಿ (ಕ್ರಿ.ಶ. ೧೦೨೯)
೧೫೧.SII, XViii, ೪೪, ಕಳ್ಳಿಹಾಳ (ತಾ) ಹಾವೇರಿ (ಕ್ರಿ.ಶ. ೧೦೧೯)
೧೫೨.ಬಿ.ಕೆ.ಆಯ್. -i, ೮೪, ಬಾಗೇವಾಡಿ (ತಾ) ಬಾಗೇವಾಡಿ (ಕ್ರಿ.ಶ. ೧೦೪೯)
೧೫೩.ಧಾ.ಜಿ.ಶಾ.ಸಾ. ಹಾನಗಲ್ಲು ೨೮, ಉಪ್ಪಹುಣಸಿ (ಕ್ರಿ.ಶ. ೧೦೨೮)
೧೫೪.SII, XX, ೧೮, ಪರಸಗಡ (ತಾ) ಸೌದತ್ತಿ (ಕ್ರಿ.ಶ. ೯೮೦)
೧೫೫.ಬಿ.ಕೆ.ಆಯ್. -i, ೩೭, ಲಕ್ಕುಂಡಿ (ತಾ) ಗದಗ (ಕ್ರಿ.ಶ. ೧೧೦೭)
೧೫೬.ಎ.ಕ. ii, ಶ್ರವಣಬೆಳಗೊಳ ೪೮೪-೪೮೫ (ಕ್ರಿ.ಶ. ೧೧೮೦)

೧೫೭.ಕೆ.ಆಯ್. i, ೨, ಪಟ್ಟದಕಲ್ಲು (ತಾ) ಬಾದಾಮಿ (ಕ್ರಿ.ಶ. ೭೭೯)
೧೫೮.I.A. Vii, ಪು. ೧೬೩, ನೇರೂರು ತಾಮ್ರಪಟ (ಕ್ರಿ.ಶ. ೭೫೯)
೧೫೯.ಎ.ಇ. XXii, ಪು. ೧೦೫, ಜಥ್ಖಾಯಿ ತಾಮ್ರಪಟ (ಕ್ರಿ.ಶ. ೭೮೬)
೧೬೦.ಎ.ಕ. X, ಮುಳಬಾಗಿಲು ೫೦, ಅವನಿ (ಕ್ರಿ.ಶ. ೮೯೦)
೧೬೧.SII, V- ೮೫೯, ಹೂಲಿ (ತಾ) ಸೌದತ್ತಿ (ಕ್ರಿ.ಶ. ೧೦೪೪)
೧೬೨. B.K.I -i, ೮೮, ಅರಸಿಬೀದಿ (ತಾ) ಹುನಗುಂದ (ಕ್ರಿ.ಶ. ೧೦೫೩)
೧೬೩.ಎ.ಕ. V. ಮುಂಜರಾಬಾದ ೧೮, ಹಾಲೇಬೇಲೂರು (ಕ್ರಿ.ಶ. ೧೧೯೫)
೧೬೪.SII, i-i, ೧೧೦, ಪೂನಬಗಟ್ಟಾ (ತಾ) ಹರಪನಹಳ್ಳಿ (ಕ್ರಿ.ಶ. ೧೦೫೨)
೧೬೫.ಶಾಸನ ಪರಿಚಯ, ಕೊಪ್ಪಳ ಜಿಲ್ಲೆಯ ಶಾಸನಗಳು ೩೧, (ಕ್ರಿ.ಶ. ೧೯೫೦-೮೨)
೧೬೬.ಧಾ.ಜಿ.ಶಾ.ಸೂ. ಹಾನಗಲ್ಲು ೨೫೫, ಯಳವಟ್ಟಿ (ಕ್ರಿ.ಶ. ೧೧೧೪) ರ೧೬೭. SII, XViii, ೧೨೭, ಹಿರೇಲಿಂಗದಹಳ್ಳಿ (ತಾ) ಹಾವೇರಿ
೧೬೭.SII, XVIII, ೧೨೭, ಹಿರೇಲಿಂಗದಹಳ್ಳಿ, (ತಾ) ಹಾವೇರಿ
೧೬೮.SII, XX, ೬೧, ಕನ್ನೊಳ್ಳಿ (ತಾ) ಸಿಂದಗಿ (ಕ್ರಿ.ಶ. ೧೦೮೫)
೧೬೯.ಎ.ಇ. XV, ೬, ಸೂಂಡಿ (ತಾ) ರೋಣ (ಕ್ರಿ.ಶ. ೧೦೮೪)
೧೭೦.SII, i-i, ೧೫೯, ಸಿರುಗುಪ್ಪ (ತಾ) ಬಳ್ಳಾರಿ (ಕ್ರಿ.ಶ. ೧೧೯೨)
೧೭೧. EX, XV, ೭೮, ೧೦೫೦



ಅಧ್ಯಾಯ - ೪

# ಮಧ್ಯಕಾಲೀನ ಸಂದರ್ಭ ಮತ್ತು ಮಹಿಳೆ

**೪.೧. ಮಧ್ಯಕಾಲೀನ ಕಾಲಘಟ್ಟದ ಹಿನ್ನೆಲೆ**

**೪.೨. ಸಮಾಜ ಮತ್ತು ಮಹಿಳೆ**

೧. ಕುಟುಂಬ ೨. ಜಾತಿಪದ್ಧತಿ ೩. ವಿವಾಹ-ಬಾಲ್ಯವಿವಾಹ ಹಾಗೂ ಅಂತರ್‌ಜಾತಿಯ ವಿವಾಹ ೪. ಬಹುಪತ್ನಿತ್ವ ೫. ಉಡುಗೊರೆ ೬. ಮಾಂಗಲ್ಯ ೭. ತಾಯಿತನ ೮. ವಿಚ್ಛೇದನ ೯. ವಿಧವೆಯರು ೧೦. ಸತಿ ಸಹಗಮನ ೧೧. ಪಾತಿವ್ರತ್ಯ ೧೨. ಪರದಾಪದ್ಧತಿ ೧೩. ತೊತ್ತುಗಳು ೧೪. ಸೂಳೆಯರು ಅ. ಆಸ್ಥಾನಿಕ ಸೂಳೆಯರು ಆ. ದೇವಾಲಯದ ಸೂಳೆಯರು ಇ. ಸಮಾಜದ ಸೂಳೆಯರು ೧೫. ವೇಲವಾಳಿ ಪದ್ಧತಿ

**೪.೩. ರಾಜಕಾರಣ ಮತ್ತು ಮಹಿಳೆ**

ಅ. ಆಡಳಿತಾರೂಢ ಪಿರಿಯರಸಿಯರು ಮತ್ತು ರಾಣಿಯರು

ಆ. ಯುದ್ಧ ಮತ್ತು ಮಹಿಳೆ

೧. ರಾಣಿಯರು

೨. ವೈವಾಹಿಕ ಸಂಬಂಧಗಳು

೩. ಸೂಳೆಯರು

೪. ಶಿಲ್ಪಗಳಲ್ಲಿ ಮಹಿಳಾ ಸೈನಿಕರು

**೪.೪. ಆರ್ಥಿಕತೆ, ಧಾರ್ಮಿಕತೆ ಮತ್ತು ಮಹಿಳೆ**

ಅ. ಭೂಮಾಲೀಕತ್ವ

ಆ. ವ್ಯಾಪಾರ-ವಾಣಿಜ್ಯ

ಇ. ತೆರಿಗೆಗಳು

ಈ. ಲೋಕೋಪಯೋಗಿ ಕಾರ್ಯಗಳು

ಉ. ದಾನ-ದತ್ತಿಗಳು

**೪.೫. ಸಾಹಿತ್ಯ, ಶಿಕ್ಷಣ ಮತ್ತು ಮಹಿಳೆ**

ಅ. ವಚನಕಾರರ ಸ್ತ್ರೀಪರ ನಿಲುವು

ಆ. ವಚನಕಾರರ ಇತರೆ ಅಂಶಗಳ ಚಿಂತನೆ

ಇ. ವಚನಕಾರ್ತಿಯರು ಮತ್ತು ಅವರ ಚಿಂತನೆಗಳು

ಈ. ವಚನಕಾರ್ತಿಯರು ವಚನಕಾರರ ಬಗ್ಗೆ ತಳೆದ ಚಿಂತನೆ

ಉ. ಸಾಹಿತ್ಯ ಮತ್ತು ಮಹಿಳೆಯರು

೧. ಆಸ್ಥಾನಿಕ ಕವಿಯತ್ರಿಯರು

೨. ದಾಸ ಸಾಹಿತ್ಯದ ಕವಿಯತ್ರಿಯರು

ಊ. ಶಿಕ್ಷಣ ಮತ್ತು ಮಹಿಳೆ

ಅಧ್ಯಾಯ - ೪

# ಮಧ್ಯಕಾಲೀನ ಸಂದರ್ಭ ಮತ್ತು ಮಹಿಳೆ

## ೪.೧. ಹಿನ್ನೆಲೆ

ಜಗತ್ತಿನ ಚರಿತ್ರೆಯಲ್ಲಿ 'ಮಧ್ಯಕಾಲ'ವೆಂದು ಕರೆಯುವ ಕಾಲಘಟ್ಟದ ಬಗೆಗೆ ತೀವ್ರತರವಾದ ಚರ್ಚೆಗಳಿವೆ. ಭಾರತದ ಚರಿತ್ರೆಯಲ್ಲಿ ಸಾಮಾನ್ಯವಾಗಿ ಕ್ರಿ.ಶ. ೧೦೦೦ ದಿಂದ ಕ್ರಿ.ಶ. ೧೫೫೦ರ ವರೆಗಿನ ಕಾಲಘಟ್ಟವನ್ನು ಮಧ್ಯಕಾಲ ಎಂದು ಗುರುತಿಸಲಾಗಿದೆ. ಅಲ್ಲದೆ ಕ್ರಿ.ಶ. ೧೦೦೧ ರಿಂದ ೧೭೦೭ರವರೆಗೆ ದೆಹಲಿ ಸುಲ್ತಾನರಿಂದ ಮೊಗಲರ ಔರಂಗಜೇಬನ ಅಂತ್ಯದವರೆಗೂ ಸಹ 'ಮಧ್ಯಕಾಲ' ಎಂದು ಗುರುತಿಸುತ್ತಾರೆ. ಇವೆರಡನ್ನು ಹೊರತುಪಡಿಸಿದರೆ ಜಗತ್ತಿನ ಇತಿಹಾಸದಲ್ಲಿ ಕ್ರಿ.ಶ. ೮ನೆಯ ಶತಮಾನದಿಂದ ಕ್ರಿ.ಶ. ೧೮ನೆಯ ಶತಮಾನದವರೆಗೂ 'ಮಧ್ಯಕಾಲ' ಎಂದೇ ಕರೆಯಲಾಗಿದೆ. ಚರಿತ್ರಕಾರರಾದ ವಿನೋದಚಂದ ಪಾಂಡೆ, ವಿನೋದ ಬಿಹಾರಿ ಲಾಲ್ ಅವರು 'ದಿ ಮಿಡೈವೆಲ್ ಇಂಡಿಯಾ' ಕೃತಿಯಲ್ಲಿ ಕ್ರಿ.ಶ. ೭೧೧ ರಿಂದ ೧೮೦೩ರ ವರೆಗಿನ ಕಾಲವನ್ನು ಮಧ್ಯಕಾಲ ಎಂದು ಸೂಚಿಸಿದ್ದಾರೆ. ಕನ್ನಡ ಸಾಹಿತ್ಯದಲ್ಲಿ ೧೧ ರಿಂದ ೧೬ನೆಯ ಶತಮಾನವನ್ನು 'ಮಧ್ಯಕಾಲ' ಎಂದು ಹೇಳಲಾಗಿದೆ. ರೆವರೆಂಡ್ ಎಫ್ ಕಿಟ್ಟೆಲ್ ಅವರು ೧೦ ರಿಂದ ೧೩ನೆಯ ಶತಮಾನವನ್ನು 'ಮಧ್ಯಕಾಲ' ಎಂದು ವಿಂಗಡಿಸಿದ್ದಾರೆ.

ಜ್ಯೋತ್ಸ್ನಾ ಕಾಮತ್ ಅವರು 'ಮಧ್ಯಕಾಲೀನ ಕರ್ನಾಟಕದ ಸಾಮಾಜಿಕ ಜೀವನ' ಎಂಬ ಪುಸ್ತಕದಲ್ಲಿ ಮಧ್ಯಕಾಲವನ್ನು ಕಲ್ಯಾಣಿ ಚಾಲುಕ್ಯರಿಂದ ಗುರುತಿಸುತ್ತಾರೆ. ಪ್ರಸ್ತುತ ಈ ಅಧ್ಯಯನದ ಅನುಕೂಲಕ್ಕಾಗಿ ಕಲಚುರಿಗಳಿಂದ ಮೈಸೂರಿನ ಚಿಕ್ಕದೇವರಾಜ ಒಡೆಯರ ಕಾಲಘಟ್ಟದವರೆಗೆ 'ಮಧ್ಯಕಾಲ' ಎಂದು ಗುರುತಿಸಿಕೊಳ್ಳಲಾಗಿದೆ. ಇಲ್ಲಿಯೂ ಸಾಮಾಜಿಕ, ಆರ್ಥಿಕ, ಧಾರ್ಮಿಕ, ರಾಜಕೀಯ,

ಸಾಹಿತ್ಯಕ, ಶೈಕ್ಷಣಿಕ ನೆಲೆಗಳಲ್ಲಿ ಚರ್ಚಿಗಳಿವೆ. ಅಲ್ಲದೆ ಮಧ್ಯಕಾಲೀನ ಪತ್ರಗಳಲ್ಲಿ ಬಹುಸಂಖ್ಯೆಯ ವಚನಕಾರ್ತಿಯರನ್ನು, ಕವಿಯತ್ರಿಯರನ್ನು ಚರ್ಚಿಸಲಾಗಿದ್ದು, ಮಧ್ಯಕಾಲೀನ ಶಿಕ್ಷಣ ಮತ್ತು ಮಹಿಳೆಯನ್ನು ಕುರಿತಂತೆ ಹೆಚ್ಚು ಗಮನಹರಿಸಲಾಗಿದೆ.

## ೪.೨. ಸಮಾಜ ಮತ್ತು ಮಹಿಳೆ

ಹೋಲಿಕೆ-ವ್ಯತ್ಯಾಸ, ಪರಸ್ಪರ ಸಹಾಯ-ಸಹಕಾರ, ಶ್ರಮವಿಭಜನೆ-ಪರಸ್ಪರಾವಲಂಬನೆ, ಸಾಮಾಜಿಕ ನಿಯಂತ್ರಣ-ಸಾಮಾಜಿಕ ಪರಿವರ್ತನೆ, ಅಧಿಕಾರ-ಸ್ವಾತಂತ್ರ್ಯ, ಸಂಸ್ಕೃತಿ-ಸಾಮರಸ್ಯ ಇವೆಲ್ಲವುಗಳು ಸಮ್ಮಿಶ್ರಣಗೊಂಡ ಸಂಕೀರ್ಣ ವ್ಯವಸ್ಥೆಯೇ `ಸಮಾಜ`. ಸಮಾಜದಲ್ಲಿರುವ ನಿಯಂತ್ರಣ, ಸ್ವಾತಂತ್ರ್ಯ, ಸಾಮರಸ್ಯರಗಳು, ವ್ಯಕ್ತಿತ್ವದ ವಿಕಾಸಕ್ಕೆ ಸಹಾಯವಾದಂತೆ, ವ್ಯಕ್ತಿತ್ವದ ವಿಕಾಸಕ್ಕೆ ತಡೆಯನ್ನೂ ಉಂಟು ಮಾಡುತ್ತವೆ. ಅಂತೆಯೇ ಪ್ರಾಚೀನ ಕರ್ನಾಟಕದ ಸಮಾಜ ಮತ್ತು ಆ ಸಮಾಜ ಮಹಿಳೆಗೆ ಕೊಟ್ಟ ಸ್ಥಾನಮಾನಗಳನ್ನು ಹಿಂದಿನ ಅಧ್ಯಾಯದಲ್ಲಿ ಅವಲೋಕಿಸಲಾಗಿದೆ. ಪ್ರಾಚೀನ ಸಮಾಜ ವಿಧವೆಯರ ಮರು ವಿವಾಹಕ್ಕೆ ಅವಕಾಶ ನೀಡಿದ್ದು ಹಾಗೂ ನಿಯೋಗದಂಥ ಪದ್ಧತಿಗಳನ್ನು ಆಚರಣೆಗೆ ತಂದಿತ್ತು. ಇದರಿಂದಾಗಿ ಸ್ವಲ್ಪ ಮಟ್ಟಿಗಾದರೂ ಸತಿ ಹೋಗುವವರನ್ನು ನಿಷೇಧಿಸಿದ್ದರೆಂಬ ಸತ್ಯವನ್ನು ಮನಗಾಣಬಹುದು. ಜೊತೆಗೆ ಸ್ತ್ರೀಯರಿಗೆ ವಿವಾಹ ಕಡ್ಡಾಯವೆಂಬ ನೀತಿ-ನಿಯಮ ಕಟ್ಟುನಿಟ್ಟಿನದಾಗಿರಲಿಲ್ಲ. ಹೀಗಾಗಿ ಪ್ರಾಚೀನ ಮಹಿಳೆ ಅಲ್ಪಮಟ್ಟಿಗಾದರೂ ಸಂತೋಷದಿಂದ ಇದ್ದಳು. ಆದರೆ ಪ್ರಾಚೀನ ಕಾಲದ ಅಂತ್ಯದಲ್ಲಿ ಹಾಗೂ ಧರ್ಮಶಾಸ್ತ್ರಗಳಿಂದ ಹೆಣ್ಣಿನ ಮೇಲೆ ನಿರ್ಬಂಧಗಳನ್ನು ಹೇರಿದ್ದರೂ, ಅಷ್ಟು ಕ್ರೂರವಾಗಿರಲಿಲ್ಲ. ಮಧ್ಯಕಾಲೀನ ಕರ್ನಾಟಕದ ಸಮಾಜವು ಸಹ ಪ್ರಾಚೀನ ಸಮಾಜದ ಆಚಾರ-ವಿಚಾರ-ಪದ್ಧತಿಗಳನ್ನು ಯಥಾರೀತಿ ಮುಂದುವರೆಸದೆ ಅವುಗಳಲ್ಲಿ ಕೆಲವು ಬದಲಾವಣೆ ಮತ್ತು ಕಟ್ಟುನಿಟ್ಟುಗಳನ್ನು ಮಾಡಿಕೊಂಡಿತು. ಇಂಥ ಬದಲಾವಣೆಗಳಿಗೆ ಕಾರಣ ಈ ಕಾಲಘಟ್ಟದಲ್ಲಿ ಮುಸ್ಲಿಮರು, ವಿದೇಶಿಯರು ರಾಷ್ಟ್ರೀಯ ಹಾಗೂ ಪ್ರಾಂತೀಯ ಹಂತಗಳಲ್ಲಿ ಕಾಣಿಸಿಕೊಂಡಿದ್ದು. ಇಲ್ಲಿಗೆ ಬಂದ ಇತರೆ ಧರ್ಮೀಯರು ತಮ್ಮ ಧರ್ಮ, ಸಂಸ್ಕೃತಿಗಳನ್ನು ಪ್ರಚುರ ಪಡಿಸುವುದರೊಂದಿಗೆ ಭಾರತೀಯ ಸಂಸ್ಕೃತಿ, ಧರ್ಮದ ನೀತಿ-ನಿಯಮಗಳನ್ನು ಹಾಳು ಮಾಡುವರು ಎಂಬ ಭಾವನೆಗಳು ಸ್ಥಳೀಯರಲ್ಲಿ ಬೆಳೆಯತೊಡಗಿದವು. ಅದಕ್ಕಾಗಿ ಧರ್ಮ ಮತ್ತು ಸಂಸ್ಕೃತಿ ರಕ್ಷಣೆ ಮಾಡಲು ಇಲ್ಲಿನ ಸಮಾಜ ಬಹುಬಗೆಯ ನಿರ್ಬಂಧಗಳನ್ನು ರೂಪಿಸಿತು. ಅವುಗಳನ್ನೆಲ್ಲವನ್ನು ಹೆಣ್ಣಿನ ಮೇಲೆ ಹೇರುವುದರ ಜೊತೆಗೆ ಆಕೆಯನ್ನು ಮತ್ತಷ್ಟು ಪುರುಷನ ಸ್ವತ್ತು, ಒಡವೆ ಎಂದು ಹೇಳಲಾಯಿತು. ಒಟ್ಟಾರೆ ಮಧ್ಯಕಾಲೀನ ಸಮಾಜದಲ್ಲಿ ಕ್ರೂರವಾದ ಆಚರಣೆ-ಪದ್ಧತಿಗಳು ಕಾಣಿಸಿಕೊಂಡವು. ಈ ಕಾಲಘಟ್ಟದಲ್ಲಿ ವಚನಕಾರರು ಮತ್ತು ವಚನಕಾರ್ತಿಯರು ಸಮಾಜದಲ್ಲಿನ ಈ ಅನಿಷ್ಟಗಳ ಬಗ್ಗೆ ಸ್ವಲ್ಪವಾದರೂ ಬದಲಾವಣೆಗಳನ್ನು ತರಲು ಪ್ರಯತ್ನಿಸಿ ಹೆಣ್ಣಿನ ಸಂವೇದನೆಗೆ ಸ್ಪಂದಿಸಿದ್ದು ಗಮನಾರ್ಹ. ಈ ದಿಸೆಯಲ್ಲಿ ಅಂದಿನ ಸಮಾಜದ ಕೆಲವು ಸಂಸ್ಥೆಗಳನ್ನು ಹೀಗೆ ಪರಿಶೀಲಿಸಬಹುದು.

೧. ಕುಟುಂಬ

ಪ್ರಾಚೀನ ಕಾಲದಿಂದಲೂ ಅಸ್ತಿತ್ವದಲ್ಲಿದ್ದ ಕುಟುಂಬವು ಮಧ್ಯಕಾಲೀನ ಸಂದರ್ಭದಲ್ಲಿಯೂ ತನ್ನದೆ ಆದ ನೀತಿ-ನಿಯಮಗಳನ್ನು, ಕಾರ್ಯಗಳನ್ನು ಮುಂದುವರಿಸಿಕೊಂಡಿತ್ತು. ಅಂತೆಯೇ ಕುಟುಂಬವು ಮೂರು ಬಗೆಯ ಅಗತ್ಯಗಳನ್ನು ಪ್ರತಿನಿಧಿಸುತ್ತದೆ. ಅವು ಲೈಂಗಿಕ ತೃಪ್ತಿ, ಸಂತಾನಾಭಿಲಾಶೆ ಮತ್ತು ಆರ್ಥಿಕ ಬಯಕೆಗಳೇ ಆಗಿವೆ. ಇವು ಕುಟುಂಬದ ಸಾರ್ವತ್ರಿಕತೆಗೂ ಕಾರಣ ಆಗಿವೆ ಎನ್ನಬಹುದು. ಈ ಕಾಲಘಟ್ಟದಲ್ಲಿಯೂ ಗಂಡ-ಹೆಂಡತಿಯರ ವಿಚಾರದಲ್ಲಿ ಗಂಡನೇ ಪ್ರತ್ಯಕ್ಷ ದೇವರು ಎಂದು ಭಾವಿಸಿಕೊಳ್ಳಲಾಗಿತ್ತು. ಅಂತೆಯೇ ಸತಿಗೆ "ಪುರುಷನೇ ಸುರಧೇನು, ಪುರುಷನೇ ಸುರಧ್ರುಮ, ಪುರುಷನೇ ಮಹಾಸತಿಯ ಜೀವಿತೇಶ್ವರನಾಗಿದ್ದ."[೧] ಇಂಥ ಪುರುಷನಿಗೆ ಸತಿಯಾದವರು ಹಗಲು-ರಾತ್ರಿಗಳನ್ನರಿತು ಪತಿಯೊಂದಿಗೆ ಜೀವಿಸುತ್ತ, ಪರ ಪುರುಷನನ್ನು ಬಯಸದೆ ತನ್ನ ಕುಟುಂಬಕ್ಕೆ ತಾಯಿಯಾಗಿ, ಗೃಹಸ್ಥೆಯಾಗಿ ಬಾಳಬೇಕಾಗಿತ್ತು. "ಪರ್ಯಂಕದಲ್ಲಿ ವೇಶ್ಯೆಯಾಗಿ, ಶುಶ್ರೂಷೆ ಮಾಡುವಾಗ ದಾಸಿಯರಂತೆ, ಪತಿಭಕ್ತಿಯುಳ್ಳವಳಾಗಿ, ಮುಗುಪಿನ ಹಾರೈಕೆಯಲ್ಲಿ ಮೈಸಿರಿಯುಳ್ಳವಳಾಗಿರಬೇಕು"[೨] ಎಂದು ಪಿತೃಪ್ರಧಾನ ಕುಟುಂಬ ಬಯಸುತ್ತಿತ್ತು. ಇದು ವಾತ್ಸ್ಯಾಯನನ ಮಾತನ್ನು ನೆನಪಿಸುತ್ತದೆ. ಹೆಣ್ಣು ಕುಟುಂಬದಲ್ಲಿ ಸಮಾಧಾನಿಯಾಗಿ ತಾಳ್ಮೆಯಿಂದ ಇರಬೇಕಾಗಿದ್ದು, ಗಂಡನ ಕಾರ್ಯಗಳನ್ನು ಗಮನಿಸುತ್ತಿರಬೇಕಾಗಿತ್ತು. ಅಲ್ಲದೆ ಅನುಚಿತ ಕಾರ್ಯಗಳು ಕಂಡುಬಂದರೆ ಅವುಗಳನ್ನು ತಿದ್ದಿಕೊಳ್ಳಲು ವಿನಯದಿಂದ ಹೇಳಬೇಕಾದ ಅನಿವಾರ್ಯತೆ ಇತ್ತು. ಕರ್ನಾಟಕದ ಬಹುಪಾಲು ರಾಣಿಯರು ಕೂಡಾ ಅರಸನಿಗೆ ಸಲಹೆ ನೀಡುವ ಆಪ್ತ ಕಾರ್ಯದರ್ಶಿಗಳಂತೆ ಕಾರ್ಯನಿರ್ವಹಿಸಿದ್ದರು. ಉದಾಹರಣೆಗೆ ಶಾಂತಲೆಯು ಹೊಯ್ಸಳ ವಿಷ್ಣುವರ್ಧನನಿಗೆ ಸಲಹೆ-ಸೂಚನೆ ಕೊಡುತ್ತಿದ್ದಳು. ಶಾಂತಲೆ ಸತ್ತ ಬಳಿಕ ವಿಷ್ಣುವರ್ಧನ ಮತ್ತು ಆತನ ಆಸ್ಥಾನಿಕರು, ಇತರೆರು ಪ್ರತಿ ಸಾರಿ ನಿರ್ಣಯ ತೆಗೆದುಕೊಳ್ಳುವಾಗ ಶಾಂತಲೆಯನ್ನು ನೆನಪಿಸಿಕೊಳ್ಳುತ್ತಿದ್ದದ್ದನ್ನು ಕಾಣಬಹುದು.[೩] ಇದರಿಂದ ಶಾಂತಲೆಯ ವಿವೇಚನಬುದ್ಧಿ, ವ್ಯಕ್ತಿತ್ವಗಳ ಮಹತ್ವ ತಿಳಿಯುತ್ತದೆ. ಶಾಂತಲೆಯನ್ನು ಕುರಿತಂತೆ ಶಾಸನವೊಂದು -

"ಧುರದೊಳು ವಿಷ್ಣು ನ್ರಿ ಪಾಳಕಂಗೆ ವಿಜಯಶ್ರೀ
ವೃಕ್ಷದೊಳು ಸಂತತಂ
ಪರಮಾನಂದದಿನೋತು ನಿಲ್ವ ವಿಪುಳಶ್ರೀ
ತೇಜದುದ್ದಾನಿಯಂ
ವರದಿಗ್ಭಿತ್ತಿಯನೆಯ್ದಿ ಸಲ್ನೆರೆವ ಕೀರ್ತಿಶ್ರೀ
ಯೆನುತ್ತಿರ್ಪ್ಪುದೀ
ಧರೆಯೊಳು ಶಾಂತಲದೇವಿಯಂ ನೆರೆಯ
ಬಣ್ಣಿಪ್ಪಾತನೇವಣ್ಣಿಪಂ"[೪]

- ಎಂದು ತಿಳಿಸಿರುವುದನ್ನು ನೋಡಬಹುದಾಗಿದೆ. ಸತಿಯು ಪತಿಯ ಹಿತವನ್ನೇ ಬಯಸಬೇಕು. ತನ್ನ ಗಂಡನಿಗೆ ಆಗದವರನ್ನು ದೂರವಿಡಬೇಕೆಂದು ಹೊನ್ನಮ್ಮ ಸಹ ಹೇಳಿದ್ದನ್ನು ಗಮನಿಸಬಹುದು.[೫] ಹೆಂಡತಿ ಗಂಡನ ಮನದಿಚ್ಛೆಯನ್ನು ಅರಿತು ಬಾಳಬೇಕಾಗಿದ್ದು, ಅವನಿಗೆ ಒಪ್ಪಿಗೆಯಾಗುವ ರೀತಿಯಲ್ಲಿ

ಇರುವುದರೊಂದಿಗೆ, ಅವನ ಬಯಕೆಗಳನ್ನು ಪೂರೈಸುವ ಸ್ಥಿತಿಯು ಉಂಟು. ಅಂತೆಯೇ ಸರ್ವಜ್ಞ ಇಚ್ಛೆಯನ್ನರಿತು ನಡೆವ ಸತಿ ಇದ್ದರೆ ಆ ಮನೆ ಸ್ವರ್ಗವಾಗುತ್ತಿತ್ತು ಎಂದು ಹೇಳಿದ್ದ.

“ಸತಿಯು ತನ್ನ ಕೈ ಮುಟ್ಟಿ ಗಂಡನ ಪಾದ ತೊಳೆದು, ಉಟ್ಟದುಕೂಲದ ಸೆರಗಿಂದ ಪತಿಗಂಗಂಟ್ಟವಿಕ್ಕಿದಳು.”[೬] ಊಟಕ್ಕೆ ಕೂತರೆ ಮನದಲ್ಲಿ ನೆನೆವಷ್ಟರೊಳಗೆ ನೀರು ಕೊಟ್ಟು, ಸಿಹಿ ಹೆಚ್ಚಾದರೆ ಹುಳಿ ಕೊಡುವಳು, ಹುಳಿ ಹೆಚ್ಚಾದರೆ ಉಪ್ಪು ಕೊಡುವ ಸತಿ ಇರಬೇಕು.[೭] ಜೊತೆಗೆ ಇಷ್ಟೆಲ್ಲಾ ಆದ ನಂತರವೂ ಅವನು ಮಲಗುವ ತನಕ ಪಾದಸೇವೆ ಮಾಡುತ್ತಿದ್ದಳು. ಪತಿಯೇ ಆಕೆಯನ್ನು ನೋಡಿ ಊಟ ಮಾಡಲು ಹೋಗು ಎನ್ನುವವರೆಗೂ ಹೋಗಲಾರದ ಸತಿಯು ಇರುತ್ತಿದ್ದಳು.[೮] ಹೆಣ್ಣಿಗೆ ಗಂಡನ ಸೇವೆ ಎನ್ನುವುದು ದೇವರ ಸೇವೆ ಎಂದು ಹೇಳುತ್ತಾ ಲಕ್ಷ್ಮಿದೇವಿಯು ನಾರಾಯಣನ ಪಾದಗಳನ್ನು ಒತ್ತುವಳು ಎಂದು ತೋರಿಸಿ, ಸಾಮಾನ್ಯ ಮಹಿಳೆಯರಾದ ನೀವು ಗಂಡನ ಪಾದಸೇವೆ ಮಾಡಬೇಕು ಎಂದು ಪ್ರೋತ್ಸಾಹಿಸುತ್ತಿದ್ದರು. ಇಂಥ ಹೇಳಿಕೆ, ಒತ್ತಡಗಳಿಂದ ಹೆಣ್ಣು ಅವುಗಳನ್ನು ಒಪ್ಪಿ, ಅಂಥ ಸೇವೆಗಳು ತನ್ನ ಭಾಗ್ಯಕ್ಕೆ ಎಂದು ಭಾವಿಸಿ ಈ ಕಾರ್ಯಗಳಲ್ಲಿ ತನ್ನನ್ನು ತಾನು ತೊಡಗಿಸಿಕೊಳ್ಳುತ್ತಿದ್ದಳು.

ಮಧ್ಯಕಾಲೀನ ಸಂದರ್ಭದಲ್ಲಿಯೂ ಅಂತಃಪುರದ ರಾಣಿಯರಿಗೆ ಪರಿಚಾರಿಕೆಯರು, ಆಪ್ತಸೇವಕಿಯರು ಕಾವಲುಗಾರ್ತಿಯರು ಹಾಗೂ ಇತರೆ ಎಲ್ಲ ಸೇವಕಿಯರುಳ್ಳ ಅವರದೇ ಆದ ಪ್ರತ್ಯೇಕ ಕೋಣೆಗಳು ಇರುತ್ತಿದ್ದವು. ಈ ಅಂತ:ಪುರಗಳಿಗೆ (ರಾಣಿಯರನ್ನು ಅಲ್ಲಿನ ಸ್ತ್ರೀಯರನ್ನು) ಸಂರಕ್ಷಿಸುವ ನಪುಂಸರಕರನ್ನು ಹೊರತುಪಡಿಸಿ ಯಾವ ಪುರುಷನಿಗೂ ಪ್ರವೇಶವಿರಲಿಲ್ಲ. ರಾಜನ ಅನುಗ್ರಹದಿಂದ ಯಾವನೊಬ್ಬ ಉನ್ನತ ಅಂತಸ್ತಿನ ಹಿರಿಯನನ್ನುಳಿದು, ಈ ಸ್ತ್ರೀಯರು ಯಾವ ಪುರುಷನ ಕಣ್ಣಿಗೂ ಬೀಳುವುದಿಲ್ಲ. ಇವರ ಅಂತಃಪುರಕ್ಕೆ ಗಂಡು ನೊಣಗಳು ಸಹ ಬರುತ್ತಿರಲಿಲ್ಲ. ಅಂತಃಪುರದ ಮಹಿಳೆಯರು ಹೊರಗೆ ಹೋಗಬೇಕಾದರೆ ಯಾರಿಗೂ ಕಾಣದಂತೆ ಮುಚ್ಚಿದ ಮೇಣೆಗಳಲ್ಲಿ ಹೊತ್ತೊಯ್ಯಲಾಗುತ್ತಿತ್ತು. ಇಂಥವರ ಜೊತೆ ಮುನ್ನೂರು, ನಾನೂರು ನಪುಂಸಕರು ಇರುತ್ತಿದ್ದರು.[೯] ಒಟ್ಟಿನಲ್ಲಿ ಕುಟುಂಬದ ನಿರ್ಬಂಧಗಳು ಹೆಣ್ಣಿನ ಮೇಲೆ ಇರುತ್ತಿದ್ದವು. ಈ ನಿರ್ಬಂಧಗಳಿಂದ ಮಹಿಳೆಯರು ಕುಟುಂಬಕ್ಕೆ ಅಧೀನರಾಗಿ ಬದುಕುತ್ತಿದ್ದರು. ಇಂಥ ನಿಯಮಗಳನ್ನು ಪ್ರಶ್ನಿಸಿದಲ್ಲಿ ಅಂಥ ಹೆಣ್ಣನ್ನು 'ಗಂಡುಬೀರಿ, ಅಂಜಿಕೆ ಇಲ್ಲದಾಕೆ' ಎಂದು ಹೇಳುತ್ತ ಬೇರೆ ಮಹಿಳೆಯರು ಇಂಥವರ ಸಂಗಡ ಇರಬಾರದು ಎಂದು ನಿಷೇಧಿಸಲಾಗುತ್ತಿತ್ತು. ಹೀಗಾಗಿ ಹೆಣ್ಣು ಕುಟುಂಬದ ಎಲ್ಲ ನಿಯಮಗಳನ್ನು ಪಾಲಿಸುತ್ತಿದ್ದಳು. ಹೆಣ್ಣು ಇಂಥ ವ್ಯವಸ್ಥೆಯನ್ನು ವಿರೋಧಿಸುವಂತೆ, ಕುಟುಂಬದ ಕಾರ್ಯ-ಚಟುವಟಿಕೆಗಳು ಗಂಡು-ಹೆಣ್ಣು ಇಬ್ಬರಿಗೂ ಅವಶ್ಯಕವಾಗಿದೆ. ಅದು ಇಬ್ಬರ ವ್ಯಕ್ತಿತ್ವ ವಿಕಾಸಕ್ಕೆ ಇರಬೇಕೇ ಹೊರತು, ವಿಕಾಸಕ್ಕೆ ತಡೆಗಳನ್ನು ಉಂಟು ಮಾಡಬಾರದು ಎಂದು ವಿವರಿಸಿ, ಈಗಾಗಲೇ ಹೆಣ್ಣು ಈ ನಿರ್ಬಂಧಗಳಿಗೆ ಒಳಗಾಗಿದ್ದರಿಂದ ಆಕೆಯ ವ್ಯಕ್ತಿತ್ವ ವಿಕಸಿಸಿಲ್ಲ ಎಂಬುದನ್ನು ಮನಗಂಡಿದ್ದಾಳೆ. ಇಂಥ ಅಡೆತಡೆಗಳನ್ನು ಸ್ತ್ರೀವಾದಿ ನೆಲೆಯಿಂದ ಶೋಧಿಸಲು ಸಾಧ್ಯ ಇದೆ. ಹೀಗಾಗಿ ಸ್ತ್ರೀವಾದಿ ಅಧ್ಯಯನಕ್ಕೆ ಇಲ್ಲಿಯೂ ಸಾಕಷ್ಟು ಅವಕಾಶಗಳಿವೆ ಎಂಬುದು ತಿಳಿದುಬರುತ್ತದೆ.

**೨. ಜಾತಿ ಪದ್ಧತಿ**

ಪ್ರಾಚೀನ ಕಾಲದಲ್ಲಿನ ಜಾತಿ ವ್ಯವಸ್ಥೆಯ ಕಟ್ಟುಪಾಡುಗಳು ಈ ಕಾಲಘಟ್ಟದಲ್ಲೂ ಮುಂದುವರೆದವು. ಸಮಾಜದಲ್ಲಿ ಇದರಿಂದಾಗಿ ವರ್ಗಗಳು ವೃತ್ತಿಗಳು ಹುಟ್ಟಿಕೊಂಡಿದ್ದು, ಈಗಾಗಲೇ ಹೆಣ್ಣು ಇಂಥವುಗಳಿಂದ ಶೋಷಿತಳಾಗಿದ್ದಳು. ಇವುಗಳ ಜೊತೆಗೆ ಈ ಜಾತಿ ವ್ಯವಸ್ಥೆಯಿಂದಲೂ ಸಹ ಶೋಷಿತಳಾಗತೊಡಗಿದಳು. ಜಾತಿವ್ಯವಸ್ಥೆ ವಿಭಿನ್ನ ಗುಂಪುಗಳನ್ನಾಗಿ ಮಹಿಳೆಯರನ್ನು ವಿಂಗಡಿಸಿತ್ತು. ಕೆಳವರ್ಗದ ಹೆಣ್ಣನ್ನು ಶೋಷಣೆಗೆ ಗುರಿಪಡಿಸಿತು. ಮೇಲ್ವರ್ಗದ ಹೆಣ್ಣು ಅನುಭವಿಸುತ್ತಿದ್ದ ಸೌಲಭ್ಯಕ್ಕಿಂತಲೂ ಭಿನ್ನವಾದ ಸೌಲಭ್ಯಗಳನ್ನು ಕೆಳವರ್ಗದ ಮಹಿಳೆ ಅನುಭವಿಸಬೇಕಾಗಿತ್ತು. ದಾಸಿ, ವೇಶ್ಯೆಯಂಥ ಪಟ್ಟಗಳು, ಪಾತ್ರಗಳು ಕೆಳವರ್ಗದ ಮಹಿಳೆಯರನ್ನರಸಿಯೇ ಬರುತ್ತಿದ್ದವು. ಸ್ತ್ರೀವಾದಿ ಅಧ್ಯಯನದ ನೆಲೆಯಿಂದ ಹೆಣ್ಣಿನ ಶೋಷಣೆಗೆ ಜಾತಿ ವ್ಯವಸ್ಥೆ ಹೇಗೆ ಕಾರಣವಾಗಿತ್ತು ಎಂಬ ಪ್ರಶ್ನೆಗಳಿಗೆ ಉತ್ತರಗಳನ್ನು ಕಂಡುಕೊಳ್ಳಲು ಸಾಧ್ಯ ಇದೆ.

**೩. ವಿವಾಹ**

ವಿವಾಹವೆಂಬುದು ಹೆಣ್ಣಿಗೆ ಈ ಕಾಲಘಟ್ಟದಲ್ಲಿ ಕಡ್ಡಾಯವಾಗಿತ್ತು. ಆದ್ದರಿಂದ ಹೆಣ್ಣು ಅವಿವಾಹಿತಳಾಗಿ ಬದುಕುವ ಸ್ವಾತಂತ್ರ್ಯ ಇಲ್ಲವಾಯಿತು. ಬಾಲ್ಯವಿವಾಹಗಳು ಪ್ರಾಚೀನ ಕಾಲದಲ್ಲಿ ಇದ್ದರೂ, ಮಧ್ಯಕಾಲೀನ ಸಂದರ್ಭದಲ್ಲಿ ಅದೊಂದು ಅನಿವಾರ್ಯದ ಮತ್ತು ಅಪರಿಹಾರ್ಯವಾದ ಪಿಡುಗಿನಂತೆ ಮಾರ್ಪಟ್ಟಿತ್ತು. ದುರಳರ ಧಾಳಿಯಿಂದ ಯುವತಿಯರ ಮೇಲೆ ಅತ್ಯಾಚಾರ, ಮಾನಭಂಗದಂಥ ಪ್ರಕರಣಗಳು ಹೆಚ್ಚಿದವು. ಈ ಪ್ರಕರಣಗಳಿಗೆ ತಾವು, ತಮ್ಮ ಹೆಣ್ಣುಮಕ್ಕಳು ಬಲಿಯಾಗದಿರಲಿ ಎಂದು ಭಾವಿಸಿ, ವಿವಾಹಪೂರ್ವ ವಯಸ್ಸಿನಲ್ಲಿಯೇ ಮದುವೆ ಮಾಡತೊಡಗಿದರು. ಅಲ್ಲದೆ ಅರಸನೊಬ್ಬ ಯಾವುದೇ ಕನ್ಯೆಯನ್ನು ಬಯಸಿದರೂ, ಆ ಕನ್ಯೆಯನ್ನು ಅರಸನಿಗೆ ಧಾರೆಯೆರೆಯಬೇಕಾಗಿತ್ತು. ಇದರಿಂದಾಗಿ ಜಾತಿ-ಕುಲಗಳು ಹಾಳಾಗುತ್ತವೆ ಎಂದು ಯೋಚಿಸಿ ಬಾಲ್ಯವಿವಾಹವನ್ನು ಆಚರಣೆಗೆ ತಂದರು. ಹೀಗಾಗಿ ಬಾಲ್ಯ ವಿವಾಹಗಳು ವ್ಯಾಪಕವಾದವು. ಧರ್ಮನಾಥ ಪುರಾಣದಲ್ಲಿ ಪ್ರತಾಪರಾಜ ತನ್ನ ಎಳೆಯ ವಯಸ್ಸಿನ ಮಗಳನ್ನು ವಿವಾಹ ಮಾಡಿಕೊಟ್ಟು, ಅವಳಿಗೆ ಬುದ್ಧಿ ಬರುವವರೆಗೆ, ಬಂದ ಮೇಲೆ ಕೂಡ ತಿದ್ದಿ ಬುದ್ಧಿ ಹೇಳಬೇಕೆಂದು ಅಳಿಯನನ್ನು ಕೈಜೋಡಿಸಿ ಕೇಳಿರುವುದನ್ನು ಗಮನಿಸಬಹುದು. ಇದರಿಂದ ಬಾಲ್ಯವಿವಾಹದ ಸ್ಪಷ್ಟತೆ ಬಗ್ಗೆ ತಿಳಿದುಬರುತ್ತದೆ. ಹೀಗೆ ವಿವಾಹಿತಳಾದ ಹೆಣ್ಣು ಗೃಹಿಣಿಯಾಗಿ ಕುಟುಂಬದ ಸದಸ್ಯರ ಎಲ್ಲ ಕಾರ್ಯಗಳನ್ನು ಮಾಡಿ, ಹುಟ್ಟಿದ ಮನೆಗೆ ಹೆಸರು, ಕೀರ್ತಿ ತರಬೇಕಿತ್ತು. ಎಳೆಯ ವಯಸ್ಸಿನಲ್ಲಿಯೇ ಕುಟುಂಬದ ಹೊಣೆ ಹೊತ್ತು, ಕಾರ್ಯ ನಿರ್ವಹಿಸಬೇಕಿದ್ದರಿಂದ ಆಕೆಯ ಆರೋಗ್ಯವು ಹದಗೆಡುವುದರೊಂದಿಗೆ ಆಕೆಯ ದೈಹಿಕ ದುರ್ಬಲತೆಯು ಅವರ ಗಂಡಂದಿರನ್ನು ಲೈಂಗಿಕ ಸುಖಕ್ಕಾಗಿ ವೇಶ್ಯೆಯರತ್ತ ನೂಕುವಂತೆಯೂ ಮಾಡುತ್ತಿತ್ತು.

ವಿವಾಹಗಳಿಂದಾಗಿ ಸಾಮ್ರಾಜ್ಯ ವಿಸ್ತರಣೆ, ಸಂಪತ್ತು ಇಲ್ಲವೆ ಎರಡು ರಾಜಮನೆತನಗಳ ನಡುವೆ ಸ್ನೇಹ-ಸಂಬಂಧ-ಪ್ರೀತಿ ಒಡಮೂಡಲು ನೆರವಾಗುತ್ತಿದ್ದವು. ಹೆಣ್ಣು ಇಲ್ಲಿ ವಿವಾಹದ ಸರಕಾದರೂ ರಾಜರುಗಳ ನಡುವೆ ಸಂಬಂಧ ಬೆಸೆಯುವ ಹೊಸ ಮನ್ವಂತರ ಸೃಷ್ಟಿಸುವ ನಾಯಕಿಯಾಗಿದ್ದಳು. ಮದುವೆ ಮಾಡಿಕೊಟ್ಟ ತಂದೆ ತಾಯಂದಿರು "ನಮ್ಮ ಹಂಬಲದಿಂದ ನೀನು ಉತ್ತಮ ಸತಿಯಾಗು, ನಿನ್ನ ಪತಿಯೊಂದಿಗೆ ತಪ್ಪೆಸಗದಂತೆ

ಜೀವಿಸು. ವಿಶೇಷ ಕಾರ್ಯಗಳಲ್ಲಿ ಬುದ್ಧಿಯ ಬಲದಿಂದ ನಮ್ಮ ಕೀರ್ತಿಯನ್ನು ಎತ್ತಿ ಹಿಡಿ'' ಎಂದು ಹರಿಸಿ, ಕಳಿಸಿಕೊಡುತ್ತಿದ್ದದ್ದೂ ಉಂಟು.

ಅಂತರ್‌ಜಾತಿಯ ವಿವಾಹಗಳು ಆಚರಣೆಯಲ್ಲಿದ್ದವು. ಒಂದು ಸಾಮ್ರಾಜ್ಯದ ರಾಣಿಯರು ವಿಭಿನ್ನ ಧರ್ಮದವರಾಗಿದ್ದರು. ಇವರು ಇತರೆ ಧರ್ಮದ ಅರಸನನ್ನು ವಿವಾಹವಾಗಿ, ಸಕಲ ಧರ್ಮಗಳನ್ನು ಪೋಷಿಸುತ್ತಿದ್ದರು. ಆದರೆ ಕೆಲವು ಸಂದರ್ಭಗಳಲ್ಲಿ ವಿಭಿನ್ನ ಧರ್ಮದ ರಾಣಿಯರು ಸಂಕುಚಿತ ಬುದ್ಧಿಯನ್ನು ವ್ಯಕ್ತಪಡಿಸಿರುವುದೂ ಇದೆ. ಉದಾಹರಣೆಗೆ ‘‘ಲಕ್ಷ್ಮಿದೇವಿ ವೈಷ್ಣವ ಧರ್ಮದವಳಾಗಿದ್ದು, ಜೈನಧರ್ಮ ಶಾಂತಲೆಯನ್ನು ‘ಬೆತ್ತಲೆ ಧರ್ಮ’ದವಳು ಎಂದು ಹೇಳಿದ್ದನ್ನು’’[೧೦] ಕಾಣಬಹುದು. ಇಂಥ ಪ್ರಸಂಗಗಳಿಗೆ ಭಿನ್ನವಾದ ಸ್ಥಿತಿಗಳೂ ಇದ್ದವು. ವಿಜಯನಗರದ ಎರಡನೆ ದೇವರಾಯ ತನ್ನ ಮಗಳನ್ನು ಫಿರೋಜ್ ಷಾನಿಗೆ ಕೊಟ್ಟಿದ್ದ. ಅಂತೆಯೇ ಅನೇಕ ಸುಲ್ತಾನರು ಕೂಡ ಹಿಂದೂ ಸ್ತ್ರೀಯರನ್ನು ವಿವಾಹವಾಗಿದ್ದರು. ಇವರೆಲ್ಲಾ ತಮ್ಮ ರಾಣಿಯರಿಗೆ ವೈಯಕ್ತಿಯ ಧರ್ಮ, ಪದ್ಧತಿ, ಸಂಪ್ರದಾಯಗಳನ್ನು ಆಚರಿಸಲು ಅವಕಾಶ ಮಾಡಿ ಕೊಟ್ಟಿದ್ದರು.

### ೪. ಬಹುಪತ್ನಿತ್ವ

ಮಧ್ಯಕಾಲೀನ ಕಾಲಘಟ್ಟದಲ್ಲಿಯೂ ಬಹುಪತ್ನಿತ್ವ ಪದ್ಧತಿ ತನ್ನ ವ್ಯಾಪಕತೆಯನ್ನು ಪಡೆದಿತ್ತು. ಚರಿತ್ರೆಯಲ್ಲಿ ಕಂಡುಬರುವ ಬಹುಪಾಲು ರಾಣಿಯರು ಬಹುಪತ್ನಿತ್ವದವರೇ ಆಗಿದ್ದರು. ಈ ಪದ್ಧತಿಗೆ ಮಧ್ಯಕಾಲೀನ ಸಂದರ್ಭದಲ್ಲಿಯೂ ಮಾನ್ಯತೆ ಇತ್ತು. ಈ ಪದ್ಧತಿಯಲ್ಲಿ ಹೆಣ್ಣು ಯುದ್ಧ ನಿಲುಗಡೆಗೆ, ಸಂಪತ್ತು, ಕೀರ್ತಿಗಾಗಿ ಕೊಡುವ ಉಡುಗೊರೆಯಂತೆ ಆಗಿದ್ದಳು. ಇಲ್ಲಿ ಆಕೆ ಕೊಟ್ಟವನ ಹೆಂಡತಿಯಾಗಿ ಇರಬೇಕಾಗಿದ್ದು, ವಿವಾಹದ ಸಂದರ್ಭದಲ್ಲಿ ಸ್ವಾತಂತ್ರ್ಯ ಪಡೆದುಕೊಂಡಿರಲಿಲ್ಲ. ಕೆಲವು ಬಾರಿ ಹೆಣ್ಣಿನ ಸೌಂದರ್ಯ, ನೃತ್ಯ, ಸಂಗೀತ, ನಯ-ನಾಜೂಕು, ಧೈರ್ಯ, ಬುದ್ಧಿವಂತಿಕೆ ಇತ್ಯಾದಿಗಳನ್ನು ಕಂಡು ಆಕರ್ಷಿತನಾದ ಅರಸನು ಸಹ ವಿವಾಹವಾಗುತ್ತಿದ್ದ.

ಅರಮನೆಯ ಅಂತಃಪುರವು ವಿವಿಧ ಧರ್ಮಗಳ, ವಿಭಿನ್ನ ಕ್ಷೇತ್ರಗಳಲ್ಲಿ ಪರಿಣತಿ ಪಡೆದ ಸ್ತ್ರೀಯರ ದಂಡಿನಿಂದ ತುಂಬಿತ್ತು. ಈ ಸ್ತ್ರೀಯರ ದಂಡು ಅರಸನಿಗೆ ಸಲಹೆ ನೀಡುವುದಷ್ಟೇ ಅಲ್ಲದೆ, ಪ್ರೇರಣೆ ಕೊಡುವವರೂ ಆಗಿದ್ದರು. ಇವರಿಂದ ಅನೇಕ ಸಮಸ್ಯೆಗಳಿಗೆ ಪರಿಹಾರ ದೊರೆಯುತ್ತಿತ್ತು. ಈ ಅವಧಿಯ ಕುತೂಹಲಕರವಾದ ಸಂಗತಿ ಎಂದರೆ, ರಾಣಿಯರು 'ಸವತಿ ಗಂಧವಾರಣೆ' ಎಂಬ ಬಿರುದು ಪಡೆಯಲು ಹಂಬಲಿಸುತ್ತಿದ್ದದ್ದು. ಕೆಲವು ಬಾರಿ ಈ ಸ್ತ್ರೀಯರ ದಂಡೆ ಸವತಿ ಮತ್ಸರಕ್ಕೂ ಕಾರಣ ಆಗುತ್ತಿತ್ತು. ಸ್ತ್ರೀವಾದವು 'ಸವತಿ ಮತ್ಸರ' ಎನ್ನುವಂಥ ಹೇಳಿಕೆಗಳನ್ನು ಪ್ರಶ್ನಿಸುತ್ತ 'ಹೆಣ್ಣಿಗೆ ಹೆಣ್ಣೇ ಶತ್ರು' ಎಂಬುದು ಪುರುಷ ರಚಿತವಾದದ್ದು ಎಂದು ತಿಳಿಯುತ್ತದೆ. ಜೊತೆಗೆ ಹೆಣ್ಣಿನ ಎಲ್ಲ ಬಗೆಯ ಶೋಷಣೆ, ಅಧೀನಕ್ಕೆ ಪುರುಷನೇ ಸೂತ್ರಧಾರ ಎಂದು ತೋರಿಸಿ, ಬಹುಪತ್ನಿತ್ವ ಪದ್ಧತಿಯ ಹಿಂದಿರುವ ಪುರುಷನ ಆಲೋಚನೆಯನ್ನು ಅನಾವರಣಗೊಳಿಸಿದೆ.

### ೫. ಉಡುಗೊರೆ

ವಿವಾಹದ ಸಂದರ್ಭದಲ್ಲಿ ಅವರವರ ಅಂತಸ್ತಿಗೆ ತಕ್ಕಂತೆ ಉಡುಗೊರೆ ನೀಡುತ್ತಿದ್ದದ್ದು ವಾಡಿಕೆ. ಇಂಥ ಉಡುಗೊರೆಯ ರೂಪದಲ್ಲಿ ಹೆಣ್ಣನ್ನು, ಪ್ರದೇಶಗಳನ್ನು, ಸಂಪತ್ತು ಇತ್ಯಾದಿಗಳನ್ನು ನೀಡಿರುವುದರ ಬಗ್ಗೆ ಉಲ್ಲೇಖಗಳಿವೆ. ಧರ್ಮನಾಥ ಪುರಾಣದಲ್ಲಿ ನಿಯೋಗ ಯೋಗ ಕನ್ಯೆಯರನ್ನು ಎಪ್ಪತ್ತೆರಡು ಬಗೆಯ ಕೆಲಸಗಳನ್ನು ನಿರ್ವಹಿಸುವಂಥ ನೂರಾರು ಕನ್ಯೆಯರನ್ನು ಮಗಳೊಡನೆ ಕಳಿಸುತ್ತಿದ್ದರ ಬಗ್ಗೆ ದಾಖಲೆ ದೊರೆಯುತ್ತದೆ. ವಿಜಯನಗರದ ಎರಡನೆ ದೇವರಾಯ ಫಿರೋಜ್ ಷಾನಿಗೆ ಮಗಳನ್ನು ಹಾಗೂ ಬಂಕಾಪುರ ಎಂಬ ಪ್ರದೇಶವನ್ನು ಉಡುಗೊರೆಯಾಗಿ ನೀಡಿದ್ದುದರ ಬಗ್ಗೆ ಉಲ್ಲೇಖಗಳಿವೆ. ಅಂತೆಯೇ ಓರಿಸ್ಸಾದ ಪ್ರತಾಪರುದ್ರನು ಸಹ ಹಲವು ಪ್ರದೇಶಗಳನ್ನು ಮತ್ತು ಮಗಳನ್ನು ಕೃಷ್ಣದೇವರಾಯನಿಗೆ ನೀಡಿದ್ದ.

### ೬. ಮಾಂಗಲ್ಯ

ಪ್ರಾಚೀನ ಕರ್ನಾಟಕದ ಸಮಾಜ ಓಲೆ, ಕಡಗಗಳನ್ನು ಮುತ್ತೈದೆಯ ಸಂಕೇತವಾಗಿಸಿತ್ತು. ಆದರೆ ಮಧ್ಯಕಾಲೀನ ಕರ್ನಾಟಕದ ಸಮಾಜದಲ್ಲಿ ಮಂಗಳಸೂತ್ರ[೧೧] ಮುತ್ತಿನ ಓಲೆ,[೧೨] ಮುತ್ತಿನಮೂಗುತಿ, ಕುಂಕುಮ,[೧೩] ಬಳೆ[೧೪] ಮುತ್ತೈದೆಯ ಸಂಕೇತಗಳಾಗಿ ಕಂಡುಬಂದಿರುತ್ತವೆ. ಈ ಪರಿವರ್ತನೆಯನ್ನು ಸ್ತ್ರೀವಾದಿ ಅಧ್ಯಯನದ ಹಿನ್ನೆಲೆಯಲ್ಲಿ ಪರಿಶೀಲಿಸಬಹುದು.

### ೭. ತಾಯಿತನ

ಮಧ್ಯಕಾಲೀನ ಸಮಾಜದಲ್ಲಿ ವಿವಾಹಿತೆಯಾದ ಒಬ್ಬ ಮಹಿಳೆ ಹೆಣ್ಣುಮಗುವನ್ನು ಹೆರಲೇಬೇಕೆಂದು ಹೇಳುತ್ತದೆ. ಅಂತೆಯೇ ಪ್ರತಿಯೊಬ್ಬ ಹೆಣ್ಣು ಸಹ ವೀರಪುತ್ರನನ್ನು ಹೆತ್ತು, ವೀರಮಾತೆ ಆಗಲು ಬಯಸುತ್ತಿದ್ದಳು. ಈ ಕಾಲಘಟ್ಟದಲ್ಲಿಯೂ ಹೆಣ್ಣಿನ ಮೇಲೆ ಇದ್ದಂಥ ನಿರ್ಬಂಧ, ಸಮಸ್ಯೆ ಇತ್ಯಾದಿಗಳನ್ನು ಕಂಡು ಹೆಣ್ಣು ಮಗುವಿನ ಜನನಕ್ಕಾಗಿ ಹಂಬಲಿಸಲಿಲ್ಲ. ಜೊತೆಗೆ ಹೆಣ್ಣುಮಗುವಿನ ಹುಟ್ಟನ್ನು ಕುರಿತು ಎಲ್ಲಿಯೂ ಸಂತೋಷ ವ್ಯಕ್ತಪಡಿಸಿಲ್ಲ. ಮಕ್ಕಳಾಗದ ಹೆಣ್ಣನ್ನು ಬರೀ ಹೆಣ್ಣು ಮಕ್ಕಳಿಗೆ ಜನ್ಮ ನೀಡುವ ಸ್ತ್ರೀಯರನ್ನು ಗಂಡಂದಿರು ಬಿಟ್ಟು ಬಿಡುತ್ತಿದ್ದರು. ಆದ್ದರಿಂದ ಪ್ರತಿ ಹೆಣ್ಣು ಗಂಡು ಮಗುವನ್ನು ಹೆರಬೇಕೆಂದು ಹಲವು ಬಗೆಯ ವ್ರತಗಳನ್ನು ಕೈಗೊಳ್ಳುತ್ತಿದ್ದಳು. ಮೇಲ್ವರ್ಗದ ಸ್ತ್ರೀಯರು ಗೋವು, ಭೂಮಿ, ಬಂಗಾರಗಳನ್ನು ದಾನ ಕೊಟ್ಟು ಗಂಡು ಮಗುವನ್ನು ಪಡೆಯಬೇಕೆಂದು ಹಂಬಲಿಸುತ್ತಿದ್ದರು. "ಕಂದನ ಕರುಣಿಸಿ ಈ ಹೆಣ್ಣು ಜನ್ಮ ನಿರರ್ಥಕವಾಗದಂತೆ ನೋಡಿಕೋ ದೇವನೆ ಎಂದು ಬೇಡಿಕೊಳ್ಳುತ್ತಿದ್ದಳು"[೧೫] ಎಂಬ ಮಾತುಗಳು ಉಲ್ಲೇಖವಾಗಿವೆ.

ಮಕ್ಕಳಿಲ್ಲದವರ ಜೀವನ ವ್ಯರ್ಥವಾಗಿತ್ತು. ಅಂಥವರನ್ನು ಕುರಿತು "ಜ್ಞಾನವಿಲ್ಲದವರ ಸಿದ್ಧಿ, ವರಸಂತಾನವಿಲ್ಲದ ಬಾಳ್ವೆಯಲಿ ಸುಖವೇನು"[೧೬] ಎಂಬ ಮಾತು "ಮಕ್ಕಳಿಲ್ಲದ ಸಕಲ ಸಿರಿ ಶವಕಿಕ್ಕಿದಾಭರಣ, ಮಕ್ಕಳಿಲ್ಲದ ಸೊಬಗು ಪತಿಶೂನ್ಯಾಂಗನಾ ವಿಭವ, ಮಕ್ಕಳಿಲ್ಲದ ನಾರಿಯರು ನರಕಕ್ಕೆ ಸರಿವರು"[೧೭] ಎಂಬ ಅಭಿಪ್ರಾಯಗಳಿದ್ದವು. ಇವೆಲ್ಲವುಗಳನ್ನು ಗಮನಿಸಿದರೆ ಹೆಣ್ಣಿಗೆ 'ತಾಯಿ' ಎಂದು ಅನ್ನಿಸಿಕೊಳ್ಳದೆ ಇದ್ದರೆ

ಉಳಿಗಾಲವೇ ಇರಲಿಲ್ಲವೇನೋ ಎಂಬ ಅನುಮಾನಗಳಿಗೆ ಎಡೆಮಾಡಿಕೊಡುತ್ತದೆ. ಬಂಜೆಯು ತಾನು ಹಿಂದಿನ ಜನ್ಮದಲ್ಲಿ ಪಾಪ ಮಾಡಿದ್ದರಿಂದಾಗಿ ತನಗೆ ಮಕ್ಕಳಾಗಿಲ್ಲ ಎಂದು ಚಿಂತಿಸುತ್ತಿದ್ದಳು. ಇಂಥವರು ದೇವರ ಕಾರ್ಯಗಳಿಗೆ ವ್ರತ, ವಿವಾಹ ಶುಭ ಕಾರ್ಯಗಳಿಗೆ ನಿಷೇಧಿತರಾಗುತ್ತಿದ್ದರು. ರಾಣಿಯರು ಗಂಡುಮಗುವಿಗೆ ಜನ್ಮ ನೀಡಬೇಕಾಗಿತ್ತು. ಇದರಿಂದ ಆ ರಾಣಿ 'ಪಿರಿಯರಸಿ ಪಟ್ಟದರಾಣಿ' ಎಂಬ ಪಟ್ಟ ಪಡೆಯುತ್ತಿದ್ದಳು. ಗಂಡು ಮಗುವನ್ನು ಹೆರದಿದ್ದರೆ ಸವತಿಯರ ಕುಹಕವನ್ನು ಎದುರಿಸಬೇಕಾಗಿತ್ತು. ಹಗೆಯ ಮಾತಿನ, ಸಂತೋಷವಿಲ್ಲದ, ಮೆಚ್ಚುಗೆಯಿಲ್ಲದ ವ್ಯಂಗದ ಮಾತುಗಳು ಸವತಿಯರಿಂದ ಕೇಳಿಬರುತ್ತಿದ್ದವು.

ಇಂಥ ಸಂದರ್ಭದಲ್ಲಿಯೇ ಹೊನ್ನಮ್ಮ ಗಂಡು-ಹೆಣ್ಣು ಬೇಧವನ್ನು ಎಣಿಸುವುದು ಸಲ್ಲದು ಎಂಬ ವಿಚಾರವನ್ನು ಮಂಡಿಸಿದ್ದಾಳೆ. ಗಂಡಾದರೆ ದೊಡ್ಡ ಗುಣವೇನು? ಹೆಣ್ಣಾದರೆ ಕುಂದೇನು? ಎಂದು ಪ್ರಶ್ನಿಸಿ ಹೆಣ್ಣಿಗೆ ಪ್ರಾಶಸ್ತ್ಯ ನೀಡಿದ್ದಳು. ಹೊನ್ನಮ್ಮ ಹೀಗೆ ಹೇಳಬೇಕಾದರೆ ಅಂದಿನ ಸಮಾಜ ಗಂಡು ಮಗುವನ್ನು ಕುರಿತಂತೆ ವ್ಯಕ್ತಪಡಿಸುವ ಅಭಿಪ್ರಾಯ, ಸಂತೋಷಗಳು ಹೆಣ್ಣುಮಗುವಿಗೆ ದೊರೆತಿಲ್ಲದಿದ್ದುದು ಅಭಿವ್ಯಕ್ತ ಆಗುತ್ತದೆ. ಜೊತೆಗೆ ಹೊನ್ನಮ್ಮ ಹೆಣ್ಣನ್ನು ಹೆತ್ತು ವರನಿಗೆ ಕೊಟ್ಟರೆ, ಕುಲ ಕೋಟಿಯನ್ನು ಉದ್ಧರಿಸುವಳು ಎಂದಿದ್ದಾಳೆ. ಹೀಗೆ ಹೇಳುವುದರ ಮುಖೇನ ಸಮಾಜವನ್ನು ಹೆಣ್ಣು ಮಗುವಿನತ್ತ ತಿರುಗಿಸಲು, ಹಂಬಲಿಸಲು ಮಾಡುವಂತೆ ಪ್ರಯತ್ನಿಸಿದ್ದಾಳೆ ಎನ್ನಬಹುದಾಗಿದೆ. ಸ್ತ್ರೀವಾದಿ ನೆಲೆಯಿಂದ ತಾಯಿತನದ ಬಗೆಗಿನ ಅಧ್ಯಯನ ಕೈಗೊಳ್ಳಲು ವಿಪುಲ ಸಾಧ್ಯತೆಗಳಿವೆ.

### ೮. ವಿಚ್ಛೇದನ

ಗಂಡು-ಹೆಣ್ಣು ಮದುವೆಯಾದ ನಂತರ ಒಂದಾಗಿಯೇ ಬಾಳು ಸಾಗಿಸಬೇಕಿತ್ತು. ಅಲ್ಲದೆ ಅವರು ಒಬ್ಬರನ್ನೊಬ್ಬರು ಅರಿತು ಜೀವಿಸಬೇಕಾಗಿತ್ತು. ಎಂಥ ತೊಡಕುಗಳು ಬಂದರೂ ಸಂಸಾರ ರಥದ ಜೋಡು ಎತ್ತುಗಳಾಗಿ ರಥವನ್ನು ಎಳೆಯಬೇಕು ಎಂಬುದು ಹಿಂದೂ ಧರ್ಮಶಾಸ್ತ್ರದ ಪರಿಕಲ್ಪನೆ. ಆದರೆ ಮಾನಸಿಕವಾಗಿ ನೊಂದಾಗ ಒಟ್ಟಾಗಿ ಜೀವಿಸುವುದು ಅಸಾಧ್ಯವೆಂದೂ ಅದಕ್ಕೆ ಪರಿಹಾರಾರ್ಥವಾಗಿ ವಿಚ್ಛೇದನವನ್ನು ಜಾರಿಗೆ ತರಲಾಯಿತು. ಹೆಣ್ಣು ಗಂಡನನ್ನೇ ಪ್ರತ್ಯಕ್ಷ ದೇವರು ಎಂದು ತಿಳಿದಿದ್ದರಿಂದ ಆಕೆಗೆ ವಿಚ್ಛೇದನ ಕೈಗೊಳ್ಳಲು ಅಷ್ಟು ಅವಕಾಶ ಇರಲಿಲ್ಲ. ಆದರೆ ಗಂಡು ಹಲವಾರು ಕಾರಣಗಳನ್ನು ನೀಡಿ ಹೆಂಡತಿಯನ್ನು ಬಿಡಲು ಅವಕಾಶವಿತ್ತು. ಅವುಗಳೆಂದರೆ -

೧. ಅನುಕೂಲವಲ್ಲದ ಸತಿಯಾಗಿದ್ದರೆ
೨. ಸನ್ನೆಯನರಿತು ನಡೆವ ಸತಿಯಿರದಿದ್ದರೆ
೩. ಮಾತು ಕೇಳದ ಸೊಸೆ, ಸತಿಯೊಡನೆ ಬಾಳುವೆ ಅಗತ್ಯವಿಲ್ಲವೆಂದು ಕಂಡುಬಂದಾಗ
೪. ಬರೀ ಹೆಣ್ಣುಮಕ್ಕಳಿಗೆ ಜನ್ಮ ನೀಡುತ್ತಿದ್ದರೆ
೫. ತಾಯಿ ಆಗುವ ಸಾಧ್ಯತೆ ಇಲ್ಲದಿದ್ದಾಗ

- ಮೊದಲಾದವುಗಳಿಗೆ ವಿಚ್ಛೇದನ ಸಿಗುತ್ತಿತ್ತು. ಈ ಕುರಿತಂತೆ ಸಾಕಷ್ಟು ಅಧ್ಯಯನಗಳು ಆಗಿಲ್ಲ.

## ೯. ವಿಧವೆಯರು

ಧರ್ಮಶಾಸ್ತ್ರಗಳು ವಿಧವಾ ಪುನರ್ವಿವಾಹದ ಮೇಲೆ ವಿಧಿಸಿದ್ದ ನಿಷೇಧಗಳನ್ನು ಕಟ್ಟುನಿಟ್ಟಾಗಿ ಅನುಸರಿಸುತ್ತಿದ್ದವು. ಪಾತಿವ್ರತ್ಯದ ವೈಭವೀಕರಣದಿಂದಾಗಿ ವಿಧವೆಯರು ಮರುವಿವಾಹ ಮಾಡಿಕೊಳ್ಳುವ ಪ್ರಶ್ನೆಯೇ ಇರಲಿಲ್ಲ. ಬಾಲ್ಯವಿವಾಹದಿಂದಾಗಿ, ಬಾಲ ವಿಧವೆಯರ ಸಂಖ್ಯೆ ಹೆಚ್ಚಾಗಿತ್ತು. ವಿಧವೆಯನ್ನು 'ಅಮಂಗಳಕರ'ಳು ಎಂದು ಪರಿಗಣಿಸಿ, ಆಕೆಗೆ ಶುಭಕಾರ್ಯಗಳಲ್ಲಿ, ಧಾರ್ಮಿಕ ಕ್ರಿಯೆಗಳಲ್ಲಿ ಭಾಗವಹಿಸುವ ಹಕ್ಕನ್ನು ನೀಡಿರಲಿಲ್ಲ. ಜೊತೆಗೆ ಕುಟುಂಬದ ಪರಿಚಾರಿಕೆಯ ಕೆಲಸಕ್ಕೆ ನಿಯುಕ್ತಿ ಮಾಡಿದಂತೆ ಅವರನ್ನು ದುಡಿಸಲಾಗುತ್ತಿತ್ತು. ವಿಧವೆಯರ ಸಾಮಾಜಿಕ ಸ್ಥಾನಮಾನ ಅತ್ಯಂತ ನಿಕೃಷ್ಟಮಟ್ಟದ್ದಾಗಿತ್ತು. ಈ ನಿಷೇಧದಿಂದ ವಿಧವೆಯರು ಇಚ್ಛೆಯಿಂದಲೂ ಅಥವಾ ಬಲವಂತಕ್ಕೋ ಮಣಿದು ಅನೈತಿಕ ಲೈಂಗಿಕ ವ್ಯವಹಾರ ನಡೆಸುವ ಪರಿಪಾಠವೂ ಆರಂಭವಾಯಿತು. ಕೆಲವು ವಿಧವೆಯರನ್ನು ವೇಶ್ಯಾವಾಟಿಕೆಗಳಿಗೂ ದೂಡಲಾಯಿತು.

ಬಾಲ್ಯ ವಿವಾಹದಿಂದ ವಿಧವೆಯರಾದವರು ಪ್ರಾಪ್ತ ವಯಸ್ಸಿಗೆ ಬಂದು, ತಮ್ಮ ಯೌವ್ವನದ ಆಸೆಗಳನ್ನು ತಡೆಯದೆ, ಪರಪುರುಷನ ಜೊತೆ ಸಂಬಂಧ ಇಟ್ಟುಕೊಳ್ಳುತ್ತಿದ್ದರು. ಇದನ್ನು ಧರ್ಮನಾಥ ಪುರಾಣದಲ್ಲಿ -

"ತವಕರಿಸಿ ಮಿಂಡನಂ ವಿಧವೆಕಂಡಸೂಚಿತ ಶಾಲೆಗೆಯ್ದು ಕೂಡುವ
ಪದದಲ್ಲಿ ಕೂಗಿಡುತ ಮಿಕ್ಕಲೊಕಿಕ್ಕುಯಕ್ಕು ನೀಂ ಶಿವಶಿವಲಿಂಗ
ಲಿಂಗ ಹರ ಶಂಕರ ಶಂಕರ ಕಾಮ ಸೌಖ್ಯದುತ್ಸವ ಮನೆ ನಿಚ್ಚಲುಂ
ಕರುಣೆಸೀ ಪರಿಯೆಂದೆನುತಿರ್ದಳಾಕ್ಷಣಂ"[೧೭] ಎಂಬುದಾಗಿ ಹೇಳಿದೆ.

ಮಿಂಡನನ್ನು ಕೂಡುತ್ತ ನಿತ್ಯವು ಕಾಮಸೌಖ್ಯದುತ್ಸವವನ್ನು ಕರುಣೆಸು ಎಂದು ಹಂಬಲಿಸುತ್ತಿದ್ದ ಇವರು ಸಮಾಜಕ್ಕೆ ಹೆದರದೆ ಬಾಳುತ್ತಿದ್ದರು. ಇಂಥ ವಿಧವೆಯರು ತೊಂದರೆಗೀಡಾದಾಗ ಯಾರು ಅವರನ್ನು ರಕ್ಷಿಸುತ್ತಿರಲಿಲ್ಲ. "ಗರ್ಭಿಣಿಯಾದ ರಂಡೆಯಂತೆ ಬಾಯಿ ಬಿಟ್ಟು"[೧೮] ಎಂಬ ಮಾತಿನಲ್ಲಿ ಅವರ ಬಗ್ಗೆ ಇದ್ದ ತಿರಸ್ಕಾರ ವ್ಯಕ್ತವಾಗುತ್ತದೆ. ವಿಧವೆಯರ ಒಡನಾಟದಲ್ಲಿ ಬೆಳೆಯುತ್ತಿದ್ದ ಮಕ್ಕಳು ಕೂಡ ಜನರ ನಿಂದನೆಗೆ, ಸಂದೇಹಕ್ಕೆ ಗುರಿಯಾಗಿ ಅಪಮಾನ, ಅವಮಾನಗಳನ್ನು ಅನುಭವಿಸುತ್ತಿದ್ದರು. ಇಂಥ "ವಿಧವೆಯರ ಸಂಗ, ಅವಳ ಮೊದಲ ಗಂಡನ ಮಲಮೂತ್ರ" ಎಂದು ಹೇಳುತ್ತಿದ್ದುದು ಉಂಟು. ಆದರೂ ಇವರ ಮೇಲೆ ಪುರುಷರು, ಕುಟುಂಬದವರು, ಇತರೆರು ಮಾನಸಿಕ, ಬೌದ್ಧಿಕ, ದೈಹಿಕ ಹಿಂಸೆಯನ್ನು ಎಸಗುತ್ತಿದ್ದುದೇ ಹೆಚ್ಚು.

ವಿಧವೆಯರು ಲೈಂಗಿಕ ಚಟುವಟಿಕೆಗಳಲ್ಲಿ ತೊಡಗದಂತೆ ಮಾಡಲು ಮತ್ತು ಅನ್ಯ ಪುರುಷರಿಗೆ ಬಲಿಯಾಗದಂತೆ ತಡೆಯಲು ಅವರ ಉಡುಗೆ-ತೊಡುಗೆ, ಆಹಾರಗಳ ಮೇಲೆ ನಿಷೇಧವನ್ನು ತರಲಾಯಿತು. ಅಂತೆಯೇ ಕೇಶಮುಂಡನ ಮಾಡಿಸಿ, ಕೆಂಪು ಸೀರೆ ಉಡಿಸಿ ಎಲ್ಲಾ ಬಗೆಯ ಆಭರಣ ಹಾಗೂ ಸೌಂದರ್ಯ ವರ್ಧಕಗಳನ್ನು ನಿರಾಕರಿಸಲಾಯಿತು. ಆದರೂ ಲೈಂಗಿಕ ಅಪರಾಧಗಳು ಜರುಗುತ್ತಲೇ ಇದ್ದವು. ವಿಧವೆಯರ ಸ್ಥಿತಿಯನ್ನು ಹರಿದಾಸರು ಕಂಡು -

"ರಮಣನಿಲ್ಲದ ನಾರಿ ಪರರ ಕಣ್ಣಿಗೆ ಮಾರಿ
ಪಡೆದವಳ ಎದೆಗೊರಳ ಕೊಯ್ವಂಥ ಚೂರಿ"[೧೯]

- ಎಂದು ಹೇಳಿದ್ದಾರೆ. ವಿಧವೆಯರು ಅತ್ತೆಯಿಂದ, ತವರು ಮನೆಯಿಂದಲೂ ದೂಷಿಸಿಕೊಳ್ಳುತ್ತಿದ್ದರು. ಅತಿ ಶ್ರಮಪಟ್ಟರೆ ಆದರಿಸುವರು. ಇವರ ಬಳಿ ಹಣವಿದ್ದರೆ ಅಪಹರಿಸಿ ತಿನ್ನುವವರು ಇದ್ದರು ಎಂಬ ಉಲ್ಲೇಖಗಳಿವೆ. ಆದರೆ ರಾಣಿಯರು, ದೇಸಾಯಿಣಿಯರು ತಮ್ಮ ಧರ್ಮಕ್ಕೆ ತಕ್ಕಂತೆ ಜೀವಿಸುತ್ತಿದ್ದಲ್ಲದೆ, ಮಕ್ಕಳ ರಾಜ್ಯದ ಆಡಳಿತ ವ್ಯವಹಾರಗಳಲ್ಲಿ ಭಾಗಿಯಾಗಿ 'ರಾಜಮಾತೆ'ಯರಾಗಿ ಕಾರ್ಯ ನಿರ್ವಹಿಸಿದ್ದರು. ಒಟ್ಟಿನಲ್ಲಿ ಮಧ್ಯಕಾಲೀನ ಸಮಾಜ ವಿಧವೆಯರೊಂದಿಗೆ ಕ್ರೂರವಾಗಿ ವರ್ತಿಸಿದೆ ಎಂಬುದರಲ್ಲಿ ಎರಡು ಮಾತಿಲ್ಲ.

**೧೦. ಸತಿ ಸಹಗಮನ**

ಹಿಂದಿನ ಅಧ್ಯಾಯದಲ್ಲಿ ಮಹಾಸತಿ, ಮಾಸ್ತಿಕಲ್ಲುಗಳನ್ನು ಈಗಾಗಲೆ ಚರ್ಚಿಸಲಾಗಿದೆ. ಮಧ್ಯಕಾಲೀನ ಸಮಾಜ ವಿಧವೆಯರಿಗೆ ಮರುವಿವಾಹಕ್ಕೆ ಅವಕಾಶ ಕೊಡದೆ ಅವರನ್ನು ನಿಕೃಷ್ಟವಾಗಿ ಕಂಡಿತ್ತು. ಜೊತೆಗೆ ವಿಧವೆಯು ಸಮಾಜದ ಕಾಮುಕರ ಪೀಡನೆಗೆ ಒಳಗಾಗಿ, ಎಲ್ಲರಿಂದಲೂ ತಿರಸ್ಕರಿಸಲ್ಪಟ್ಟಿದ್ದಳು. ಆಕೆ ಬದುಕುವುದಕ್ಕಿಂತ ಸಾಯುವುದೇ ಮೇಲು ಎಂದು ತಿಳಿದಿದ್ದಳು. ಸಹಗಮನ ಕೈಗೊಂಡ ಕೆಲವರು 'ಸ್ವರ್ಗ' ಪಡೆಯಲು ಬಯಸಿದರೆ ಮತ್ತೆ ಕೆಲವರು ವೈರಿಗಳ ಪಡೆ ಯೋಧರ ಹಾಗೂ ರಾಜನಿಂದ ಅಪಹರಣಕ್ಕೆ ಒಳಗಾಗುತ್ತಿದ್ದರು ಇದನ್ನು ತಪ್ಪಿಸಲೆಂದು ಮತ್ತು ಗಂಡನ ಬಗ್ಗೆ ಪ್ರೀತಿ ಇಟ್ಟುಕೊಂಡಿದ್ದರು ಸಹಗಮನ ಮಾಡುತ್ತಿದ್ದರು. ಆಕ್ರಮಣಕಾರರ ದಾಳಿಯಿಂದ ಬಾಲ ವಿಧವೆಯರ ಮಾನಭಂಗದಂಥ ಪ್ರಕರಣಗಳು ವ್ಯಾಪಕವಾದವು. ಇವೆಲ್ಲವುಗಳಿಂದ ಮುಕ್ತರಾಲು ಸಹಗಮನ ಅನಿವಾರ್ಯವಾಗಿತ್ತು. ಅಂತೆಯೇ ಗಂಡ ಸತ್ತ ಎಂಬ ಸುದ್ದಿ ಕೇಳಿದ ಸತಿಯರು ಅತ್ತೆಯನ್ನು ಉದ್ದೇಶಿಸಿ -

> ''ಕೊಡಿಸು ನಮಗೆ ಕಿಚ್ಚು ನಿಮ್ಮ
> ಮಗನ ಬೆನ್ನ ಬಿಡದಯ್ಯ ಬೇಕು''[೨೦]

- ಎಂದು ಕೇಳುತ್ತಿದ್ದರೆಂದು ದಾಖಲಾಗಿದೆ. ಕಾಲಕ್ರಮೇಣ ಸತಿ ಹೋದ ಮಹಿಳೆಯರನ್ನು ಗೌರವದಿಂದ ಕಾಣುವ, ಪೂಜಿಸುವ ಸಂಪ್ರದಾಯ ಬೆಳೆದುಬಂದಿತು. ಇದು ಸಹಗಮನ ವ್ಯಾಪಕವಾಗಲು ಕಾರಣವಾಯಿತು. ಚಿತೆಗೆ ಹೆದರಿ ಓಡಿಹೋದ ಸತಿಯರನ್ನು ಹೇಡಿ ಸತಿಯರೆಂದೂ ಕರೆಯುತ್ತಿದ್ದರು. ಸತಿ ಹೋಗುವ ಮಹಿಳೆ ತನ್ನ ಆಸ್ತಿ-ಸಂಪತ್ತು ಎಲ್ಲವನ್ನು ದಾನವಾಗಿ ನೀಡುತ್ತಿದ್ದು, ನಂತರ ಸುಮಂಗಲೆಯಂಥೆ ಶೃಂಗರಿಸಿಕೊಂಡು ಅನೇಕ ವಾದ್ಯಗಳೊಂದಿಗೆ ಚಿತೆಯ ಬಳಿಗೆ ಬಂದು ಅಗ್ನಿಯಲ್ಲಿ ಹಾರುತ್ತಿದ್ದಳು. ಹೀಗೆ ಅಗ್ನಿಯಲ್ಲಿ ಹಾರಿ ಅದರ ನೋವನ್ನು ತಡೆಯದೆ ಕೂಗಾಡುತ್ತಿದ್ದಳೋ ಏನೋ ಒಟ್ಟಿನಲ್ಲಿ ಅಗ್ನಿ ಪ್ರವೇಶಿಸಿದ ತಕ್ಷಣವೇ ಹಲವು ಬಗೆಯ ವಾದ್ಯ, ತಮಟೆಗಳ ಶಬ್ದ ಜೋರಾಗಿ ಕೇಳಿಬರುತ್ತಿತ್ತು. ಇವುಗಳಿಂದಾಗಿ ಸತಿಯ ಕೂಗಾಟ ಮರೆಯಾಗುತ್ತಿತ್ತು. ಸತಿ ಹೋಗುವ ಮಹಿಳೆಯರು ಅಲಂಕಾರವಾಗಿ ಶೃಂಗರಿಸಿಕೊಳ್ಳುತ್ತಿದ್ದರು ಎನ್ನಲು ಅವರು ಸ್ವರ್ಗಕ್ಕೆ ಹೋಗುತ್ತೇವೆ. ಅಲ್ಲಿ ತಮ್ಮ ಪತಿಯೊಂದಿಗೆ ಇರುತ್ತೇವೆ ಎಂದು ಭಾವಿಸುತ್ತಿದ್ದುದೇ ಕಾರಣ. ಇಂಥ ಸತಿಯರು ಉಪಯೋಗಿಸಿದ ವಸ್ತುಗಳನ್ನು ಪವಿತ್ರವೆಂದು ಕಂಡಿರುವುದು ಆಕೆ ತುಳಿದ ನೆಲವನ್ನು ಪವಿತ್ರ ಎಂದೂ ಕಣ್ಣಿಗೆ ಒತ್ತಿಕೊಳ್ಳುವಂಥ ಆಚರಣೆಗಳು ಜಾರಿಯಲ್ಲಿ ಇದ್ದವು. ಇವು ಸಹ ಸತಿಹೋಗಲು ಪ್ರೋತ್ಸಾಹ ನೀಡುತ್ತಿದ್ದವು.

ಸತಿ ಹೋದವರ ಕುರಿತಂತೆ ಶಾಸನಗಳು ಮಾಹಿತಿ ನೀಡುತ್ತವೆ. ಕ್ರಿ.ಶ. ೧೧೯೧ರ ಶಾಸನವೊಂದು ಜಳಿಬಿಯವ್ವೆಯನ್ನು ಕುರಿತು "ಕಲ್ಲನಿರುಸವಲ್ಲಿ ಕೂಡೆ ಸತ್ತು ಸ್ವರ್ಗ ಸೂರೆಗೊಂಡಳು" ಎಂದು[೨೭] ದಾಖಲಿಸಿದೆ. ಇದು ಅನುಗಮನ ಎಂದು ಹೇಳಲಾಗಿದೆ. ಜಳಿಬಿಯವ್ವೆ ಪತಿಯು ಮಡಿದದ್ದಕ್ಕೆ ವೀರಗಲ್ಲು ನಿಲ್ಲಿಸಿದ ನಂತರ ಕೈಗೊಂಡಿದ್ದರಿಂದ ಅನುಗಮನವಾಗಿದೆ. ಜಬಿಗವುಡಿ ವೀರಕ್ಕ ಬೊಮ್ಮಕ್ಕ, ಕಾರಬ್ಬೆ, ಬೊಮ್ಮಕ್ಕ, ಬವೆನಾಯಕಿತ್ತಿ, ಚಿಯಕ್ಕ, ದೇವಕಿ ಮಹಾದೇವಿ, ಬೇಡರ ಬೀರಗವುಡಿ ಸಖೀಬಾಯಿ, ಕುಮಾರ ರಾಮನ ಹೆಂಡತಿಯರು, ಹೊಯ್ಸಳ ರಾಣಿಯರು, ಬೊಮ್ಮಕ್ಕ, ಬಾಯಿದೇವಿ ಲಖಮಾಯಿ, ದೇಮಾಯಿ, ಬಯಿಚಕ್ಕ ಬಾಯಿದೇವಿ, ಕಮ್ಮವ್ವೆ ಲಕ್ಕವ್ವೆ ನಾಯಕಿತಿ, ಚೆಂದನಾಯಕಿ ಮೊದಲಾದವರು ಸಹಗಮನ ಕೈಗೊಂಡಿದ್ದರು. ವಿಜಯನಗರ ಸಾಮ್ರಾಜ್ಯದಲ್ಲಿ ಸತಿ ಹೋಗುವರ ಸಂಖ್ಯೆ ಹೆಚ್ಚಾಗಿತ್ತು. ಅಂತೆಯೇ ಹಂಪಿ, ಕಮಲಾಪುರ ಮೊದಲಾದ ಕಡೆಗಳಲ್ಲಿ ಅಸಂಖ್ಯ ಮಹಾಸತಿಯರ ಮಾಸ್ತಿಕಲ್ಲುಗಳಿವೆ.

ಹೀಗೆ ಸತಿಹೋದವರನ್ನು ದೇವತೆಗಳೆಂದು ಪೂಜಿಸುವ ಪರಿಪಾಠ ಬೆಳೆದುಬಂದಿತು. ಅಂತೆಯೇ ದೇವಾಲಯಗಳು ಸಹ ನಿರ್ಮಾಣಗೊಂಡವು. ಅಂಕೋಲೆ ತಾಲೂಕು ಅದರ ಗ್ರಾಮಗಳಲ್ಲಿ, ಕೊಳವಳ್ಳಿ, ಕುಷ್ಟಗಿ ತಾಲೂಕು, ಕಾರವಾರ ಇತ್ಯಾದಿಗಳಲ್ಲಿ ದೇವಾಲಯಗಳು ನಿರ್ಮಾಣಗೊಂಡಿವೆ. ಸತಿ ಹೋದವರಿಗೆ ನಿಲ್ಲಿಸುವ ಮಾಸ್ತಿಕಲ್ಲುಗಳು ಆಕರ್ಷಕವಾಗಿರುತ್ತವೆ. ಸಂಶೋಧಕ ಚಿದಾನಂದಮೂರ್ತಿಯವರು ಕೂಡ ಬೊಮ್ಮನಹಳ್ಳಿಯ ಮಾಸ್ತಿಕಲ್ಲು ಅಲಂಕಾರವಾಗಿದ್ದು, ಇಂಥ ಸುಂದರಶಿಲ್ಪ ಕರ್ನಾಟಕದಲ್ಲಿ ಬೇರೆ ಎಲ್ಲಿಯೂ ಇಲ್ಲ ಎಂದು ಹೇಳಿದ್ದಾರೆ. ಸ್ತ್ರೀವಾದಿ ನೆಲೆಯಿಂದ ಸತಿ ಹೋದವರನ್ನು ಕುರಿತು ಅಧ್ಯಯನ ಮತ್ತಷ್ಟು ಆಗಬೇಕಾಗಿದೆ.

ಸತಿ ಹೋದವರನ್ನು ಕುರಿತು ವಿದೇಶಿ ಪ್ರವಾಸಿಗರ ಹೇಳಿಕೆಗಳನ್ನು ಗಮನಿಸುವುದಾದರೆ ಪತಿಯ ಮರಣದ ನಂತರ ದೊಡ್ಡ ಗುಂಡಿಗೆ ಬೆಂಕಿ ಹಾಕುವರು. ಆದರೆ ಸತಿ ವೈಭವವಾಗಿ ಅಲಂಕರಿಸಿಕೊಂಡು ಆಭರಣಗಳನ್ನು ಧರಿಸಿ, ಹಾಡುತ್ತಾ, ನೃತ್ಯ ಮಾಡುತ್ತ ಸಮಯ ಕಳೆದು ತನ್ನ ಆಭರಣಗಳನ್ನು ಮತ್ತು ಆಸ್ತಿಯನ್ನು ಮಕ್ಕಳಿಗೆ ಸಂಬಂಧಿಕರಿಗೆ ಹಂಚಿ ಬಿಳಿಕುದುರೆ ಏರಿ ಬೀದಿಯೊಂದಿಗೆ ಬೆಂಕಿಯ ಗುಂಡಿಗೆ ಬರುವಳು. ಬೆಂಕಿ ಹತ್ತಿರವಾಗುತ್ತಿದ್ದಂತೆ ಆಭರಣಗಳನ್ನು ಕಳಚಿ ಎಣ್ಣೆಯನ್ನು ತಲೆಯ ಮೇಲೆ ಹಾಕಿಕೊಂಡು ಬೆಂಕಿಯೊಳಗೆ ಧುಮುಕುವಳು ಎಂದು ಇಟಲಿಯ ನಿಕೋಲೊ ಕಂಟಿ ಹೇಳಿದ್ದಾನೆ. ಸಿಸಿರೋ ಕೂಡಾ ಸಹಗಮನದ ಬಗ್ಗೆ ಹೇಳಿದ್ದಾನೆ. ಹದಿನ್ನೆದನೆಯ ಶತಮಾನದ ಸಹಗಮನದ ಬಗ್ಗೆ 'ಮೇಜರ್ ಇಂಡಿಯಾ'ದಲ್ಲಿಯೂ -

> "That wife should burn herself alive together with her husband as soon as, he died one or more wives, according to the dignity of the deceased, cast themselves into fire. The wife who was the most dear and the mother of the child favourable of the deceased placed her arm around his neck and burnt herself with him. The other wives cast themselves afterwards into the flame"[೨೮]

- ಎಂಬ ಸ್ವರೂಪದ ಉಲ್ಲೇಖವಾಗಿದೆ. ಅಲ್ಲದೆ ಸಮಾಧಿ ಮರಣದ ಬಗ್ಗೆ ಕೆಲವು ಉಲ್ಲೇಖಗಳಿವೆ.

ಸತಿ ಹೋದವರನ್ನು ಕುರಿತಂತೆ ಧಾರವಾಡದ ಕನ್ನಡ ಸಂಶೋಧನ ಸಂಸ್ಥೆ ಸಾಕಷ್ಟು ಮಾಹಿತಿಗಳನ್ನು ಸಂಗ್ರಹಿಸಿದೆ.[೨೪]

## ೧೧. ಪಾತಿವ್ರತ್ಯ ಪದ್ಧತಿ

ಹೆಂಡತಿ ಗಂಡನಾದವ ಊರಲ್ಲಿ ಇಲ್ಲದಿದ್ದಾಗ ಆಕೆ ಸುವಾಸನೆಯ ಹೂವುಗಳನ್ನು, ವಸ್ತ್ರಗಳನ್ನು ಧರಿಸುವಂತಿರಲಿಲ್ಲ. ಈಕೆಯ ಅಂದ-ಚೆಂದ ಗಂಡನಿಗಷ್ಟೇ ಕಾಣಬೇಕು ಎಂಬ ಮನೋಭಾವ ಇಲ್ಲಿನದು. ಮನೆಯ ತೊಂದರೆ ತಾಪತ್ರಯಗಳನ್ನು ಬೇರೆಯವರ ಜೊತೆ ಹೇಳಿಕೊಳ್ಳಬಾರದು ಎಂದು ನಿರ್ಬಂಧವಿತ್ತು. ಅಲ್ಲದೆ ಪುರಂದರ ದಾಸರು ಸಹ ಹೆಂಡತಿಯು ಬಾಗಿಲ ಬಳಿ ಬಂದು ನಿಲ್ಲಬಾರದು ಎಂದು ಹೇಳಿ, ಹೆಣ್ಣಿನ ಸ್ವಾತಂತ್ರ್ಯವನ್ನು ನಿಯಂತ್ರಿಸಿದ್ದರು. ಸಂಚಿಯ ಹೊನ್ನಮ್ಮ ಹೆಂಡತಿ ಹೇಗೆ ನಡೆದುಕೊಳ್ಳಬೇಕು, ಪಾತಿವ್ರತ್ಯವನ್ನು ಹೇಗೆ ಪಡೆಯಬೇಕು ಎಂದು 'ಹದಿಬದೆಯ ಧರ್ಮ'ವನ್ನೇ ರಚಿಸಿದ್ದಾಳೆ. ಈ ಬಗೆಯ ಕೃತಿಯು ರಚನೆಯಾಗಬೇಕಾದರೆ ಅಂಥ ಗುಣಗಳಿರುವ ಹೆಣ್ಣನ್ನು ಅಂದಿನ ಸಮಾಜ ಬಯಸುತ್ತಿತ್ತು ಎಂದು ತಿಳಿಯಬಹುದು. ಇದಕ್ಕೆ ವ್ಯತಿರಿಕ್ತವಾಗಿ 'ಬಸವರಾಜ ದೇವರ ರಗಳೆ'ಯಲ್ಲಿ ಮನೆಗೆ ಬಂದ ಅತಿಥಿಗೆ ಹೆಣ್ಣನ್ನು ಕೊಡಬೇಕು ಎಂದು ಹೇಳಲಾಗಿತ್ತು. ಗಂಡನಾದವ ಬೇರೆಯವರಿಗೆ ಹೆಂಡತಿಯನ್ನು ಕೊಟ್ಟರೆ ಧರ್ಮ ಆದರೆ ಅದೇ ಹೆಣ್ಣು ತಾನೆ ಬಯಸಿ ಬೇರೆ ಪುರುಷನನ್ನು ಕೂಡಿದರೆ ವ್ಯಭಿಚಾರ ಎಂದಾಗುತ್ತದೆ. ಇದನ್ನೇ ಸ್ತ್ರೀವಾದಿಗಳು ಪಶ್ನಿಸುವುದು. ಪಾವಿತ್ರ್ಯದ ಒಮ್ಮುಖ ಹೇರಿಕೆಗಳಿಂದಲೇ ಹೆಣ್ಣು ಬಂಧಿತಳಾಗಿ ಅಧೀನಳಾಗಿದ್ದನ್ನು ಸ್ತ್ರೀವಾದಿ ನೆಲೆಯಿಂದ ವ್ಯಾಪಕವಾಗಿ ಅಧ್ಯಯನ ಮಾಡಬೇಕಾಗಿದೆ.

## ೧೨. ಪರದಾ ಪದ್ಧತಿ

ಪುರುಷರ ಕಾಮುಕ ನೋಟದಿಂದ ತಪ್ಪಿಸಿಕೊಳ್ಳಲು ಸ್ತ್ರೀಯರು ತಮ್ಮ ಮುಖ ಕಾಣಿಸದಂತೆ ಬಟ್ಟೆಯೊಂದನ್ನು ಹಾಕಿಕೊಳ್ಳುವ ಪರದಾ ಪದ್ಧತಿಯು ಮುಸ್ಲಿಂ ಸಮುದಾಯದಲ್ಲಿ ಬೆಳೆದುಬಂದದ್ದನ್ನು ಈ ಕಾಲಘಟ್ಟದಲ್ಲಿ ನೋಡಬಹುದು. ಮುಸ್ಲಿಮರ ಆಗಮನಕ್ಕೂ ಮೊದಲು ಕೇವಲ ಕುಲೀನರು, ಶ್ರೀಮಂತರು, ಅರಸು ಮನೆತನದವರಲ್ಲಿ ಮಾತ್ರ ನವಿರಾದ ಬಟ್ಟೆಯನ್ನು (ಬುರ್ಖಾ) ಧರಿಸುವ ಪದ್ಧತಿ ಇತ್ತು. ಸ್ತ್ರೀಯರ ಮೇಲಿನ ಅತ್ಯಾಚಾರಗಳು ವ್ಯಾಪಕವಾದಾಗ ತಮ್ಮ ರೂಪ ಸೌಂದರ್ಯಗಳೇ ತಮಗೆ ಮುಳುವಾಗಬಾರದೆಂಬ ಹಿನ್ನೆಲೆಯಲ್ಲಿ ಹಿಂದೂ ಸ್ತ್ರೀಯರು ಸಹ (ಕೆಳವರ್ಗದವರನ್ನು ಹೊರತುಪಡಿಸಿ) ಪರದಾ ಧರಿಸತೊಡಗಿದರು. ಈ ಪದ್ಧತಿಯಿಂದ ಸ್ತ್ರೀಯರ ಶಿಕ್ಷಣ, ಸಾರ್ವಜನಿಕ ಬದುಕು, ಮುಕ್ತ ಜೀವನಕ್ಕೆ ತೆರೆ ಬಿದ್ದಂತೆ ಆಯಿತು. ಹೀಗಾಗಿ ಸ್ತ್ರೀಯರ ಪ್ರಗತಿ ಮತ್ತಷ್ಟು ಕುಂಠಿತಗೊಂಡು ಶೋಷಣೆಗೆ ಒಳಗಾಗುವಂತೆ ಆಯಿತು. ಭೌತಿಕ ಪರದೆಯೊಂದಿಗೆ ಬೌದ್ಧಿಕ ಮೌಢ್ಯತೆಯನ್ನು ಹೆಣ್ಣು ಧರಿಸಿದಂಥ ಸಂದರ್ಭ ಇದು. ಪರಿಣಾಮವಾಗಿ ಇಂದಿಗೂ ಮುಸ್ಲಿಂ ಸಮುದಾಯದ ಕೆಲವರಲ್ಲಿ ಇದೇ ವ್ಯವಸ್ಥೆ ಮುಂದುವರೆದಿದೆ.

ಒಟ್ಟಾರೆ ಮಧ್ಯಕಾಲೀನ ಸಮಾಜದಲ್ಲಿ ಹೆಣ್ಣಿಗೆ ಮುಕ್ತ ಸ್ವಾತಂತ್ರ್ಯ ಇರಲಿಲ್ಲ. ಅಂದು ಆಚರಣೆಯಲ್ಲಿದ್ದ ಅನೇಕ ನಿಯಮ ಪದ್ಧತಿಗಳು ಆಕೆಯ ಬೆಳವಣಿಗೆಯನ್ನು ಮೊಟಕುಗೊಳಿಸಿದವು. ಆದ್ದರಿಂದಲೇ ನೀರಾ ದೇಸಾಯಿ ಅವರು -

"ಸೈದ್ಧಾಂತಿಕವಾಗಿ ಮಹಿಳೆಯನ್ನು ಕೀಳು ಬಗೆಯ ಜೀವಿಗಳೆಂದು ಪುರುಷನಿಂದಲೂ ಹೀನಳೆಂದು, ಯಾವುದೇ ಬಗೆಯ ಪ್ರಾಮುಖ್ಯತೆಯಾಗಲೀ ವ್ಯಕ್ತಿತ್ವವಾಗಲೀ ಇಲ್ಲದವಳೆಂದು ಪರಿಗಣಿಸಲಾಗಿತ್ತು. ಸಾಮಾಜಿಕವಾಗಿ ಆಕೆಯನ್ನು ಸಂಪೂರ್ಣವಾಗಿ ಅಧೀನತೆಗೆ ಒಳಪಡಿಸಲಾಗಿತ್ತು, ಆಕೆಗೆ ಎಲ್ಲಾ ಬಗೆಯ ಹಕ್ಕುಗಳನ್ನೂ ನಿರಾಕರಿಸಿ ದಬ್ಬಾಳಿಕೆಗೆ ಮತ್ತು ಪೀಡನೆಗೆ ಗುರಿಪಡಿಸಲಾಗಿತ್ತು, ಮಾತ್ರವಲ್ಲ, ನೈತಿಕ ಶಕ್ತಿ ಹೊಂದಿರದ ಕೊರತೆಯಿಂದ ಕೂಡಿರುವವಳೆಂದು ಹಳಿಯಲಾಗಿತ್ತು. ಪಿತೃಪ್ರಧಾನ ಅವಿಭಕ್ತ ಕುಟುಂಬ ಬಹುಪತ್ನಿತ್ವದ ಆಚಾರಣಾ ಪದ್ಧತಿ, ಪರದಾ ಧರಿಸುವ ಕ್ರಮ, ಆಸ್ತಿಯರಚನೆ, ಎಳವೆಯಲ್ಲಿಯೇ ವಿವಾಹ ಮಾಡುವ ರೂಢಿ, ಇವೆಲ್ಲವೂ ಸ್ತ್ರೀಯರ ಮುಕ್ತ ಬೆಳವಣಿಗೆಯನ್ನು ಅದುಮಿಡಲು ಕಾರಣವಾದವು"[೨೫]

- ಎಂಬ ಅಭಿಪ್ರಾಯವನ್ನು ವ್ಯಕ್ತಪಡಿಸಿರುವುದು. ಜೊತೆಗೆ ಅಲ್ತೇಕರರು ಸಹ "ಮಧ್ಯಕಾಲೀನ ಸಮಾಜದ ಪದ್ಧತಿ, ಆಚಾರ-ವಿಚಾರಗಳು ಹೆಣ್ಣಿನ ಸ್ಥಾನವನ್ನು ಮತ್ತಷ್ಟು ಹಾಳುಗೆಡವಿದವು"[೨೬] ಎಂದು ಅಭಿಪ್ರಾಯಪಟ್ಟಿದ್ದಾರೆ. ಇದರಿಂದ ಮಧ್ಯಕಾಲೀನ ಸಮಾಜದ ಹೆಣ್ಣಿನ ನೈಜ ಚಿತ್ರಣಗಳು ನಿಕೃಷ್ಟವಾಗಿದ್ದುದರ ಬಗ್ಗೆ ತಿಳಿದುಬರುತ್ತದೆ.

## ೧೩. ತೊತ್ತುಗಳು

ಸಮಾಜದಲ್ಲಿರುವ ಗೃಹಿಣಿ ಮತ್ತು ಸೂಳೆಯರಿಗಿಂತ ಭಿನ್ನವಾದ ಬದುಕು ತೊತ್ತುಗಳಾಗಿತ್ತು. ಅಂದು ತೊತ್ತುಗಳು ಹಲವು ಬಗೆಗಳಿಂದ ಬಂದು ಸೇರುತ್ತಿದ್ದರು. ಅಂದರೆ ಯುದ್ಧಗಳಲ್ಲಿ ಸೆರೆ ಸಿಕ್ಕವರ ಮಹಿಳೆಯರು, ಆರ್ಥಿಕವಾಗಿ ತೊಂದರೆಯಿಂದ ಮಾರಲ್ಪಟ್ಟ ಹೆಣ್ಣುಮಕ್ಕಳು ಅಲ್ಲದೆ ವ್ಯಭಿಚಾರ ಮಾಡಿದ ಮಹಿಳೆಯರು, ವಿಧವೆಯರು, ಉಡುಗೊರೆ ರೂಪದಲ್ಲಿ ಬಂದವರು ಮೊದಲಾದ ಮೂಲಗಳಿಂದ ತೊತ್ತುಗಳು ಬರುತ್ತಿದ್ದುದ್ದನ್ನು ಗಮನಿಸಬಹುದು. ಈ ತೊತ್ತುಗಳನ್ನು ಅರಸರು, ಶ್ರೀಮಂತರು ಖರೀದಿಸಿ ಮನೆಯ ಕೆಲಸ ಕಾರ್ಯಗಳಿಗೆ ನಿಯುಕ್ತಿ ಮಾಡುತ್ತಿದ್ದರು. ಈ ತೊತ್ತುಗಳಿಗೆ ಯಾವುದೇ ಬಗೆಯ ಸ್ವಾತಂತ್ರ್ಯ ಇರಲಿಲ್ಲ. ಕೊಂಡವರ ಆಸ್ತಿಯಾಗಿದ್ದರು, ಅಷ್ಟೇ ಅಲ್ಲದೆ ಅವರು ಅಂತಃಪುರದಲ್ಲಿ ರಾಣಿಯರ, ರಾಜನ ಅರಮನೆಯ ಇತರೆರ ಸೇವೆ ಮಾಡಬೇಕಾಗಿತ್ತು. ಕೆಲವೊಮ್ಮೆ ಸಾಕು ತಾಯಿಯಾಗಿಯೂ ಇರುತ್ತಿದ್ದರು. ಶ್ರೀಮಂತರ ಮನೆಯಲ್ಲಿಯೂ ಮನೆಯ ಕೆಲಸ ಕಾರ್ಯಗಳನ್ನು ನಿರ್ವಹಿಸುತ್ತಿದ್ದರು. ಈ ಬಗ್ಗೆ 'ಹರಿಶ್ಚಂದ್ರ ಕಾವ್ಯ'ದಲ್ಲಿ ಕೆಲವಾರು ಅಂಶಗಳು ದೊರೆಯುತ್ತವೆ. ಈ ತೊತ್ತುಗಳಿಗೆ ಸ್ವತಂತ್ರ ಬದುಕು ಇರಲಿಲ್ಲ. ತೊತ್ತುಗಳನ್ನು ಕೊಂಡವರು ತೊತ್ತುಗಳ ಮಕ್ಕಳನ್ನು ಸಹ ಮಾರಿ ಎರಡು ಪಟ್ಟು ಹಣ ಪಡೆಯುತ್ತಿದ್ದರು. ಉತ್ತಮರು ಇವರ ಜೊತೆ ಇರಬಾರದು ಎಂಬ ನಿಯಮಗಳೂ ಇದ್ದವು. ಕೆಲವು ಬಾರಿ ಇವರು ಒಡೆಯನ ಲೈಂಗಿಕತೆಗೂ ಬಲಿಯಾಗುತ್ತಿದ್ದದ್ದು ಕಂಡುಬಂದಿದೆ. ಆದ್ದರಿಂದಲೇ "ಅರಸು ಮುಟ್ಟಲು ತೊತ್ತುರಂಭೆ ಆದಳು"[೨೭] ಎಂಬ ಮಾತಿದೆ. ಇದು ತೊತ್ತಿನ ಜೀವನದಲ್ಲಾದ ಸ್ಥಿತ್ಯಂತರವನ್ನು ಅಭಿವ್ಯಕ್ತಿಸುತ್ತದೆ. ತೊತ್ತುಗಳನ್ನು ಕುರಿತಂತೆ

ಕ್ರಿ.ಶ. ೧೫೬೭ರ[೫೮] ಶಾಸನ ಮತ್ತು ಚಿಕ್ಕರಸಿನಕೆಯ ಶಾಸನಗಳು ಮಾಹಿತಿಯನ್ನು ನೀಡಿ, ತೊತ್ತು ಸಮಾಜದಲ್ಲಿ ಹೇಗೆ ಶೋಷಣೆಗೆ ಒಳಗಾಗುತ್ತಿದ್ದಳು[೫೯] ಎಂಬುದನ್ನು ಉಲ್ಲೇಖಿಸಿರುತ್ತವೆ. ಜೌರಿಂಗ ಪಟ್ಟಣ ಶಾಸನವು ಸಂತೆಯಲ್ಲಿ ಮಾರಾಟ ಮಾಡುತ್ತಿದ್ದ ತೊತ್ತುಗಳ ವಿವರ ನೀಡುತ್ತದೆ.[೬೦] ಶೃಂಗೇರಿಮಠದ ವ್ಯಾಪ್ತಿಯಲ್ಲಿ ಬರುವ ವ್ಯಭಿಚಾರ ಮಾಡಿದ ಮಹಿಳೆಯನ್ನು ಮಠಕ್ಕೆ ಒಪ್ಪಿಸಿ, ಮಾರಾಟ ಮಾಡುತ್ತಿದ್ದರು. ಆಕೆಯನ್ನು ಕೊಂಡವರು ಬೇರೆಯವರಿಗೆ (ಇಟ್ಟುಕೊಳ್ಳಲು) ಸಂಬಂಧವನ್ನು ಹೊಂದುವಂತೆ ಮಾಡಿ, ಆಕೆಯ ಮಕ್ಕಳನ್ನು (ತೊತ್ತನ್ನು) ಆಕೆಯನ್ನು ಕೊಳ್ಳುವಾಗ ಖರ್ಚು ಮಾಡಿದ ಹಣಕ್ಕೆ ಮಾರುತ್ತಿದ್ದರು ಎಂದು ತಿಳಿದುಬಂದಿದೆ.

### ೧೪. ಸೂಳೆಯರು

ಪ್ರಾಚೀನ ಕಾಲದಲ್ಲಿ ಇರುವಂತೆ ಮಧ್ಯಕಾಲೀನ ಕಾಲಘಟ್ಟದಲ್ಲಿಯೂ ಸೂಳೆಯರನ್ನು ಬಿಡುವ ಸಂಪ್ರದಾಯವಿತ್ತು. ಇವರ ಬಗ್ಗೆ ಕಾವ್ಯಗಳು ಹೆಚ್ಚಿನ ಮಾಹಿತಿಗಳನ್ನು ನೀಡುತ್ತವೆ. ಪುರುಷನೊಬ್ಬ ಬಹುಪತ್ನಿಯರನ್ನು ಹೊಂದಿದ್ದರೂ ಅವನು ಸೂಳೆಯರ ಸಂಗ ಬಿಡುತ್ತಿರಲಿಲ್ಲ. ಸೂಳೆಯರನ್ನು ಹೊಂದಲು ಸಮಾಜದಲ್ಲಿ ಮಾನ್ಯತೆಯಿತ್ತು. ಇದು ಪುರುಷನ ಪ್ರತಿಷ್ಠೆಯನ್ನು ವ್ಯಕ್ತಪಡಿಸುವುದಾಗಿತ್ತು. ಜೊತೆಗೆ ವೇಶ್ಯೆಯರು ಸಹ ಅಂತಃಪುರ, ಶ್ರೀಮಂತರ ಮನೆಗಳಿಗೆ ಹೋಗಿ ಬರಲು ಅವಕಾಶವಿತ್ತು. ಅಧ್ಯಯನದ ಅನುಕೂಲಕ್ಕಾಗಿ ಇವರನ್ನು ೧. ಆಸ್ಥಾನಿಕ ಸೂಳೆ ೨. ದೇವಾಲಯದ ಸೂಳೆ ೩. ಸಮಾಜ ಸೂಳೆ ಎಂದು ವಿಂಗಡಿಸಿಕೊಳ್ಳಬಹುದು. ಈ ಎಲ್ಲ ವರ್ಗದ ಸೂಳೆಯರು ನೃತ್ಯ, ಸಂಗೀತ, ಚದುರಂಗ, ಪಗಡೆ, ಲೆತ್ತದ, ಆಟಗಳನ್ನು ಆಡುವುದರ ಮೂಲಕ ಜನರನ್ನು ರಂಜಿಸುವ ಕಲೆಯನ್ನು ಪಡೆದಿದ್ದರು. ಇವರು ಹಲವು ಬಗೆಯ ವಾದ್ಯ, ವೀಣೆಗಳನ್ನು ನುಡಿಸುವವರು ಇರುತ್ತಿದ್ದರು.

#### ಅ. ಆಸ್ಥಾನಿಕ ಸೂಳೆ

ಅರಸ ಮತ್ತು ಅವನ ಆಸ್ಥಾನಿಕರಲ್ಲಿ ಮಾತ್ರ ಸಂಬಂಧ ಇಟ್ಟುಕೊಂಡು ಇರುತ್ತಿದ್ದರು. ಇಂಥವರಿಗೆ ಅಪಾರ ಕಾಣಿಕೆ, ಬಳುವಳಿಗಳು ಬರುತ್ತಿದ್ದವು. ಇವರು ಆಸ್ಥಾನದಲ್ಲಿ ನೃತ್ಯ ಮಾಡಿ ಅರಸನ ಜೊತೆ ವಿನೋದದಿಂದ ಕಾಲ ಕಳೆಯುತ್ತಿದ್ದರು. ಹಲವು ರಾಜಕೀಯ ಇತರೆ ಸಮಸ್ಯೆಗಳನ್ನು ಚರ್ಚಿಸಲು, ಪರಿಹಾರ ನೀಡಲು ಇವರಿಗೆ ಅಧಿಕಾರವಿತ್ತು. ಅರಸ ಈ ಸೂಳೆಯರನ್ನು ಶತ್ರುರಾಜ್ಯಕ್ಕೆ ಕಳಿಸಿ, ಅವರ ರಹಸ್ಯ ಇತ್ಯಾದಿಗಳನ್ನು ತಿಳಿಯಲು ಉಪಯೋಗಿಸುತ್ತಿದ್ದ. ಅಲ್ಲದೆ ಕೆಲವೊಮ್ಮೆ ಶತ್ರುಗಳನ್ನು ಕೊಲ್ಲಲು ಯುದ್ಧಭೂಮಿಗೂ ಹೋಗುತ್ತಿದ್ದರು ಎಂದು ತಿಳಿದುಬಂದಿರುತ್ತದೆ. ರಂಜಕಮ್ಮ ಕುಪ್ಪಾಯಿ ಎಂಬುವವಳು ವಿಜಯನಗರದ ಕೃಷ್ಣದೇವರಾಯನ ಆಸ್ಥಾನ ನರ್ತಕಿ ಆಗಿದ್ದಳು. ಇವಳಂತೆ ಕೆಲವು ನರ್ತಕಿಯರು ಬೇರೆ ದೇಶಗಳಿಂದ ಬಂದು ಅರಸನ ಆಸ್ಥಾನ ನರ್ತಕಿಯರಾಗಿದ್ದರು. ಉದಾಹರಣೆಗೆ ಹೈದರಾಲಿಯ ಆಸ್ಥಾನದಲ್ಲಿ ಇದ್ದವರನ್ನು ಉಲ್ಲೇಖಿಸಬಹುದು.[೬೧]

ಜಟ್ಟಿ ತಾಯಮ್ಮ ಪ್ರತಿಷ್ಠಿತ ನರ್ತಕಿಯಾಗಿದ್ದಳು. ಈಕೆಗೆ ಮುಮ್ಮಡಿ ಕೃಷ್ಣರಾಜ ಒಡೆಯರ ಪೋಷಣೆಯೂ ಸಿಕ್ಕಿತ್ತು. ಸ್ತ್ರೀವಾದಿ ನೆಲೆಯಿಂದ ಆಸ್ಥಾನಿಕ ಸೂಳೆಯರನ್ನು ಕುರಿತಂತೆ ವಿಸ್ತೃತ ಅಧ್ಯಯನ ಕೈಗೊಳ್ಳಬಹುದಾಗಿದೆ.

## ಆ. ದೇವಾಲಯದ ಸೂಳೆಯರು

ಈ ಕಾಲಘಟ್ಟದಲ್ಲಿಯೂ ದೇವರ-ದೇವಾಲಯದ ಕಾರ್ಯಗಳಿಗಾಗಿ ದಾಸಿಯರನ್ನು ಬಿಡುವುದು ವ್ಯಾಪಕವಾಯಿತು. ದೇವಾಲಯದಲ್ಲಿನ ದೇವರಿಗೆ ಒಂದೊಂದು ಕಾರ್ಯಕ್ಕಾಗಿ ದಾಸಿಯರನ್ನು ನೇಮಕ ಮಾಡುತ್ತಿದ್ದರು. ಇಂಥವರು ಅಂಗ ಮತ್ತು ರಂಗಭೋಗದ ಸೂಳೆಯರು ಎಂದು, ಇವರು ದೇವರಿಗೆ ಸ್ನಾನ, ಪೂಜೆ, ಪ್ರಸಾದ, ಆರತಿ, ಧೂಪ ಇತ್ಯಾದಿಗಳನ್ನು ಮಾಡಬೇಕಾಗಿತ್ತು. ದೇವರಿಗೂ ಗಾಳಿ ಬೀಸುವುದಕ್ಕೆ ಚಾಮರದ ಸೂಳೆಯರು ಇರುತ್ತಿದ್ದರು. ಇಂಥ ಅಂಗಭೋಗ ಸೂಳೆಯರು ಮಾತ್ರ ಗರ್ಭಗೃಹ ಪ್ರವೇಶಿಸಲು ಸಾಧ್ಯವಿತ್ತು. ಇಂಥ ಸೂಳೆಯರನ್ನು ಕ್ರಿ.ಶ. ೧೨೩೫ರ ಶಾಸನ ಉಲ್ಲೇಖಿಸಿ, ಬಸರಾಳುವಿನ ಮಲ್ಲಿಕಾರ್ಜುನ ದೇವರಿಗೆ ದೇವರಾತಿಯ ಸೂಳೆ ಇರುತ್ತಿದ್ದಳು[೩೨] ಎಂದು ದಾಖಲಿಸಿರುತ್ತದೆ. ಸ್ತ್ರೀವಾದಿ ನೆಲೆಯಿಂದ ಅಂಗಭೋಗದ ಸೂಳೆಯರ ಕುರಿತು ಅಧ್ಯಯನ ಮಾಡಬಹುದು.

ಪ್ರಾಚೀನ ಕಾಲದಲ್ಲಿ ಇದ್ದಂತೆ ಪಾತ್ರದ, ಓಲಗದ, ಕಂಬದ, ಮಾಡದ, ಚಾಮರದ ಸೂಳೆಯರು ಈ ಕಾಲಘಟ್ಟದಲ್ಲಿ ಇದ್ದರು. ಇಂಥ ಸೂಳೆಯರಿಗೆ ಊರಿನ ಗಣ್ಯರಿಂದ ಇತರೆರಿಂದ, ಕಾಣಿಕೆ ರೂಪದಲ್ಲಿ ಅಪಾರ ಸಂಪತ್ತು, ಹಣ, ಭೂಮಿ ಇತ್ಯಾದಿಗಳು ಬರುತ್ತಿದ್ದವು. ಕ್ರಿ.ಶ. ೧೨೦೦ರ ಶಾಸನವು ನಾಲ್ಕು ಜನ ಕಂಬಗಳ ಸೂಳೆಯರನ್ನು ದಾಖಲಿಸಿರುವುದು ಹಾಗೂ ಕಲಕೇರಿಯ ದೇವಸ್ಥಾನದ ಸೂಳೆಯರನ್ನು ಅವರು ಪಡೆಯುತ್ತಿದ್ದ ದಾನ-ದತ್ತಿಗಳನ್ನು[೩೩] ಶಾಸನವೊಂದರಲ್ಲಿ ದಾಖಲಾಗಿರುವುದು ತಿಳಿದುಬರುತ್ತದೆ. ಕ್ರಿ.ಶ. ೧೨೭೯ರ ಶಾಸನ ಹೊಯ್ಸಳೇಶ್ವರ ದೇವಾಲಯದ ಕಂಬದ ಸೂಳೆ ಬೂಚವೆಯನ್ನು ದಾಖಲಿಸಿದೆ.[೩೪] ನಾಗಾವಿಯ ಮಧುಸೂದನ ದೇವಾಲಯದ ನಾಲ್ಕು ಜನ ಕಂಬದ ಸೂಳೆಯರಿಗೆ ಭೂಮಿಯನ್ನು ದತ್ತಿ ಬಿಟ್ಟ ಉಲ್ಲೇಖವಿದೆ.[೩೫] ಕ್ರಿ.ಶ. ೧೩೭೭ರ ಶಾಸನ ಕುಂದಾಪುರದ ಕೋಟೇಶ್ವರ ದೇವರ ಚಾಮರದ ಇಬ್ಬರು ಮಹಿಳೆಯರಿಗೆ ದತ್ತಿ ನೀಡಿದ್ದನ್ನು[೩೬] ಹೇಳುತ್ತದೆ. ಹಾಗೆಯೇ ನಾಗಾವಿಯ ಮಧುಸೂದನ ದೇವಾಲಯದ ಇಬ್ಬರು ಪಾತ್ರದವರಿಗೆ ಭೂಮಿ ಕೊಟ್ಟ[೩೭] ಉಲ್ಲೇಖವಿದೆ. ಹೊಯ್ಸಳೇಶ್ವರ ದೇವಾಲಯದಲ್ಲಿ ಪಾತ್ರದ ಸೂಳೆಯರು ಇರುತ್ತಿದ್ದರು ಎಂದು, ಅವರುಗಳೆಂದರೆ ಪಾತ್ರದ ಮಣಿಗಾರ ಮಾದವ್ವೆ, ಆನೆಯ ಮಾಳವ್ವೆ, ನಾಗೌವ್ವೆ, ಚಂದವ್ವೆ, ಗೋಪವ್ವೆ, ಪಾತ್ರದ ಚಿಣ್ಣಯನ ದೇವವ್ವೆ, ವಿಸ್ಸವೆ, ಲಖವ್ವೆ ಮೊದಲಾದವರು. ರಾಮನಾಥ ದೇವರಿಗೆ ಪಾತ್ರದ ಕೇತವ್ವೆ ಎಂಬಾಕೆ[೩೮] ಇದ್ದಳೆಂದು ತಿಳಿದುಬರುತ್ತದೆ. ಅಲ್ಲದೆ ಸಂಪಿಗೆಯ ಸಿದ್ಧಮಲ್ಲಿಕಾರ್ಜುನನ ದೇವಾಲಯದಲ್ಲಿ ಮೂವರು ಪಾತ್ರದವರು[೩೯] ಇರುತ್ತಿದ್ದುದರ ಬಗ್ಗೆ ದಾಖಲೆಗಳಿವೆ. ದೇವಾಲಯದ ಸಂಗೀತ-ಹಾಡುಗಳನ್ನು ಅರ್ಪಿಸಿರುವ ಓಲಗದ, ಹಾಡುವ ಸೂಳೆಯರು ಇರುತ್ತಿದ್ದರು. ಹೊಯ್ಸಳ ದೇವಾಲಯದಲ್ಲಿ ಹಾಡುವ ಕಲ್ಲವ್ವೆ ಎಂಬಾಕೆ[೪೦] ಇದ್ದಳು. ಕ್ರಿ.ಶ. ೧೩೫೦ರ ಶಾಸನವು ಮಹಾದೇವಿ ಎಂಬಾಕೆ[೪೧] ಹಾಡುವವಳು ಇದ್ದಳು ಎಂದು ಹೇಳಲಾಗಿದೆ. ಮಧ್ಯಕಾಲೀನ ಸಂದರ್ಭದಲ್ಲಿಯೂ ಈ ಸೂಳೆಯರನ್ನು ವಂಶ ಪಾರಂಪರ್ಯವಾಗಿ ದೇವರಿಗೆ ನೀಡುವುದು ಕಂಡುಬಂದಿದೆ. ಉದಾಹರಣೆಗೆ ಅವುಜಿಗ ಬೊಂಮಯನ ಮಗಳು ನಾಗವ್ವೆ, ಬೊಂಮಯನ ಮೊಮ್ಮಗಳು ಪಾತ್ರದ ಚಂದವ್ವೆ, ಕೀಲಾರಿ ಬೊಂಮಯನ ಮೊಮ್ಮಗಳು ಗೋಪವ್ವೆ. ಪಾತ್ರದ ಚಿಣ್ಣಯನ ದೇವವ್ವೆ, ಕಂಬದ ಬೂಚವೆಯ ಮಗಳು ವಿಸ್ಸವೆ ಅವಳ ತಂಗಿ ಲಖವ್ವೆ ಮೊದಲಾದವರು ಇರುತ್ತಿದ್ದರು. ಹಂಪೆಯ ವಿರೂಪಾಕ್ಷ ದೇವಾಲಯದ ಪಾತ್ರದವಳಾಗಿ ಚಿನ್ನದೇವಿ ಕಂಡುಬರುತ್ತಾಳೆ. ಈ

ಸೂಳೆಯರನ್ನು ದೇವರ ಮತ್ತು ದೇವಾಲಯದ ವಿಸ್ತಾರ, ಆದಾಯಕ್ಕೆ ಅನುಸಾರವಾಗಿ ನೇಮಕ ಮಾಡಿಕೊಳ್ಳುತ್ತಿದ್ದರು. ಕೆಲವೊಮ್ಮೆ ಒಂದು ದೇವಾಲಯಕ್ಕೆ ನೇಮಕವಾದ ಸೂಳೆಯರು ಹಣದ ಆಸೆಗಾಗಿ ಬೇರೆ ದೇವಾಲಯಕ್ಕೆ ಹೋಗುತ್ತಿದ್ದುದು ಉಂಟು. ಇದನ್ನು ತಡೆಯುವುದಕ್ಕಾಗಿ ನಿರ್ಬಂಧಗಳನ್ನು ಹೇರಿದ್ದರು. ಇಂಥ ನಿರ್ಬಂಧವನ್ನು ಹಳೇಬೀಡಿನ ಶಾಸನವು[೪೨] ಉಲ್ಲೇಖಿಸಿದೆ.

ಒಟ್ಟಿನಲ್ಲಿ ದೇವಾಲಯದ ಸೂಳೆಯರು ಅಪಾರ ಸಂಪತ್ತುಗಳನ್ನು ಪಡೆಯುವುದರೊಂದಿಗೆ ಸಮಾಜದಲ್ಲಿ ಗೌರವಾನ್ವಿತರಾಗಿದ್ದರು. ಇವರು ದೇವರ ಹಬ್ಬ, ಜಾತ್ರೆ, ಉತ್ಸವಗಳಲ್ಲೂ ಪಾಲುಗೊಳ್ಳುತ್ತಿದ್ದರು. ಮನರಂಜನೆಗೆಂದು ನೃತ್ಯ, ಹಾಡುಗಳನ್ನು ಹಾಡುತ್ತಿದ್ದ ಸೂಳೆಯರನ್ನು ಸಹ ಮುಂದೆ ಲೈಂಗಿಕ ಕಾರ್ಯಗಳಿಗಾಗಿ ಉಪಯೋಗಿಸಲಾಯಿತು. ದೇವಾಲಯಗಳು ಎಂದರೆ ಪವಿತ್ರವೂ, ಪವಿತ್ರ ಕಾರ್ಯಗಳನ್ನು ಒಳಗೊಂಡಿದ್ದವು. ಕಾಲಕ್ರಮೇಣ ಇವು ಸೂಳೆಯರ ಮತ್ತು ಲೈಂಗಿಕ ಚಟುವಟಿಕೆಗಳ ಕೇಂದ್ರಗಳಾದವು. ಇದಕ್ಕೆ ತಾಪಿ ಧರ್ಮರಾವ್ ಅವರ ಪುಸ್ತಕವನ್ನು[೪೩] ಗಮನಿಸಬಹುದು. ಮಧ್ಯಕಾಲೀನ ಕಾಲಘಟ್ಟದಲ್ಲಿ ದೇವಾಲಯದ ಸೂಳೆಯರು ವ್ಯಾಪಕ ಪ್ರಮಾಣದಲ್ಲಿ ಇರುತ್ತಿದ್ದರು. ಈ ಸೂಳೆಯರ ಬಗ್ಗೆ ಅಬ್ಬೆ ಜೆ.ಎ.ದುಬಾಯಿಸ್ ಅವರ ಅಭಿಪ್ರಾಯವನ್ನು ಗಮನಿಸುವುದಾದರೆ ''ಇವರು ಹದಿನೆಂಟು ಮತ್ತು ಹತ್ತೊಂಬತ್ತನೆಯ ಶತಮಾನದಲ್ಲಿ ದಕ್ಷಿಣ ಹಿಂದೂಸ್ಥಾನದಲ್ಲಿ ಪ್ರವಾಸ ಮಾಡಿ ದೇವದಾಸಿಯರನ್ನು ಹೇಗೆ ಆರಿಸುತ್ತಿದ್ದರು ಎಂದು ಬರೆಯುತ್ತ ಆಂಧ್ರಪ್ರದೇಶದ ವೆಂಕಟೇಶ್ವರ ದೇವಸ್ಥಾನಕ್ಕೆ ವಾರ್ಷಿಕ ಮೆರವಣಿಗೆಯಲ್ಲಿ, ದೊಡ್ಡ ಜಾತ್ರೆಗಳು ಜರುಗುವಾಗ ಸ್ತ್ರೀಯರನ್ನು ಗುರುತಿಸಿ, ಗಂಡಂದಿರಿಂದಲೇ ಇಲ್ಲವೆ ತಂದೆ-ತಾಯಂದಿರಿಂದಲೇ ಆಯ್ಕೆ ಮಾಡಿಕೊಳ್ಳುತ್ತಿದ್ದರು'' ಎನ್ನಲಾಗಿದೆ. ಹತ್ತೊಂಬತ್ತನೆಯ ಶತಮಾನದ ಪೂರ್ವಭಾಗದಲ್ಲಿ ದಕ್ಷಿಣ ಭಾರತದ ದೇವಾಲಯಗಳು ವೇಶ್ಯಾಗೃಹಗಳಂತೆ ಪರಿವರ್ತಿತವಾದವು. ದೇವದಾಸಿಯರ ಕರ್ತವ್ಯಗಳೆಂದರೆ ದೇವಾಲಯಗಳಲ್ಲಿ ದಿನಕ್ಕೊಂದು ಸಲ ಕುಣಿಯುವುದು, ಹಾಡುವುದು, ಸ್ವೇಚ್ಛಾಚಾರದ ಕಾಮ ಕೇಳಿಯ ಹಾಡುಗಳನ್ನು ಹೇಳುವುದಾಗಿತ್ತು. ಕಾಮನ ಹಬ್ಬದಲ್ಲಿ ಕಾಮನ ದಹನಕ್ಕಾಗಿ ಕೆಲವೊಮ್ಮೆ ಅವರಿಗೆ ಬೆಂಕಿ ಕೊಡುವ ಹಕ್ಕು ಇತ್ತು. ಚರಿತ್ರೆಕಾರನಾದ ವಿಲ್ ಡುರಪನು ಕೂಡಾ ''ದೇವಾಲಯದಲ್ಲಿನ ದಾಸಿಯರು ಹಾಡು, ಕುಣಿತಗಳಲ್ಲಿ ಪೂಜಾರಿ ವರ್ಗದ ಜನರ ಸೊತ್ತುಗಳಾಗಿದ್ದವು. ಕೆಲವೊಮ್ಮೆ ದೇವಾಲಯಗಳು ಹಣ ಗಳಿಸಲು ದೇವದಾಸಿಯರನ್ನು ಬಿಡುತ್ತಿದ್ದವು''[೪೪] ಎಂದು ಹೇಳಿದ್ದಾನೆ.

ಇಂಥ ಸೂಳೆಯರು ತಮ್ಮ ಹರೆಯವನ್ನು ಕಳೆದುಕೊಂಡಾಗ, ಅರ್ಚಕರು ಇವರಿಗೆ ಮುದ್ರೆಗಳನ್ನು ಹಾಕುವ ಮುಖೇನ ನಿವೃತ್ತಿಗೊಳಿಸುತ್ತಿದ್ದರು. ವಿಜಯನಗರದ ಕಾಲಘಟ್ಟದಲ್ಲಿ ಪಾತ್ರದ ಸೂಳೆಯರು ವ್ಯಾಪಕವಾಗಿದ್ದರು. ಇದಕ್ಕೆ ಪೂರಕವಾದ ರಂಗಮಂಟಪಗಳಿರುತ್ತಿದ್ದವು.

### ೩. ಸಮಾಜ ಸೂಳೆ

ಸಾರ್ವಜನಿಕ ಮುಕ್ತಭೋಗಕ್ಕಾಗಿ ಸಮಾಜಸೂಳೆ ಇರುತ್ತಿದ್ದಳು. ಕೆಲವೊಮ್ಮೆ ಗಣ್ಯವ್ಯಕ್ತಿಗಳು ಸಹ ಇವರ ಮನೆಗಳಿಗೆ ಹೋಗುತ್ತಿದ್ದರು. ಗೋಷ್ಠಿಗಾರರು, ಮೇಳಗಾರರು, ಅಕ್ಕರಿಗರು, ಕವಿಗಳು ಚೆತ್ತ ಚದುರಂಗಗಳ ಆಟಗಾರರು ಮೊದಲಾದವರು[೪೫] ಹೋಗುತ್ತಿದ್ದರು. ಇವರ ಮನೆಗಳ ಮುಂದೆ ಸೌಭಾಗ್ಯದ

ಗಂಟೆಗಳನ್ನು ಕಟ್ಟಲಾಗುತ್ತಿತ್ತು.[೪೭] ಇವರು ರತಿ ಸರಸ್ವತಿಯರಿಗಿಂತ ಮಿಗಿಲಾಗಿಪ್ಪರೆಂದು ಮನೆಗೆ ಬರುತ್ತಿದ್ದವರ ಹಣದಿಂದಲೇ ಜೀವಿಸುತ್ತಿದ್ದರು. ಈ ಸೂಳೆಯರು ಪ್ರೀತಿಸುವಂತೆ ವರ್ತಿಸುವವರೇ ಹೊರತು, ನಿಜವಾಗಿ ಪ್ರೀತಿಸುತ್ತಿರಲಿಲ್ಲ. ಒಮ್ಮೊಮ್ಮೆ ಸೂಳೆಗೆ ಹಣ ಕೊಡದೆ ಇರುವ ಪ್ರಿಯಕರನ ಜೊತೆ ಅವಳು ಸೇರುತ್ತಿದ್ದರೆ ಅಂಥ ಸೂಳೆಯರಿಗೆ ತಾಯಿಯಿಂದ ಉಪದೇಶವೇ ಆಗುತ್ತಿತ್ತು. ಇವರು ಗೃಹಸ್ಥ ಸಂಸಾರಿಗಳಾಗಲು ಅವಕಾಶವೇ ಇರಲಿಲ್ಲ. ಸೂಳೆಯರು ಮಧುಪಾನ ಮಾಡಲು ಅವಕಾಶವಿತ್ತು. ಕುತೂಹಲಕರ ಸಂಗತಿ ಎಂದರೆ ಸೂಳೆಯರು ಹೆಣ್ಣು ಮಗುವಿನ ಜನನವನ್ನು ಸಂತೋಷದಿಂದ ಸ್ವಾಗತಿಸುತ್ತಿದ್ದುದು. ಇನ್ನೂ ಕೆಲವರು ಬಾಣಂತಿಯಾದರೆ ತಮ್ಮ ವೃತ್ತಿಗೆ ತೊಂದರೆ ಎಂದೂ ತಾಯಿತನವನ್ನು ನಿರಾಕರಿಸುತ್ತಿದ್ದರು. ಸೂಳೆಯರ ಮನೆಗಳಲ್ಲಿ ಸಂಗೀತ, ನೃತ್ಯ, ಕಾವ್ಯಗಳ ಓದು, ಹಾಸ್ಯ, ಆಟ, ಇತ್ಯಾದಿಗಳು ನಿರಂತರವಾಗಿರುತ್ತಿದ್ದವು.

ಒಟ್ಟಾರೆಯಾಗಿ ಹೇಳುವುದಾದರೆ ಸೂಳೆಯರು ನೃತ್ಯ, ಸಂಗೀತ, ವಿನೋದಿಸುವ ಪ್ರಕಾರಗಳು ಜನರನ್ನು ಆಕರ್ಷಿಸುವ ಸಾಮರ್ಥ್ಯವನ್ನು ಪಡೆಯಬೇಕಾಗಿತ್ತು. ಬಾಲ್ಯದಿಂದ ಸೂಳೆಯರಿಗೆ ನೃತ್ಯ, ಸಂಗೀತಗಳನ್ನು ಕಲಿಸಲಾಗುತ್ತಿತ್ತು. ದೇವಾಲಯದ ಸೂಳೆಯರು ದೇವಾಲಯದ ಸುತ್ತಮುತ್ತ ವಾಸಿಸುತ್ತಿದ್ದರು. ಸೂಳೆಯರು ವಾಸಿಸುವ ಪ್ರದೇಶಕ್ಕೆ 'ಸೂಳೆಗೇರಿ'ಗಳೆಂದು ಕರೆಯಲಾಗುತ್ತಿತ್ತು. ಸೂಳೆಯರ ಮನೆಯಲ್ಲಿ ಗಂಡು ಅವರಿಗೆ ಅಧೀನನಾಗಿ ಬದುಕಬೇಕಾಗಿತ್ತು. ಸೂಳೆಯರು ಗೃಹಿಣಿಯರಿಗಿಂತಲೂ ಮುಕ್ತವಾಗಿ ಹಾಗೂ ಸುಖವಾಗಿ ಇದ್ದರು.

### ೧೫. ವೇಲವಾಳಿ ಪದ್ಧತಿ

ಕೆಲವೊಮ್ಮೆ ಅರಸನಿಗಾಗಿ ಪ್ರಾಣವನ್ನು ಸಹ ಬಲಿಕೊಡುತ್ತಿದ್ದರು. ಉಮ್ಮವ್ವೆ, ಜವನವ್ವೆ, ಕಲ್ಲವ್ವೆಯರು, ೧೦ ಜನ ಸೇವಕಿಯರೊಂದಿಗೆ ಮತ್ತು ೨೧ ಜನ ಲೆಂಕರೊಂದಿಗೆ ಆರು ಸಾರಿ ಗರುಡನನ್ನು ಅಪ್ಪಿಕೊಂಡರು. ಇವರುಗಳು ಹೊಯ್ಸಳ ಅರಸನಾದ ಸೋಮೇಶ್ವರನೊಂದಿಗೆ ಮಾಡಿದ್ದ ಭಾಷೆಯನ್ನು ಪೂರೈಸಿದರು. ಇವರಂತೆ ರಂಗನಾಯಕಿ, ಕೇತವ್ವೆನಾಯಕಿ, ಮಂಚವ್ವೆನಾಯಕಿ, ಹೊನ್ನವ್ವೆನಾಯಕಿ ೧೦ ಜನ ಲೆಂಕತಿಯರು, ೨೦ ಜನ ಲೆಂಕರೊಂದಿಗೆ ಗರುಡನನ್ನು ಆರು ಸಾರಿ ಅಪ್ಪಿಕೊಂಡು ಹೊಯ್ಸಳರ ಮೂರನೆ ನರಸಿಂಹನಿಗೆ ಕೊಟ್ಟ ಮಾತನ್ನು ಉಳಿಸಿಕೊಂಡರು.

## ೪.೩ ರಾಜಕಾರಣ ಮತ್ತು ಮಹಿಳೆ

'ರಾಜಕಾರಣ' ಎನ್ನುವುದು ಬರೀ ಪುರುಷನ ಸ್ವತ್ತು ಅಲ್ಲ. ಅಂಥ ಅವಕಾಶಗಳೂ ಹೆಣ್ಣಿಗೆ ದೊರೆತರೆ, ಆಕೆಯು ಪುರುಷನಂತೆ ಪ್ರಗತಿ ಸಾಧಿಸುತ್ತಾಳೆ. ಇದಕ್ಕೆ ಪ್ರಾಚೀನ ಕರ್ನಾಟಕದ ಮಹಿಳೆಯರೆ ಸಾಕ್ಷಿ. ಅಂತೆಯೇ ಮಧ್ಯಕಾಲೀನ ಕರ್ನಾಟಕದ ಚರಿತ್ರೆಯ ಸಂದರ್ಭದಲ್ಲಿಯೂ ರಾಣಿಯರು, ದೇಸಾಯಿಣಿಯರು, ಪಾಳೆಯಗಾರತಿಯರು ಆಡಳಿತ ನಿರ್ವಹಿಸಿದ್ದಾರೆ. ಜೊತೆಗೆ ನಾಡಿನ ಕೀರ್ತಿ, ಅಭಿವೃದ್ಧಿ, ಕಲ್ಯಾಣಕ್ಕಾಗಿ ದುಡಿದಿರುವರು. ಸಂದರ್ಭ ಬಂದರೆ ಖಡ್ಗ ಹಿಡಿದು ಹೋರಾಟ ಮಾಡಿ ಶತ್ರುಗಳಿಂದ ರಾಜ್ಯವನ್ನು ರಕ್ಷಣೆ ಮಾಡಿದ್ದಾರೆ. ಅಲ್ಲದೆ ರಕ್ಷಣೆಯ ಸಂದರ್ಭದಲ್ಲಿ ಪ್ರಾಣವನ್ನು ಅರ್ಪಿಸಿದ ನಿದರ್ಶನಗಳೂ ಉಂಟು. ಅರಸನ, ಆಸ್ಥಾನಿಕ ಅಧಿಕಾರಗಳ, ಪ್ರಜೆಗಳ ಪ್ರೀತಿ-ಸ್ನೇಹಗಳನ್ನು ಗಳಿಸಿಕೊಂಡು ಗೌರವಕ್ಕೆ ಅರ್ಹರಾಗಿದ್ದುದನ್ನು

ಬಿರುದುಗಳೇ ಸಾಬೀತುಪಡಿಸುತ್ತವೆ. ರಾಜಕಾರಣ ಎಲ್ಲಾ ಮಹಿಳೆಯರಿಗೆ ಕಷ್ಟಾಯವಾಗಿರಲಿಲ್ಲ. ಅವರುಗಳ ಸ್ವ-ಇಚ್ಛೆ, ಪ್ರತಿಭೆ, ಶಕ್ತಿ, ಸಾಮರ್ಥ್ಯ, ಚಾಣಕ್ಷತೆ ಇದ್ದವರಿಗೆ ಮಾತ್ರ ಅವಕಾಶ ಇತ್ತು. ಕೆಲವು ಸಂದರ್ಭ ಸನ್ನಿವೇಶಗಳು ಕೂಡ ರಾಜಕಾರಣದಲ್ಲಿ ಭಾಗಿಯಾಗುವಂತೆ ಮಾಡುತ್ತಿದ್ದವು.

**ಅ. ಆಡಳಿತಾರೂಢ ಪಿರಿಯರಸಿಯರು ಮತ್ತು ರಾಣಿಯರು**

ಶಾಂತಲೆ, ಲಕ್ಷ್ಮಿದೇವಿ, ಬಮ್ಮಲದೇವಿ, ರಾಜಲದೇವಿ, ಚಿಕ್ಕ ಶಾಂತಲೆ, ದೇವಕಿ, ಚಂದಲದೇವಿ ಮೊದಲಾದವರ ಅರಸ ಹೊಯ್ಸಳ. ವಿಷ್ಣುವರ್ಧನ ಲಕ್ಷ್ಮಿದೇವಿ ತಲಕಾಡನ್ನು[೬೮] ಇತರೆ ಅಧಿಕಾರಗಳೊಂದಿಗೆ ಆಳ್ವಿಕೆ ಮಾಡಿದ್ದಳು. ಬಮ್ಮಲದೇವಿಯು ಉತ್ತಮ ಆಡಳಿತಗಾರ್ತಿಯಾಗಿದ್ದು, ಶಾಂತಲೆಯ ನಂತರ "ಪಿರಿಯರಸಿ ಪಟ್ಟಮಹಾದೇವಿ ಪಟ್ಟವನ್ನು ಪಡೆದುಕೊಂಡಿದ್ದಾಳೆ"ಂದು[೬೯] ನಾಗಮಂಗಲ ಶಾಸನ ಉಲ್ಲೇಖಿಸಿದೆ. ಪ್ರಾಚೀನ ಕಾಲದಲ್ಲಿ ಇದ್ದಂತೆ ಮಧ್ಯಕಾಲೀನ ಸಂದರ್ಭದಲ್ಲಿಯೂ ಪಿರಿಯರಸಿಯಾಗುವ ರಾಣಿ ಮೂಲಭೂತ ಅರ್ಹತೆಗಳನ್ನು ಹೊಂದಿರಬೇಕಾಗಿತ್ತು. ಅಂಥ ರಾಣಿಯರಿಗೆ ಪಿರಿಯರಸಿ ಪಟ್ಟಮಹಾದೇವಿ ಎಂದು ಘೋಷಿಸಲು ಒಂದು ಪಟ್ಟಬಂಧ ಮಹೋತ್ಸವವನ್ನು ಆಚರಿಸುತ್ತಿದ್ದರು. ಇಂಥ ಸಮಾರಂಭಕ್ಕೆ ನಾಡಿನ ಗಣ್ಯರು, ನೆರೆಹೊರೆಯ ನಾಡಿನ ಅರಸ, ಮಂತ್ರಿಗಳು, ಪುರೋಹಿತವರ್ಗ, ಅರಮನೆಯ ಜೋತಿಷ್ಯಗಾರರು, ಅರಮನೆಯ ರಾಣಿಯರು, ಮಕ್ಕಳು, ಆಸ್ಥಾನಿಕ ಅಧಿಕಾರಿಗಳು ಮೊದಲಾದವರನ್ನು ಆಹ್ವಾನಿಸುತ್ತಿದ್ದರು. ಉಧ್ಧಾಹರಣೆಗೆ ಬಮ್ಮಲದೇವಿಯ ಪಟ್ಟಾಭಿಷೇಕವನ್ನು ಗಮನಿಸುವುದಾದರೆ ಬಮ್ಮಲದೇವಿಗೆ ಪಟ್ಟಬಂಧ ಮಹೋತ್ಸವವನ್ನು ಶ್ರಾವಣ ಶುದ್ಧ ಸಪ್ತಮಿಯಂದು ನಿಶ್ಚಯಿಸಲಾಗಿತ್ತು. ಬ್ರಾಹ್ಮೀ ಮುಹೂರ್ತದಲ್ಲಿ ಎದ್ದ ರಾಣಿ-ರಾಜರಿಗೆ ಅಭ್ಯಂಜನವಾಗುತ್ತಿತ್ತು. ನಂತರ ನೂತನ ವಸ್ತ್ರಧಾರಣೆ ಮಾಡಿಕೊಂಡು, ಮುಹೂರ್ತಕ್ಕೆ ಸಿದ್ಧರಾಗುತ್ತಿದ್ದರು. ಮಹಾರಾಜ ನಿಯೋಜಿತ ಪಟ್ಟಮಹಾದೇವಿಯನ್ನು ಕೈಹಿಡಿದು ಸಿಂಹಾಸನಕ್ಕೆ ಕರೆತಂದು ಅನಂತರ ನಿಶ್ಚಿತವಾಗಿದ್ದ ಅಂದಿನ ಅಭಿಜಿನ್ ಮುಹೂರ್ತಕ್ಕೆ ಸರಿಯಾಗಿ ಮಹಾರಾಜನು ನಿಯೋಜಿತ ಪಟ್ಟಮಹಾದೇವಿಯನ್ನು ಕೈಹಿಡಿದು ಸಿಂಹಾಸನ ಸುತ್ತ ಪ್ರದಕ್ಷಿಣೆ ಮಾಡಿಸುತ್ತಿದ್ದ. ವೇದೋಕ್ತ ಮಂತ್ರಗಳು ಸಾಗಿರುವಲ್ಲಿ ಜೊತೆಯಾಗಿ ಸಿಂಹಾಸನವೇರುತ್ತಿದ್ದರು. ಮಹಾರಾಜನೇ ಪಟ್ಟಮಹಾದೇವಿಗೆ ಕಿರೀಟಧಾರಣೆ ಮಾಡುತ್ತಿದ್ದ. ಆ ಕೂಡಲೇ ಪಟ್ಟ ಮಹಾದೇವಿಯ ಕಿರೀಟಧಾರಣೆಯು ಜರುಗುತ್ತಿತ್ತು. ಹಾಗೂ ಮಹಾರಾಣಿ ರಾಜರ ಬಿರುದುಗಳನ್ನು ಘೋಷಿಸುತ್ತಿದ್ದರು. ಇವೆಲ್ಲವುಗಳ ನಂತರ ಸುಮಂಗಲೆಯರು ರಾಜದಂಪತಿಗಳಿಗೆ ಆರತಿ ಮಾಡುತ್ತಿದ್ದರು.[೭೦] ಕ್ರಿ.ಶ. ೧೧೩೪ರ ಸಂದರ್ಭಕ್ಕೆ ಧವಳಶಂಖೋದ್ದಂಡ ಘಂಡರೀಕಕನಕ ದಂಡಚಾಮರಸ್ತೋಮ ಬಮ್ಮಲದೇವಿಗೆ ಇದ್ದವೆಂದು ನಾಗಮಂಗಲದ ಶಾಸನ ಉಲ್ಲೇಖಿಸಿದೆ. ಹಾರುವಳ್ಳಿಯ ಶಾಸನವು ಬಮ್ಮಲದೇವಿಯ ಆಡಳಿತವನ್ನು ಕುರಿತಂತೆ "ದುಷ್ಟ ನಿಗ್ರಹ ಶಿಷ್ಟ ಪ್ರತಿಪಾಲನದಿಂದ ಆಸಂದಿಯಯ್ನೂರುಮಂ, ನಿರ್ಗುಂದಮೂನ್ನೂರುಮಂ ಆಳ್ವಿಕೆ" ಮಾಡುತ್ತಿದ್ದಳು ಎಂದು ತಿಳಿಸಿರುವುದರ ಜೊತೆಗೆ ಬಮ್ಮಲದೇವಿಯ ಮಹಾಸಾಮಂತ ನಾಡಪ್ರಭು ಎರಕಗಾವುಂಡನೆಂಬುವವ ಪಾದಪದ್ಮೋಪ ಜೀವಿಯಾಗಿದ್ದ[೭೧] ಎಂದು ದಾಖಲಿಸಿದೆ. ಬೆನಚಿಗರೆಯ ಶಾಸನವು ಬಮ್ಮಲದೇವಿಯ ಬದುಕಿನ ವಿವರಗಳನ್ನು ನೀಡುತ್ತದೆ.

ಉಮಾದೇವಿಯ ರಾಜ ಹೊಯ್ಸಳರ ಇಮ್ಮಡಿ ಬಲ್ಲಾಳ. ಉಮಾದೇವಿಯು ಸಹ ಪಿರಿಯರಸಿ ಪಟ್ಟಮಹಾದೇವಿ ಆಗಿದ್ದು, ಬಲ್ಲಾಳನಿಗೆ ಬಲಭುಜದಂತೆ ಇರುತ್ತಿದ್ದಳು. ಇದಕ್ಕೆ ಆಧಾರವಾಗಿ ಕಣಕಟ್ಟೆ ಶಾಸನವು ಉಮಾದೇವಿಯನ್ನು "ಬಲ್ಲಾಳನ ಬಲಭುಜದೊಳು ಬಲ್ಲಿದಳಾ ವೀರಲಕ್ಷ್ಮಿ ನೆಲಸುಮ ತೆರಿದಿಂ ಬಲ್ಲಾಳನ ವಾಮಂಗದ ವಲಭೆ ಉಮಾದೇವಿಯೀಧಾತ್ರಿಯೊಳು ಪೆಸರುವಡೆದಳು"[೫೩] ಎಂದು ಹೇಳಿದೆ. ಹೊಯ್ಸಳ ಮನೆತನಕ್ಕೆ ಉಮಾದೇವಿಯ ಕೊಡುಗೆಯನ್ನು ಕ್ರಿ.ಶ. ೧೧೮೯ರ ಶಾಸನ[೫೪] ಉಲ್ಲೇಖಿಸಿದೆ. ಕ್ರಿ.ಶ. ೧೨೦೯ರ ಶಾಸನವೊಂದು ಉಮಾದೇವಿಯ ಆಡಳಿತವನ್ನು ತಿಳಿಸಿ, ಈಕೆಯು ಮಗರೆಮೂನೂರರ ಆಳ್ವಿಕೆ ಮಾಡುತ್ತಿದ್ದಳು ಎಂದು ಹೇಳಿರುತ್ತದೆ. ಜೊತೆಗೆ ಉಮಾದೇವಿಯ ಪ್ರಧಾನ ಅಧಿಕಾರಿ ಕುಮಾರ ಪಂಡಿತಯ್ಯನಾಗಿದ್ದನೆಂದು ತಿಳಿಸುತ್ತದೆ. ರಾಣಿಯರ ಆಡಳಿತದ ಇತರೆ ಅಧಿಕಾರಗಳ ಸಂಬಂಧ ಉತ್ತಮವಾಗಿದ್ದು, ರಾಣಿಯು ಅವರಿಗೆಲ್ಲಾ ಮಾತೃಸ್ವರೂಪಿಣಿ ಆಗಿರುತ್ತಿದ್ದಳು. ಅಂತೆಯೆ ಚನ್ನರಾಯಪಟ್ಟಣದ ಶಾಸನವು ಪಂಡಿತಯ್ಯ ದಂಡನಾಯಕನನ್ನು ಉಮಾದೇವಿಯ ಮಗನೆಂದು[೫೫] ಸಾರುತ್ತದೆ. ಇದರಿಂದಲೂ ರಾಣಿ ಹಾಗೂ ಆಡಳಿತದ ಅಧಿಕಾರಿಗಳ ಸಂಬಂಧಗಳು ತಿಳಿದುಬರುತ್ತವೆ. ಇಂಥ ಸಂಬಂಧಗಳ ಮುಖೇನ ರಾಣಿಯರು ಪ್ರಜೆಗಳಿಗೆ ಉತ್ತಮವಾದ ದಕ್ಷ ಆಡಳಿತ ನೀಡುವಲ್ಲಿ ಯಶಸ್ವಿಯಾದರು ಎನ್ನಬಹುದು.

ಚೋಳ ಮಹಾದೇವಿಯ ಅರಸ ಕೂಡ ಹೊಯ್ಸಳರ ಇಮ್ಮಡಿ ಬಲ್ಲಾಳ. ಚೋಳಮಹಾದೇವಿಯು ತನ್ನ ಸಾಹಸಮಯ ಮನೋಭಾವಗಳಿಂದ ಗುರುತಿಸಿಕೊಂಡಿದ್ದಳು. ಚೋಳಮಹಾದೇವಿ ಕೆಂಬಾಳಿನ ಆಡಳಿತವನ್ನು[೫೬] ನೋಡಿಕೊಳ್ಳುತ್ತಿದ್ದಳು ಎಂದು ಉಲ್ಲೇಖಗಳು ಇರುತ್ತವೆ. ಕೇತಲದೇವಿಯು ಪಿರಿಯರಸಿ ಪಟ್ಟಮಹಾದೇವಿ[೫೭] ಆಗಿದ್ದಳು. ಕೇತಲದೇವಿ ರಾಣಿಯ ಪ್ರಭಾವವು ಬಲ್ಲಾಳನ ಮೇಲೆ ಪರಿಣಾಮ ಬೀರಿತ್ತು. ಕೇತಲದೇವಿ ಅಲ್ಲದೆ ಅಭಿನವ ಕೇತಲಮಹಾದೇವಿ ಎಂಬ ಇನ್ನೊಬ್ಬ ರಾಣಿಯು ಇದ್ದಳು. ಕೇತಲಮಹಾದೇವಿಯು ಪಿರಿಯರಸಿ ಆಗಿದ್ದು,[೫೮] ಕುಂದವಾಡವನ್ನು ಆಳ್ವಿಕೆ[೫೯] ಮಾಡಿದ್ದ ಬಗೆಗೆ ದಾಖಲೆಗಳು ದೊರೆಯುತ್ತವೆ. ಕೇತಲಮಹಾದೇವಿಯ ಅಧಿಕಾರಿಗಳಾಗಿ ಮಾಧವ ದಂಡನಾಯಕ, ಕೇಶವದಂಡನಾಯಕ ಎಂಬುವವರು ಇದ್ದರು ಎಂದು ತಿಳಿದುಬರುತ್ತದೆ. ಮಧುಕಲಾಂಬಿಕೆಯು ಪ್ರಧಾನ ರಾಣಿಯಾಗಿದ್ದು, ಈಕೆಯನ್ನು 'ಮಧುಕಲಾಂಬಿಕೆ', 'ಮಧುಕಲದೇವಿ'[೬೦] ಎಂದು ಶಾಸನಗಳು ಉಲ್ಲೇಖಿಸಿವೆ. ಮಧುಕಲಾಂಬಿಕೆಯ ಆಳ್ವಿಕೆಗೆ ಕೆಂಕರೆ ಪ್ರದೇಶವೂ ಸಹ ಸೇರಿತ್ತು ಎಂದು ತಿಳಿದುಬಂದಿದೆ.

ಬೈಚಲದೇವಿಯು 'ಅಗ್ರಮಹಿಷಿ' ಎಂದು ಕರೆಸಿಕೊಂಡಿದ್ದು, ಮಗರೆ ಮುನ್ನೂರರ ಆಳ್ವಿಕೆಯನ್ನು ಮಾಡುತ್ತಿದ್ದಳು. ಈಕೆಯ ಬದುಕನ್ನು ಮಾಧಪುರ ಶಾಸನ[೬೧] ವಿವರಿಸಿದೆ. ಕಲ್ಯಾಣದ ಕ್ರಾಂತಿಯ ಸಂದರ್ಭದಲ್ಲಿ ಕಲಚೂರಿಗಳ ರಾಣಿ ಮಂತ್ರಿ ಊರನ್ನು ಆಳಿದ್ದ ಬಗ್ಗೆ ವಿವರಗಳು ದೊರೆಯುತ್ತವೆ. ಕಲ್ಯಾಣದ ಕ್ರಾಂತಿಯ ನಂತರದಲ್ಲಿ "ಸೋಮಲದೇವಿ ಮಂತ್ರಿಯಾಗಿ ಕಾರ್ಯ ನಿರ್ವಹಿಸಿದ್ದಳು. ಅಲ್ಲದೆ ಮಂಗಳೂರಿನ ಒಂದು ಭಾಗದ ಆಳ್ವಿಕೆ[೬೨] ಯನ್ನೂ ಮಾಡಿದ್ದಳು" ಎಂದು ತಿಳಿದುಬಂದಿದೆ. ಈ ರಾಣಿಯರೇ ಅಲ್ಲದೆ ಮಾಂಡಲೀಕರ ಪತ್ನಿಯರು, ಸಂಸ್ಥಾನದ ಮಹಿಳೆಯರು ಆಡಳಿತ ಮಾಡಿರುವ ಬಗ್ಗೆ ದಾಖಲೆಗಳು ಉಂಟು. ಉದಾಹರಣೆಗೆ ಕೆಳದಿಯ ಚೆನ್ನಮ್ಮ, ಮತ್ತು ವೀರಮ್ಮಾಜಿ, ಬೆಳವಡಿ ಮಲ್ಲಮ್ಮ, ಸಿರಸಂಗಿಯ ಚೆನ್ನವ್ವ, ಹಿರಿಯ ಅಬ್ಬಕ್ಕ, ಕಿರಿಯ ಅಬ್ಬಕ್ಕ ಮೊದಲಾದವರು ಪ್ರಮುಖರು. ಚೆನ್ನಾಬಾದೇವಿ ಮೂಡಬಿದರೆಯನ್ನು, ಚಟ್ಟಲದೇವಿ

ಶಾಂತಳಿಗೆ ನಾಡನ್ನು, ಪದ್ಮಲದೇವಿ ಹೊನ್ನಾಳಿ ಪ್ರಾಂತ್ಯ, ಗಂಗಾಂಬಿಕೆ ಉಗಾಂಡಿ ಪಟ್ಟಣ ಸ್ವಾಮಿಯಾಗಿ ಹೀಗೆ ಮೊದಲಾದವರು ಆಳ್ವಿಕೆ ಮಾಡಿರುವ ಬಗ್ಗೆ ದಾಖಲೆಗಳು ಇವೆ.

ಕುತೂಹಲದ ಸಂಗತಿ ಎಂದರೆ ಇಸ್ಲಾಂ ಧರ್ಮದ ಮಹಿಳೆಯರೂ ಆಡಳಿತ ನಿರ್ವಹಿಸಿದ್ದುದು. ಈ ಮಹಿಳೆಯರು ತಮ್ಮ ರಾಜ್ಯವನ್ನು ಶತ್ರುಗಳಿಂದ ಪಾರು ಮಾಡಿಕೊಳ್ಳಲು ಬಯಸಿದವರಾಗಿದ್ದರು. ಅಂತೆಯೇ 'ಮಖದುಮಾ ಜೆಹಾನಳು' ಬಹುಮನಿ ಷಾಹಿ ಮನೆತನದವಳು. ಈಕೆಯ ಮಕ್ಕಳಾದ ನಿಜಾಂ ಷಾ ಮತ್ತು ಮೂರನೆಯ ಮಹಮ್ಮದ್‌ರು ಅಪ್ರಾಪ್ತರಾಗಿದ್ದರಿಂದ ರಾಣಿಯೇ ಆಡಳಿತದ ಹೊಣೆ ಹೊತ್ತಳು. ಹಾಗಾಗಿ ಆಡಳಿತದಲ್ಲಿ ಸಹಾಯಕ್ಕೆಂದು 'ಗಾವಾನ್' ಮತ್ತು 'ಖ್ವಾಜಾಜಹಾನ'ನ್ನು ನೇಮಿಸಿಕೊಂಡಿದ್ದಳು. ಆದರೆ ಖ್ವಾಜ ಜಹಾನನ ಮೇಲೆ ನಂಬಿಕೆ ಇಲ್ಲದೆ ಇದ್ದುದರಿಂದ ಅವನನ್ನು ಅಧಿಕಾರದಿಂದ ವಜಾ ಮಾಡಿದಳು. ಜೊತೆಗೆ 'ಗಾವಾನ್'ನ ಪ್ರಾಮಾಣಿಕತೆ ಕಂಡು, ಅವನಿಗೆ 'ವಕೀಲ್-ಉಸ್-ಸುಲ್ತಾನತ್' ಪದವಿಗೆ ಬಡ್ತಿ ನೀಡಿದಳು. ಚಾಂದ್ ಬೀಬಿ ಅಹ್ಮದ್ ನಗರದ ರಾಜಕುಮಾರಿ. ಈಕೆಯು ಆದಿಲ್ ಷಾಹಿಯ ಮೊದಲನೆಯ 'ಅಲಿ'ಯನ್ನು ವಿವಾಹವಾಗಿದ್ದು, ಅಲಿಯ ಕೊಲೆಯ ನಂತರ ಅನಿರೀಕ್ಷಿತವಾಗಿ ಅಧಿಕಾರಕ್ಕೆ ಬಂದಿದ್ದಳು.

### ಆ. ಯುದ್ಧ ಮತ್ತು ಮಹಿಳೆ

ಮಾನವನ ಆಸೆ-ಆಕಾಂಕ್ಷೆಗಳು ಹಲವು ಬಗೆಯವು ಮತ್ತು ಅಪರಿಮಿತವೂ ಆಗಿವೆ. ಈ ಆಸೆ-ಆಕಾಂಕ್ಷೆಗಳಿಂದಾಗಿ ಹಲವು ಚಟುವಟಿಕೆಗಳಲ್ಲಿ ತೊಡಗಿರಬೇಕಾಗಿದೆ. ಚರಿತ್ರೆಯಲ್ಲಿ ಸಂಭವಿಸಿದ ಯುದ್ಧಗಳು ಕೂಡ ಆಸೆ-ಆಕಾಂಕ್ಷೆಗಳಿಂದ ಕೂಡಿದ್ದವೇ ಸರಿ. ಈ ಯುದ್ಧಗಳು ಸಂಪತ್ತಿನ ಗಳಿಕೆಗಾಗಿ, ಭೂಪ್ರದೇಶಗಳ ವಿಸ್ತಾರಕ್ಕಾಗಿ, ಅಧಿಕಾರ ಸ್ಥಾಪನೆಗಾಗಿ ಮತ್ತು ದುಷ್ಟರ ನಿಗ್ರಹ, ಶಿಷ್ಟರ ರಕ್ಷಣೆಗಾಗಿಯೂ ಜರುಗುತ್ತಿದ್ದವು. ಅಲ್ಲದೆ ಈ ಯುದ್ಧಗಳು ಶಕ್ತಿ, ಸಾಮರ್ಥ್ಯದ ಪ್ರದರ್ಶನಕ್ಕಾಗಿಯೊ, ಕೀರ್ತಿ ಪ್ರತಿಷ್ಠೆಗಾಗಿಯೊ ನಡೆಯುತ್ತಿದ್ದವು. ಮಧ್ಯಕಾಲೀನ ಕರ್ನಾಟಕದ ಚರಿತ್ರೆಯಲ್ಲಿಯೂ ಅನೇಕ ರಾಣಿಯರು, ದೇಸಾಯಿಣಿಯರು, ಸೂಳೆಯರು ಮೊದಲಾದ ಮಹಿಳೆಯರು ಸಹ ಪ್ರತ್ಯಕ್ಷ-ಪರೋಕ್ಷವಾಗಿಯೂ ಯುದ್ಧದಲ್ಲಿ ಪಾಲ್ಗೊಂಡಿದ್ದಾರೆ.

### ೧. ರಾಣಿಯರು

ಬಮ್ಮಲದೇವಿಯ ಅರಸ ಹೊಯ್ಸಳರ ವಿಷ್ಣುವರ್ಧನ. ಬಮ್ಮಲದೇವಿ ಕುದುರೆಗಳನ್ನು ನೋಡಿಯೇ ಅವುಗಳ ಬಗ್ಗೆ ಮಾಹಿತಿ ನೀಡುತ್ತಿದ್ದಳು. ಇದರಿಂದಾಗಿ ಆಕೆಯು ಕುದುರೆಗಳ ಪಡೆಯಲ್ಲಿ ನುರಿತವಳಾಗಿದ್ದಳು. ಬಮ್ಮಲದೇವಿಯು ಯುದ್ಧಗಳಿಗೆ ಹೋಗುತ್ತಿದ್ದುದು, ತಿಳಿದುಬರುತ್ತದೆ. ಹಾನಗಲ್ಲು ಯುದ್ಧದ ಬಗ್ಗೆ "ಹಾನುಂಗಲ್ಲಿನತ್ತಣದ ಅವುಸರದೆ ಬೇಹವು ಸಿದ್ಧ ಹಸ್ತವಾಗಿ ಲಗ್ಗೆ ಹಾಕುವ ಮಸಣಯ್ಯನ ಯೋಚನೆ ಸಾಗಿದ್ದರಿಂದ ವಿಷ್ಣುವರ್ಧನ ಕೂಡಲೇ ಹಾನುಂಗಲ್ಲಿಗೆ ಪಟ್ಟಮಹಾದೇವಿ ಬಮ್ಮಲೆಯೊಂದಿಗೆ ಸೈನ್ಯ ಸಮೇತ ಹೊರಡಲು ನಿರ್ಧರಿಸಿದ್ದ"[೭೩] ಎಂದು ದಾಖಲಾಗಿದೆ. ಹಲಸಿಗೆಯ ದಾಳಿಯಲ್ಲೂ ಸಹ ಬಮ್ಮಲೆ ಭಾಗವಹಿಸಿದ್ದು, ಈ ದಾಳಿಯಲ್ಲಿ ವಿಷ್ಣುವರ್ಧನನಿಗೆ ಆಗುವ ಅಪಾಯತವನ್ನು ತಪ್ಪಿಸಿ, ತಾನೇ ಬಲಿಯಾಗಿದ್ದಳು.

ಉಮಾದೇವಿಯು ಹೊಯ್ಸಳರ ರಾಣಿಯರಲ್ಲಿ ಪ್ರಧಾನಳಾಗಿದ್ದಳು. ಈಕೆ ಬೆಳಗುತ್ತಿಯ ಸಿಂದರ ಮೇಲೆ ಮೂರುಬಾರಿ ದಂಡೆತ್ತಿ ಹೋಗಿದ್ದನ್ನು ಬೆಳಗುತ್ತಿಯ ಶಾಸನ[೬೪] ಉಲ್ಲೇಖಿಸಿದೆ. ಕೆಲವೊಂದು ಸನ್ನಿವೇಶಗಳಲ್ಲಿ ರಾಣಿಯರು ಆಸ್ಥಾನಿಕರ ಮಾತುಗಳನ್ನು ಕೇಳಿ ತಪ್ಪು ನಿರ್ಣಯಗಳನ್ನು ಕೈಗೊಂಡಿದ್ದು ಉಂಟು. ಅಂತೆಯೆ ಚೋಳಮಹಾದೇವಿಯು ಆಡಳಿತದಲ್ಲಿ ಉಂಟಾದ ಸಮಸ್ಯೆಯನ್ನು ಪರಿಹರಿಸುವಾಗ ಕೈಗೊಂಡ ತಪ್ಪು ನಿರ್ಣಯ ಬೇವೂರ ಕೇತಮಲ್ಲನ ಮೇಲೆ ದಾಳಿ ಮಾಡಲು ಕಾರಣವಾಯಿತು. ತದನಂತರ ಸತ್ಯ ಸಂಗತಿ ತಿಳಿದ ರಾಣಿ ''ನಮ್ಮ ಮಕ್ಕಳನ್ನು ನಾವೇ ನೋಯಿಸಿದೆವು'' ಎಂದು ಪಶ್ಚಾತ್ತಾಪ ಪಟ್ಟಿದ್ದನ್ನು ಸಹ ಕಾಣಬಹುದು. ಮಧುಕಲಾಂಬಿಕೆಯ ಕೆಂಕರೆಯ ಮೇಲೆ ಕಳ್ಳರು ಮೂರು ಬಾರಿ ದಾಳಿ ಮಾಡಿದ್ದರು. ಜೊತೆಗೆ ಮಹಾಜನಗಳ ಗೋವುಗಳನ್ನು ಕದ್ದುಕೊಂಡು ಹೋಗುವಾಗ ನಾಡಿನ ವೀರರು ಸಹ ಹೋರಾಡಿ ಗೋವುಗಳನ್ನು ರಕ್ಷಣೆ ಮಾಡಿದರು ಎಂದು ಕ್ರಿ.ಶ. ೧೧೫೫ರ ಶಾಸನದಿಂದ[೬೫] ತಿಳಿಯಬಹುದಾಗಿದೆ.

ವಿಜಯನಗರದ ಗಂಗಾದೇವಿ ಕಂಪಣ್ಣನ ಜೊತೆ ಯುದ್ಧಕ್ಕೆ ಹೋಗಿದ್ದಳು ಎಂದು ತಿಳಿಯಲು ಆಕೆ ರಚಿಸಿದ 'ಮಧುರ ವಿಜಯಂ' ಕೃತಿಯೇ ಸಾಕ್ಷಿಯಾಗಿದೆ. ತಿರುಮಲದೇವಿ, ಚಿನ್ನಾದೇವಿಯರು ಸಹ ಉದಯಗಿರಿಯ ದಂಡಯಾತ್ರೆಯಲ್ಲಿ ಪಾಲುಗೊಂಡಿದ್ದರು. ನಂತರ ಉದಯಗಿರಿಯ ಗೆಲುವಿನ ನೆನಪಿಗಾಗಿ ತಿರುಪತಿಗೆ ಭೇಟಿ ಕೊಟ್ಟಿದ್ದನ್ನು ಗಮನಿಸಬಹುದು.

ಕೆಳದಿಯ ರಾಣಿ ಚೆನ್ನಮ್ಮ ಪತಿಯನ್ನು ಕಳೆದುಕೊಂಡು ತಾನೇ ಆಡಳಿತವನ್ನು ನಿರ್ವಹಿಸುತ್ತಿದ್ದಳು. ಇಂಥ ಸಂದರ್ಭದಲ್ಲಿ ಬಿಜಾಪುರದ ನವಾಬರು, ಬೀಳಗಿಯರು ಮೊದಲಾದ ಪಾಳೆಯಗಾರರು ಕೆಳದಿಯ ಮೇಲೆ ದಾಳಿ ಮಾಡಿದರು. ಚೆನ್ನಮ್ಮ ಆಡಳಿತದ ಭದ್ರತೆಗಾಗಿ ಬಿದನೂರಿನ ಕೇಂದ್ರವನ್ನು ಭುವನಗಿರಿಗೆ ವರ್ಗಾಹಿಸಿಕೊಂಡಳು. ತನ್ನ ವಿರುದ್ಧ ಬಂಡೆದ್ದವರನ್ನು ಸದೆಬಡಿದಳು. ಕ್ರಿ.ಶ. ೧೬೭೨ರಲ್ಲಿ ಮೈಸೂರಿನ ದಳವಾಯಿ ಕುಮಾರಯ್ಯನನ್ನು ಎದುರಿಸಿದಳು. ಸೋತ ದಳವಾಯಿಯಿಂದ ಕೆಳದಿಗೆ ಕಡೂರು, ಬಾಣಾವಾರ, ಹಾಸನ, ಬೇಲೂರು ಪ್ರದೇಶಗಳನ್ನು ಸೇರಿಸಿಕೊಂಡು, ರಾಜ್ಯದ ಗಡಿಗಳನ್ನು ಭದ್ರಪಡಿಸಿಕೊಂಡಳು. ಔರಂಗಜೇಬನಿಂದ ತಪ್ಪಿಸಿಕೊಂಡು ಓಡಾಡುತ್ತಿದ್ದ ರಾಜಾರಾಮ ಆಶ್ರಯ ಬೇಡಿದಾಗ, ಅವನಿಗೆ ಆಶ್ರಯವನ್ನು ನೀಡಿ, ಔರಂಗಜೇಬನನ್ನು ಎದುರಿಸಬೇಕಾಗಿ ಬಂದಿತು. ಇದು ದೊಡ್ಡ ಯುದ್ಧಕ್ಕೆ ಕಾರಣವಾಗಿ ಮೊಗಲರ ಸೈನ್ಯವನ್ನು ಹಿಂತಿರುಗುವಂತೆ ಮಾಡಿದಳು. ರಾಜ್ಯ ವಿಸ್ತರಣೆಗಾಗಿ ಕಾರ್ಕಳ, ಮಲ್ಲಿಕಾರ್ಜುನಗಿರಿ ಇತ್ಯಾದಿ ಕೋಟೆಗಳನ್ನು ವಶಪಡಿಸಿಕೊಂಡಳು. ಸ್ವಾದಿ ರಾಮಚಂದ್ರನನ್ನು ಸೋಲಿಸಿ ಬನವಾಸಿ, ಬದನೆಗೂಡು, ಕರವೂರು ಪ್ರದೇಶಗಳನ್ನು ಅಧೀನಕ್ಕೆ ತೆಗೆದುಕೊಂಡು, ನಾಡನ್ನು ವಿಸ್ತರಿಸಿ, ಶತ್ರುಗಳಿಂದ ಪಾರು ಮಾಡಿದಳು.

ಮಲ್ಲಮ್ಮನ ಗಂಡ ಬೆಳವಡಿ ಈಶಪ್ರಭು. ಇವನು ಶಿವಾಜಿಯ ಸೈನಿಕರನ್ನು ಎದುರಿಸುವ ಸಂದರ್ಭದಲ್ಲಿ ಮೃತನಾದ. ಈಶಪ್ರಭುವಿನ ಸಾವಿನಿಂದ ಕಂಗಾಲಾಗಿದ್ದ ಸೈನಿಕರನ್ನು ಹುರಿದುಂಬಿಸಲು ಮಲ್ಲಮ್ಮನೇ ಆಡಳಿತ ವಹಿಸಿಕೊಂಡಳು. ಕೋಟೆಯನ್ನು ಕಾಪಾಡಲು ಹೊರ ಬಾಗಿಲನ್ನು ಮುಚ್ಚಿಸಿದ್ದು ಕಂಡುಬರುತ್ತದೆ. ಶಿವಾಜಿಯ ಸೈನಿಕರನ್ನು ಸೋಲಿಸಿ ಹಿಂತಿರುಗುವಂತೆ ಮಾಡಿದ್ದಳು. ಆದರೆ ಚೆನ್ನಮ್ಮನಿಂದ ಸೋತ ಸೈನಿಕರನ್ನು ಕಂಡ ಶಿವಾಜಿ ಮತ್ತೆ ದಳಪತಿಯಾದ ರಘುನಾಥನ ಮುಖಂಡತ್ವದಲ್ಲಿ ಬೆಳವಡಿಯ ಮೇಲೆ ದಾಳಿ ಮಾಡಿಸಿದ. ಈ ದಾಳಿಯನ್ನು ಚೆನ್ನಮ್ಮನು ಎದುರಿಸುತ್ತಿರುವ ಸಂದರ್ಭದಲ್ಲಿ ಸೈನಿಕರೊಬ್ಬ ಚೆನ್ನಮ್ಮ ಕುಳಿತ ಕುದುರೆಯ

ಕಾಲನ್ನೇ ಕತ್ತರಿಸಿದ. ಆಗಲೂ ಚೆನ್ನಮ್ಮ ನಿಂತೇ ಯುದ್ಧ ಮುಂದುವರೆಸಿದಳು. ಈ ಯುದ್ಧದಲ್ಲಿನ ಗಾಯಗಳಿಂದ ಎಚ್ಚರ ತಪ್ಪಿದ್ದ ಚೆನ್ನಮ್ಮನನ್ನು ಸೆರೆ ಹಿಡಿದು ಶಿವಾಜಿಯ ಬಳಿ ಕರೆದುಕೊಂಡು ಹೋದರು. ಚೆನ್ನಮ್ಮನ ಧೈರ್ಯ, ಉತ್ಸಾಹ, ನಾಡ ಪ್ರೇಮವನ್ನು ಕಂಡು ಬೆರಗಾದ ಶಿವಾಜಿ ಆಕೆಯನ್ನು 'ಸಹೋದರಿ' ಎಂದು ಕರೆದು, ಬೆಳವಡಿಯ ಪ್ರದೇಶಗಳನ್ನು ಹಿಂತಿರುಗಿಸಿದ. ಇನ್ನೂ ಮುಂದೆ ತಾನು ಎಂದೂ ಬೆಳವಡಿಯ ಮೇಲೆ ದಾಳಿ ಮಾಡುವುದಿಲ್ಲ ಎಂಬುದಾಗಿ ಭರವಸೆ ನೀಡಿದ. ಹೀಗೆ ಚೆನ್ನಮ್ಮ ಶತ್ರುವನ್ನು ಸಹೋದರನನ್ನಾಗಿ ಮಾಡಿಕೊಂಡು ಬೆಳವಡಿಯನ್ನು ರಕ್ಷಿಸಿದಳು.

ಕರಾವಳಿಯ ವ್ಯಾಪಾರಿಗಳ ಮೇಲೆ ಪೋರ್ಚುಗೀಸರು ನಿಯಂತ್ರಣ ಪಡೆದಿದ್ದರು. ಹೀಗಾಗಿ ಕರಾವಳಿಯ ವ್ಯಾಪಾರಿಗಳು ಪೋರ್ಚುಗೀಸರ ರಹದಾರಿ ಪತ್ರದ ಮುಖೇನ ವ್ಯಾಪಾರ ಮಾಡಬೇಕಾಗಿತ್ತು. ಇದನ್ನು ಕಂಡ ಉಲ್ಲಾಳದ ಚೌಟರಾಣಿ ಹಿರಿಯ ಅಬ್ಬಕ್ಕ ವಿರೋಧಿಸಿ ಯುದ್ಧ ಕೈಗೊಂಡಳು. ಇವಳ ನಂತರ ಮತ್ತೆ ಕಿರಿಯ ಅಬ್ಬಕ್ಕನು ಪೋರ್ಚುಗೀಸರನ್ನು ಸೋಲಿಸಿದಳು. ಕಿರಿಯ ಅಬ್ಬಕ್ಕ ಪೋರ್ಚುಗೀಸರನ್ನು ಎದುರಿಸಬೇಕಾದರೆ, ಆಕೆಯ ಗಂಡನಾದ ಬಂಗರಾಜನೂ ಸಹ ಪೋರ್ಚುಗೀಸರ ಜೊತೆ ಸೇರಿಕೊಂಡಿದ್ದ. ಇದರಿಂದಾಗಿ ಆಕೆ ಗಂಡನನ್ನು ಎದುರಿಸಿದಳು.

ಕ್ರಿ.ಶ. ೧೭೭೪ರಲ್ಲಿ ಹೈದರಾಲಿ ಮತ್ತು ಅವನ ಸೈನಿಕರು ಚಿತ್ರದುರ್ಗದ ಮೇಲೆ ದಾಳಿ ಮಾಡಿದ್ದರು. ವೀರವನಿತೆಯಾದ ಓಬವ್ವ ಹೈದರಾಲಿ ಸೈನಿಕರನ್ನು ಒನಕೆಯಿಂದಲೇ ಬಡಿದು ಸಾಯಿಸಿದ್ದು ಚರಿತ್ರೆಯಲ್ಲಿಯೇ ಕುತೂಹಲಕರವಾಗಿದೆ. ಈಕೆ ಚಿತ್ರದುರ್ಗದ ಕೋಟೆಯನ್ನು ರಕ್ಷಣೆ ಮಾಡಿ, ತನ್ನ ಪ್ರಾಣವನ್ನೇ ತೆತ್ತಳು.

ಚೆನ್ನವ್ವ ದೇಸಾಯಿ ಸಿರಸಂಗಿ ಸಂಸ್ಥಾನದವಳು. ಈಕೆ ತನ್ನ ಗಂಡನ ಮರಣದ ನಂತರ ಸಿರಸಂಗಿ ಸಂಸ್ಥಾನವನ್ನು ರಕ್ಷಿಸಿಕೊಂಡು ಹಲವು ದಾಳಿಗಳನ್ನು ಎದುರಿಸಿದಳು. ಅಲ್ಲದೆ ಸವಣೂರಿನ ನವಾಬನಿಗೆ ಯುದ್ಧದಲ್ಲಿ ಸಹಾಯ ಮಾಡಿ ಯಾವಾಗಲ್ಲನ್ನು ಉಂಬಳಿಯಾಗಿ ಪಡೆದುಕೊಂಡಳು. ಕ್ರಿ.ಶ. ೧೭೨೭ರಲ್ಲಿ ಮತ್ತೆ ಸವಣೂರು ನವಾಬನಿಗೆ ಸಹಾಯ ಮಾಡಿ, ಆಗಲೂ ಸಹ ಹಂಚಿನಾಳ, ಹೊಸೂರು ಧಾರವಾಡದ ಹಳ್ಳಿಗಳನ್ನು ಉಂಬಳಿಯಾಗಿ ಪಡೆದಳು. ಹುಯಿಲಗೋಳದ ಯುದ್ಧದಲ್ಲಿಯೂ ಮತ್ತೆ ಸೈನಿಕ ನೆರವು ನೀಡಿ ಕರೀಕಟ್ಟಿ ಗ್ರಾಮವನ್ನು ಪಡೆದುಕೊಂಡಳು. ಹೀಗೆ ಹಲವಾರು ಬಾರಿ ಯುದ್ಧದಲ್ಲಿ ನವಾಬನಿಗೆ ಸಹಾಯ ಮಾಡಿ, ತನ್ನ ಸಂಸ್ಥಾನಕ್ಕೆ ಅನೇಕ ಪ್ರದೇಶಗಳನ್ನು ಪಡೆದುಕೊಂಡ ಕೀರ್ತಿ ಇವಳದು. ಇಂಥ ಕುತೂಹಲಕರ, ವಿಶೇಷವಾದ ಘಟನೆಗಳನ್ನು ಪುರುಷ ರಚಿತ ಚರಿತ್ರೆಯಲ್ಲಿ ದಾಖಲಾಗಿಲ್ಲದ್ದನ್ನು ಸ್ತ್ರೀವಾದ ಪ್ರಶ್ನಿಸಿ, ಹೆಣ್ಣಿನ ಇಂಥ ಸಾಧನೆಗಳನ್ನು ಚರಿತ್ರೆಯಲ್ಲಿ ಸೇರಿಸಲು ಬಯಸುತ್ತದೆ.

### ೨. ವೈವಾಹಿಕ ಸಂಬಂಧಗಳು

ಎರಡು ಸಾಮ್ರಾಜ್ಯಗಳ ನಡುವೆ ಉಂಟಾದ ಕದನ, ಮತ್ಸರ, ವಿರಸ ಮೊದಲಾದವುಗಳನ್ನು ನಿಲ್ಲಿಸಲು ಸಹ ಹೆಣ್ಣೇ ಕಾರಣಳಾಗಿದ್ದಾಳೆ. ಬಹುತೇಕ ರಾಣಿಯರನ್ನು ಯುದ್ಧದ ವಿಲುಗಡೆಗಾಗಿ ಅರಸನಿಗೆ ವಿವಾಹ ಮಾಡಿಕೊಟ್ಟಿರುವುದು ಚರಿತ್ರೆಯಲ್ಲಿ ದಾಖಲಾಗಿದೆ. ಉದಾಹರಣೆಗೆ ಒರಿಸ್ಸಾದ ಗಜಪತಿ ಪ್ರತಾಪರುದ್ರ ಜಗನ್ಮೋಹಿನಿಯನ್ನು ವಿಜಯನಗರದ ಕೃಷ್ಣದೇವರಾಯನಿಗೆ ಕೊಟ್ಟನು. ವಿಜಯನಗರದ ಎರಡನೆಯ ದೇವರಾಯ ತನ್ನ ಮಗಳನ್ನು ಫಿರೋಜ್ ಷಾಹನಿಗೆ ಕೊಟ್ಟು ಸಂಬಂಧ ಬೆಳೆಸಿಕೊಂಡರು.

### ೩. ಸೂಳೆಯರು

ಸೂಳೆಯರು ಯುದ್ಧದಲ್ಲಿ ಸೈನಿಕರನ್ನು ಪ್ರೋತ್ಸಾಹಿಸಲು, ಅವರಿಗೆ ಮನರಂಜನೆಯನ್ನು ಒದಗಿಸಲು ಮೊದಲಾದವುಗಳಿಗೆ ಸಹ ಸೂಳೆಯರು ಹೋಗುತ್ತಿದ್ದರು. ಅಲ್ಲದೆ ಶತ್ರುಗಳ ವಿವರಗಳನ್ನು ತಿಳಿಯಲು ಸೂಳೆಯರು ಹೋಗುತ್ತಿದ್ದುದು ಉಂಟು. ಕೃಷ್ಣದೇವರಾಯನು ರಾಯಚೂರನ್ನು ಮುತ್ತಿಗೆ ಹಾಕುವ ಸಂದರ್ಭದಲ್ಲಿ ಇಪ್ಪತ್ತು ಸಾವಿರ ಸೂಳೆಯರಿದ್ದರು ಎನ್ನಲಾಗಿದೆ. ನಂಜುಂಡನ ‘ರಾಮನಾಥ ಚರಿತ`ದಲ್ಲಿ ‘ಕರಿ’ ಎನ್ನುವವಳ ಬಗ್ಗೆ ಉಲ್ಲೇಖವಿದೆ. ‘ಕರಿ ಹನ್ನೆರಡು ಸಾವಿರ ಕಂಭ, ತುರಗ, ಹತ್ತುಲಕ್ಷಚರರೊಂದು ಕೋಟೆವೆರಸಿ ನಡೆತಂದಳು’[೬೬] ಎಂದು ತಿಳಿದುಬಂದಿದೆ.

### ೪. ಶಿಲ್ಪಗಳಲ್ಲಿ ಮಹಿಳಾ ಸೈನಿಕರು

ಹಜಾರ ರಾಮಚಂದ್ರ ದೇವಸ್ಥಾನದ ಪ್ರಾಕಾರ ಗೋಡೆಯ ಮೇಲಿನ ಪಟ್ಟಿಯಲ್ಲಿ ಇಬ್ಬರು ಮಹಿಳಾ ಯೋಧರು ಈಟಿಗಳನ್ನು ಹಿಡಿದು ಹೋರಾಡುತ್ತಿರುವ ದೃಶ್ಯವಿದೆ. ಸ್ಮಾರಕದ ಆನೆಗಳ ಸಾಲುಪಟ್ಟಿಕೆಗಳಲ್ಲಿ ಆನೆಯ ಮೇಲೆ ಸವಾರಿ ಮಾಡುತ್ತಿರುವ ಮಹಿಳೆಯರನ್ನು ಕಾಣಬಹುದು. ಬೆಂಗಳೂರಿನ ಸರಕಾರಿ ವಸ್ತು ಸಂಗ್ರಹಾಲಯದಲ್ಲಿರುವ ಒಂದು ಶಿಲ್ಪದಲ್ಲಿ ಕುದುರೆ ಸವಾರಿಯ ಹೋರಾಟದ ಮಹಿಳೆಯು ಛತ್ರಿ-ಚಾಮರ ಧಾರೆಯರೊಂದಿಗೆ ರಣರಂಗಕ್ಕೆ ಕಾದಾಡಲು ನಿಂತ ಶಿಲ್ಪವಿದೆ. ಇದರಿಂದಲೂ ಮಹಿಳಾ ಸೈನಿಕರು ಇದ್ದರೆಂಬುದನ್ನು ತಿಳಿಯಬಹುದು.

ಕೊಪ್ಪಳದ ವೀರಗಲ್ಲುಗಳ ಕಣಶಿಲೆಯ ಚಪ್ಪಡಿಗಳಲ್ಲಿ ಕಡೆದ ವೀರಗಲ್ಲುಗಳನ್ನು ವಿಜಯನಗರದವೆಂದು ಹೇಳಲಾಗಿದೆ. ಇಲ್ಲಿ ಮಹಿಳೆಯೋರ್ವಳು ಎದುರಾಳಿಯನ್ನು ಎದುರಿಸುತ್ತಿದ್ದ ಚಿತ್ರ ಇದೆ. ಇಂಥ ಶಿಲ್ಪಗಳಿಂದ ಮಹಿಳೆಯರು ಸೈನಿಕರಾಗಿದ್ದರೆಂದೂ, ಯುದ್ಧದಂಥ ಗಂಭೀರ ಕ್ಷೇತ್ರಗಳಲ್ಲಿ ಭಾಗಿಯಾಗಿದ್ದರು ಎಂದು ತಿಳಿಯಬಹುದು. ಅಲ್ಲದೆ ಮಹಾನವಮಿ ದಿಬ್ಬದ ಮೇಲಿನ ಉಬ್ಬು ಶಿಲ್ಪವೊಂದು ಮಹಿಳಾ ಅಂಗರಕ್ಷಕ ಪಡೆಯನ್ನು ಪ್ರತಿನಿಧಿಸುತ್ತದೆ. ವೈರಿಗಳನ್ನು ಕೊಲ್ಲಲು ‘ವಿಷಕನ್ಯೆ`ಯರನ್ನು ಸಹ ಬಳಸಿಕೊಂಡಿದ್ದರು. ಈ ವಿಷಕನ್ಯೆಯ ದೇಹವೆಲ್ಲಾ ವಿಷದಿಂದ ತುಂಬಿತ್ತು. ಇಂಥವಳನ್ನು ಸ್ಪರ್ಶ ಮಾಡಿದವರು ಸಾಯುತ್ತಿದ್ದರು. ಹಳೇಬೀಡಿನ ಹೊಯ್ಸಳೇಶ್ವರ ದೇವಾಲಯದ ಗೋಪುರದಲ್ಲಿ ವಿಷಕನ್ಯೆಯ ಶಿಲ್ಪ ಕಂಡುಬರುವುದು. ಇದರಿಂದ ಇಂಥ ವಿಷಕನ್ಯೆಯರು ಇರುತ್ತಿದ್ದರು ಎಂದು ತಿಳಿಯಬಹುದಾಗಿದೆ.

### ೪.೪ ಆರ್ಥಿಕತೆ, ಧಾರ್ಮಿಕತೆ ಮತ್ತು ಮಹಿಳೆ

ಪ್ರಾಚೀನ ಕರ್ನಾಟಕದ ಮಹಿಳೆಯರಂತೆ ಮಧ್ಯಕಾಲೀನ ಕರ್ನಾಟಕದ ಸಂದರ್ಭದಲ್ಲೂ ಮಹಿಳೆಯರು ಆರ್ಥಿಕವಾಗಿ ಸದೃಢರಾಗಿಯೂ, ಉದಾರ ಮನೋಭಾವನೆ ಹೊಂದಿದವರಾಗಿದ್ದರು. ಅಂತೆಯೇ ಹಲವು ಬಗೆಯ ಆರ್ಥಿಕ ಚಟುವಟಿಕೆಗಳಲ್ಲಿ ಮತ್ತು ದಾನ ದತ್ತಿಗಳಲ್ಲಿ, ದೇವಾಲಯ, ವಿಹಾರ, ಬಸದಿಗಳ ನಿರ್ಮಾಣದಂಥ ಪ್ರಕ್ರಿಯೆಗಳಲ್ಲಿ ತೊಡಗಿದ್ದರು. ಜೊತೆಗೆ ಕೆರೆ-ಕಾಲುವೆ-ಬಾವಿಗಳನ್ನು, ಗ್ರಾಮಗಳನ್ನು, ಛತ್ರಗಳನ್ನು ನಿರ್ಮಾಣ ಮಾಡಲು ಕಾರಣರಾಗಿದ್ದಾರೆ. ಇಂಥ ಮಹಿಳೆಯರನ್ನು ಕುರಿತಂತೆ ಈ ಭಾಗದಲ್ಲಿ ಗುರುತಿಸುವ ಪ್ರಯತ್ನ ಮಾಡಲಾಗಿದೆ.

### ಅ. ಭೂ ಮಾಲೀಕತ್ವ

ಮಧ್ಯಕಾಲೀನ ಸಂದರ್ಭದ ಮಹಿಳೆಯರು ಕೃಷಿ ಚಟುವಟಿಕೆಗಳಲ್ಲಿ ನಿರತರಾಗಿದ್ದರು. ಇದಕ್ಕೆ ಆಧಾರವಾಗಿ "ದಕ್ಷಿಣ ಕರಾವಳಿಯ ಮಹಿಳೆಯರು ಬೆಳೆಗಳನ್ನು ನಾಟಿ ಮಾಡುವ, ಕೊಯ್ಯುವ ಕಾರ್ಯಗಳಲ್ಲಿ ತೊಡಗಿದ್ದರು"[೫೭] ಎಂಬ ಉಲ್ಲೇಖಗಳಿವೆ. ಇದರಿಂದಾಗಿ ಮಹಿಳೆಯರು ಭೂಮಿಯನ್ನು ಕೊಳ್ಳುತ್ತಿದ್ದರು ಮತ್ತು ಸಂದರ್ಭ ಬಂದರೆ ಮಾರುತ್ತಿದ್ದುದು ಉಂಟು. ಉದಾಹರಣೆಗೆ ಕ್ರಿ.ಶ. ೧೪೦೧ರ ಶಾಸನ ಹೆಗ್ಗಡಿತಿ ಎಂಬಾಕೆ ಭತ್ತದ ಭೂಮಿಯನ್ನು ಪಡೆದಿದ್ದಳು[೫೮] ಎಂಬುದನ್ನು ದಾಖಲಿಸಿದೆ. ಭಟ್ಕಳ ತಾಲೂಕಿನ ಶಾಸನವು ಗುಮ್ಮೇಟೀನಾಯಕಿತಿಯ ಭೂಮಿಯ[೫೯] ವಿವರ ನೀಡುತ್ತದೆ. ಇನ್ನು ಮಹಿಳೆಯರು ಭೂಮಿಯನ್ನು ಮಾರಿದ್ದ ಬಗ್ಗೆ ಉಲ್ಲೇಖಗಳಿವೆ. ಗೇರುಸೊಪ್ಪೆಯ ರಾಣಿ ಪದುಮಲದೇವಿಯು ಮಲ್ಲಪ್ಪನಿಗೆ ಭೂಮಿಯನ್ನು[೬೦] ಮಾರಿದ್ದಳು. ಶಂಕರಮ್ಮ ಎಂಬುವವಳು ತಿಮ್ಮಿಶೆಟ್ಟಿಗೆ ಭೂಮಿಯನ್ನು[೬೧] ಮಾರಿದ ಬಗ್ಗೆ ಶಾಸನ ತಿಳಿಸುತ್ತದೆ. ಕೆಲವೊಂದು ವರ್ಗದ ಮಹಿಳೆಯರು "ಬಿಲ್ಲು-ಬಾಣಗಳ ತಯಾರಿಕೆ, ಬಟ್ಟೆ ನೇಯುವ-ಹೊಲೆಯುವ ಕಾರ್ಯಗಳಲ್ಲಿಯೂ, ಇನ್ನೂ ಕೆಲವರು ಹೂವಿನ ಹಾರಗಳನ್ನು ಮಾಡುತ್ತಿದ್ದು, ಬುಟ್ಟಿ, ಚಾಪೆ ಹೆಣೆಯುತ್ತಿದ್ದುದು"[೬೨] ತಿಳಿದುಬರುತ್ತದೆ. ಹೀಗೆ ಮಹಿಳೆಯರು ಹಲವು ಬಗೆಯ ಕುಶಲ ಕೆಲಸಗಳಲ್ಲಿ ನಿರತರಾಗಿದ್ದರು.

### ಆ. ವ್ಯಾಪಾರ-ವಾಣಿಜ್ಯ

ಕುಶಲ ಕಾರ್ಯಗಳಲ್ಲಷ್ಟೇ ಅಲ್ಲದೆ ವಾಣಿಜ್ಯ-ವ್ಯಾಪಾರಗಳಿಗೆ ಸಂಬಂಧಿಸಿದಂತೆಯೂ ಮಹಿಳೆಯರು ಯೋಜನೆಗಳನ್ನು ರೂಪಿಸಿದ್ದರು. ಅಲ್ಲದೆ ಅವುಗಳನ್ನು ಪಾಲಿಸುವಂತೆ ಕರೆ ಕೊಟ್ಟಿದ್ದಾರೆ. ಸೌವಿದಲ್ಲ ಕುಲದ ಸಿರಿಯಕ್ಕ ಧರ್ಮ ಸಂತೆಯಲ್ಲಿ ಆನೆ, ಕುದುರೆ ಮಾಣಿಕ್ಯ ಮೊದಲಾದವುಗಳನ್ನು ವ್ಯಾಪಾರ ಮಾಡಬೇಕು[೬೩] ಎಂದು ಹೇಳಿದ್ದಳು. ಇವಳಂತೆ ಹೊಯ್ಸಳರ ಅಭಿನವ ಕೇತಲದೇವಿ ಸಹ ಪ್ರತಿ ಬುಧವಾರ ಸಂತೆ ಮಾಡಬೇಕೆಂದು[೬೪] ಆಜ್ಞೆ ಹೊರಡಿಸಿ, ತನ್ನ ಆಜ್ಞೆಯನ್ನು ವ್ಯಾಪಾರಸ್ಥರು ಪಾಲಿಸಬೇಕು ಎಂದು ತಿಳಿಸಿದ್ದಳು. ದೇವಾಲಯದ ಕಾರ್ಯಗಳಿಗೆ ದತ್ತಿ ಬಿಡುತ್ತಿದ್ದ ಹಣವನ್ನೇ ಬಡ್ಡಿ ವ್ಯವಹಾರಕ್ಕೂ ಬಿಟ್ಟು, ಬಂದ ಬಡ್ಡಿಯಲ್ಲಿ ದೇವಾಲಯದ ದೇವರ ಕಾರ್ಯಗಳನ್ನು ಮಾಡುತ್ತಿದ್ದರು. ಹೊನ್ನಿಯವ್ವೆ ಎಂಬಾಕೆ ಹರಿಹರ ದೇವರಿಗೆ ಒಟ್ಟು ನಾಲ್ಕು ಗದ್ಯಾಣಗಳನ್ನು ದತ್ತಿಯಾಗಿ ಕೊಟ್ಟಿದ್ದಳು. ಆ ನಾಲ್ಕು ಗದ್ಯಾಣಗಳಲ್ಲಿ ಒಂದು ಗದ್ಯಾಣದ ಬಡ್ಡಿಯನ್ನು ವನಮಾಲೆಗೆ ಮತ್ತು ಮೂರು ಗದ್ಯಾಣಗಳ ಬಡ್ಡಿಯನ್ನು ನಂದಾದೀಪಕ್ಕೆ ನೀಡಬೇಕೆಂದು[೬೫] ಹೇಳಿದ್ದನ್ನು ಗಮನಿಸಬಹುದು. ಹೊನ್ನಿಯವ್ವೆಯ ಸಹೋದರಿ ಸಿರಿಯವ್ವೆ ಸಹ ಹರಿಹರ ದೇವರ ವನಮಾಲೆಗೆ, ನಂದಾದೀಪಕ್ಕೆ ಎಂದು ದತ್ತಿ ಬಿಟ್ಟ ಗದ್ಯಾಣಗಳ ಬಡ್ಡಿಯನ್ನು ಉಪಯೋಗಿಸಲು[೬೬] ತಿಳಿಸಿದ್ದಳು. ಕುಪ್ಪಗದೆಯ ಜಕ್ಕವ್ವೆ ಕೂಡ ಹರಿಹರ ದೇವರಿಗೆ ಮೂರು ಗದ್ಯಾಣ ನೀಡಿದ್ದು, ಅದರ ಬಡ್ಡಿಯ ಹಣವನ್ನು ಎರಡು ಹೂವಿನ ಮಾಲೆಗೆ ಮತ್ತು ಒಂದು ತುಳಸಿ ದಳಕ್ಕೆ ಖರ್ಚು ಮಾಡಬೇಕೆಂದು ಹೇಳಿದ್ದಳು. ಸೂಳೆಯರು ಸಹ ಬಡ್ಡಿ ವ್ಯವಹಾರದಲ್ಲಿ ನಿರತರಾಗಿದ್ದರು. ಹೊಯ್ಸಳೇಶ್ವರ ದೇವರ ಸೂಳೆಯು ಬಡ್ಡಿ ವ್ಯವಹಾರವನ್ನು[೬೭] ಹಳೇಬೀಡಿನ ಶಾಸನವೊಂದು ದಾಖಲಿಸಿದೆ. ಅಳತೆ-ತೂಕಗಳಿಗೂ ಸ್ತ್ರೀಯರ ಹೆಸರನ್ನು ಇಟ್ಟಿದ್ದನ್ನು

ತಿಳಿದುಬರುತ್ತದೆ. ಇದು ಸ್ತ್ರೀಯರ ಮೇಲಿದ್ದ ಗೌರವದ ಪ್ರತೀಕವೂ ಆಗಿರಬಹುದು. ಗುಡ್ಡಾಪುರದ ದಾನಮ್ಮನ ಹೆಸರಿನಿಂದ 'ದಾನಚಿಂತಮಣಿ ಘಳೆ' ಎಂಬ ಅಳತೆಗೋಲು[೭೮] ಇದ್ದುದನ್ನು ತಿಳಿಸುತ್ತದೆ.

### ಇ. ತೆರಿಗೆಗಳು

ಹಲವು ಬಗೆಯ ಆರ್ಥಿಕ ಚಟುವಟಿಕೆಗಳಲ್ಲಿ ತೊಡಗಿದ್ದ ಮಹಿಳೆಯರು ತಮ್ಮ ಆದಾಯಕ್ಕೆ ತಕ್ಕಂತೆ ತಾವು ಉಪಯೋಗಿಸುವ ವಸ್ತುಗಳಿಗೆ ತೆರಿಗೆಗಳನ್ನು ನೀಡುತ್ತಿದ್ದುದು ಸಹ ಉಂಟು. ಉದಾಹರಣೆಗೆ ಸೂಳೆಯರು ಸೂಳೆಯಾದರೆ 'ಕನ್ನಡಿವಣ' ತೆರಿಗೆ ಇತ್ಯಾದಿಗಳನ್ನು ನೀಡುತ್ತಿದ್ದರು. ಈ ಸೂಳೆಯರ ತೆರಿಗೆ ಸಂಗ್ರಹಿಸಲು ಅಧಿಕಾರಿಗಳ ಗುಂಪೊಂದು ಪ್ರತ್ಯೇಕವಾಗಿಯೇ ಇತ್ತು. ಉದಾಹರಣೆಗೆ ಅಚ್ಯುತರಾಯ ೧೨೦೦೦ ಜನರನ್ನು 'ಸೂಳೆ ಧರ' ತೆರಿಗೆ ವಸೂಲಿಗೆಂದು ನೇಮಿಸಿದ್ದನು. ಇಂಥ ತೆರಿಗೆಗಳನ್ನು ಕುರಿತು ಸ್ತ್ರೀವಾದಿ ಅಧ್ಯಯನಕಾರರು ಅಭ್ಯಾಸ ಮಾಡಬೇಕಿದೆ.

### ಈ. ಲೋಕಪಯೋಗಿ ಕಾರ್ಯಗಳು

ನೀರಿನ ಅವಶ್ಯಕತೆಯನ್ನು ತಿಳಿದುಕೊಂಡ ಮಹಿಳೆಯರು ನೀರಿಗಾಗಿ ಕೆಲವೊಂದು ಲೋಕೋಪಯೋಗಿ ಕಾರ್ಯಗಳಲ್ಲಿ ತೊಡಗಿ ಕೆರೆ-ಬಾವಿ-ಕಾಲುವೆಗಳನ್ನು ನಿರ್ಮಿಸಿದ್ದನ್ನು ಗಮನಿಸಬಹುದು. ಎಚಲದೇವಿ ಅರಿಸೀಕೆರೆಯ ಬಳಿ ಮುತ್ತನ ಪೂಸವೂರ ಕೆರೆಯನ್ನು ನಿರ್ಮಿಸಿದ್ದಳು ಎಂದು ತಿಳಿದುಬಂದಿದೆ. ಶಾಂತಲದೇವಿ ಶಾಂತಿ ಸಮುದ್ರವನ್ನು, ಮೇಚಲದೇವಿ ಮೇಚಲ ಸಮುದ್ರವನ್ನು ಭಗಿಬೆ ಕೋವುರೂರ ದೇಸಬೆಟ್ಟದ ಕೆಳಗೊಂದು ಕೆರೆ ಕಟ್ಟಿಸಿದ್ದಳು. ಶಾಂತಲದೇವಿ ಎಳಸನ ಕಟ್ಟಿದ ಕೆರೆಯನ್ನು ಜಕ್ಕಿಮವ್ವೆ ಜಕ್ಕಿಕಟ್ಟೆ ಕೆರೆ, ಮಾಚಿಯಕ್ಕ ಪದ್ಮಾವತಿಗೆರೆ, ಮಾಯಿದೇವಿಯು ಮಹಾಸಮುದ್ರ, ಹೆಗ್ಗಡೆಗಳ ತಾಯಿ ಮಹಾದೇವಿಯ ಕೆರೆ ಗುಜ್ಜವ್ವೆನಾಯಕಿತಿ ಕೆರೆ, ಕಾಚಿ ಸಮುದ್ರ ದೇಮರಸರಿಯ ಸೋಪಾನ ಬಾವಿ ಮೊದಲಾದವು. ಹೀಗೆ ಹಲವು ಕೆರೆ, ಕಾಲುವೆ, ಬಾವಿ, ಸಮುದ್ರಗಳು ನೀರಿಗಾಗಿ ರಚನೆಯಾದವು. ನೀರು ಎಷ್ಟು ಅವಶ್ಯಕವೋ ಆಹಾರವೂ ಅಷ್ಟೇ ಅವಶ್ಯಕ. ಹಸಿದು ಬಂದವರಿಗೆ ಆಹಾರ ಕೊಟ್ಟರೆ ಪುಣ್ಯವೆಂದು ತಿಳಿದು ಅನ್ನದ ದಾನಕ್ಕಾಗಿ ಸತ್ರಗಳನ್ನು ನಿರ್ಮಿಸಿದ್ದರು. ಇಂಥವುಗಳಿಗೆ ರಾಣಿಯರು, ಇತರರು ದಾನ-ದತ್ತಿ ನೀಡಿದ್ದಾರೆ. ಜಕ್ಕಿಯಬ್ಬೆ ಅರುವತ್ತು ಮತ್ತರು ಭೂಮಿಯನ್ನು[೭೯] ಸತ್ರಕ್ಕೆ ನೀಡಿದ್ದಳು. ಮಹಿಳೆಯರ ಹೆಸರಿನಲ್ಲಿ ಗ್ರಾಮಗಳು ನಿರ್ಮಾಣವಾಗಿದ್ದವು. ಉದಾಹರಣೆಗೆ ಕಮಲಾಪುರ, ಮರಿಯಮ್ಮನಹಳ್ಳಿ, ದೇವಾಲಪುರ, ನಾಗಲಾಪುರ, ಗೌರಿಬಿದನೂರು, ಚಿಕ್ಕಮಗಳೂರು, ದೊಡ್ಡಮಗಳೂರು, ರಾಣೇಬೆನ್ನೂರು ಮೊದಲಾದ ಊರುಗಳನ್ನು ಹೆಸರಿಸಬಹುದು.

### ಉ. ದಾನ ದತ್ತಿಗಳು

ಮಧ್ಯಕಾಲೀನ ಕರ್ನಾಟಕದ ಮಹಿಳೆಯರು ತಮ್ಮ ವೈಯಕ್ತಿಕ ಧರ್ಮಕ್ಕೂ ಹಾಗು ಇತರೆ ಧರ್ಮಗಳ ಬೆಳವಣಿಗೆಗೂ ಭೂಮಿ, ಹಣ, ಗದ್ದೆ, ತೋಟ ಮೊದಲಾದವುಗಳನ್ನು ದಾನವಾಗಿ ನೀಡಿದ್ದಾರೆ. ಜೊತೆಗೆ ಬಸದಿ, ದೇವಾಲಯಗಳನ್ನು ನಿರ್ಮಿಸಿರುವರು. ಶಾಂತಲದೇವಿ ಶಿಂದಘಟ್ಟದಲ್ಲಿ "ಪಾರ್ಶ್ವಜಿನೇಶ್ವರ ಗೇಹ" ಮಾಡಿಸಿ ಜಿನಜಸನ[೮೦] ಎಂದು ಗುರುತಿಸಿಕೊಂಡಿದ್ದಳೆಂದು ಹೇಳಲಾಗಿದೆ. ಶಾಂತಲೆ ಜೈನಧರ್ಮದ ಬೆಳವಣಿಗೆಗೆ

ಹಲವು ದಾನ-ದತ್ತಿ ನೀಡಿದ್ದನ್ನು ಈಕೆಯ ಬಿರುದುಗಳಾದ 'ಮುನಿಜನ ವಿನೇಯಜನ ವಿನೀತೆ, ಸಮ್ಯಕ್ತ ಚೂಡಾಮಣಿ, ಚತುಸ್ಸಮ ಸಮುದ್ಧರಣಕಾಣಿ, ಜಿನಸಮಯ ಸಮುದಿತ ಪ್ರಾಕಾರೆ, ಜಿನಧರ್ಮ ನಿರ್ಮಳೆ, ಜಿನಧರ್ಮ ಕಥಾಕಥನ ಪ್ರಮೋದೆ, ಜಿನಗಂಧೋದಕ ಪವಿತ್ರೀಕೃತೋತ್ತಮಾಂಗೆ' ಮೊದಲಾದವು ಸಾಬೀತು ಪಡಿಸುತ್ತವೆ. ಬೆಳ್ಗೊಳತೀರ್ಥದಲ್ಲಿ ಸವತಿಗಂಧವಾರಣ ಬಸದಿ ನಿರ್ಮಿಸಿ ಅಲ್ಲಿಯ ರಿಷಿಯರ ಆಹಾರಕ್ಕೆಂದು ಕಲ್ಕಣಿನಾಡ ಮಾಟ್ಟನವಿಲೆ ಗ್ರಾಮವನ್ನು ತನ್ನ ಗುರುಗಳಿಗೆ ನೀಡಿದ್ದಾಳೆ. ಹಾಗೂ ಬಸದಿಯ ಕಾರ್ಯಗಳಿಗಾಗಿ ಎಳಸನಕಟ್ಟುವ ಕೆರೆಯನ್ನು ಕಟ್ಟಿಸಿದ್ದಳು ಎಂಬ ಉಲ್ಲೇಖಗಳಿವೆ. ಸವತಿಗಂಧವಾರಣ ಬಸದಿಗೆ ಗದ್ದೆ, ತೋಟ, ಗದ್ಯಾಣಗಳನ್ನು ನೀಡಿದ್ದನ್ನು[೮೯] ಶಾಸನವು ದಾಖಲಿಸಿದೆ. ಶಾಂತಲೆ ಕೊಪ್ಪಳದಲ್ಲಿ ಬಸದಿಯೊಂದನ್ನು ಆಕೆಯ ಹೆಸರಿನಿಂದಲೇ ನಿರ್ಮಿಸಿದ್ದಳೆಂದು ಹೇಳಲಾಗಿದೆ. ಈಕೆ ವಿಷ್ಣುವರ್ಧನನಿಗೆ ಸಕಲ ಕಾರ್ಯೋದ್ಯೋಗದಲ್ಲಿ ಮಂತ್ರದೇವತೆ ಆಗಿದ್ದು ಹೊಯ್ಸಳರ ರಾಣಿಯರಲ್ಲೇ ಪ್ರಧಾನಳು.

ಮಂಡಲೇಶ್ವರಿಯರು ಸಹ ಜೈನಧರ್ಮದ ಬೆಳವಣಿಗೆಗೆ ಶ್ರಮಿಸಿದ್ದಾರೆ. ಪೋಚಿಕಬ್ಬೆ ಮತ್ತು ಈಕೆಯ ಸೊಸೆ ಲಕ್ಷ್ಮಿಮತಿಯರು ಪ್ರಧಾನರು. ಪೋಚಿಕಬ್ಬೆಯ ದಾನ ಮನೋಭಾವನೆಯನ್ನು[೯೦] ಶ್ರವಣಬೆಳಗೊಳ ಶಾಸನ ವಿವರಿಸುತ್ತದೆ. ಲಕ್ಷ್ಮೀಮತಿ ಶ್ರವಣಬೆಳಗೊಳದಲ್ಲಿ ಬಸದಿಯೊಂದನ್ನು[೯೧] ನಿರ್ಮಿಸಿದ್ದಳು. ಇಂದು ಆ ಬಸದಿಯೇ 'ಎರಡುಕಟ್ಟೆ ಬಸದಿ' ಎಂದು ಹೆಸರು ಬದಲಾಯಿಸಿಕೊಂಡಿರುವುದು ತಿಳಿದುಬರುತ್ತದೆ. ಲಕ್ಷ್ಮೀಮತಿ ಆಕೆಯ ತಂಗಿಗಾಗಿ (ಜಯಸ್ತಂಭ ಎಂಬಂತೆ) ಶಿಲಾಸ್ತಂಭವನ್ನು, ತಮ್ಮನಿಗಾಗಿ ನಿಷಧಿಯನ್ನು ನಿಲ್ಲಿಸಿದ್ದಳು ಎಂದೂ[೯೨] ಲಕ್ಷೀಮತಿಯು ತನ್ನ ಕಾರ್ಯಗಳಿಂದಾಗಿ ಗಂಗರಾಜನಿಗೆ ಜಯ ತರುವವಳೇ ಆಗಿದ್ದಳೆಂದು[೯೩] ಹೇಳಲಾಗಿದೆ.

ಜಕ್ಕಿಯವ್ವೆಯು ನಯಣದೇವರನ್ನು[೯೪] ಸ್ಥಾಪಿಸಿದ್ದಲ್ಲದೆ ಗೋವಿಂದವಾಡಿಯಲ್ಲಿ ದಾನಕೊಟ್ಟುದುದರ[೯೫] ಬಗ್ಗೆ ದಾಖಲೆಯೂ ಇದೆ. ಬಾಗಣಬ್ಬೆಯು ಗಂಗರಾಜನ ನಂತರವೂ ದಾನ ಧರ್ಮ ಕೈಗೊಂಡಿದ್ದನ್ನು[೯೬] ಶ್ರವಣಬೆಳಗೊಳ ಶಾಸನ ತಿಳಿಸುತ್ತದೆ. ದೇವಿಯಕ್ಕ ಸಹ ಜೈನಧರ್ಮದ ಬೆಳವಣಿಗೆಗೆ ಕಾರಣಳಾಗಿದ್ದನ್ನು ಶ್ರವಣಬೆಳಗೊಳದ ಶಾಸನ ದಾಖಲಿಸಿದೆ. ಶಾಂತಿಕಬ್ಬೆ ಮತ್ತು ಮಾಚಿಕಬ್ಬೆಯರು ಜಿನಗೃಹ[೯೭] ನಿರ್ಮಿಸಿರುವರು. ದೇಮಿಕಬ್ಬೆ ಸೆಟ್ಟಿತಿ ಚತುರ್ವಿಧ ದಾನ ವಿನೋದೆಯೆನಿಸಿದ್ದಳು ಹಾಗೂ ತ್ರಿಕೂಟ ಜಿನಾಲಯವನ್ನು ನಿರ್ಮಿಸಿ, ಶುಭಚಂದ್ರ ಸಿದ್ಧಾಂತ ದೇವರಿಗೆ ನೀಡಿದ್ದಳು ಎಂದು ಹೊಸಹೊಳಲು ಶಾಸನ ಉಲ್ಲೇಖಿಸುತ್ತದೆ. ಹರಿಯಲೆ ಕೊಡಂಗಿನಾಡ ಮಲೆವಡಿಯ ಹನ್ನಿಯೂರಿನಲ್ಲಿ ಚೈತ್ಯಾಲಯ ನಿರ್ಮಿಸಿದಳು. ಜೊತೆಗೆ ಅದರ ಜೀರ್ಣೋದ್ಧಾರಕ್ಕೆ, ಪ್ರತಿದಿನ ಪೂಜೆಗೆ, ರಿಷಿ, ಅಜ್ಜಿಯರ ಆಹಾರಕ್ಕಾಗಿ ಐದು ಹಣದ ಮಣ್ಣನ್ನು ನೀಡಿರುವಳು[೯೮] ಎಂದು ಹಂತೂರು ಶಾಸನ ವಿವರಿಸುತ್ತದೆ. ಕ್ರಿ.ಶ. ೧೧೮೧ರ ಕೋನಕೊಂಡಲ ಶಾಸನವು ನಾಲಿಕಬ್ಬೆ[೯೯] ಬಗ್ಗೆ ಉಲ್ಲೇಖಗಳನ್ನು ಕೊಟ್ಟಿದೆ. ಕ್ರಿ.ಶ. ೧೧೮೨ರ ಶಾಸನವು ಅಚಿಯಕ್ಕ ಶ್ರೀ ಪಾರ್ಶ್ವ ದೇವರೊಂದರ ಮಂದಿರವನ್ನು[೧೦೦] ನಿರ್ಮಿಸಿದಳು ಎಂದು ಉಲ್ಲೇಖಿಸಿದೆ. ಮಾಂಗಾಯಿ ಎಂಬಾಕೆ ತ್ರಿಭುವನ ಚೂಡಾಮಣಿ ಎಂಬ ಚೈತ್ಯಾಲಯ[೧೦೧] ಕಟ್ಟಿಸಿದ್ದಳೆಂದು ತಿಳಿದುಬರುತ್ತದೆ.

ಸಾವನ್ನ ಮಹಿಳೆಯರು ದಾನ-ದತ್ತಿ ನೀಡಿರುವುದು ಗಮನಾರ್ಹ. ಕವಡೆಯರ ಜಕ್ಕವೆ ಶಾಂತಿನಾಥದೇವರ ಅಷ್ಟವಿದ್ಯಾರ್ಚನೆಗೆ ನೇಮಿಚಂದ್ರ ಪಂಡಿತದೇವರಿಗೆ ಮುನ್ನೂರು ಮತ್ತರು ಬೆದ್ದಲೆಯನ್ನು

ಸರ್ವಬಾಧಾ ಪರಿಹಾರವಾಗಿ[೯೫] ನೀಡಿದ್ದಳು ಎಂದು ಹಳೇಬೀಡು ಶಾಸನ ಹೇಳಿದೆ. ದ್ವಾರಸಮುದ್ರದ ಜನರೆಲ್ಲಾ ಶಾಂತಿನಾಥ ದೇವರಿಗೆ ತಮ್ಮ ತಮ್ಮ ಅನುಕೂಲಕ್ಕೆ ತಕ್ಕಂತೆ ದಾನ ನೀಡಿರುವರು. ಈ ದಾನವನ್ನು ದೇವರ ಪೂಜೆ, ಅಭಿಷೇಕ, ಆರಾಧನೆಗೆ ಉಪಯೋಗಿಸಲಾಗಿದೆ. ಹೀಗೆ ದಾನ ಮಾಡಿದವರಲ್ಲಿ ಮಾಣಿಸಿರಿಯವ್ವೆ ಒಂದು ಗದ್ಯಾಣ, ಗುಣಮತಿಯವ್ವೆ ಒಂದು ಗದ್ಯಾಣ, ಕಾಮವೆ ಒಂದು ಗದ್ಯಾಣ, ಹಿರಿಯಕ್ಕ ನಾಲ್ಕು ಗದ್ಯಾಣ, ಕೇತಯ ಸಹಣಿಯ ಹೆಂಡತಿ, ಸೇನೆಭೋವ ಮಾದಯ್ಯನ ಹೆಂಡತಿ ಒಂದು ಗದ್ಯಾಣ, ಸಮತಿಯ ಮಾದವ್ವ ಒಂದು ಗದ್ಯಾಣವನ್ನು[೯೬] ನೀಡಿರುವುದನ್ನು ಶ್ರವಣಬೆಳಗೊಳದ ಶಾಸನ ತಿಳಿಸುತ್ತದೆ. ರಾಜವ್ವೆ ಸೆಟ್ಟಿತಿಯು ಕುಂಥುನಾಥ ತೀರ್ಥಂಕರನನ್ನು[೯೭] ಸ್ಥಾಪಿಸಿದ್ದನ್ನು ಗದುಗಿನ ಶಾಸನ ದಾಖಲಿಸಿರುತ್ತದೆ. ಪೋಚಿಕಬ್ಬೆ, ಲಕ್ಷ್ಮೀಮತಿ, ದೇಮತಿ, ದೇಮಿಕಬ್ಬೆ, ಹರಿಯಬ್ಬೆ, ಜಕ್ಕಿಯವ್ವೆ ಮೊದಲಾದವರು ಚತುರ್ವಿಧ ದಾನದಲ್ಲಿ ದಾನ-ದತ್ತಿಗಳನ್ನು ನೀಡಿರುವರು ಎಂದು ಕಂಡುಬರುತ್ತದೆ.

ಬನದಂಬಿಕೆ ಮುಳಗುಂದದಲ್ಲಿ ಚಂದ್ರನಾಥ ಬಸದಿಯನ್ನು ಕಟ್ಟಿಸಿದಳು. ಕೀರ್ತಿಯಬ್ಬೆಯು ಯುದ್ಧದಲ್ಲಿ ಗೆಲುವನ್ನು ಪಡೆದು ಜಿನಾಲಯ ವೀರಜಿನಾಲಯ ನಿರ್ಮಿಸಿರುವುದನ್ನು ಕಾಣಬಹುದು. ಲೋಕಲದೇವಿ ಎಂಬುವವಳು ಆವಲಿ ಗ್ರಾಮದಲ್ಲಿ ಶಾಂತಿನಾಥ ಜಿನಾಲಯ ನಿರ್ಮಿಸಿದ್ದು, ಅದನ್ನು ತ್ರೈವಿದ್ಯಾವಿದ್ಯಾಧರಂ ದೇವರಿಗೆ ದಾನವಾಗಿ ನೀಡಿರುವಳು. ಗಂಗಾಂಬಿಕೆಯು ಎಳೆವಾಳೆಪುರದಲ್ಲಿ ಶಾಂತಿನಾಥ ಬಸದಿ ಕಟ್ಟಿಸಿ ಸಿದ್ಧಾಂತಿ ದೇವರಿಗೆ ದಾನವಾಗಿ ನೀಡಿದ್ದಾಳೆ. ಕಲ್ಯಾಣದಲ್ಲಿ ಕ್ರಾಂತಿ ಉಂಟಾಗಿ ಬಸದಿಗಳು ಮರೆಯಾಗುತ್ತಿದ್ದಾಗ ಕಾಳಿಕಬ್ಬೆ ಎಂಬಾಕೆ ಮೂರು-ನಾಲ್ಕು ವರ್ಷಗಳ ನಂತರ ಮತ್ತೆ ಬಸದಿಗಳ ನಿರ್ಮಾಣಕ್ಕಾಗಿ ಗಂಡನನ್ನು ಕೇಳಿಕೊಂಡಳು. ರಾಮಕ್ಕ ಎಂಬಾಕೆ ನೇಮಿನಾಥ ಬಸದಿ ಕಟ್ಟಿಸಿದ್ದಳು.

ಮಧ್ಯಕಾಲೀನ ಕರ್ನಾಟಕದಲ್ಲಿ ಜೈನಧರ್ಮಕ್ಕೆ ದೊರೆತಷ್ಟು ಮಾನ್ಯತೆಯು ವೈಷ್ಣವ ಧರ್ಮಕ್ಕೂ ದೊರೆತಿದೆ ಎಂಬುದಕ್ಕೆ ನಾಡಿನ ತುಂಬ ಇರುವ ದೇವಾಲಯಗಳು, ಪ್ರಚಲಿತದಲ್ಲಿರುವ ವೈಷ್ಣವ ಧರ್ಮದ ತತ್ವಗಳೇ ಸಾಕ್ಷಿಯಾಗಿವೆ. ಶಾಂತಲೆ ಬೇಲೂರಿನಲ್ಲಿ ಚೆನ್ನಕೇಶವ ದೇವಾಲಯವನ್ನು,[೯೮] ಬಮ್ಮಲದೇವಿ ನಾಗಮಂಗಲದಲ್ಲಿ ಶಂಕರನಾರಾಯಣ ದೇವಾಲಯವನ್ನು ನಿರ್ಮಿಸಿದ್ದರು ಎಂಬ ಉಲ್ಲೇಖಗಳಿವೆ. ಕೇಶವಪುರದಲ್ಲಿ ಲಕ್ಷ್ಮೀದೇವಿ ಮತ್ತು ಸಿರಿದೇವಿಯರು ವೀರಕೇಶವನ್ನು[೧೦೦] ಸ್ಥಾಪಿಸಿ ದತ್ತಿ ನೀಡಿದ್ದ ಬಗ್ಗೆ ದಾಖಲೆಗಳಿವೆ. ಚೈಚಲಮಹಾದೇವಿ ಕೇಸಿಯಹಳ್ಳಿಯಲ್ಲಿ ಪ್ರಸನ್ನ ಮಾಧವ ದೇವರನ್ನು[೧೦೧] ಸ್ಥಾಪಿಸಿ ದತ್ತಿ ಕೊಟ್ಟಿದ್ದಳು. ಉಮಾದೇವಿ ನರಸಿಂಹದೇವರಿಗೆ ದತ್ತಿ ನೀಡಿ, ಹೂವನ್ನು ಕೊಡುವವನಿಗೆ ಎರಡು ಗದ್ಯಾಣ[೧೦೨] ನೀಡಿದ್ದಳು ಎಂದು ಶಾಸನ ಉಲ್ಲೇಖಿಸಿದೆ. ಸೋಮಲದೇವಿ ಲಕ್ಷ್ಮೀನರಸಿಂಹ ದೇವರನ್ನು[೧೦೩] ಸ್ಥಾಪಿಸಿದ್ದಳು ಎಂದು ದಾಖಲೆ ಇದೆ. ಭಾಗುಬಾಯಿ ನರಸಿಂಹದೇವರ ಅಂಗರಂಗಭೋಗ ನಂದಾದೀಪಕ್ಕೆ ಭೂಮಿ ಮನೆ ಗಣಗಳನ್ನು ನೀಡಿದ್ದಾಳೆ. ರೆಮ್ಮಾದೇವಿ ಹರಿಹರ ದೇವರಿಗೆ[೧೦೪] ದತ್ತಿ ಕೊಟ್ಟಿದ್ದಳು. ಮಾದಲದೇವಿ ಲಕ್ಷ್ಮೀನಾರಾಯಣ ದೇವರನ್ನು[೧೦೫] ಸ್ಥಾಪಿಸಿದ್ದಳೆಂದು ತಿಳಿದುಬರುತ್ತದೆ. ಅಂದು ದೇವಾಲಯವನ್ನು ಒತ್ತೆ ಹಾಕುವ ರೂಢಿಯಿತ್ತು. ಅಂತೆಯೇ ಅಗ್ರಹಾರ ಗೊರೂರಿನ ಶಾಸನವು ವಾಸುದೇವ ದೇವಾಲಯವನ್ನು ಶಂಖಚಕ್ರ ಕಲ್ಲುನೆಟ್ಟು, ಕ್ಷೇತ್ರ ಸಹಿತವಾಗಿ ನಂಬಿಯರು ಒತ್ತೆ ಹಾಕಿದ್ದರು. 'ತಂಗೆ ಪೆಣ್ಣಕ್ಕ' ಎಂಬುವವಳು ಒತ್ತೆಯನ್ನು ಬಿಡಿಸಿ, ಮುಂದೆ ಯಾರು ಒತ್ತೆ ಹಾಕುವಾರದೆಂದು ಅಂಥವರನ್ನು ರಾಜದ್ರೋಹಿ, ಸಮಯದ್ರೋಹಿ ಗಳ

ಸಮಯಕ್ಕೆ ಹೊರಗು[೧೦೫] ಎಂದು ಶಾಸನ ಬರೆಯಿಸಿದ್ದಳು. ಮಾಯೇವಿಯಕ್ಕ ಬೇಲೂರಿನ ಕೇಶವನಾಥ ದೇವರಿಗೆ, ಅಲ್ಲಿಯ ಜನರಿಗೂ ಮೂರು ಗದ್ಯಾಣ ದಾನವಾಗಿ[೧೦೬] ನೀಡಿದ್ದಳು. ತಿರುಮಲದೇವಿ ಮತ್ತು ವಿಜಯನಗರದ ಕೃಷ್ಣದೇವರಾಯ ತಿರುಮಲ ದೇವರಿಗೆ ಬಂಗಾರದ ಬಟ್ಟಲನ್ನು ನೀಡಿದ್ದರು. ಚಿನ್ನದೇವಿ ಸಹ ತಿರುಪತಿಯ ವೆಂಕಟೇಶ್ವರನಿಗೆ ನಿತ್ಯಪೂಜೆಗಾಗಿ ಬಂಗಾರದ ಕೊರಳಹಾರ ನೀಡಿದ್ದಳು.

ವೈಷ್ಣವ ಧರ್ಮ ಸಾಮಾನ್ಯ ಜನರನ್ನು ಒಳಗೊಂಡಿರದೆ, ಅರಸರುಗಳನ್ನು ಒಳಗೊಂಡಿತ್ತು. ಅಂತೆಯೆ ಮಹಿಳೆಯರನ್ನು ಆಕರ್ಷಿಸುವ ಬದಲು ಪುರುಷರನ್ನು ತನ್ನ ಕಾರ್ಯಗಳಿಗೆ ನಿಯುಕ್ತಿಗೊಳಿಸಿಕೊಂಡಿತ್ತು. ಮಹಿಳೆಯರನ್ನು ಉಪನಯನ, ಶಿಕ್ಷಣ, ಧಾರ್ಮಿಕ ಕಾರ್ಯ ಮೊದಲಾದವುಗಳಿಂದಲೂ ದೂರವಿಟ್ಟಿತ್ತು. ಹೀಗಾಗಿ ಈ ಧರ್ಮ ಮಹಿಳೆಯರಿಂದ ಅಷ್ಟಾಗಿ ಕೊಡುಗೆಗಳನ್ನು ಸ್ವೀಕರಿಸುವಲ್ಲಿ ವಿಫಲವಾಯಿತು. ಸ್ತ್ರೀವಾದಿ ಚಿಂತನಾ ನೆಲೆಯಿಂದ ಇಲ್ಲಿಯೂ ಅಧ್ಯಯನದ ಅವಶ್ಯಕತೆ ಇದೆ.

ತುಪ್ಪದ ಭಾಗಲದೇವಿ ಬಲ್ಲೇಶ್ವರ ದೇವರ ಕಾರ್ಯಗಳಿಗಾಗಿ ಕೆಲವು ಗದ್ಯಾಣಗಳನ್ನು ನೀಡಿ,[೧೦೭] ಅದನ್ನು ಬಡ್ಡಿಗೆ ನೀಡಬೇಕೆಂದೂ ತಿಳಿಸಿದಳು. ರೆಬ್ಬಲದೇವಿ ಶಿವಸ್ವಯಂಭೂಲಿಂಗವನ್ನು[೧೦೮] ಶಾಂತಲದೇವಿ ದಂಡನಾಯಕಿತಿ ಕೊಳತೂರಿನಲ್ಲಿ ಶಾಂತಲೇಶ್ವರ ದೇವಾಲಯವನ್ನು[೧೦೯] ಸ್ಥಾಪಿಸಿದ್ದರೆ, ಹೊಯ್ಸಳ ರಾಣಿಯರು, ಮಂಡಳೇಶ್ವರ,[೧೧೦] ರೇಕವ್ವೆ ದಣ್ಣಾಯಕಿತಿ, ಹಾಚಲೆ ಮೊದಲಾದವರು ಪ್ರಮುಖರಾಗಿದ್ದಾರೆ. ಕೆಲವು ಮಹಿಳೆಯರು, ರಾಣಿಯರು ಹಾಗೂ ಇತರೆರು ಸೇರಿಕೊಂಡು ಸಾಂಘಿಕವಾಗಿ ದಾನವನ್ನು ನೀಡಿರುವುದುಂಟು. ಸೋವೆನಾಯಕಿತಿ, ಮಚವೆನಾಯಕಿತಿ, ಪುತ್ರಿಯರಾದ ಸಾಂತವ್ವೆ, ಬೊಮ್ಮವ್ವೆಯರು ದ್ವಾರಸಮುದ್ರದ ಕೋಡಿಯಲ್ಲಿ ಉತ್ತುಂಗ ಶಿವಾಲಯ[೧೧೧] ನಿರ್ಮಿಸಿ, ವಿಷ್ಣುವರ್ಧನನಿಂದ ಗದ್ದೆ, ಬೆದ್ದಲು ಭೂಮಿಯನ್ನು ಪಡೆದು ದಾನವಾಗಿ ನೀಡಿದರು. ಬೊಪ್ಪಲೆಗವುಂಡಿ ಮಗನೊಂದಿಗೆ ರಾಮನಾಥ ದೇವರಿಗೆ,[೧೧೨] ಬಾದಾಮಿಯ ಮಾಕವ್ವೆ, ಆಕೆಯ ಗಂಡ ಚಂದಿಸೆಟ್ಟಿಯೊಂದಿಗೆ ಬಾಚಲೇಶ್ವರಾದಿ ಮಹಾಪುರಮ ಮಧ್ಯದಲ್ಲಿ ಹರಗ್ರಿಹಮಂ[೧೧೩] ಮಾಡಿಸಿದ್ದಳು. ಅಲ್ಲದೆ ಬಾಗಿಯಬ್ಬೆ ಮಗನೊಂದಿಗೆ ತ್ರಿಕೂಟಾಚಲ[೧೧೪] ನಿರ್ಮಿಸಿದಳು. ಗೌರಕ್ಕ ಮತ್ತು ಆಕೆಯ ಮಂಚಗೌಡ ಕೆಂಬಾಳಿನ ಮಲ್ಲಿಕಾರ್ಜುನ ದೇವರ ಅಂಗರಂಗಭೋಗಕ್ಕೆ ದತ್ತಿ ನೀಡಿದ್ದನ್ನು[೧೧೫] ಕೆಂಬಾಳ ಶಾಸನ ವಿವರಿಸುತ್ತದೆ.

ಲಿಂಗಮ್ಮನ ಗಂಡ ಕೆಳದಿಯ ಶಿವಪ್ಪನಾಯಕ. ಲಿಂಗಮ್ಮ ಕಳಸದ ಕಳಸೇಶ್ವರ ದೇವರಿಗೆ ಬಂಗಾರದ ಮುಖವಾಡಗಳನ್ನು ಕಾಣಿಕೆಯಾಗಿ ನೀಡಿದಳು. ಇದೇ ವಂಶದ ಮಲ್ಲಮ್ಮಾಜಿ ಎಂಬಾಕೆ ಗದುಗಿನ ತೋಂಟದಾರ್ಯ ಮಠಕ್ಕೆ ಚಿನ್ನದ ಪಾದುಕೆಗಳನ್ನು ಮಾಡಿಸಿಕೊಟ್ಟಳು. ವೀರಮ್ಮ ಎಂಬುವಳು ಇಕ್ಕೇರಿಯ ಮಠದ ದೇವಿಗೆ ಶಿವರಾತ್ರಿಯಂದು ಕಂಚಿನ ದ್ವಾರಪಾಲಕರ ಮೂರ್ತಿಗಳನ್ನು ನೀಡಿದಳು. ಚೆನ್ನವೀರಮ್ಮಾಜಿ ಕೊಲ್ಲೂರು ಮುಕಾಂಬಿಕೆಗೆ ಬೆಳ್ಳಿಯ ಕೊಡೆ ಕಾಣಿಕೆಯಾಗಿಸಿದಳು. ಕೆಳದಿಯ ರಾಣಿಯರು ಅನೇಕ ದಾನ ದತ್ತಿಗಳನ್ನು ನೀಡಿದ್ದಾರೆ.

ಕುತೂಹಲಕರವಾದ ಸಂಗತಿಯೆಂದರೆ ಮಹಿಳೆಯರು ಗೊರವಿ, ಗಣಕುಮಾರಿ ಪೂಜಾರಿಗಳಾಗಿ ಕಾರ್ಯ ನಿರ್ವಹಿಸುತ್ತಿದ್ದರು.[೧೧೬] ಬಲವ್ವೆ ಎಂಬಾಕೆಯು ಪಾದಪೂಜೆಯೊಂದಿಗೆ ಗುಡ್ಡವೆ ಗಣಮಕ್ಕೆ ದತ್ತಿ[೧೧೭] ವಿಷಯವಿದೆ. ಚಂಡವ್ವೆಯನ್ನು ಗಣಕುಮಾರಿ ಕಾರ್ಯ ನಿರ್ವಹಿಸಿದ್ದ ಬಗ್ಗೆ ದಾಖಲೆಗಳು ಇವೆ. ಅಲ್ಲದೆ

ಗಣಕುಮಾರಿಯರ ಬಗ್ಗೆ ಹಿರಿಯೂರು ಶಾಸನ ವಿವರಣೆ ನೀಡುತ್ತದೆ. ಜೊಪ್ಪವ್ವೆಯು ಕೂಡ ಗಣಕುಮಾರಿ ಎಂದು ಚಿಕ್ಕಮಗಳೂರು ಶಾಸನ ಉಲ್ಲೇಖಿಸಿದೆ. ಮಾವನೂರು ಶಾಸನವು ದೇವವ್ವೆ ಅಪ್ಪರಸನ ಹೆಸರಿನಲ್ಲಿ ಅಪ್ಪೇಶ್ವರ ದೇವಾಲಯ ನಿರ್ಮಿಸಿದಳೆಂದು ಹಾಗೂ ಪಾರ್ವತಿದೇವಿ ಸರ್ವ ಧರ್ಮಾಧಿಪತಿಯಾಗಿ ಕಾರ್ಯ ನಿರ್ವಹಿಸಿಕೊಂಡು ಹೋಗಿದ್ದನ್ನು ದಾಖಲಿಸಿರುತ್ತದೆ. ಇದರಿಂದ ಶೈವಧರ್ಮ ಸ್ತ್ರೀ-ಪುರುಷರಿಗೂ ಸಮಾನ ಅಧಿಕಾರ ನೀಡಿತ್ತು ಎನ್ನಬಹುದಾಗಿದೆ. ದೇವಸ್ಥಾನದ ಕಾರ್ಯ-ಕಲಾಪಗಳ ಹೊಣೆಗಾರಿಕೆಯನ್ನು ಗೃಹಿಣಿಯರು ಪಡೆದಿದ್ದರು. ಉದಾಹರಣೆಗೆ ದ್ವಾರಸಮುದ್ರದ ಬೋಚೇಶ್ವರದ ಸ್ಥಾನಿಕ ಮರಣ ಹೊಂದಿದ ಮೇಲೆ ಅವನ ಹೆಂಡತಿ ಬೈಚವ್ವೆ ಸಮಸ್ತ ಆಸ್ತಿ ಸ್ವೀಕರಿಸಿದ್ದಳು. ಸೂಳೆಯರು ಸಹ ದಾನದತ್ತಿ ನೀಡಿರುವರು. ಹೊಯ್ಸಳೇಶ್ವರ ದೇವರಿಗೆ ಆ ದೇವಾಲಯದ ಸೂಳೆಯರು ದಾನ ನೀಡಿ, ಶಿವರಾತ್ರಿಯ ಮಹಾಪರ್ವಕ್ಕೆ ಜಾಗರಣೆ ಮಾಡಿದವರಿಗಾಗಿ ಬಳಸಲು ಹೇಳಿದ್ದರು.

### ೪.೫ ಸಾಹಿತ್ಯ, ಶಿಕ್ಷಣ ಮತ್ತು ಮಹಿಳೆ

ಸಾಹಿತ್ಯ ಮತ್ತು ಶಿಕ್ಷಣದ ವಿಚಾರಗಳಲ್ಲಿ ಮಧ್ಯಕಾಲೀನ ಕಾಲಘಟ್ಟ ಪ್ರಾಚೀನ ಕಾಲಕ್ಕಿಂತ ಭಿನ್ನವಾಗಿದೆ. ಈ ಕಾಲಘಟ್ಟದಲ್ಲಿ ಕನ್ನಡ ಮತ್ತು ಸಂಸ್ಕೃತ ಭಾಷೆಯಲ್ಲಿ ಹಲವು ಕೃತಿಗಳು ರಚನೆಯಾದವು. ಅಲ್ಲದೇ ಎಂದೂ ಕಾಣದಷ್ಟು ಬಹು ಸಂಖ್ಯೆಯ ಎಲ್ಲ ವರ್ಗದ ಮಹಿಳೆಯರು ವಚನಕಾರ್ತಿಯರಾಗಿ ವಚನ ಸಾಹಿತ್ಯ ಸೃಷ್ಟಿಸಿದ್ದಾರೆ. ಅನೇಕ ವಚನಕಾರರು ಸ್ತ್ರೀಪರ ನಿಲುವುಗಳನ್ನು ಹೊಂದಿದವರು. ಆಸ್ಥಾನ ಮತ್ತು ದೇವಾಲಯಗಳಲ್ಲಿ ನೃತ್ಯ, ಸಂಗೀತ ಕಚೇರಿಗಳು, ಗೋಷ್ಠಿಗಳು ಜರುಗುತ್ತಿದ್ದವು. ಅಲ್ಲದೆ ಕೆಲವು ಉತ್ಸವ, ಹಬ್ಬ-ಹರಿದಿನಗಳಲ್ಲಿ ನೃತ್ಯವು ಪ್ರದರ್ಶಿಸಲ್ಪಡುತ್ತಿತ್ತು. ಅರಮನೆಯಲ್ಲಿನ ಅಂತಃಪುರದಲ್ಲಿ ಕಥೆ ಹೇಳುವ, ಲೆಕ್ಕಪತ್ರಗಳನ್ನು ಬರೆಯುವರು, ಕಣಿ ಹೇಳುವವರು, ಆರ್ಥಿಕ ಯೋಜನೆಗಳನ್ನು ರೂಪಿಸುವವರು ಇರುತ್ತಿದ್ದರು. ಅಲ್ಲದೆ ಮಹಿಳಾ ಸೈನಿಕ ತರಬೇತಿ ಕೇಂದ್ರಗಳು, ಕುಸ್ತಿ ಪಟುಗಳಾಗಲು ಮೊದಲಾದವುಗಳಿಗೆ ಅವಕಾಶವಿತ್ತು. ಮಹಿಳೆಯರಿಗೆ ಸಹ ಶಿಕ್ಷಣ ಕೊಡಿಸುವ ವ್ಯವಸ್ಥೆ ಇತ್ತು ಎಂದು ತಿಳಿದುಬಂದಿದೆ. ಆದರೆ ವಚನಕಾರರ ಹೊರತುಪಡಿಸಿ ಇನ್ಯಾವ ಶತಮಾನದಲ್ಲಿಯೂ ಸ್ತ್ರೀ ಶಿಕ್ಷಣಕ್ಕೆ ಅಷ್ಟಾಗಿ ಬೆಂಬಲ ದೊರೆತಿರಲಿಲ್ಲ. ಶಿಕ್ಷಣವು ಸಾಂಪ್ರದಾಯಕವಾಗಿರುತ್ತಿತ್ತು ಎಂದು ಹೇಳಬಹುದು. ಈ ಕಾಲದಲ್ಲಿ ಪ್ರಾಚೀನ ಕಾಲಕ್ಕಿಂತಲೂ ವ್ಯಾಪಕವಾಗಿ ಸಾಹಿತ್ಯ ರಚನೆಯಾಗಿದೆ. ಅನೇಕ ಕವಿಯತ್ರಿಯರು ಕಂಡುಬರುತ್ತಾರೆ. ಅನೇಕ ರಾಣಿಯರು ದಕ್ಷವಾಗಿ ಆಡಳಿತ ನಿರ್ವಹಿಸಿದ್ದಾರೆ. ಅಂದರೆ ಇವರೆಲ್ಲಾ ಆಡಳಿತದ ಜ್ಞಾನ ಹೊಂದಿದವರಾಗಿಯೂ ಇದ್ದರು.

ಮಧ್ಯಕಾಲೀನ ಕರ್ನಾಟಕದಲ್ಲಿ ಹನ್ನೆರಡನೆಯ ಶತಮಾನ ಕನ್ನಡ ಸಾಹಿತ್ಯಕ ಚರಿತ್ರೆಯಲ್ಲಿಯೇ ಪ್ರಧಾನವಾಗಿದೆ. ಸ್ತ್ರೀಯರ ಧ್ವನಿಯನ್ನು ಪ್ರತಿನಿಧಿಸುವ ಸಾಹಿತ್ಯವು ರಚನೆಯಾಯಿತು. ಇವರು ಪ್ರಾಚೀನ ಮತ್ತು ತಮ್ಮ ಸಮಕಾಲೀನ ಸಂದರ್ಭದ ಸಮಾಜ, ಧಾರ್ಮಿಕ, ಆರ್ಥಿಕ, ಸಾಹಿತ್ಯಕ ಮೊದಲಾದ ನೆಲೆಗಳಲ್ಲಿನ ತಾರತಮ್ಯಗಳನ್ನು ಗುರುತಿಸಿ, ಈ ತಾರತಮ್ಯಗಳಿಗೆ ವರ್ಗ, ಲಿಂಗ, ಜಾತಿ ಮೊದಲಾದವು ಮೂಲಭೂತ ಕಾರಣಗಳೆಂದು ಕಂಡುಕೊಂಡರು. ಅಲ್ಲದೆ ಇವುಗಳಿಂದಲೇ ಸಮಾಜದಲ್ಲಿ ಅಸಮಾನತೆ ಉಂಟಾಗಿ ಶೋಷಣೆ, ದಬ್ಬಾಳಿಕೆ ಮೊದಲಾದವುಗಳು [illegible] ಅರಿತರು. ಈ ಅಸಮಾನತೆಯಿಂದ ಮಾರ್ಗಗಳು [illegible]

ಅವಶ್ಯಕತೆ ಇದೆ ಎಂದು ಅರಿಯುವಂತೆ ಆಯಿತು. ಈ ಬದಲಾವಣೆಯನ್ನು ಕಾಣಲು ಎಲ್ಲ ಬಗೆಯಲ್ಲೂ ಸಮಾನತೆಯ ತತ್ತ್ವ ಅನುಸರಿಸಿದರು. ಅಂಥ ಸಮಾನತೆಗಳಲ್ಲಿ ಲಿಂಗ ಸಮಾನತೆಯು ಒಂದಾಗಿದೆ. ಇದುವರೆಗಿನ ಪುರುಷ ಪ್ರಧಾನ ಸಮಾಜ ಹೆಣ್ಣು ಸ್ವಾತಂತ್ರ್ಯಕ್ಕೆ ಅರ್ಹಳಲ್ಲ ಎಂದು ಆಕೆಯ ಬಗ್ಗೆ ಕೀಳು ಅಭಿಪ್ರಾಯಗಳನ್ನು ಹೊಂದಿದ್ದಿತು. ಆದರೆ ಈ ಕಾಲಘಟ್ಟದಲ್ಲಿ ನೀಡಿದ ಸಮಾನತೆಯಿಂದಾಗಿ ಅನೇಕ ಮಹಿಳೆಯರು ವಿಭಿನ್ನ ವರ್ಗ, ಜಾತಿಗಳಿಂದ ಬಂದು ವಚನಕಾರರ ಸಂಗಡ ಸೇರಿಕೊಂಡರು. ಈ ವಚನಕಾರ್ತಿಯರು ಸಮಾಜದಲ್ಲಿನ ಅಸಮಾನತೆಗಳನ್ನು ಅಂಕುಡೊಂಕುಗಳನ್ನು ಪ್ರಶ್ನಿಸಿ ಪ್ರತಿಭಟಿಸಿದರು. ಈ ಪ್ರತಿರೋಧವು ವಚನಗಳಲ್ಲಿ ಅಭಿವ್ಯಕ್ತಗೊಂಡಿದೆ. ಗಮನಾರ್ಹ ಅಂಶವೆಂದರೆ ವಚನಕಾರರು ಸ್ತ್ರೀಯರಿಗೆ ಸಮಾನತೆ ನೀಡಿ, ತಮ್ಮ ಸಂಗಡ ಎಲ್ಲ ವರ್ಗದ ಮಹಿಳೆಯರನ್ನು ಸೇರಿಸಿಕೊಂಡು ವಚನಗಳನ್ನು ರಚಿಸಲು ಅನುವು ಮಾಡಿಕೊಟ್ಟದ್ದು. ಇದು ಅಲ್ಲಿಯ ತನಕ ಪುರುಷ ಸಮಾಜ ಹೆಣ್ಣನ್ನು ಕಂಡ ನೆಲೆಗಿಂತ ಭಿನ್ನವಾಗಿ ಕಾಣುವಂತೆ ಆಯಿತು. ಹೆಣ್ಣನ್ನು ಪ್ರತ್ಯಕ್ಷ 'ದೇವತೆ' ಎಂದು ಕರೆದಿರುವುದೂ ಉಂಟು. ಸಮಾಜದಲ್ಲಿನ ಲಿಂಗಭೇದವನ್ನು ಗುರುತಿಸಿ ಇದು ಒಂದು ಬಗೆಯಲ್ಲಿ ತೋರಿಕೆಯ ಕಾರಣದಿಂದ ಹೇಳಿದ್ದೇ ಹೊರತು, ಮೂಲಭೂತವಾದುದಲ್ಲ ಎಂದು, ವಚನಗಳ ಮುಖೇನ ಅಭಿವ್ಯಕ್ತಿಸಿದರು. ಅಂತೆಯೇ ಅನೇಕ ವಚನಗಳು ಕೂಡ ಸ್ತ್ರೀವಾದಿ ನಿಲುವನ್ನು ನಿರ್ವಚಿಸುತ್ತವೆ.

### ಅ. ವಚನಕಾರರ ಸ್ತ್ರೀಪರ ನಿಲುವು

### ೧. ಆತ್ಮ - ಲಿಂಗಭೇದದ ಕಲ್ಪನೆ

ಆತ್ಮಕ್ಕೆ ಲಿಂಗಭೇದವಿಲ್ಲ ಎಂದು ವಚನಕಾರರು ಘೋಷಿಸಿದ್ದು ಸ್ತ್ರೀ ಸಮಾನತೆಯ ಮೊದಲ ಮಂತ್ರ. ಜೈವಿಕ ಭಿನ್ನತೆಗಳನ್ನು ಮುಂದೆ ಮಾಡಿಕೊಂಡು ಸ್ತ್ರೀ-ಪುರುಷರೆಂಬ ಭೇದವನ್ನು ಉಂಟು ಮಾಡಿ, ಆತ್ಮದ ಅಭೇದತ್ವವನ್ನೇ ಗಂಡು ಮರೆತಿದ್ದ. ಅಂತರಂಗ ಬಹಿರಂಗಗಳ ಸಾಮರಸ್ಯದ ಸಾಧಕರಾದ ವಚನಕಾರರು ಪ್ರಧಾನವಾಗಿ ಆತ್ಮದ ಲಿಂಗಭೇದವನ್ನು ಕಂಡುಕೊಂಡರು. ಹಾಗೂ ಅದನ್ನೇ ಎತ್ತಿ ಹಿಡಿದು ಸ್ತ್ರೀ-ಪುರುಷರ ಭೇದದ ಮೂಲಬೇರನ್ನೇ ಅಲುಗಾಡಿಸಿದ್ದು ಗಮನಾರ್ಹ. "ಮೊಲೆ ಬಂದರೆ ಹೆಣ್ಣು ಎಂದೂ, ಮೀಸೆಕಾಸೆ ಬಂದರೆ ಗಂಡೆಂದು ಹೇಳುವವರು, ಇವರಿಬ್ಬರ ನಡುವಿನ ಆತ್ಮವನ್ನು ಹೆಣ್ಣು, ಗಂಡು ಎಂದು ಹೇಗೆ ಗುರುತಿಸುವುದು" ಎಂದಿದ್ದಾರೆ. ಅಲ್ಲದೆ "ನೀಡಿದೊಂದು ಕೋಲುವನ್ನು ಎರಡು ಭಾಗ ಮಾಡಿ, ಮೇಲಿನ ಭಾಗವನ್ನು ಗಂಡೆಂದು, ಕೆಳಭಾಗವನ್ನು ಹೆಣ್ಣೆಂದು ಗುರುತಿಸಿ, ಅದರ ಮಧ್ಯದಲ್ಲಿ ಮುರಿದು ಸುಟ್ಟರೆ ಬರುವ ಕಿಚ್ಚು ಗಂಡೋ, ಹೆಣ್ಣೋ ಎಂದು ಹೇಗೆ ಗುರುತಿಸಲು ಸಾಧ್ಯವಿಲ್ಲವೋ ಹಾಗೇ ಸ್ತ್ರೀ-ಪುರುಷರ ಆತ್ಮಕ್ಕೂ ಭೇದವಿಲ್ಲ" ಎಂದು ತಿಳಿಸಿದ್ದಾರೆ. ಇದನ್ನೇ ಅಂಬಿಗರ ಚೌಡಯ್ಯ ತನ್ನ ವಚನಗಳಲ್ಲಿ -

"ಮೊಲೆ ಮುಡಿ ಬಂದಡೆ ಹೆಣ್ಣೆಂಬರು
ಗಡ್ಡ ಮೀಸೆ ಬಂದೆಡೆ ಆ ಪಿಂಡವನು ಗಂಡೆಂಬರು
ನಡುವೆ ಸುಳಿವಾತ್ಮನು ಹೆಣ್ಣು ಅಲ್ಲ, ಗಂಡೂ ಅಲ್ಲ"

- ಎಂದು ಸಮರ್ಥಿಸುತ್ತಾನೆ. ಇದರಂತೆ ಚಂದಿಮರಸನ ವಚನವೊಂದು ಸಹ "ಸ್ತ್ರೀಯಲ್ಲ ಪುರುಷನಲ್ಲ

ನಪುಂಸಕನಲ್ಲ ಆತ್ಮನೆಂದರಿಯಬಹುದಲ್ಲದೆ ಕಾಣಸಬಾರದು''[illegible] ಎಂದು ಹೇಳಿದ್ದಾನೆ. ಕೋಲಶಾಂತಯ್ಯನು ಆತ್ಮಭೇದವನ್ನು ನಿರಾಕರಿಸಿ ಸ್ತ್ರೀ-ಪುರುಷರಿಬ್ಬರಿಗೂ ಸುಖ-ದುಃಖ ಸಹ ಇರುತ್ತವೆ ಎಂದಿದ್ದಾನೆ. ಹೀಗೆ ವಚನಗಳ ಮುಖೇನ ಲಿಂಗಭೇದವನ್ನು ಅಲ್ಲಗಳೆದು ಇಡೀ ಸೃಷ್ಟಿಯೇ ಸ್ತ್ರೀಯೆಂದೂ ಲಿಂಗವೇ ಗಂಡು ಎಂದು ಶರಣಸತಿ, ಲಿಂಗಪತಿ ಎಂದು ಅರ್ಥೈಸಿದರು.

### ೨. ಮೋಕ್ಷದ ಗ್ರಹಿಕೆ

ಪ್ರಾಚೀನ ಮತ್ತು ಮಧ್ಯಕಾಲೀನ ಸಂದರ್ಭದಲ್ಲಿ ಜನರೆಲ್ಲ ಸ್ವರ್ಗಕ್ಕೆ ಹೋಗಬೇಕೆಂದು, ಅದಕ್ಕೆ ಮೋಕ್ಷ ಅವಶ್ಯಕವೆಂದು ತಿಳಿದುಕೊಂಡಿದ್ದರು. ಇಂಥ ಮೋಕ್ಷವನ್ನು ಪಡೆಯಲು ಹಲವು ಆಚಾರ-ಪದ್ಧತಿಗಳನ್ನು ಕೂಡ ಆಚರಿಸುತ್ತಿದ್ದುದು ಕಂಡುಬರುತ್ತದೆ. ಪ್ರತಿಯೊಬ್ಬರು ಮೋಕ್ಷ ಪಡೆಯಲು ಬಯಸಿ ಜೀವನದ ಪರಮ ಧ್ಯೇಯವೇ ಮೋಕ್ಷವೆಂದು ಅದನ್ನು ಪಡೆಯಲು ಪರಿತಪಿಸುತ್ತಿದ್ದಾಗ ಹೆಣ್ಣಿಗೆ ಮಾತ್ರ ಮೋಕ್ಷ ಇಲ್ಲ ಎನ್ನಲಾಗಿತ್ತು. ಈ ಮೋಕ್ಷವನ್ನು ಹೆಣ್ಣು ಪಡೆಯಬೇಕಾದರೆ ಆಕೆ ಮತ್ತು ಗಂಡಾಗಿ ಜನಿಸಬೇಕು ಎಂಬ ಅಭಿಪ್ರಾಯಗಳು ರೂಢಿಯಲ್ಲಿದ್ದವು. ಇದರಿಂದಾಗಿಯೂ ಹೆಣ್ಣು ಕೀಳು ಎಂಬ ರೂಢಿಯೇ ವ್ಯಾಪಕವಾಯಿತು. ಈ ರೂಢಿಯೇ ಹೆಣ್ಣನ್ನು ಶೋಷಣೆಗೆ ಗುರಿ ಮಾಡಿತು. ಮೋಕ್ಷ ಪಡೆಯುವವರಿಗೆಲ್ಲಾ ಹೆಣ್ಣು ಅಡ್ಡಿ, ಮಾಯೆ ಎಂದು ದೂರಿದರು. ಇಂಥ ಸಂದರ್ಭದಲ್ಲಿ ವಚನಕಾರರು ಹೆಣ್ಣು ಮಾಯೆಯೂ ಅಲ್ಲ ಅಡ್ಡಿಯೂ ಅಲ್ಲ. ಆಕೆ ಪ್ರತ್ಯಕ್ಷ ದೇವತೆ ಎಂದು ತಿಳಿಸಿದರು. ಜೊತೆಗೆ ಮೋಕ್ಷ ಸಂಪಾದಕರಿಗೆ ಅವರುಗಳ ಮನಸ್ಸು, ಆಸೆಗಳೇ ತಡೆಯಾಗಿರುತ್ತವೆಯಾದ್ದರಿಂದ ಮನಸ್ಸಿನ ಆಸೆಗಳನ್ನು ನಿಗ್ರಹಿಸಬೇಕು ಎಂದು ವಚನಗಳ ಮೂಲಕ ದಾಖಲಿಸಿದರು. ಹೆಣ್ಣು ಹೊನ್ನು, ಮಣ್ಣು ಮಾಯೆ ಎಂದೂ, ಅದರಲ್ಲಿಯೂ ಹೆಣ್ಣು ಪ್ರಧಾನಗಳೆಂದು ತಿಳಿದಿದ್ದರು. ಅಂತೆಯೇ ಅನೇಕರು ತಮ್ಮ ಸಾಧನೆಗೆ ಹೆಣ್ಣು ಅಡ್ಡಿ ಎಂದು ಸಹ ದೂರಿದರು. ಈ ಸಮಯದಲ್ಲಿ ವಚನಗಳ ಮೂಲಕ ಮನದ ಆಸೆಯೇ ಮಾಯೆ ಎಂದು ತಿಳಿಸಿದ್ದಾರೆ.

''ಹೆಣ್ಣು ಹೆಣ್ಣಲ್ಲ, ಹೆಣ್ಣು ರಾಕ್ಷಸಿಯಲ್ಲ
ಹೆಣ್ಣು ಪ್ರತ್ಯಕ್ಷ ಕಪಿಲಸಿದ್ಧ ಮಲ್ಲಿಕಾರ್ಜುನ''

- ಎಂದು ಹೆಣ್ಣಿನಲ್ಲಿ ದೇವತ್ವವನ್ನು ಕಂಡರು. ಆಕೆ ದೇವತ್ವಕ್ಕೇರಲು ಅವಕಾಶವನ್ನು ನೀಡಿದರು. ಚೆನ್ನ ಬಸವಣ್ಣನವರ ವಚನವು -

''ಇಲ್ಲದ ಮಾಯೆಯನುಂಟು ಮಾಡಿಕೊಂಡು
ಬಲ್ಲತನಕ್ಕೆ ಬಾಯಿಬಿಡಲೇಕೊ?''

- ಎಂದು ಕೇಳಿದರು. ಹೀಗೆ ಮೋಕ್ಷಕ್ಕೆ ಅರ್ಹಳಲ್ಲ ಮಾಯೆ, ಅಡ್ಡಿ ಎಂಬುವುಗಳನ್ನು ನಿರಾಕರಿಸಿದ್ದಲ್ಲದೆ ಮಹಿಳೆಯು ಪುರುಷನಂತೆ ಒಂದು ಜೀವ ಎಂಬ ಭಾವನೆಯನ್ನು ಮೂಡಿಸಿದರು.

### ೩. ಹೆಣ್ಣು ಅಸ್ಪೃಶ್ಯತೆ

ಹೆಣ್ಣಿನ ನೈಸರ್ಗಿಕ ಕ್ರಿಯೆಯಾದ ಋತುಚಕ್ರದ ಸಂದರ್ಭದಲ್ಲಿ ವೈದಿಕ ಪರಂಪರೆಯು ಹೆಣ್ಣನ್ನು

ಕೀಳು ಎಂದೂ, ಶೂದ್ರರ ಸಾಲಿಗೆ ಸೇರಿದಾಕೆ ಎಂದು ಕಂಡಿತ್ತು. ಹೀಗಾಗಿ ಹೆಣ್ಣು ವೇದಾಧ್ಯಯನ, ಮಂತ್ರ ಪಠಣ, ಶ್ರವಣ ಮತ್ತು ಉನ್ನತ ಧಾರ್ಮಿಕ ಕಾರ್ಯಗಳನ್ನು ಮಾಡುವುದರಿಂದ ವಂಚಿತಳಾಗಿದ್ದಳು. ಇಂಥ ಸ್ಥಿತಿಯಿಂದಲೂ ಹೆಣ್ಣಿನ ಶೋಷಣೆ ಆಗುತ್ತಿತ್ತು. ಅಲ್ಲದೆ ಗಂಡಿಗೆ ಶ್ರೇಷ್ಠತೆಯನ್ನು ಕಲ್ಪಿಸಿಕೊಡುತ್ತಿತ್ತು. ಹೆಣ್ಣಿನ ಈ ದಯನೀಯ ಸ್ಥಿತಿಯನ್ನು ಕಂಡು ವಚನಕಾರರು ''ಹೊಲೆಗಂಡಲ್ಲದೆ ಪಿಂಡದ ನೆಲೆಗಾಶ್ರಯ ವಿಲ್ಲ''[೧೨೬] ''ಹೊಲೆಯುಂಟೆ ಲಿಂಗವಿದ್ದೆಡೆಯಲ್ಲಿ?''[೧೨೭] ''ಸತಿ ಭಕ್ತೆಯಾದರೆ ಹೊಲೆಗಂಜಲಾಗದು''[೧೨೮] ''ಮನದ ಸೂತಕ ಹಿಂಗಿದಡೆ ತನುವಿನ ಸೂತಕಕ್ಕೆ ತೆರಹುಂಟೆ?''[೧೨೯] ಎಂದು ತಿಳಿಸಿ ಸ್ತ್ರೀಯರನ್ನು ಸೂತಕದ ಪಾತಕದಿಂದ ಬಿಡುಗಡೆ ಮಾಡಿದರು. ಭಕ್ತೆಯಾದ ಬಳಿಕ ಹೆಣ್ಣಿಗೆ ಭವಿತನವಿಲ್ಲ. ಆಕೆ ಮಾಡಿದ ಅಡುಗೆ ಶುದ್ಧ ಪವಿತ್ರಪಾಕ ಎಂದು ಹೇಳುವುದರ ಮುಖೇನ ಋತುಚಕ್ರದ ಸಂದರ್ಭದಲ್ಲಿಯೂ ಆಕೆ ಮಾಡಿದ ಅಡುಗೆ ಅಪವಿತ್ರ ಅದನ್ನು ಗುರುವಿಗೆ (ಧಾರ್ಮಿಕ ಕಾರ್ಯಗಳಲ್ಲಿ) ನೀಡಲಾಗದು ಎಂದು ನಂಬಿದ್ದವರಿಗೆ ಅವರ ಅಭಿಪ್ರಾಯವನ್ನು ಬಿಡುವಂತೆ ಹೇಳಿ, ಅಂಥ ಆಚರಣೆಯನ್ನು ತಳ್ಳಿಹಾಕಿದರು. ಇದನ್ನು ಚೆನ್ನಬಸವಣ್ಣ ತನ್ನ ವಚನಗಳಲ್ಲಿ ಹೀಗೆ ಹೇಳಿದ್ದಾನೆ.

''ಭವಿಯ ಮನೆಯಲ್ಲಿ ಭವಿಪಾಕವಲ್ಲದೆ
ಭಕ್ತನ ಮನೆಯಲ್ಲಿ ಭವಿಪಾಕವಿಲ್ಲವಯ್ಯ
ಆ ಭಕ್ತನ ಸ್ತ್ರೀಯು ಲಿಂಗ ಮುಂತಾಗಿ ಗುರುಲಿಂಗ ಜಂಗಮಕ್ಕೆ ಬೇಕೆಂದು
ಭಕ್ತಿರತಿಯಿಂದೆ, ಲಿಂಗಹಸ್ತದಿಂದ ಮಾಡಿದ ದ್ರವ್ಯ ಸಕಲ ಪದಾರ್ಥಗಳೆಲ್ಲಾ
ಶುದ್ಧಪಾಕ, ಅತ್ಯಂತ ಪವಿತ್ರಪಾಕವು
ಅದು ಲಿಂಗಕ್ಕೆ ಸಲ್ಲುವುದು; ಅದನತಿಗಳೆದಡೆ ದ್ರೋಹವಯ್ಯ
ಆ ಭಕ್ತಿ ಪದಾರ್ಥವನು ಲಿಂಗಕ್ಕೆ ಕೊಟ್ಟು ಕೊಳಬೇಕಯ್ಯ
ಕೂಡಲ ಚೆನ್ನಸಂಗಮದೇವಾ''[೧೩೦]

ಆ ಮೂಲಕ ಹೆಣ್ಣು ಅದುವರೆಗೂ ಅಸ್ಪೃಶ್ಯಳು ಎಂದು ತಿಳಿದಿದ್ದವರ ಅಭಿಪ್ರಾಯವನ್ನು ಬದಲಾಯಿಸಲು ಪ್ರಯತ್ನಿಸಿದ. ಇದರಿಂದಾಗಿ ಸ್ತ್ರೀಯು ಎಲ್ಲಾ ಸಂದರ್ಭಗಳಲ್ಲಿ ಎಲ್ಲ ಕಾರ್ಯಗಳಲ್ಲಿ ಸಮಭಾಗಿತ್ವವನ್ನು ಹೊಂದಲು ಸಾಧ್ಯವಾಗಿ ಸ್ವತಂತ್ರವಾಗಿ ಜೀವಿಸಲು ಅವಕಾಶವಾಯಿತು.

### ೪. ದೀಕ್ಷೆಯ ಪರಿಕಲ್ಪನೆ

ಇದುವರೆಗಿನ ವೈದಿಕ ಸಂಸ್ಕೃತಿಯಲ್ಲಿ ಹೆಣ್ಣಿಗೆ ಧಾರ್ಮಿಕ ಸ್ವಾತಂತ್ರ್ಯ ನೀಡದೆ ಇದ್ದುದರಿಂದ ಆಕೆಗೆ ಪಾರಮಾರ್ಥವನ್ನು ಕುರಿತಂತೆ ಚಿಂತಿಸಲು ಸಹ ಅನುವು ಇರಲಿಲ್ಲ. ಒಂದು ವೇಳೆ ಮಹಿಳೆ ಚಿಂತಿಸಿದರೂ ಅವುಗಳು ಆಕೆಗೆ ದೊರೆಯದ ಗಗನ ಕುಸುಮಗಳಾಗಿದ್ದವು. ಇದರಿಂದಾಗಿ ಸ್ತ್ರೀಯರು ಆತ್ಮೋದ್ಧಾರದ ಆಸೆಯೇ ಇಲ್ಲದೆ ಬದುಕುತ್ತಿದ್ದರು. ಇದನ್ನು ಕಂಡ ವಚನಕಾರರು ಆತ್ಮದ ಏಕತೆಯನ್ನು ಗುರುತಿಸಿ, ಆ ಆತ್ಮ ದೇವನಾಗುವಲ್ಲಿ ಸ್ತ್ರೀ-ಪುರುಷರೆಂಬ ತೋರಿಕೆಯ ಭೇದಗಳು ಅಡ್ಡಿ ಅಲ್ಲ ಎಂದು ತಿಳಿಸಿದರು. ಅಲ್ಲದೆ ಆವರೆಗಿನ ಹೆಣ್ಣಿಗೆ ಆತ್ಮೋದ್ಧಾರದ ಮುಚ್ಚಿದ ಬಾಗಿಲನ್ನು ತೆರೆದು, ಅರಿವಿನ ಜ್ಯೋತಿರ್ಲಿಂಗದ ದರ್ಶನ ಮಾಡಿಸಿದರು. ಉದಾಹರಣೆಗೆ ಅಕ್ಕಮಹಾದೇವಿಗೆ ಶ್ರೀಗುರು ಲಿಂಗದೇವರಿಂದ, ಮುಕ್ತಾಯಕ್ಕ ಸೋದರ

ಅಜಗಣ್ಣನಿಂದ ಅಕ್ಕನಾಗಮ್ಮ ಮತ್ತು ನೀಲಮ್ಮರಿಗೆ ಬಸವಣ್ಣನಿಂದ, ಗಂಗಮ್ಮನಿಗೆ ಸಿದ್ಧರಾಮನಿಂದ, ಮಹಾದೇವಿ ಮೋಳಿಗೆಗೆ ಮಾರಯ್ಯನಿಂದ ಇನ್ನೂ ಮೊದಲಾದವರಿಗೆ ದೀಕ್ಷೆ ನೀಡಿದ್ದು ದಾಖಲಾರ್ಹ. ಅಲ್ಲದೆ ಶರಣರಲ್ಲಿ ಲಿಂಗದೀಕ್ಷೆ ಅಷ್ಟಾವರಣ ಲಾಂಛನ ಷಟ್‌ಸ್ಥಳ, ಸಾಧನೆಯಮರ್ಮ, ಪಂಚಾಚಾರಗಳ ನಿಯಮ, ಗುರುಲಿಂಗ ಜಂಗಮ ನಿಷ್ಠೆ ಇವು ಸ್ತ್ರೀ-ಪುರುಷರಿಬ್ಬರಿಗೂ ಒಂದೇ ಎಂದು ಹೇಳಲಾಯಿತು.

### ೫. ಪರಸ್ತ್ರೀ ಚಿಂತನೆ

ವಚನಕಾರರು ನೈತಿಕ ನಡವಳಿಕೆಗೆ ಮೊದಲ ಆದ್ಯತೆಯನ್ನು ನೀಡಿದ್ದರು. ಈ ಮೌಲ್ಯಗಳಿಂದಲೇ ನವೀನ ಸಮಾಜ ಕಟ್ಟಲು ಬಯಸಿದ್ದರು. ನೈತಿಕ ನಡವಳಿಕೆಗಳಲ್ಲಿ ಪುರುಷರು ಸ್ತ್ರೀಯರನ್ನು ಕಾಣಬೇಕಾದ ಬಗೆ ವಿನೂತನವೂ ವಿಶಿಷ್ಟವೂ ಆಗಿತ್ತು. ಮಾತೃಪ್ರಧಾನ ಕುಟುಂಬಗಳ ನಾಶದ ಬಳಿಕ ಅಸ್ತಿತ್ವಕ್ಕೆ ಬಂದಿದ್ದ ಪಿತೃಪ್ರಧಾನ ಕುಟುಂಬಗಳ ಸಾಮಾಜಕ ವ್ಯವಸ್ಥೆಯಲ್ಲಿ 'ಅಬಲೆ' ಎನಿಸಿಕೊಂಡ ಹೆಣ್ಣು ಪುರುಷನಿಂದ ಅನೇಕ ಬಗೆಯ ಶೋಷಣೆಯನ್ನು ಅನುಭವಿಸುತ್ತ ಪ್ರತಿರೋಧಗಳನ್ನು ವ್ಯಕ್ತಪಡಿಸುತ್ತ ನಡೆದಿದ್ದಳು. ಪುರುಷನು ಹೆಣ್ಣೆಂದರೆ ಕೇವಲ ಭೋಗದ ವಸ್ತು ಎಂದು ಭಾವಿಸಿದ್ದ. ಆಕೆಯ ಮೇಲೆ ಕಾಮದೃಷ್ಟಿ ಬೀರುತ್ತಾ ದೌರ್ಜನ್ಯ ಎಸಗುತ್ತಿದ್ದ. ಸಂದರ್ಭ ಸಿಕ್ಕರೆ ಹೆಣ್ಣಿನ ಶೀಲಹರಣಕ್ಕೂ ಹೇಸುತ್ತಿರಲಿಲ್ಲ. ಅಸಹಾಯಕಳಾದ ಮಹಿಳೆಯು ಕೂಡ ಗಂಡಿನ ಕಾಮಪಿಪಾಸೆಗೆ ಬಲಿಯಾಗಿ ತನ್ನ ಶೀಲವನ್ನು ಕಳೆದುಕೊಂಡು ಸಮಾಜದ ನಿಂದನೆಗೂ ಗುರಿಯಾಗುತ್ತಿದ್ದಳು. ಇದನ್ನು ಕಂಡ ವಚನಕಾರರು ಹೆಣ್ಣಿನ ಪರ ವಹಿಸಿ ಪುರುಷನ ನೋಟವನ್ನೇ ಬದಲಾಯಿಸಲು ಪ್ರಯತ್ನಿಸಿದರು. ತಮ್ಮ ವಚನಗಳಲ್ಲಿ ಕುರಿತಂತೆ ''ಪರವಧು, ಪರಧನವನ್ನು ಬಯಸಬಾರದು'' ಅವುಗಳನ್ನು ತೆಗೆದುಕೊಳ್ಳಬಾರದು ಎಂಬ ಹಠ ಪುರುಷನಿಗೆ ಇರಬೇಕು ಎಂದಿದ್ದರು. ದೇವರನ್ನು ನೋಡುವ ಕಣ್ಣಿನಿಂದ ಅನ್ಯ ಹೆಣ್ಣನ್ನು ಕಂಡಿದ್ದೇ ಆದರೆ ಲಿಂಗ ಕಾಣಿಸದು ಎಂದು ನುಡಿದರು. ಪರಧನ ಪರಸ್ತ್ರೀಯರನ್ನು ವಿಸರ್ಜಿಸಿ ಶಿವನನ್ನು ಪೂಜಿಸಲು ಬಯಸಿದ್ದು ಕಂಡುಬಂದಿದೆ. ಅನ್ಯ ಸ್ತ್ರೀಯರನ್ನು ನೋಡಲು ಬಾರದು, ಮಾತಾನಾಡಿಸಬಾರದು ಎಂದು ''ತಗರ ಬೆನ್ನಲಿ ಹರಿವ ಸೊಣಗನಂತೆ ಬೇಡ ಕಾಣಿರೊ ಒಂದಾಸೆಗೆ ಸಾಸಿರ ವರುಷ ನರಕದಲ್ಲಿಕ್ಕುವ ಕೂಡಲ ಸಂಗಮದೇವಯ್ಯಾ''[೧೩೧] ಎಂದು ಹೇಳಿದ್ದನ್ನು ಕಾಣಬಹುದು. ಇದರಂತೆ ''ಪರಸ್ತ್ರೀಯರನ್ನು ಕೂಡದೆ ಇರುವುದೇ ಶೀಲ''[೧೩೨] ಎಂದೂ ಅಂಗನೆಯರ ಸಂಗವ ಬಿಟ್ಟರೆ ಶೀಲವಂತೆ[೧೩೩] ಎಂದು ಹೇಳಿದ್ದರು. ಪರರ ಹೆಣ್ಣುಮಕ್ಕಳನ್ನು ತಾಯಿಯೆಂದು ಕಾಣಬೇಕು ಎಂದು ತಿಳಿಸುತ್ತ -

''ಗಂಡನುಳ್ಳ ಹೆಂಡಿರ ಕಂಡು ಅಳುಪದಿರಾ ಮನವೆ
ಬಂದ ಬಸಿರ ಉಂಡ ಮೊಲೆಯ ಕಂಡು ಮರುಗದಿರಾ ಮನವೆ''[೧೩೪]

- ಎಂದು ವಚನಗಳ ಮೂಲಕ ದಾಖಲಿಸಿದ್ದಾರೆ. ಅಲ್ಲದೆ ಪರಸ್ತ್ರೀಯರು ಪಾರ್ವತಿಯ ಸಮಾನ ಎಂಬ ನೋಟ ವಚನಕಾರರದು. ''ಮುನ್ನ ಪರಸತಿ ಪಾರ್ವತಿಯೆಂದು ನಡೆಸಿತ್ತು ನುಡಿಸಿತ್ತು ಗುರುವಚನ''[೧೩೫] ಎಂದಿದ್ದರು. ಶಿವಭಕ್ತರು ಕೈಲಾಸಕ್ಕೆ ಹೋಗಿದ್ದರೆ ಅವರವರ ಹೆಂಡತಿಯರನ್ನು ಪಾರ್ವತಿಯ ಸಮಾನ ಎಂದು ಕಾಣಬೇಕು ಎಂದಿದ್ದರು. ಕೆಲವೊಮ್ಮೆ ಬಿರುಸಾದ ಮಾತುಗಳಿಂದಲೂ ಹೇಳಿರುತ್ತಿದ್ದರು.

"ಸ್ವ ಸ್ತ್ರೀಯಿರಲ್ಕೆ ಪರಸ್ತ್ರೀಗಳುಪುವರು

ಸತ್ತನಾಯ ಭಕ್ಷಿಸುವ ಹಡಕಿಗರನೇನೆಂಬೆನಯ್ಯ ರಾಮನಾಥ"೧೩೬

- ಎಂದು ತಿಳಿಸಿದ್ದಾರೆ. ಇವರು ನೀತಿಸಂಹಿತೆ ಕೇವಲ ಪುರುಷರಿಗೆ ಮಾತ್ರ ಸೀಮಿತವಾಗಿಲ್ಲ. ಅದು ಸ್ತ್ರೀಯರನ್ನೂ ಒಳಗೊಳ್ಳುತ್ತದೆ. ಸಮಾಜದ ಮುಖ್ಯ ಘಟಕಗಳಾದ ಸ್ತ್ರೀ-ಪುರುಷರಿಬ್ಬರಿಗೂ ನೈತಿಕ ಹೊಣೆಗಾರಿಕೆ ಇರಬೇಕು. ಒಳ್ಳೆಯ ಆಚಾರ, ಗುಣಗಳು ಬೇಕು ಎಂದು ಹೇಳಿದ್ದರು. ಒಟ್ಟಿನಲ್ಲಿ ಪರ ಸ್ತ್ರೀಯರನ್ನು ಪುರುಷನ ಕಾಮಪಿಪಾಸೆಯಿಂದ ಮುಕ್ತರನ್ನಾಗಿಸಲು ಪ್ರಯತ್ನಿಸಿದರು ಎನ್ನಬಹುದು.

## ೬. ದಾಂಪತ್ಯ ಧರ್ಮ

ಬುದ್ಧ, ಮಹಾವೀರ ಮೊದಲಾದವರು ಸಂಸಾರವನ್ನು ಬಿಟ್ಟು ಸನ್ಯಾಸತ್ವವನ್ನು ಸ್ವೀಕರಿಸಿದ್ದರು. ಇವರಂತೆ ಜನಸಾಮಾನ್ಯರು ಸಹ ಮೋಕ್ಷ ಸಂಪಾದನೆಗೆ ಸನ್ಯಾಸತ್ವ ಪಡೆಯಲು ಬಯಸಿದರು. ಹೀಗೆ ಸಂಸಾರಿಗಳೆಲ್ಲ ತ್ಯಜಿಸಿದ್ದರಿಂದ ಹೆಣ್ಣು ಮೇಲಿಂದಮೇಲೆ ಶೋಷಣೆಗೆ ಒಳಗಾಗಬೇಕಾಯಿತು. ಅಲ್ಲದೆ ಕೆಲವರು ಸಂಸಾರ ತ್ಯಜಿಸಿ ಕಪಟ ಸನ್ಯಾಸಿಗಳಾಗಿದ್ದುದನ್ನು ಕಂಡುಕೊಂಡ ವಚನಕಾರರು ಮೋಕ್ಷ ಮತ್ತು ಸಿದ್ಧಿ ಸಾಧನೆಗೆ ಸಂಸಾರ ಬಿಡಬಾರದೆಂದೂ ದಾಂಪತ್ಯ ಜೀವನವು ಶ್ರೇಷ್ಠವೆಂದು ಸಾರಿದರು. ನೈಸರ್ಗಿಕವಾದ ಇಂದ್ರಿಯ ಸುಖವನ್ನು ಅನುಭವಿಸುವುದೆ ಪರಿಪೂರ್ಣ ಜೀವನದ ಅಪರಿಪೂರ್ಣ ಎಂದರು. ಸಂಸಾರ ವ್ಯಕ್ತಿಯ ಸಾಧನೆ-ಸಿದ್ಧಿಗಳನ್ನು ಆತಂಕಕಾರಿಯಲ್ಲ. ಬದಲಾಗಿ ಸಿದ್ಧಿ ಸಾಧನೆಗೆ ಪ್ರೇರಕ-ಪೂರಕವಾಗಿವೆ ಎನ್ನಲಾಯಿತು. ಹೀಗಾಗಿ ದಾಂಪತ್ಯ ಧರ್ಮವೇ ಶ್ರೇಷ್ಟವೆಂದು ಸಾರಿದರು. "ಇಂದ್ರಿಯ ನಿಗ್ರಹ ಮಾಡಿದರೆ ಬಂದು ಕಾಡುವ ದೋಷಂಗಳು ಮುಂದೆ ಬಂದು ಕಾಡುವವು ಪಂಚೇಂದ್ರಿಯಗಳು" ಎಂದು ತಿಳಿಸಿ, "ಸತಿ-ಪತಿ ರತಿಸುಖವ ಬಿಟ್ಟರೆ ಸಿರಿಯಾಳ ಚೆಂಗಳೆಯರು? ಸತಿಪತಿ ರತಿಭೋಗೋಪಭೋಗವಿಳಾಸವ ಬಿಟ್ಟನೆ ಸಿಂಧುಬಲ್ಲಾಳ?"೧೩೭ ಎಂದು ಪ್ರಶ್ನಿಸಿದರು. ಹೀಗಾಗಿ ಇಂದ್ರಿಯ ನಿಗ್ರಹವನ್ನು ನಿರಾಕರಿಸಿದರು. ವಚನಕಾರರು ಇಂದ್ರಿಯ ನಿಗ್ರಹ ಮಾಡಿ ಆತ್ಮವಂಚನೆ ಮಾಡಿಕೊಳ್ಳುವುದಕ್ಕಿಂತ ಸುಖವನ್ನು ಹೊಂದುವುದು ಸರಿಯಾದ ಬಗೆಯೆಂದು ಅರಿತರು.

"ಹೊನ್ನು ಬಿಟ್ಟು ಮಣ್ಣು ಬಿಟ್ಟು ಬ್ರಹ್ಮಚಾರಿಗಳಾಗಬೇಕೆಂದು ನುಡಿವ ಅಣ್ಣಗಳ ಪರಿಯ ನೋಡಿರೇ. ಹೆಣ್ಣು ಬಿಟ್ಟಡೆಯೂ ಹೊನ್ನು ಬಿಡರಿ ಹೊನ್ನ ಬಿಟ್ಟಡೆಯೂ ಮಣ್ಣು ಬಿಡರಿ ಒಂದ ಬಿಟ್ಟಡೆಯೂ ಒಂದು ಬಿಡರಿ. ಬ್ರಹ್ಮಚಾರಿಗಳೆಂತಪ್ಪರಿ ಹೇಳಿರಣ್ಣಾ? ಹೆಣ್ಣು ಬಿಟ್ಟು ಬ್ರಹ್ಮಚಾರಿಗಳಾಗಬೇಕೆಂದು ಅವರೆಂತು ಹೇಳಿದರು? ನಿವೇಂತು ಕೇಳಿದಿರೆ? ಹೆಣ್ಣನು ಹೆಣ್ಣೆಂದರುವಿರಿ, ಹೊನ್ನನ್ನು ಹೊನ್ನೆಂದಿರುವಿರಿ ಮಣ್ಣನ್ನು ಮಣ್ಣೆಂದಿರುವಿರಿ ಬ್ರಹ್ಮಚಾರಿಗಳೆಂತಪ್ಪಿರಣ್ಣಾ? ಬಿಟ್ಟದೆ, ಹೆಣ್ಣು, ಹೊನ್ನು, ಮಣ್ಣು ಈ ಮೂರನ್ನು ಬಿಟ್ಟು ನಿರಾಭಾರಿ ಜಂಗಮನಾಗಿ ಜ್ಞಾನದಲ್ಲಿ ಸುಳಿಯಬಲ್ಲಡೆ ಭವಂ ನಾಸ್ತಿ ತಪ್ಪದು, ಹಿಡಿದಡೆ ಈ ಮೂರನ್ನು ಹಿಡಿದು, ಗುರುಲಿಂಗ ಜಂಗಮಕ್ಕೆ ಸದ್ಭಕ್ತಿಯಿಂದ ದಾಸೋಹವ ಮಾಡಬಲ್ಲಡೆ ಭವಂ ನಾಸ್ತಿತಪ್ಪದು ಅಲ್ಲಿ ಇದ್ದರೆಯೂ ನೀರಾತಾವರೆಯಂತಿಪ್ಪರು"೧೩೮ ಎಂದು ಹೇಳಿರುವರು. "ಭಕ್ತನ ಮನ ಹೆಣ್ಣಿನೊಳಗಾದಡೆ ಪಿಶಾಚವಾಗಿ ಕೊಡುವುದು, ಭಕ್ತ ಮನ ಮಣ್ಣಿನೊಳಗಾದಡೆ, ಕೊಂದು ಅಲಯುವ ಮಾಡುವುದು. ಭಕ್ತನ ಮನ ಹೊನ್ನಿನೊಳಗಾದಡೆ ಬಳಲಿ ದೊರಕಿಸುವುದು ನೋಡಾ ಕಪಿಲಸಿದ್ಧ ಮಲ್ಲಿಕಾರ್ಜುನ"೧೩೯ ಎಂದಿದ್ದಾರೆ.

ಹೀಗೆ ದಾಂಪತ್ಯ ಜೀವನಕ್ಕೆ ಮಾನ್ಯತೆಯಿತ್ತ ವಚನಕಾರರು ಸತಿಪತಿಯರ ಹೊಂದಾಣಿಕೆಗೆ ಮಹತ್ವ ನೀಡಿದರು. ''ಸತಿಪತಿಗಳೊಂದಾದ ಭಕ್ತಿ ಹಿತವಾಗಿಪ್ಪುದು ಶಿವಂಗೆ''[೧೮೦] ಎಂಬ ಜೇಡರ ದಾಸಿಮಯ್ಯನ ಮಾತು ಅನೇಕ ವಚನಕಾರರಲ್ಲಿ ಪ್ರತಿಧ್ವನಿಸಿದೆ. ವಚನಕಾರರು ದಾಸಿ ವೇಶ್ಯೆಯರಿಂದಲೂ ದೂರ ಇರುವಂತೆ ಹೇಳಿದರು ಅಲ್ಲದೆ 'ಅಂಗೀಕರಿಸಿದ ಹೆಣ್ಣನ್ನು ಬಿಟ್ಟರೆ' ಅಘೋರ ನರಕದಲ್ಲಿಕ್ಕುವ' ಎಂದು ತಿಳಿಸಿದ್ದಾರೆ.

**ಆ. ವಚನಕಾರರ ಇತರೆ ಅಂಶಗಳ ಚಿಂತನೆ**

ವಚನಕಾರರು ಸ್ತ್ರೀಪರ ನಿಲುವನ್ನು ತಮ್ಮ ವಚನಗಳ ಮುಖೇನ ವ್ಯಕ್ತಪಡಿಸಿದ್ದರೂ, ಅವರು ಪುರುಷ ಪ್ರಧಾನ್ಯಗೊಂಡ ಗುಣಗಳಿಂದ ಹೊರತಾಗಿ ಇರಲಿಲ್ಲ. ಇದನ್ನು ಅನೇಕ ವಚನಗಳಲ್ಲಿ ಗಮನಿಸಬಹುದು. ''ಹೆಣ್ಣು ಹೊನ್ನು, ಮಣ್ಣಿಗಾಗಿ ಸತ್ತಿರುವರು. ಅವುಗಳಲ್ಲಿ ಪ್ರಧಾನವಾಗಿ ಹೆಣ್ಣಿಗಾಗಿ ಸತ್ತು ಸಾಧನೆ ಮರೆತರು''[೧೮೧] ಎಂದು ಆಪಾದಿಸಲಾಗಿದೆ. ಹೆಣ್ಣನ್ನು ಮಾಯೆ ಎಂದು ಹೇಳಿರುವರು. ಬಸವಣ್ಣ ಸಹ ಹೆಣ್ಣನ್ನು 'ಮಾಯೆ' ಎಂದು ತಾಯಿ, ಮಗಳು ಹೆಂಡತಿ ಈ ಎಲ್ಲ ರೂಪದಲ್ಲೂ ಹೆಣ್ಣು ಮಾಯೆಯಾಗಿ ಕಾಡುತ್ತಾಳೆ[೧೮೨] ಎಂಬ ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದಾರೆ. ಅರಿವಿನ ಮಾರಿತಂದೆ ''ಬ್ರಹ್ಮಂಗೆ ಸರಸ್ವತಿಯಾಗಿ, ವಿಷ್ಣುವಿಗೆ ಲಕ್ಷ್ಮಿಯಾಗಿ, ರುದ್ರನಿಗೆ ಉಮಾದೇವಿಯಾಗಿ ಕಾಡಿತ್ತು ಮಾಯೆ''[೧೮೩] ಎಂದು ಹೇಳಿದನು. ತೋಂಟದ ಸಿದ್ಧಲಿಂಗ ಯತಿಗಳು ಹೆಣ್ಣನ್ನು ಭೂತಕ್ಕೆ ಹೋಲಿಸಿದರು. ಹೆಣ್ಣು ಪುರುಷನನ್ನು ಹಿಡಿದು, ಹಿಸುಕಿ, ಕೊಂದು, ತಿಂದು, ತೇಗಿ, ಹೀರಿ, ಹಿಪ್ಪೆಮಾಡಿ, ಗಾರುಗೊಳಿಸುತ್ತಾಳೆ''[೧೮೪] ಎಂದು ಭಾವಿಸಿದರು. ಹೆಂಡದ ಮಾರಯ್ಯ ತನ್ನ ವೃತ್ತಿಯನ್ನೇ ಪ್ರತೀಕವಾಗಿಸಿ'' ಮಣ್ಣೆಂಬ ಘಟದ ಮಧ್ಯದಲ್ಲಿ ಹೊನ್ನೆಂಬ ಸುರೆ ಹುಟ್ಟಿತ್ತು. ಹೆಣ್ಣೆಂಬ ಬಟ್ಟಲಲ್ಲಿ ಅಂತು ಈಂಟಲಾಗಿ ಲಹರಿ ತಲೆಗೇರಿತ್ತು[೧೮೫] ಎಂದು ಹೆಣ್ಣನ್ನು ಸುರೆ ಕುಡಿವ ಬಟ್ಟಲೆಂದು ಮಾಪನ ಕಟ್ಟಿದ.

**೧. ಗೃಹಿಣಿ**

ಹೆಣ್ಣು ಸಂಸಾರಕ್ಕೆ ಅನುಕೂಲಕರವಾಗಿ ಇರಬೇಕೆಂದು ವಚನಕಾರರ ನಿರೀಕ್ಷೆ ಆಗಿತ್ತು. ''ಜಂಗಮಭಕ್ತಿ ಗಂಡನುಳ್ಳ ಸಜ್ಜನ ಸತಿಯಂತಿರಬೇಕು, ಹೊಯ್ದಡೆ ಬಯ್ದಡೆ ಜರೆದಡೆ ಕೋಪಿಸಿದಡೆ ನಿಂದಿಸಿದಡೆ ಅಳಲಿಸಿದಡೆ ಬಳಲಿಸಿದಡೆ ಪುರುಡಿಸಿದಡೆ ಆತನ ಗುಣವ ನೋಡದೆ ತನ್ನ ಗುಣವ ಬಿಡದೆ ಇರ್ದಡೆ ಪತಿವ್ರತೆ ಎನಿಸುವಳು''[೧೮೬] ಎಂಬ ಬಹು ವಿಸ್ತಾರವಾದ ವಿವರಣೆಯನ್ನು ನೀಡಿ ಗಂಡನನ್ನು ಅನುಸರಿಸಿ ಬಾಳಬೇಕಾದ ನಿರೀಕ್ಷೆಯನ್ನು ಸೂಚಿಸುತ್ತದೆ. ''ನಾರಿಗೆ ಗುಣವೆ ಶೃಂಗಾರ''[೧೮೭] ಮುಂತಾದ ಮಾತುಗಳಲ್ಲಿ ಪುರುಷ ಪ್ರಧಾನವಾದ ಪಾರಂಪರಿಕ ಸೇವೆಯನ್ನು ಹೆಣ್ಣಿನಿಂದ ನಿರೀಕ್ಷಿಸುವ ಭಾವನೆಯು ಇರುವುದು ತಿಳಿದುಬರುತ್ತದೆ. ಇಂಥ ನಿರೀಕ್ಷೆಯನ್ನು ಜೇಡರ ದಾಸಿಮಯ್ಯ ಮತ್ತು ದುಗ್ಗಲೆಯ ಮದುವೆ ಆಗುವ ಮುಂಚೆ ಅವಳನ್ನು ಪರೀಕ್ಷೆಗೆ ಒಳಪಡಿಸಿದ ಕತೆಯನ್ನು ಗಮನಿಸಬಹುದು.[೧೮೮]

**೨. ಜಾತಿ**

ವಚನಕಾರರು ಜಾತಿಯ ವಿಷಯದಲ್ಲಿ ಭಿನ್ನತೆಯನ್ನು ಮೆರೆದಿದ್ದಾರೆ. ಜನರು ತಮ್ಮ ಪೂರ್ವದ ಕುಲಾಚಾರಗಳ ಕಾರ್ಯಗಳನ್ನು ಬಿಟ್ಟು ಶರಣರಾಗಿ ಭಕ್ತರಾಗಿ ಇದ್ದವರಿಗೆ ಮಾತ್ರ ಒಳ್ಳೆಯ ಅನಿಸಿಕೆ ಇತ್ತು.

ಇವರ ಸಂಘಟನೆಗೆ ಸೇರದೆ ಆಚೆ ಇರುವವರ ಬಗ್ಗೆ ಅನಾದರವನ್ನೇ ವ್ಯಕ್ತಪಡಿಸಿದ್ದರು. ಇಂಥ ಅಭಿಪ್ರಾಯ ಹೆಣ್ಣಿನ ಮೇಲೂ ಇರುತ್ತಿದ್ದವು.

"ಪೂಜೆಯಿಂದ ತಾ ಪೂಜ್ಯವಂತನಾಗಿಹೆನೆಂದು ಮಾಡುವವ
ನೀರವು ಹೊಲತಿ ತನ್ನ ಹೊಲೆಯ ಮರೆದು ಶುದ್ಧ
ನೀರನ್ನು ಮಿಂದೆನೆಂದು ಕೆಲವರ ಮುಟ್ಟುವಂತೆ
ಆ ವಿಧಿ ನಿನಗಾಯಿತ್ತು."[೧೪೯]

- ಎಂದು ಹೇಳಿರುವರು ಹೊಲತಿ ಸ್ನಾನ ಮಾಡಿದರೂ ಹೊಲೆತನ ಹೋಗುವುದಿಲ್ಲ ಎಂದು ಕೀಳಾಗಿ ನೋಡುವ ನೋಟ ಇಲ್ಲಿ ವ್ಯಕ್ತವಾಗುತ್ತದೆ.

ಹೆಂಡತಿಯನ್ನು ಸಹಭಾಗಿ ಎಂದು ನೋಡದೆ ಅವಳನ್ನು ಅನುಮಾನಿಸಿ, ಅವಮಾನಿಸುವ ನೆಲೆಯಲ್ಲಿಯೇ ನೋಡಿರುವುದುಂಟು. ಸಂಪಾದಿಸುವ ಸಂಪತ್ತು "ನಿನ್ನ ಮಡದಿಗಿರಲೆಂದೆಡೆ ಮಡದಿಯ ಕೃತಕ ಬೇರೆ ನಿನ್ನೊಡಲು ಕಡೆಯಲು ಮತ್ತೊಬ್ಬನಲ್ಲ ಕಡಕದೆ ಮಾಣ್ಬಳೇ"[೧೫೦] ಎಂದು ಹೇಳಿರುವರು. ಹಸಿದು ಬಂದ ಗಂಡನಿಗೆ ಉಣಲಿಕ್ಕದೆ ಬಡವಾದನೆಂದು ಮರುಗುವ ಸತಿಯ ಸ್ನೇಹದಂತೆ[೧೫೧] ಹೆಂಡತಿ ಗಂಡನ ಧರ್ಮ ಆಚಾರ-ವಿಚಾರವನ್ನು ಪಾಲಿಸಬೇಕು ಎಂದು ಹೇಳುತ್ತ "ಗಂಡ ಶಿವಲಿಂಗದೇವರ ಭಕ್ತ ಹೆಂಡತಿ ಮಾರಿ ಮಸಣೆಯ ಭಕ್ತೆ. ಗಂಡ ಕೊಂಬುದು ಪಾದೋದಕ ಪ್ರಸಾದ. ಹೆಂಡತಿ ಕೊಂಬುದು ಸುರೆ ಮಾಂಸ. ಭಾಂಡ ಭಾಜನ ಶುದ್ಧವಿಲ್ಲದವರ ಭಕ್ತಿ ಹೆಂಡದ ಮಡಕೆಯ ಹೊರಗೆ ತೊಳೆದಂತೆ"[೧೫೨] ಆದ್ದರಿಂದ ಹೆಂಡತಿ ಗಂಡನನ್ನು ಅನುಸರಿಸಬೇಕು ಎಂದು ಹೇಳಿರುವರು. "ಹೆಂಡತಿ ಗಂಡನ ಅಧೀನವಾಗಿರುವುದರಿಂದ ಆಕೆ ಕೇಳುವ ವಿಚಾರ ಅಸಂಭವ. ಕೇಳುವ ವಿಚಾರ ಪತಿಗಷ್ಟೆ"[೧೫೩] ಎಂದು ತಿಳಿಯಲಾಗಿದೆ.

## ೩. ಪಾತಿವ್ರತ್ಯ

ಹೆಣ್ಣು ಚಂಚಲ ಚಿತ್ತದಾಕೆ, ಪತಿವ್ರತೆಯಾಗಿ ಇರುವುದಿಲ್ಲ ಎಂಬ ಕೀಳು ಅಭಿಪ್ರಾಯವನ್ನು ವ್ಯಕ್ತಪಡಿಸಲಾಗಿತ್ತು. "ಪತಿವ್ರತೆಯಾದಡೆ ಅನ್ಯಪುರುಷರ ಸಂಗವೇತಕ್ಕೆ ಕಂಡ ಕಂಡವರ ಹಿಂದೆ ಹರಿವ ಚಾಂಡಲಗಿತ್ತಿಯಂತೆ"[೧೫೪] ಎಂಬ ಕಟು ಮಾತುಗಳನ್ನು ಸಹ ಆಡಿದ್ದಾರೆ. ಹೆಣ್ಣು ಗಂಡನಿಗೆ ನಿಷ್ಠೆಯಿಂದಲೂ, ವಿಧೇಯಳೂ ಆಗಿರಬೇಕು ಅಂಥ ಹೆಣ್ಣೆ ಒಳ್ಳೆಯ ನಡೆತೆಯವಳು ಎಂದು ತಿಳಿದು, ಆಕೆಯೇನಾದರೂ ದಾರಿತಪ್ಪಿ ನಡೆದರೆ ಆಕೆಗೆ ಕ್ಷಮೆ ಇಲ್ಲ ಎನ್ನುವಂತೆ, ಸತಿ ಕೆಟ್ಟು ನಡೆಮದು ಕಂಡು ಹಿಂದಕ್ಕೆ ಮರವೆ ಮುಂದಕ್ಕೆ ಚಿತ್ತ ಶುದ್ಧವೆಂದಡೆ ಆ ಗುಣ ಶುನಕ ಸ್ವಪ್ನದಂತೆ[೧೫೫] ಎಂದು ತಿರಸ್ಕರಿಸಿರುವುದುಂಟು. ಪುರುಷಂಗೆ ಹಲವಡೆಯಲ್ಲದೆ ಸತಿಗುಂಟೆ ಹಲವರ ಸಂಗ ಪತಿಗೊಬ್ಬನಲ್ಲದೆ[೧೫೬] ಎಂದು ಪುರುಷಪ್ರಧಾನ ನೆಲೆಯಿಂದಲೇ ಚಿಂತಿಸಿದ್ದಾರೆ.

## ೪. ವಿಧವೆಯರು

ವಿಧವೆಯರ ಜೀವನ ಚಿಂತಾಜನಕವಾಗಿತ್ತು. "ಅಣಬಿ ಇಲ್ಲದವಳಿಗೆ ಸೌಭಾಗ್ಯದ ಹೂವಿನ ಜೊಟ್ಟೇಕೆ", "ಬಾಳಿಲ್ಲದವಳ ಓಲೆಯಂತಾಯಿತ್ತೆನಗೆ"[೧೫೭] ಎಂಬ ಮಾತುಗಳಲ್ಲಿ ವಿಧವೆಯ ಮೇಲೆ

ನಿಷೇಧವನ್ನು ಹೇರಿರುವುದು ತಿಳಿಯುತ್ತದೆ. "ಗಂಡನಿಲ್ಲದೆ ಮುಂಡೆ ಗರ್ಭ ನಿಂದಡೆ ಅವಳಾರಿಗೆ ಯೋಗ್ಯ"[೧೫೮] ಎಂದು ಕೇಳಿದ್ದರೂ, ಇದರಿಂದ ವಿಧವೆಯ ಸ್ಥಿತಿ ಕುರಿತು ಚಿಂತನೆ ಮಾಡಲಾಗಿದೆ, ಅಂಥವರನ್ನು 'ಪಾರ್ವತಿಗೆ ಸಮಾನ' ಎಂದು ಹೇಳಿದರೇ ಹೊರತು ಅವರ ಬದುಕಿನಲ್ಲಿ ಸುಧಾರಣೆ ತರಲಿಲ್ಲ. ಮರು ವಿವಾಹಕ್ಕೆ ಅವಕಾಶ ನೀಡಿದ್ದರ ಕುರಿತು ಸ್ಪಷ್ಟತೆ ಇಲ್ಲ.

## ೫. ಸತಿಪದ್ಧತಿ

ಸತಿಪದ್ಧತಿಯ ಬಗ್ಗೆಯೂ ಹೊಸತನವನ್ನು ತರಲಿಲ್ಲ. 'ಗಂಡನ ಕೂಡ ಸಮಾಧಿಯ ಕೊಂಬ ಹೆಂಡಿರು ಅನಂತ, ಹೆಂಡಿರ ಕೂಡೆ ಸಮಾಧಿಯ ಕೊಂಬ ಗಂಡರುಂಟೇ ಲೋಕದೊಳು"[೧೫೯] ಎಂದು ಪ್ರಶ್ನಿಸಿದರು. ಸತಿ ಹೋಗುವುದು ಹೆಂಡತಿಯ ಕರ್ತವ್ಯ ಮತ್ತು ಸಹಜ ಎಂದೂ, ಆದರೆ ಗಂಡ ಸತಿ ಹೋಗುವುದು ಅಸಹಜ ಮತ್ತು ಸರಿಯಲ್ಲ ಎಂದು ಹೇಳಿ ಸತಿಪದ್ಧತಿಯನ್ನು ಪರೋಕ್ಷವಾಗಿ ಸಮರ್ಥಿಸುವ ನಿಲುವೇ ಅಭಿವ್ಯಕ್ತ ಆಗಿದೆ. ಸತಿ ಹೋಗುವುದನ್ನು ತಡೆಯಲು ವಚನಕಾರರು ಪ್ರಯತ್ನಿಸಿರುವುದು ಕಂಡುಬರುತ್ತಿಲ್ಲ.

## ೬. ಸೂಳೆಯರು

'ಪತಿವ್ರತೆ' ಎಂಬ ಪಾತ್ರದಿಂದಲೇ ಹೆಣ್ಣನ್ನು ಕಂಡರು. ಸೂಳೆಯರನ್ನು, ಹಾದರ ಮಾಡುವವರನ್ನು ಕಟು ಮಾತುಗಳಿಂದ ನಿಂದಿಸಿರುವರು. ಇದಕ್ಕೆಲ್ಲಾ ಕಾರಣವಾದ ಪುರುಷ ಪ್ರಧಾನ ಸಮಾಜದ ನಿಲುವನ್ನು ಅನೇಕ ಬಾರಿ ತೋರಿಸಿರುವುದುಂಟು. ಸಮಾಜದಲ್ಲಿ ಹೆಣ್ಣಿಗೆ ದೊರೆಯುವ ಗೌರವ-ಅಗೌರವ ಮೊದಲಾದವುಗಳಿಗೆ ಗಂಡಿನ ಧೋರಣೆಗಳೇ ಕಾರಣ. ಇದನ್ನು ವಚನಕಾರರು ಗಮನಿಸದೆ, ಗೃಹಿಣಿ ಹೆಚ್ಚು, ಸೂಳೆ ಕಡಿಮೆ ಎಂದು ಸಮಾಜದಲ್ಲಿ ಹೆಣ್ಣನ್ನು ಎರಡು ಭಾಗವಾಗಿ ವಿಂಗಡಿಸಿದರು. "ಆರಕ್ಕಾಗಲಿ ಮೂರಕ್ಕಾಗಲಿ ಎಣ್ಣೆ ಹೋಳಿಗೆ ಲೇಸು. ಕುರುಡಿಯಾಗಲಿ, ಕುಂಟಿಯಾಗಲಿ ಮನೆಯ ಹೆಂಡತಿಯೆ ಲೇಸು"[೧೬೦] ಎಂದಿದ್ದಾರೆ. ಹೀಗೆ ಪುರುಷನ ಒಡೆದು ಆಳುವ ನೀತಿಯನ್ನು ಕಾಣಬಹುದು.

ಅನೇಕ ಸೂಳೆಯರು ವಚನಕಾರರ ಸಂಘಟನೆಯಲ್ಲಿ ಸೇರಿಕೊಂಡು, ತಮ್ಮ ಪೂರ್ವದ ವೃತ್ತಿಗಳನ್ನು ಬಿಟ್ಟಿದ್ದರು. ಆದರೆ ಇನ್ನೂ ಕೆಲವರು ಇವರ ಸಂಘಟನೆಗೆ ಸೇರದೆ ಅದೇ ವೃತ್ತಿಯಲ್ಲಿ ನಿರತರಾಗಿದ್ದರು. ಇಂಥವರನ್ನು ವಚನಕಾರರು ಟೀಕಿಸದೆ ಬಿಟ್ಟಿಲ್ಲ. "ಹೆಣ್ಣು ಸುಖ ಕಾಣದೆ ಸೂಳೆಯಾದಳು" ಎಂದು ಹೇಳಿದ್ದಾರೆ. ಬಸವಣ್ಣನವರು ಕೂಡ "ಸೂಳೆಗೆ ಹುಟ್ಟಿದ ಪ್ರಾಣಿಗೆ ನಿಜಗುಣ ಸಜ್ಜನವಪ್ಪುದೇ"[೧೬೧] ಎಂದು ಪ್ರಶ್ನಿಸಿದ ಉದಾಹರಣೆ ಇದೆ. ಹೆಣ್ಣಿಗೆ ದೀಕ್ಷೆ ನೀಡಿದ ವಚನಕಾರರು ಸೂಳೆಗೆ ದೀಕ್ಷೆ ಕೊಡಲು ಒಪ್ಪದಿರುವುದು ಸಹ ದಾಖಲಾಗಿದೆ. ಸೂಳೆಗೆ ಲಿಂಗ ಸಾಹಿತ್ಯದ ಮಾಡಿದಾತ ಏಳೇಳು ಜನ್ಮದಲ್ಲಿ ಶ್ವಾನನ ಗರ್ಭದಲ್ಲಿ ಜನಿಸುತ್ತಾನೆ[೧೬೨] ಎಂಬ ನಂಬಿಕೆ ಇತ್ತು. ಸೂಳೆಯರ ಹುಟ್ಟಿಗೆ ನಾಂದಿ ಹಾಕಿದವರು ಪುರುಷರೇ ಆದರೂ ಸೂಳೆಯರ ಬಗ್ಗೆ ವಚನಕಾರರು ಕೀಳು ಭಾವನೆ ತೋರಿಸಿದ್ದರು. ವಚನಕಾರರ ಸಮಾಜದಲ್ಲಿ ಸೂಳೆಯರು ಇರುತ್ತಿದ್ದು, ಅವರಿಂದ ಸಾಕಷ್ಟು ಆದಾಯ ರಾಜನ ಬೊಕ್ಕಸಕ್ಕೆ ಬರುತ್ತಿತ್ತು. ಅಂಥವರಿಗೆ ರಾಜಾಶ್ರಯ ಸಹ ಇತ್ತು. ವಚನಕಾರರು ಸೂಳೆಯರ ಅಸ್ತಿತ್ವದ ಬಗ್ಗೆಯಾಗಲಿ, ಆ ಪದ್ಧತಿ ಸಮಾಜವನ್ನು ತಿರಸ್ಕರಿಸಲು ಹೋರಾಟ ಮಾಡದೆ ತಮ್ಮ

ಸಂಘಟನೆಗೆ ಬರುವವರಿಗೆ ಸ್ವಾಗತ ನೀಡಿ, ಆ ವೃತ್ತಿಯಲ್ಲಿ ತೊಡಗಿದವರಿಗೆ ಹೊಸ ಅವಕಾಶವನ್ನು ನೀಡಿದ್ದು ಗಮನಾರ್ಹ.

ತೊತ್ತುಗಳು ಶ್ರೀಮಂತರ ಹಾಗೂ ರಾಜನ ಸೇವೆಯಲ್ಲಿರುತ್ತಿದ್ದರು. ಹೀಗಾಗಿ ವಚನಕಾರರಿಗೆ ಇದನ್ನು ಪ್ರಶ್ನಿಸುವ ವಿರೋಧಿಸುವ ನಿಲುವು ಸಹ ಉಂಟಾಗಿಲ್ಲ. ಅವರು ತೊತ್ತಿನ ವಿಚಾರದಲ್ಲಿ ಹಳೆಯ ಆಚಾರ-ವಿಚಾರಗಳನ್ನು ಮುಂದುವರಿಸಿಕೊಂಡು ಬಂದಿರುವುದೇ ಕಾಣುತ್ತದೆ. ಈ ಬಗ್ಗೆ ಇನ್ನಷ್ಟು ಅಧ್ಯಯನ ಆಗಬೇಕಿದೆ. ಒಟ್ಟಾರೆ ವಚನಕಾರರು ಮೊಟ್ಟ ಮೊದಲ ಬಾರಿಗೆ ಎಲ್ಲ ವರ್ಗದ ಮಹಿಳೆಯರಿಗೂ ತಮ್ಮ ಸಂಘಟನೆಗೆ ಸೇರಿಕೊಳ್ಳಲು ಅವಕಾಶ ನೀಡಿದ್ದು ಮಹತ್ವದ್ದು. ಜೊತೆಗೆ ತಮ್ಮ ಸಂಘಟನೆಯ ಮಹಿಳೆಯರಿಗೆ ಸ್ವಾತಂತ್ರ್ಯ, ಸಮಾನತೆಯ ಪರಿಕಲ್ಪನೆಗಳನ್ನು ನೀಡಿದರಲ್ಲದೆ ಆವರೆವಿಗೂ ಮಹಿಳೆಯನ್ನು ಕಂಡ ನೆಲೆಗಳಿಗಿಂತ ಭಿನ್ನವಾಗಿ ಕಂಡದ್ದು ಗಮನಾರ್ಹ. ಲಿಂಗಭೇದದ ಬಗ್ಗೆ ತಿಳಿಸುತ್ತ ಲಿಂಗಭೇದ ತೋರಿಕೆಯದು ಎಂದು ಹೇಳಿದ್ದನ್ನು ಗಮನಿಸಿದಾಗ ಸ್ತ್ರೀವಾದಿ ಚಿಂತನೆಯು ಹನ್ನೆರಡನೆಯ ಶತಮಾನದಲ್ಲಿಯೆ ಉಂಟಾಗಿತ್ತು ಎಂಬುದು ತಿಳಿದುಬರುತ್ತದೆ. ಹೀಗಾಗಿ ಅದು ಪಾಶ್ಚಾತ್ಯದ್ದಲ್ಲ ಎನ್ನಬಹುದು. ಇಲ್ಲಿ ಗಮನಿಸಬೇಕಾದ ಸಂಗತಿ ಎಂದರೆ ಮಹಿಳೆಯನ್ನು 'ದೇವತೆ' ಎಂದು ಕರೆದಿರುವುದು. ಪುರುಷ ಪ್ರಧಾನ ಸಮಾಜದ ದೌರ್ಜನ್ಯಕ್ಕೆ ಒಳಗಾದ ಸೂಳೆಯರಿಗೆ ಅವರ ವೃತ್ತಿ ಬಿಟ್ಟು ಸಂಘಟನೆಗೆ ಸೇರಿಕೊಳ್ಳುವಂತೆ ಹೇಳಿದ್ದು ವಿಶೇಷವಾಗಿದೆ. ಆದರೆ ವಚನಕಾರರಿಗೆ ಯಾವುದೇ ರಾಜಾಶ್ರಯ ದೊರೆಯದೆ ಇದ್ದುದರಿಂದ ಅವರು ತಮ್ಮದೇ ಆದ ಮಿತಿಗಳ ನಡುವೆ ಕಾರ್ಯ ನಿರ್ವಹಿಸಿದರೇ ಹೊರತು ಸಮಾಜ ಸುಧಾರಕರಂತೆ ನಡೆದುಕೊಳ್ಳಲಾಗಿಲ್ಲ. ಹೀಗಾಗಿ ಸಮಾಜದಲ್ಲಿನ ಜಾತಿಪದ್ಧತಿ, ವಿಧವೆ, ಸಹಗಮನ, ತೊತ್ತುಗಳ, ಸ್ಥಿತಿಗತಿ, ಸುಧಾರಣೆಗಳು ಅಷ್ಟಾಗಿ ಆಗಲಿಲ್ಲ. ವಿಧವೆಯರಿಗೆ ಮರುವಿವಾಹ ಮಾಡುವ ಕಲ್ಪನೆಯನ್ನು ಸಹ ಮೂಡಿಸಿಲ್ಲ. ಮತ್ತೆ ಪತಿವ್ರತೆಯಂಥ ಪಾತ್ರದಿಂದಲೇ ಹೆಣ್ಣನ್ನು ಗುರುತಿಸಲು ಪ್ರಯತ್ನಿಸಿದರು. ತಮ್ಮ ವಚನಗಳಲ್ಲಿ ಸ್ತ್ರೀಪರವಾಗಿರುವಂತೆ ಹೇಳಿದ್ದರೂ, ಪುರುಷ ಪ್ರಧಾನ ಗುಣಗಳಿಗೆ ಬದ್ಧರಾಗಿದ್ದುದು ತಿಳಿಯುತ್ತದೆ. ಮಹಿಳೆಯನ್ನು ಕೆಲವೊಮ್ಮೆ ಮಾಯೆ ಎಂದೂ, ಮಾಯೆ ಅಲ್ಲವೆಂದೂ ಇಬ್ಬಗೆಯ ಚಿಂತನೆಗಳನ್ನು ವ್ಯಕ್ತಪಡಿಸಿ ವಿರೋಧಾಭಾಸಗಳನ್ನುಂಟು ಮಾಡಿದ್ದಾರೆ. ವಚನಕಾರರ ಪ್ರಧಾನ ಆಶಯ ಸ್ತ್ರೀ ವಿಮೋಚನೆ ಆಗಿರಲಿಲ್ಲ. ಅವರು ಸಮಾಜದಲ್ಲಿ ಸಮಾನತೆ ತರಲು ಬಯಸಿದರೂ ಸಾಮಾಜಿಕ ಸಮಸ್ಯೆಗಳ ಬಗ್ಗೆ ತಾಟಸ್ಥ್ಯವನ್ನು ತಾಳಿದ್ದರು ಎನ್ನಬಹುದು. ಆದರೂ ಇವರು ಸ್ತ್ರೀಯರಿಗೆ ದೀಕ್ಷೆ ನೀಡಿದ್ದು, ಮಹತ್ವದ್ದು ಅಲ್ಲದೆ ದಾಂಪತ್ಯ ಶ್ರೇಷ್ಠತೆಯನ್ನು ಹೇಳಿರುವುದು ಸಹ ವಿಶಿಷ್ಟವಾಗಿದೆ.

### ೩. ವಚನಕಾರ್ತಿಯರು ಮತ್ತು ಅವರ ಚಿಂತನೆಗಳು

ಸ್ತ್ರೀಯರಿಗೂ ಸ್ವಾತಂತ್ರ್ಯ, ಸಮಾನತೆಗಳು ದೊರತದ್ದೇ ಆದರೆ ಹೆಣ್ಣು ಸಹ ಪುರುಷನಂತೆ ಚಿಂತಿಸಬಲ್ಲಳು, ಅಭಿವ್ಯಕ್ತಿಸಬಲ್ಲಳು, ಸಾಹಿತ್ಯ ಸೃಷ್ಟಿಸಬಲ್ಲಳು ಎಂಬುದಕ್ಕೆ ವಚನಕಾರ್ತಿಯರೇ ಸಾಕ್ಷಿಯಾಗಿದ್ದಾರೆ. ಇಂಥ ಅಭಿವ್ಯಕ್ತಿ ಸ್ವಾತಂತ್ರ್ಯ ಪಡೆದುಕೊಂಡ ವಚನಕಾರ್ತಿಯರು ಅದಕ್ಕೆ ಸರಿಹೊಂದುವ ಪರಿಸರವನ್ನು ತಮ್ಮ ಇತಿಮಿತಿಗಳೊಂದಿಗೆ ನಿರ್ಮಿಸಿಕೊಂಡಿದ್ದರು. ಸೀಮಿತ ಪರಿಮಿತಿಯೊಳಗೆ ಪುರುಷರನ್ನು

ಸಮಾಜವನ್ನು ಕುರಿತಂತೆ ಚಿಂತಿಸಿದ್ದಾರೆ. ಅಲ್ಲದೆ ತಮ್ಮ ಅಭಿಪ್ರಾಯಗಳನ್ನು ಕೆಲವೊಮ್ಮೆ ನಿರಾಂತಕವಾಗಿ ವ್ಯಕ್ತಪಡಿಸಿದ್ದು ಉಂಟು. ಹೆಣ್ಣು ಮತ್ತು ಪುರುಷರ ಸಂಬಂಧಗಳನ್ನು ಚಿಂತಿಸಿದ್ದು ಸ್ತ್ರೀವಾದಿ ನೆಲೆಯಿಂದ ಪ್ರಧಾನವಾದುದು. ಹೀಗೆ ಚಿಂತನೆ ಮಾಡಿದವರಲ್ಲಿ ಗೃಹಿಣಿಯರು, ಸೂಳೆಯರು, ವಿರಾಗಿಣಿಯರು ಮೊದಲಾದವರು ಪ್ರಮುಖರು. ವಿಶಿಷ್ಟವಾದ ಸಂಗತಿ ಅಂದರೆ ವಚನಕಾರರ ಸಂಘಟನೆಗೆ ಏಕಕಾಲಕ್ಕೆ ವಿಭಿನ್ನ ವರ್ಗದ ಅನೇಕ ಮಹಿಳೆಯರು ಸೇರಿಕೊಂಡದ್ದೂ ಅಲ್ಲದೇ ಇವರೆಲ್ಲಾ ಒಮ್ಮೆಲೆ ಅಭಿವ್ಯಕ್ತಿಯ ಅವಕಾಶ ಪಡೆದು ವಿಚಾರಗಳನ್ನು ಮಂಡಿಸಿದ್ದು.

### ೧. ಅಕ್ಕಮಹಾದೇವಿ

ವಚನಕಾರ್ತಿಯರು ಎಂದ ತಕ್ಷಣ ಪ್ರಧಾನವಾಗಿ ಕಂಡು ಬರುವವಳು ಅಕ್ಕಮಹಾದೇವಿ. ಅಕ್ಕಮಹಾದೇವಿ ಒಮ್ಮೆಲೆ ಗಂಡ ಮತ್ತು ಮನೆಯನ್ನು ಬಿಟ್ಟು ಬಂದುದನ್ನು ಗಮನಿಸಿದಾಗ ಆ ಕಾಲಘಟ್ಟದಲ್ಲಿ ಪುರುಷನ ಧೋರಣೆಗಳು ಹೆಣ್ಣಿನ ಮೇಲೆ ಮಾನಸಿಕವಾಗಿಯೂ, ಭೌತಿಕವಾಗಿಯೂ ಹೇಗೆ ಹೇರಲ್ಪಡುತ್ತಿದ್ದವು ಎಂದು ತಿಳಿಯಲು ಸಾಧ್ಯವಾಗುತ್ತದೆ. ತತ್ತ್ವ-ಆದರ್ಶಗಳಿಗೆ ಬದ್ಧಳಾದವಳಿಗೆ ಇಂಥ ಧೋರಣೆಗಳನ್ನು ಧಿಕ್ಕರಿಸುವ ಜರೂರು ಇರುತ್ತಿತ್ತು. ಅಂತೆಯೇ ಅಕ್ಕಮಹಾದೇವಿ ಕೂಡ ತನ್ನದೆ ಆದ ತತ್ವ ಆದರ್ಶಗಳಿಂದ ಅವಳು ಗಂಡನನ್ನು ಮತ್ತು ಮನೆಯನ್ನು ಬಿಡಬೇಕಾಗಿತ್ತು. ವಚನಕಾರರ ದಾಂಪತ್ಯ ಶ್ರೇಷ್ಟತೆಯು ಈಕೆಯನ್ನು ಹೊರತಾಗಿಸಿದೆ. ಮನೆಯನ್ನು ತೊರೆದ ಅಕ್ಕಮಹಾದೇವಿ ದೃಢ ನಿರ್ಧಾರಗಳನ್ನು ಹೊಂದಿರುವ ಹೆಣ್ಣಾಗಿ ಕಾಣುತ್ತಾಳೆ. ಇಂಥ ಮನೋಭಾವವನ್ನು ಸಮರ್ಥಿಸುವ ಅವಳ ವಚನವೊಂದು ಹೀಗೆ ಹೇಳುತ್ತದೆ.

''ಕೈ ಸಿರಿಯ ದಂಡವ ಕೊಳ್ಳಬಹುದಲ್ಲದೆ ಮೈ ಸಿರಿಯ
ದಂಡವ ಕೊಳಲುಂಟೆ?
ಉಟ್ಟಂತಹ ಉಡುಗೆ ತೊಡುಗೆಯನ್ನೆಲ್ಲ ಸೆಳೆದು
ಕೊಳ್ಳಬಹುದಲ್ಲದೆ
ಮುಚ್ಚಿದ ಮುಸುಕಿನ ನಿರ್ವಾಣನ ಸೆಳೆದುಕೊಳ್ಳಬಹುದೇ?
ಚೆನ್ನಮಲ್ಲಿಕಾರ್ಜುನ ದೇವರ ಬೆಳಗನುಟ್ಟು ಲಜ್ಜೆಗೆಟ್ಟವಳಿಗೆ
ಉಡುಗೆ ತೊಡುಗೆಯ ಹಂಗೇಕೋ ಮರುಳೆ?''[೧೬೩]

ಅಕ್ಕಮಹಾದೇವಿ ತನ್ನ ಗಂಡ ಎಳೆದ ಸೀರೆಯನ್ನು ಬಿಟ್ಟು ಬೆತ್ತಲೆಯಾಗಿ ಸುತ್ತಾಡಿದಳೆನ್ನುವುದು ಇಲ್ಲಿ ಅಷ್ಟು ಪ್ರಧಾನವಾದುದಲ್ಲ. ಹೆಣ್ಣಿನ ಅಂದರೆ ಅಕ್ಕಮಹಾದೇವಿಯಂಥವರ ಮಾನಸಿಕ ಸ್ಥಿತಿಯನ್ನು ಬದಲಾಯಿಸಲು ಒತ್ತಾಯ-ಬಲತ್ಕಾರಗಳಿಂದ ಸಾಧ್ಯವಿಲ್ಲ ಎನ್ನುವುದು ಪ್ರಧಾನವಾಗುತ್ತದೆ. ಅಭಿವ್ಯಕ್ತಿಯ ಸ್ವಾತಂತ್ರ್ಯ ಪಡೆದ ಹೆಣ್ಣಾಗಿ ಕಂಡುಬರುತ್ತಾಳೆ. ಚೆನ್ನಮಲ್ಲಿಕಾರ್ಜುನನನ್ನು ಗಂಡನೆಂದು ಭಾವಿಸಿ, ಲೋಕದಲ್ಲಿ ಇರುವ ಪುರುಷರೊಂದಿಗೆ ಸಂಬಂಧವಿಲ್ಲ ಎಂದು, ಚೆನ್ನಮಲ್ಲಿಕಾರ್ಜುನನನ್ನು ಗಂಡನನ್ನಾಗಿ ಪಡೆಯಲು "ಅನಂತ ಕಾಲ ತಪಿಸಿದ್ದೆ ನೋಡಾ" ಎಂದು ಹಂಬಲವನ್ನು ವ್ಯಕ್ತಪಡಿಸಿದಳು. ಗಂಡ ಮತ್ತು ಮನೆಯನ್ನು ಬಿಟ್ಟು, ಹೆಣ್ಣು, ಪುರುಷ ಪ್ರಧಾನ ಸಮಾಜದಲ್ಲಿ ಬದುಕುವುದು ಸುಲಭವೇನೂ ಆಗಿರಲಿಲ್ಲ. ಅಂಥವಳಿಗೆ

ಆಶ್ರಯವು ದೊರೆಯುತ್ತಿರಲಿಲ್ಲ. ಅದಕ್ಕಾಗಿ ಅಕ್ಕಮಹಾದೇವಿ ತನಗೆ ಹಸಿವಾದರೆ ಬಿಕ್ಷಾಟನೆಯನ್ನು, ಬಾಯಾರಿಕೆಯಾದರೆ ಕೆರೆ-ಬಾವಿಗಳನ್ನು, ನಿದ್ರೆಗಾಗಿ ಹಳೆಯ ದೇವಾಲಯಗಳನ್ನು ಕಂಡುಕೊಂಡಳು. ಇವು ಕೇವಲ ಅಕ್ಕನಿಗೆ ಮಾತ್ರ ಅನ್ವಯ ಆಗುವುದಿಲ್ಲ. ಬದಲಾಗಿ ಇಂಥ ಮನೋಭಾವವನ್ನು ಹೊಂದಿದ್ದ ಎಲ್ಲ ಹೆಣ್ಣುಮಕ್ಕಳಿಗೂ ಅನ್ವಯ ಆಗುತ್ತದೆ ಎನ್ನಬಹುದು. ಪುರುಷ ಪ್ರಧಾನ ಸಮಾಜವು ಹೆಣ್ಣಿಗೆ ಕುಟುಂಬವೇ ರಕ್ಷಣೆ ನೀಡುತ್ತದೆ, ಅಲ್ಲದೆ ಆಕೆಯು ಕಟುಂಬದಾಚೆ ಬದುಕಲು ಸಾಧ್ಯವಿಲ್ಲ ಎಂದು ಘೋಷಿಸಿತ್ತು. ಇದನ್ನು ಅಕ್ಕ ತಳ್ಳಿಹಾಕಿದ್ದಾಳೆ. ಕುಟುಂಬದಾಚೆಯು ಬದುಕಬಲ್ಲಳು ಎಂದು ಬದುಕಿ ತೋರಿಸಿದ್ದಾಳೆ. ಹೀಗೆ ಬದುಕುವಾಗ ಅನೇಕ ನಿಂದನೆಗಳು ಇದ್ದೇ ಇರುತ್ತಿದ್ದವು. ಅಂಥವುಗಳನ್ನು ಅಕ್ಕಮಹಾದೇವಿಯ ವಚನವೊಂದು ಎದುರಿಸುವ ಬಗೆಯನ್ನು ಹೀಗೆ ತಿಳಿಸುತ್ತದೆ. ''ಬೆಟ್ಟದ ಮೇಲೊಂದು ಮನೆಯ ಮಾಡಿ ಮೃಗಗಳಿಗೆ ಅಂಜಿದರೆ ಹೇಗೆ?''[164] ಎಂದು ಕೇಳಿದ್ದು ಅಲ್ಲದೆ ಸಮಾಜದಲ್ಲಿ ಹುಟ್ಟಿದ ಬಳಿಕ ಇಂಥ ಸ್ತುತಿ ನಿಂದನೆಗಳು ಬರುವುದು ಸಹಜ, ಅವುಗಳನ್ನು ಎದುರಿಸಬೇಕೇ ಹೊರತು, ಅವುಗಳಿಗೆ ಕೋಪಿಸಿಕೊಳ್ಳಬಾರದು, ಸಮಾಧಾನಿಯಾಗಿರಬೇಕು ಎಂದಿದ್ದಾಳೆ. ಇಂಥ ವಚನಗಳು ಸಾಧನೆ ಕೈಗೊಳ್ಳುವ ಹೆಣ್ಣಿಗಾಗಲಿ, ಗಂಡಿಗಾಗಲಿ ಪ್ರೇರಕವಾಗಿವೆ ಎನ್ನಬಹುದು. ಅಕ್ಕಮಹಾದೇವಿಯು ಇಂಥ ನಿಂದನೆಗಳನ್ನು ಎದುರಿಸಿಯೆ ತನ್ನ ಗುರಿಯನ್ನು ತಲುಪಲು ಬಯಸಿದ್ದಳು. ಪುರುಷ ಪ್ರಧಾನ ಸಮಾಜ ಎಲ್ಲ ಕಾಲಕ್ಕೂ ಮಹಿಳೆಯನ್ನು ಭೋಗದ ವಸ್ತುವನ್ನಾಗಿಯೇ ಕಂಡಿದೆ. ಅದಕ್ಕಾಗಿಯೆ ತನ್ನ ವಚನವೊಂದರಲ್ಲಿ ''ಅಣ್ಣ ಮತ್ತೆ ನನ್ನ ಕಂಡು ಕಂಡು ಆರೆಂದು ಬಂದಿರಣ್ಣಾ ಚೆನ್ನಮಲ್ಲಿಕಾರ್ಜುನನಲ್ಲದೆ ಉಳಿದ ಪುರುಷರು ನಮಗಾದ ಮೊರೆ ನೋಡಣ್ಣಾ''[165] ಎಂದಿದ್ದಾಳೆ. ಇಂಥ ಪುರುಷನ ನೋಟವನ್ನು ಅಕ್ಕ ಎದುರಿಸಿಯೇ ಹೇಳಿರುವುದು. ಇಲ್ಲವೆ ಅಂದಿನ ಸಮಾಜದ ಪುರುಷರು ಒಂಟಿ ಹೆಣ್ಣನ್ನು ಕಂಡಿರುವುದನ್ನು ತಿಳಿಸಿದ್ದಾಳೆ ಎನ್ನಬಹುದು. ಅಂದಿನ ಪುರುಷ ಪ್ರಾಧಾನ್ಯತೆ ಹೆಣ್ಣನ್ನು 'ಮಾಯೆ' ಎಂದು ಭಾವಿಸಿತ್ತು. ''ಸ್ತ್ರೀಯ ಮುಂದೆ ಮಾಯೆ ಪುರುಷನೆಂಬ ಅಭಿಮಾನವಾಗಿ ಕಾಡುವುದು'' ಎಂದು ತಿಳಿಸಿದಳು. ಅಲ್ಲದೆ ''ಹೆಣ್ಣು ಹೆಣ್ಣಾದೊಡನೆ ಗಂಡಿನ ಸೂತಕ, ಗಂಡು ಗಂಡಾದೊಡೆ ಹೆಣ್ಣಿನ ಸೂತಕ ಮನದ ಸೂತಕ ಹಿಂಗಿದಡೆ ತನುವಿನ ಸೂತಕಕ್ಕೆ ತೆರಹುಂಟೆ'' ಎಂದು ಕೇಳಿದ್ದಾಳೆ. ಒಟ್ಟಿನಲ್ಲಿ ಅಕ್ಕ ಪುರುಷ ಪ್ರಧಾನ ವ್ಯವಸ್ಥೆಯನ್ನು ಪ್ರಶ್ನಿಸುವುದರ ಜೊತೆಗೆ ವಿರೋಧಿಸಿಯೆ ನಡೆದಿದ್ದಾಳೆ. ಅಕ್ಕ ಆಧ್ಯಾತ್ಮದತ್ತ ಒಲಿದಿದ್ದರಿಂದಲೆ ಸಮಾಜ ಅವಳನ್ನು ಸ್ವೀಕರಿಸಿತು. ಇಲ್ಲವಾದಲ್ಲಿ ಖಂಡಿಸುತ್ತಿತ್ತು. ಅಲ್ಲದೆ ಅಕ್ಕಮಹಾದೇವಿಯ ವಚನಗಳು ಪ್ರಧಾನವಾದ್ದರಿಂದಲೇ ಆಕೆ ''ಆದ್ಯರ ಅರವತ್ತು ವಚನಕ್ಕೆ ದಣ್ಣಾನಾಯಕರ ಇಪ್ಪತ್ತು ವಚನ, ಮಹದೇವಿಯಕ್ಕನ ಒಂದು ವಚನ ನಿರ್ವಚನ'' ಎಂದು[166] ಹೇಳಿರುವುದು. ಅಕ್ಕ ಪುರುಷ ಪ್ರಧಾನ ಮೌಲ್ಯಗಳನ್ನು ಪ್ರಶ್ನಿಸುತ್ತಲೆ ಹೋರಾಟ ಮಾಡಿದವಳು. ಅಕ್ಕಮಹಾದೇವಿ ಪ್ರಧಾನ ಸ್ತ್ರೀವಾದಿಯಾಗಿಯೂ ಈ ಘಟ್ಟದಲ್ಲಿ ಅನಾವರಣಗೊಂಡಿದ್ದಾಳೆ.

## ೨. ಅಕ್ಕಮ್ಮ

ಅಕ್ಕಮಹಾದೇವಿಯ ನಂತರ ಕಂಡುಬರುವ ಹೆಸರು 'ಅಕ್ಕಮ್ಮ'ನದು. ಇವಳ ವಚನಗಳು ಶೀಲ-ವ್ರತ-ನೇಮ ಆಚಾರಗಳನ್ನು ಒಳಗೊಂಡಿವೆ. ಅಕ್ಕಮ್ಮ ಕಪಟ ಸನ್ಯಾಸಿಗಳನ್ನು, ವ್ರತಭ್ರಷ್ಟರನ್ನು ಖಂಡಿಸಿದ್ದಾಳೆ. ''ಪರಸ್ತ್ರೀ ಪರಧನಂಗಳಲ್ಲಿ ನಿಂದೆಗೆ ಒಡಲಾಗದಿದ್ದುದೆ 'ವ್ರತ' ಲಿಂಗಕ್ಕೆ ಆಚಾರ ಮನಕ್ಕೆ ಅರಿವು ಅರಿವಿಂಗೆ ಜ್ಞಾನ ನಿರ್ಧಾರವಾಗಿ ಕರಿಗೊಂಡುದೆ ವ್ರತ'' ಎಂದು ತಿಳಿಸಿದಳು. ಆಚಾರಕ್ಕೆ ಮಹತ್ವ ನೀಡಿ -

"ಬತ್ತಲೆ ಇದ್ದವರೆಲ್ಲ ಕತ್ತೆಯ ಮಕ್ಕಳು
ತಲೆ ಬೋಳಾದವರೆಲ್ಲ ಮುಂಡೆಯ ಮಕ್ಕಳು
ತಲೆ ಜಡೆಗಟ್ಟಿದವರೆಲ್ಲ ಹೊಲೆಯರ ಸಂತಾನ
ಆವ ಪ್ರಕಾರವಾದಡೇನು? ಅರಿವೆ ಮುಖ್ಯವಯ್ಯ
ಆಚಾರವೇ ಪ್ರಾಣವಾದ ರಾಮೇಶ್ವರ ಲಿಂಗದಲ್ಲಿ"[೧೬೭]

- ಎಂದು ಆಚಾರವನ್ನೇ ಎತ್ತಿ ಹಿಡಿದಿದ್ದಾಳೆ. ಹೀಗೆ ಆಚಾರ-ಅರಿವುಗಳ ಕುರಿತು ಸಾಮಾನ್ಯ ಹೆಣ್ಣು ಮಾತನಾಡಿದ್ದು ಚರಿತ್ರೆಯಲ್ಲಿ ಬಹಳ ಮುಖ್ಯವಾದ ಸಂಗತಿಯಾಗಿದೆ. ಈ ಕುರಿತಂತೆ ಗಂಭೀರ ಚಿಂತನೆ ಆಗಬೇಕಿದೆ. ಚಾಡಿ ಹೇಳುವವರನ್ನು 'ಅವ್ವಾ', 'ಅಕ್ಕಾ' ಎಂದು ನಟಿಸುವವರನ್ನು ಖಂಡಿಸಿದ್ದಳು.

"ಆಚೆಯ ನೀರ ಈಚೆಯಲ್ಲಿ ತೆಗೆವುದು ಚೆಲುವೆಯಲ್ಲ
ಆಚೆಯಲ್ಲಿ ಕೇಳಿದ ಮಾತ ಈಚೆಯಲ್ಲಿ ನುಡಿದು
ಮತ್ತಾಚೆಯಲ್ಲಿ ಬೆರೆಸುವವ ಭಕ್ತನಲ್ಲ.
ಆತನ ಇದಿರಿನಲ್ಲಿ ಆತನ ಸತಿಯ ಅವ್ವಾ ಎಂದು
ಈಚೆಯಲ್ಲಿ ಕೂಡಿಕೊಂಡು, ಆತನಿದ್ದಾಗ ಅಮ್ಮಾ ಎಂದು,
ಆತ ಸಂದಲ್ಲಿ ಸತಿ ಎಂಬ ಭಂಡರಿಗೇಕೆ ವ್ರತನೇಮನಿತ್ಯ"[೧೬೮]

- ಎಂದು ಎದುರಿಗಿದ್ದಾಗೊಂದು, ಇಲ್ಲದಾಗೊಂದು ಹೇಳುತ್ತ ಚಾಡಿ ಹೇಳಿ ಜಗಳಕ್ಕೆ ನಾಂದಿ ಮಾಡುವ, ಸುಳ್ಳು ಹೇಳಿ ಮೋಸ ಮಾಡುವ ಕಪಟಕುಹಕಿಗಳು ಎಲ್ಲ ಕಾಲಕ್ಕೂ ಇರುವುದನ್ನು ತಿಳಿಸಿ ತೋರಿಸಿದ್ದಾಳೆ. "ಗಡ್ಡ ಮೀಸೆ ಬೋಳಿನ ಕುರುಹ ತೋರಿ ಬಲ್ಲವರಂತೆ ಆಧ್ಯಾತ್ಮವ ನುಡಿದು ಉಪಾಧಿಯಿಂದ ಒಡಲ ಹೊರೆವಾತ ವಿರಕ್ತನೆ?" ಎಂದು ಪ್ರಶ್ನಿಸಿದಳು. ಒಟ್ಟಿನಲ್ಲಿ ಅಕ್ಕಮ್ಮ ವೈಚಾರಿಕ ಮನಸ್ಸಿನಿಂದ ಸಮಾಜದ ಎಳೆ-ಎಳೆಗಳನ್ನು ಬಿಚ್ಚಿಟ್ಟಳು.

**೩. ಅಮುಗೆ ರಾಯಮ್ಮ**

ಅಮುಗೆ ರಾಯಮ್ಮನ ವಚನಗಳು ಆಚಾರ ಪ್ರಧಾನವಾದವು. ಅಕ್ಕಮ್ಮನಲ್ಲಿ ಹೊರತಾಗಿದ್ದ ಆತ್ಮನಿರೀಕ್ಷಣೆಯೂ ರಾಯಮ್ಮನ ವಚನಗಳಲ್ಲಿ ಕಾಣಿಸಿಕೊಂಡಿದೆ. ಅಂಜುಬುರಕರಿಗೆ ಇವಳ ವಚನಗಳು ಹೊಸ ಬದುಕು ನೀಡುತ್ತವೆ. ಅರ್ಹತೆಗೆ ಪ್ರಾಮುಖ್ಯತೆ ನೀಡಬೇಕೆಂಬ ಇವಳ ನಿಲುವು ಆದರ್ಶವಾದುದು. "ಮೂಗಿಲ್ಲದವಂಗೆ ಕನ್ನಡಿ ತೋರಲೇಕೆ? ಕೈಯಿಲ್ಲದವಂಗೆ ಕುದುರಿಯನೇರಲೇಕೆ? ಕಾಲಿಲ್ಲದವಂಗೆ ನಿಚ್ಚಣಿಗೆಯನೇರಲೇಕೆ?" ಎಂದು ಪ್ರಶ್ನಿಸುತ್ತಾ "ಭಕ್ತಿ-ಜ್ಞಾನ-ವೈರಾಗ್ಯ ಇಲ್ಲದವರಿಗೆ ಇಷ್ಟಲಿಂಗ ಏಕೆ?" ಎಂದು ಕೇಳಿದ್ದಾಳೆ. ಭಕ್ತಿ, ಜ್ಞಾನ, ವೈರಾಗ್ಯಗಳನ್ನು ತಿಳಿಸುವಾಗ ಉದಾಹರಣೆಗಳನ್ನು ನೀಡಿದಳು. "ಆಕಾಶಕ್ಕೆ ಹಾರುವಂಗೆ ದೋಟಿಯ ಕೋಲ ಹಂಗೇತಕಯ್ಯ? ಕಾಗೆಯ ಮರಿ ಕೋಗಿಲೆಯೇ, ಆಡಿನ ಮರಿ-ಆನೆಯಾಗುವುದೇ ಹುಲ್ಲುನಾಯಿ ಸಿಂಹದ ಮರಿಯಾಗುವುದೆ" ಹೀಗೆ ರಾಯಮ್ಮ ತಾತ್ವಿಕವಾಗಿ ಚಿಂತನೆ ನಡೆಸಿದಳು. ಬೇರೆಯವರಿಗೆ ತಿಳಿಯುವಂತೆ ಜೋರಾಗಿ ಮಂತ್ರ ಹೇಳುವ ಡಾಂಭಿಕರನ್ನು "ಕೊಂಬಿನ ಕುರಿಯಂತೆ ಕೂಗಿದರೇನು

ಲಿಂಗೈಕ್ಯರಾಗಬಲ್ಲರೆ?'' ಎಂದು ''ಏನು ತಿಳಿಯದೆ ಇದ್ದು ಬರೀ ಭಸ್ಮ ಧರಿಸಿದರೆ ಕತ್ತೆಬೂದಿಯಲ್ಲಿ ಬಿದ್ದಾಂತಾಯಿತ್ತು'' ಎಂಬ ಮಾರ್ಮಿಕ ನುಡಿಗಳನ್ನು ನೀಡಿದ್ದಾಳೆ.

''ಮಂಡೆಯ ಬೋಳಿಸಿಕೊಂಡು ತುಂಡುಗಂಬಳಿಯ
ಹೊದ್ದವರ ಕಂಡಡೆ ನಂಬಲಾರೆ'' ಎಂದ ಆಕೆ,

''ಕಳ್ಳಿಯ ಸಂಗವ ಮಾಡಿ, ಕಾಯ ವಿಕಾರ ಮುಂದುಗೊಂಡು
ನಿಜವಲ್ಲಭನ ಅರಿದೆನೆಂಬ ಕರ್ಮಿಗಳ ನೋಡಾ''[೧೬೯]

- ಎಂದು ತನ್ನ ವಚನಗಳಲ್ಲಿ ಡಾಂಭಿಕರನ್ನು, ನಾಮಧಾರಿಗಳನ್ನು, ವಿರಕ್ತರನ್ನು ವಿಡಂಬನೆ ಮಾಡಿ ಕಟುವಾಗಿ ಟೀಕಿಸಿದ್ದಾಳೆ. ಈ ಕಾಲಘಟ್ಟದ ಮನೋಭಾವವನ್ನು ಸಹ ವಚನಗಳಲ್ಲಿ ಕಾಣಬಹುದು. ರಾಯಮ್ಮ ವೇದ-ಶಾಸ್ತ್ರ-ಪುರಾಣಗಳನ್ನು ಖಂಡಿಸಿ, ಅವುಗಳು ಹೇಳುವ ಸುಳ್ಳುಗಳನ್ನು ಅಲ್ಲಗಳೆದಿದ್ದಾಳೆ. ಕೆಲ ವಚನಕಾರರನ್ನು ಕುರಿತು ಹೇಳುವಾಗ ಅವರೆಲ್ಲ ಕೈಲಾಸದಿಂದ ಭೂಮಿಗೆ ಬಂದವರು ಎಂದಿದ್ದನ್ನು ರಾಯಮ್ಮ ನಿರಾಕರಿಸಿ, ತನ್ನದೆ ಆದ ನಿಲುವನ್ನು ಹೀಗೆ ಹೇಳುತ್ತಾಳೆ.

''ಮಾಯಾವಾದದಿಂದ ಮರ್ತ್ಯಕ್ಕೆ ಬಂದೆನೆಂದು
ನುಡಿವವರ ನಾಲಗೆಯ ಕಿತ್ತು, ಕಾಲುಮೆಟ್ಟಿ ಸೀಳುವೆನು
ಹೊಟ್ಟೆಯ ಸೀಳಿ, ಮುಳ್ಳಿನ ರೊಂಪೆಯ ಮಡಗುವೆನು''[೧೭೦]

ಕೈಲಾಸ-ಮಾಯಾವಾದ, ಸ್ವರ್ಗ-ನರಕ-ವೇದ-ಉಪನಿಷತ್ತು ಇಂಥವುಗಳನ್ನು ನಂಬುವುದು ಯೋಗ್ಯವಲ್ಲ ಎಂಬುದು ಆಕೆಯ ವಾದ. ಒಟ್ಟಾರೆಯಾಗಿ ರಾಯಮ್ಮನ ವಚನಗಳಲ್ಲಿ ವಿಡಂಬನೆ-ಖಂಡನೆಯೊಂದಿಗೆ ಆಧ್ಯಾತ್ಮವೂ ಅನಂತವಾಗಿದೆ. ''ಅರಿವುಳ್ಳವಂಗೆ ಗುರು-ಲಿಂಗ-ಜಂಗಮ-ಪಾದೋದಕ-ಪ್ರಸಾದದ ಹಂಗೇಕೆ?'' ಎನ್ನುವಲ್ಲಿ ಆಧ್ಯಾತ್ಮದ ಪರಿ ತಿಳಿಯುತ್ತದೆ. ಸ್ತ್ರೀವಾದಿ ನೆಲೆಯಿಂದ ರಾಯಮ್ಮನನ್ನು ಗುರುತಿಸುವ ಜರೂರು ಇದೆ. ವೇದ-ಶಾಸ್ತ್ರಗಳನ್ನು ಅಲ್ಲಗಳೆಯುವಷ್ಟು ಸಾಮರ್ಥ್ಯವನ್ನು ಪಡೆದಿದ್ದು ಆಕೆ ಮಧ್ಯಕಾಲೀನ ಚರಿತ್ರೆಯಲ್ಲಿ ಮತ್ತು ಸ್ತ್ರೀವಾದಿ ನೆಲೆಯಲ್ಲಿ ವಿಶಿಷ್ಟವಾದ ಸ್ಥಾನ ಪಡೆದಿದ್ದಾಳೆ.

### ೪. ಆಯ್ದಕ್ಕಿ ಲಕ್ಕಮ್ಮ

ಆಯ್ದಕ್ಕಿ ಲಕ್ಕಮ್ಮ ಮತ್ತು ಈಕೆಯ ಗಂಡ ಮಾರಯ್ಯ ಕಲ್ಯಾಣದಲ್ಲಿ ನಡೆದ ಶಿವಾನುಭವದ ಮಹಿಮೆಯನ್ನು ಕೇಳಿ-ತಿಳಿದು ಕಲ್ಯಾಣಕ್ಕೆ ಬಂದು ನೆಲೆಸಿದ್ದರು. ಬಿದ್ದ ಅಕ್ಕಿಯನ್ನು ಆರಿಸಿಕೊಂಡು ತರುವುದೇ ಮಾರಯ್ಯನ ಕೆಲಸ. ಒಮ್ಮೆ ಮಾರಯ್ಯ ದಿನ ತರುವ ಅಕ್ಕಿಗಿಂತ ಹೆಚ್ಚು ಅಕ್ಕಿಯನ್ನು ತಂದಿದ್ದ. ಇದನ್ನು ನೋಡಿದ ಲಕ್ಕಮ್ಮ ಸಂತಸಪಡದೇ ಕೋಪಿಸಿಕೊಂಡು -

''ಆಸೆಯೆಂಬುದು ಅರಸಂಗಲ್ಲದೆ
ಶಿವಭಕ್ತರಿಗುಂಟೆ ಅಯ್ಯಾ''[೧೭೧]

- ಎಂದು ಹಿಂತಿರುಗಿ ಕಳಿಸಿ, ದಿನಕ್ಕೆ ಬೇಕಾದಷ್ಟನ್ನು ಮಾತ್ರ ಇಟ್ಟುಕೊಂಡಿದ್ದಳು. ಆಸೆಯು ಅರಸನಿಗೆ

ಮಾತ್ರ ಸೀಮಿತ. ಭಕ್ತರಿಗೆ ಇರಬಾರದು ಎನ್ನುವುದು ಗಮನಾರ್ಹವಾದ ಅಂಶ. ಇದು ಪ್ರಜಾರಾಜ್ಯದ ಇಂದಿನ ಸರ್ವ ಸ್ವಾತಂತ್ರ್ಯದಲ್ಲಿ ಇರುವ ಅಧಿಕಾರಿ-ರಾಜಕಾರಣಿಗಳಿಗೆ ಒಂದು ಹೊಸ ಪ್ರಶ್ನೆಯಂತೆ ಕಾಣುತ್ತದೆ.ಸಂಬಳದೊಂದಿಗೆ ಗಿಂಬಳ ತಿನ್ನುವವರಿಗೆ ಲಕ್ಕಮ್ಮನ ಮಾತು ಅನ್ವಯಿಸುವುದೆ? ಈಕೆಯಂತೆಯೆ ಅಂದಿನ ಸಮಕಾಲೀನ ಮಹಿಳೆಯರು ಸಹ ಗಂಡನ ಹೆಚ್ಚಿನ ಆದಾಯವನ್ನು ಪ್ರಶ್ನಿಸಿದವರೇ ಆಗಿರಬಹುದು. ಲಕ್ಕಮ್ಮನಂಥ ಹೆಂಡತಿಯರಿಂದಲೇ ಮಾರಯ್ಯನಂಥವರು ಪುರಾಣ ಪ್ರಸಿದ್ಧ ವ್ಯಕ್ತಿಗಳಾಗಿದ್ದರು. ಆದರೆ ಇದುವರೆಗಿನ ಚರಿತ್ರೆ ಹೆಣ್ಣಿನ ಇಂಥ ವಿಶಿಷ್ಟ ಅಂಶಗಳು ದಾಖಲೆಗಳನ್ನು ದಾಖಲಿಸಿಕೊಂಡಿಲ್ಲ. ಸ್ತ್ರೀವಾದ ಇಂಥ ಕಡೆಗೆ ಪ್ರವೇಶಿಸಿ, ದಾಖಲೆಗಳನ್ನು ಗುರುತಿಸಿ, ವಿಶ್ಲೇಷಿಸಬೇಕಿದೆ. ಪತಿಯು ಧರ್ಮಕಾರ್ಯಗಳಲ್ಲಿ ತಪ್ಪನ್ನು ಎಸಗಿದರೆ ಅವುಗಳನ್ನು ತಿದ್ದುವ ಹೊಣೆಗಾರಿಕೆ ಹೆಂಡತಿಯದು ಎಂಬ ಮಾತಿಗೆ ಲಕ್ಷಮ್ಮ ಸಾಕ್ಷಿಯಾಗಿದ್ದಾಳೆ. ಮಾರಯ್ಯ ಕಾಯಕ ಮರೆತು ಅನುಭಾವಗೋಷ್ಠಿಯಲ್ಲಿ ಮೈಮರೆತಾಗ ''ಕಾಯಕ ನಿಂದಿತ್ತು ಹೋಗಯ್ಯ'' ಎನ್ನುವ ಲಕ್ಕಮ್ಮನ ಸಮಯ ಪ್ರಜ್ಞೆಯನ್ನು ಸಹ ಗಮನಿಸಬಹುದು. ಸ್ತ್ರೀ-ಪುರುಷರ ನಡುವಿನ ಲಿಂಗಭೇದವನ್ನು ಈಕೆ ''ಕೂಟಕ್ಕೆ ಸತಿಪತಿ ಎಂಬ ನಾಮವಲ್ಲದೆ ಅರಿವಿಂಗೆ ಬೇರೊಂದೊಡಲುಂಟೆ?'' ಎಂದಿರುವುದು ಸ್ತ್ರೀವಾದಿ ನಿಲುವನ್ನು ವ್ಯಕ್ತಪಡಿಸುವಂಥದ್ದು.

**೫. ಕಾಳವ್ವೆ**

ಕಾಳವ್ವೆಯ ಗಂಡ ಉರಿಲಿಂಗ ಪೆದ್ದಣ. ಭಕ್ತನ ಲಕ್ಷಣ, ವ್ರತಾಚರಣೆಯ ಮಹತ್ತ್ವ, ಪ್ರಸಾದದ ಮಹಿಮೆ, ಕಾಯಕನಿಷ್ಠೆ, ಈಕೆಯ ವಚನಗಳಲ್ಲಿ ಕಂಡುಬರುತ್ತವೆ. ಕಾಳವ್ವೆ ಡಂಭಾಚಾರಕ್ಕಾಗಿ ಪೂಜೆ ಮಾಡುವ ಶ್ರೀಮಂತರನ್ನು ತುಡುಗುಣಿಗೆ ಹೋಲಿಸಿದ್ದಾಳೆ. ಅಂಥವರ ಮನೆಯಲ್ಲಿ ಸೇವೆ ಕೊಂಬಾತ ಭಕ್ತನಲ್ಲ, ಪೂಜೆಗೊಂಬಾತ ಜಂಗಮನಲ್ಲ ಅಂಥವರಿಗೆ ನಾಯಕನರಕ ತಪ್ಪಿದ್ದಲ್ಲ ಎಂದು ಹೇಳುವ ಕಾಳವ್ವೆ ಡಾಂಭಿಕ ಶ್ರೀಮಂತ ವರ್ಗದ ವಿರುದ್ಧ ಇವಳು ಬಂಡೆದ್ದದ್ದು ಕಾಣುತ್ತದೆ. ಕಟ್ಟಿಗೆಯನ್ನೇ ಉದಾಹರಣೆಗೆ ನೀಡಿದ ಕಾಳವ್ವೆ ''ತೊಬರದ ಕೊಳ್ಳಿಯಂತೆ ಉರಿವಾತ, ಸುಳ್ಳಾಡುವಾತ, ಭಕ್ತರ ಕುಲವನೆತ್ತಿ ನಿಂದಿಸುವಾತ ಇಂಥವರೆಲ್ಲಾ ಭಕ್ತರೇ?'' ಎಂದು ಪ್ರಶ್ನಿಸುತ್ತಾ, ಈ ರೀತಿ ನಿಂದೆಯಾಡುವವರು ಕೋಟಿ ಜನ್ಮಗಳಲ್ಲೂ ಹಂದಿಗಳಾಗಿ ಹುಟ್ಟುತ್ತಾರೆ ಎಂದು ಹೇಳಿದಳು. ಜಾತಿವ್ಯವಸ್ಥೆಯನ್ನು ಕಟುವಾಗಿ ಖಂಡಿಸಿದ್ದನ್ನು ನೋಡಬಹುದು. ಅವಳು ತನ್ನ ವಚನವೊಂದರಲ್ಲಿ -

''ಕುರಿ ಕೋಳಿ ಕಿರಿ ಮೀನು ತಿಂಬವರಿಗೆಲ್ಲ ಕುಲಜ ಕುಲಜರೆಂದೆಂಬರು
ಶಿವಗೆ ಪಂಚಾಮೃತವ ಕರೆವ ಪಶುವ ತಿಂಬ ಮಾದಿಗ ಕೀಳು ಜಾತಿಯೆಂಬರು
ಅವರೆಂತು ಕೀಳು ಜಾತಿಯಾದರು. ಜಾತಿಗಳು ನೀವೇಕೆ ಕೀಳಾಗಿರೊ?
ಬ್ರಾಹ್ಮಣನುಂಡುದು ಪುಲ್ಲಿಗೆ ಶೋಭಿತವಾಗಿ ನಾಯಿ ನೆಕ್ಕಿ ಹೋಯಿತು
ಮಾದಿಗರುಂಡುದು ಪುಲ್ಲಿಗೆ ಬ್ರಾಹ್ಮಣನಿಗೆ ಶೋಭಿತವಾಯಿತು''[illegible]

- ಎಂದು ಹೇಳುತ್ತಾಳೆ. ಕಾಳವ್ವೆಯಿಂದ ಬಂದ ಇಂಥ ಕ್ರಾಂತಿಕಾರಿ ವಚನ ಆ ಕಾಲಘಟ್ಟದ ಚಾರಿತ್ರಿಕ ದೃಷ್ಟಿಯಿಂದಲೂ, ಸ್ತ್ರೀವಾದಿ ನೆಲೆಯಿಂದಲೂ ಮಹತ್ತ್ವದ್ದು. ಶ್ರೇಷ್ಠ ಕುಲದವರೆಂದು ಹೇಳುವವರು ವಿರುದ್ಧ

ಕೋಳಿ-ಕುರಿ ತಿನ್ನುತ್ತಿರುವವರಿಗೆ ಬಾಯಿ ಮುಚ್ಚಿಸಿದೆ. ಜಾತಿಪದ್ಧತಿ ಬಗ್ಗೆ ಸವಾಲೊಡ್ಡಿ ಧೈರ್ಯದಿಂದ ಬದುಕಿದ ಕಾಳವ್ವೆ ಪ್ರಧಾನಳು.

**೬. ಮಸಣಮ್ಮ**

ಎಡೆಮಠದ ಮಸಣಮ್ಮನ ಗಂಡ ನಾಗಿದೇವಯ್ಯ. ಮಸಣಮ್ಮನ ವ್ರತವು ಶಿವಭಕ್ತನಿಗೆ ಮಾತ್ರ ಸಲ್ಲುತ್ತದೆ. ಸಾಮಾನ್ಯನಿಗಲ್ಲ ಎಂದಿದ್ದಾಳೆ. "ಕಾಗೆಯ ನಾಯಿ ತಿಂದವರಿಲ್ಲ, ವ್ರತಭ್ರಷ್ಟನ ಕೂಡಿದವರಿಲ್ಲ" ಎಂದು ವ್ರತಬಾಹಿರನನ್ನು ನಿಂದಿಸುತ್ತಾಳೆ. ಮಸಣಮ್ಮನಂತೆ ಕದಿರಕಾಯಕ ಕಾಳವ್ವೆ ಸಹ ಪ್ರಮುಖ ವಚನಕಾರ್ತಿ. ಇವಳು ಕೂಡ ವ್ರತನಿಷ್ಠೆಯ ಬಗ್ಗೆ ಹೇಳಿದ್ದಾಳೆ. ರಾಟೆ ಮುರಿದರೆ ಹೇಗೆ ಕಾರ್ಯ ನಿಲುವುದೋ ಹಾಗೆ ವ್ರತಹೀನನನ್ನು ಕೂಡಿದರೆ ಜೀವನ ವ್ಯರ್ಥ ಎಂದಿದ್ದಳು. ಕದಿರೆ ರೆಮ್ಮವ್ವೆ ಸಹ ಪ್ರಮುಖ ವಚನಕಾರ್ತಿ. ಈಕೆ ನೂಲುವ ಕಾಯಕದವಳು. "ಎಲ್ಲರ ಗಂಡಂದಿರು ಗಜವೇಂಟೆಕಾರರು ಎನ್ನ ಗಂಡ ಮನವೇಂಟೆಕಾರ" ಎಂಬ ನುಡಿಗಳಲ್ಲಿ ಮಧುರಭಾವ ತುಂಬಿದೆ.

"ನಾ ತಿರುಹುವ ರಾಟೆಯ ಕುಲಜಾತಿಯ ಕೇಳಿರಣ್ಣಾ :
ಅಡಿಯ ಹಲಗೆ ಬ್ರಹ್ಮ, ತೋರಣ ವಿಷ್ಣು :
ನಿಂದ ಬೊಂಬೆ ಮಹಾರುದ್ರ :
ಅರಿವೆಂಬ ಕದಿರು, ಭಕ್ತಿಯೆಂಬ ಕೈಯಲ್ಲಿ ತಿರುಹಲಾಗಿ
ಸುತ್ತಿತ್ತು ನೂಲು: ಕದಿರು ತುಂಬಿತ್ತು"[೧೭೩]

- ಎಂದು ರಾಟೆಯನ್ನು ಅನುಭಾವದ ದೃಷ್ಟಿಯಿಂದ ಕಾಣುತ್ತಾಳೆ. ಬಸವಣ್ಣ, ಚೆನ್ನಬಸವಣ್ಣ, ಪ್ರಭುದೇವರ ಕರುಣದಿಂದ ತಾನು ಬದುಕಿದೆ ಎಂದಿದ್ದಾಳೆ.

**೭. ರೇವಮ್ಮ**

ಕನ್ನಡಿ ಕಾಯಕದ ರೇವಮ್ಮನ ವಚನಗಳು ಪ್ರಸಾದ ಪ್ರೀತಿ, ವ್ರತಾಚಾರನಿಷ್ಠೆ, ಅವುಗಳಿಗೆ ಚ್ಯುತಿ ತಂದವರ ಬಗೆಗಿನ ಕೋಪ ಪರಿಣಾಮಕಾರಿಯಾಗಿದೆ. ಇವಳು "ಕೈಯಲ್ಲೂ ಕನ್ನಡಿ ಇರಲು ತನ್ನ ತಾ ನೋಡಬಾರದೆ? ಲಿಂಗ ಜಂಗಮ ಪ್ರಸಾದಕ್ಕೆ ತಪ್ಪಿದಲ್ಲಿ ಕೊಲ್ಲಬಾರದೆ?" ಎಂದು ಗಣಾಚಾರದ ನಿಷ್ಠೆಯನ್ನು ಮೆರಿಯುತ್ತಾಳೆ.

**೮. ರೇಚವ್ವೆ**

ಕಾಟಕೂಟಯ್ಯಗಳ ರೇಚವ್ವೆಯ ವ್ರತಾಚಾರ ನಿಷ್ಠೆಯನ್ನು ವಚನಗಳು ಒಳಗೊಂಡಿವೆ. ಈ "ಬಂಜೆ ಆವಿಂಗೆ ಕ್ಷೀರವುಂಟೆ? ವ್ರತಹೀನನ ಬೆರೆಯಲುಂಟೆ?" ಎಂದು ಪ್ರಶ್ನಿಸಿದ್ದಳು. ವ್ರತಹೀನರನ್ನು ಬೆರೆಯಬಾರದು. ಬೆರೆತರೆ ಬಂಜೆ ಆಕಳಿನ ಸಹವಾಸದಂತೆ ವ್ಯರ್ಥ ಎಂದು ಹೇಳಿದ್ದಾಳೆ.

### ೯. ಕಾಮಮ್ಮ

ಕಾಲಕಣ್ಣಿಯ ಕಾಮಮ್ಮನ ವಚನವು ಗುರುಲಿಂಗಜಂಗಮರ ಅಂತಃಕರಣ ಪೂರ್ವಕವಾದ ಆರಾಧನೆಯ ಮಹತ್ತ್ವವನ್ನು ಒಳಗೊಂಡಿದೆ. "ಎನ್ನ ಕರಣಂಗಳ ಲಿಂಗದಲ್ಲಿ ಕಟ್ಟುವೆ, ಗುರುಲಿಂಗಜಂಗಮರ ಕಾಲುಕಟ್ಟುವೆ" ಎನ್ನುತ್ತಾಳೆ. ಗುರುಲಿಂಗಜಂಗಮಗಳು ಸದಾ ತನ್ನ ಬಳಿ ಇರಲೆಂಬ ಅಭೀಪ್ಸೆಯಿಂದ ಮಾನವರೂಪದಲ್ಲಿ ಗ್ರಹಿಸಿಕೊಂಡು ಅವುಗಳ ಕಾಲನ್ನು ಕಟ್ಟಿ ಆರಾಧಿಸಬೇಕೆಂಬ ಹಂಬಲವನ್ನು ಕಾಮಮ್ಮ ವ್ಯಕ್ತಪಡಿಸಿದಳು. ಹಾಗೆ ಪೂಜಿಸಿದವರನ್ನು "ವ್ರತಭ್ರಷ್ಟರು" ಎಂದು ನಿರ್ಭೀತಿಯಿಂದ ನಿಂದಿಸಿದಳು.

### ೧೦. ಲಕ್ಷ್ಮಮ್ಮ

ಕೊಂಡಿಮಂಚಣ್ಣಗಳ ಲಕ್ಷ್ಮಮ್ಮನ ವಚನವು ವ್ರತ ನಿಷ್ಠೆಯನ್ನು ಒಳಗೊಂಡಿರುವಂಥದ್ದು. ಆಯುಷ್ಯ ತೀರಲು ಮರಣ, ವ್ರತ ತಪ್ಪಲು ಶರೀರ ಕಡೆ. ಮೇಲುವ್ರತವೆಂಬ ತೂತರ ಮೆಚ್ಚ ನಮ್ಮ ಅಗಜೇಶ್ವರಲಿಂಗ ಎಂದಿದ್ದಾಳೆ. ವ್ರತವನ್ನು ಪ್ರಾಣ ಸ್ವರೂಪಕ್ಕೆ ಹೋಲಿಸಿ, ಅದಕ್ಕೆ ಭಂಗ ಬಂದು ವ್ರತ ಹೋದರೆ ಪ್ರಾಣ ಹೋದಂತೆ ಎಂಬುದು ಇವಳ ಚಿಂತನೆ.

### ೧೧. ಕೊಟ್ಟಣದ ಸೋಮಮ್ಮ

ಕೊಟ್ಟಣದ ಸೋಮಮ್ಮನ ವಚನವು ಸಹ ವ್ರತ ನಿಷ್ಠೆಯನ್ನು ಒಳಗೊಂಡಿದೆ. ಸೋಮಮ್ಮ ದಿನಾಲು ಭಕ್ತರ ಮನೆಯ ಅಕ್ಕಿಯನ್ನು ಕುಟ್ಟುವುದು, ಅದರಿಂದ ಬಂದ ಧನದಿಂದ ಗುರುಲಿಂಗಜಂಗಮ ಸೇವೆ ಮಾಡುವುದೇ ಇವಳ ಕಾರ್ಯ. "ಹದ ತಪ್ಪಿ ಕುಟ್ಟಲು ನುಚ್ಚಲ್ಲದೆ ಅಕ್ಕಿಯಿಲ್ಲ ವ್ರತಹೀನನ ನೆರೆಯ ನರಕವಲ್ಲದೆ ಮುಕ್ತಿಯಿಲ್ಲ" ಎಂದು ತಿಳಿಸಿದವಳು. "ತಿಳಿದು, ತಿಳಿಯದೆ ವ್ರತಹೀನರ ಜೊತೆ ಸೇರಿದರೆ ಕಾದ ಕತ್ತಿಯಲ್ಲಿ ಕಿವಿಯ ಕೊಯ್ವರಯ್ಯ" ಎಂದು ಹೇಳಿದ್ದಳು. ಒಂದು ವೇಳೆ ತಿಳಿಯದೆ ಬೆರೆತರೆ ಅದು ತಪ್ಪಲ್ಲವೆಂದೂ, ತಿಳಿದು ಬೆರೆತರೆ ಮಹಾ ಅಪರಾಧ, ಅದಕ್ಕೆ ಶಿಕ್ಷೆಯು ಉಂಟು ಎಂದು ತಿಳಿಸಿದ್ದಳಲ್ಲದೆ ತಾನು ವ್ರತಹೀನರ ಜೊತೆ ಬೆರೆಯುವುದಿಲ್ಲ ಎಂದು ನಿರ್ಭಯವಾಗಿ ಹೇಳಿದಳು. ಹೀಗೆ ಹೇಳುವುದರ ಮೂಲಕ ತಾನು ವ್ರತಹೀನರ ಜೊತೆ ಬೆರೆಯುವುದಿಲ್ಲ ಎಂಬ ದೃಢ ನಿಶ್ಚಲ ನಿರ್ಧಾರವನ್ನು ಅಭಿವ್ಯಕ್ತಿಸಿರುವುದು ತಿಳಿದುಬರುತ್ತದೆ.

### ೧೨. ಗಂಗಾಬಿಕೆ

ಗಂಗಾಂಬಿಕೆಯ ತಂದೆ ಬಲ್ಲದೇವ. ಪತಿ ಬಸವಣ್ಣ. ಈಕೆ "ಪತಿಯಾಜ್ಞೆಯಲ್ಲಿ ಚರಿಪಸತಿಗೇಕೆ ಪ್ರತಿಜ್ಞೆಯು" ಎಂದಳು. ಅಲ್ಲದೆ ಪತಿಯ ನಿಷ್ಠೆಯನ್ನು ಪಾಲನೆ ಮಾಡಿರುವಳು. ಇವಳ ಬಹುಪಾಲು ವಚನಗಳು ವೈಯಕ್ತಿಕ ವಿಷಯಗಳನ್ನು ಒಳಗೊಂಡಿರುತ್ತವೆ.

### ೧೩. ಕೇತಲೆ

ಕೇತಲೆಯ ವಚನಗಳು ವ್ರತಾಚಾರವನ್ನು ಕುರಿತಂತೆ ಇರುತ್ತದೆ. ವ್ರತಭ್ರಷ್ಟರನ್ನು ಬೆರೆಯಬಾರದೆಂದು ಎಚ್ಚರಿಸಿವೆ. ಈಕೆ ಲಿಂಗಾಚಾರಿಗಳ ಅಂಗಳಕ್ಕೆ ಹೋಗಿ ಲಿಂಗಾರ್ಚಿತ ಮಾಡುವಲ್ಲಿ ಸಂದೇಹವಿಲ್ಲದಿರಬೇಕೆಂದು ಹೇಳಿದಳು.

## ೧೪. ಗೊಗ್ಗವ್ವೆ

ಗೊಗ್ಗವ್ವೆಯ ಎರಡು ವಚನಗಳು ಸ್ತ್ರೀ-ಪುರುಷರ ಸಮಾನತೆಯ ಬಗೆಗೆ ಆಲೋಚನೆ ಮಾಡುವಂಥವು. "ಮೊಲೆ ಮೂಡಿ ಬಂದಡೆ ಹೆಣ್ಣೆಂಬರು, ಮೀಸೆಕಾಸೆ ಬಂದಡೆ ಗಂಡೆಂಬರು ಈ ಉಭಯದ ಜ್ಞಾನ ಹೆಣ್ಣೋ ಗಂಡೋ" ಎಂದು ಕೇಳಿದಳು. ಅಲ್ಲದೆ ಜ್ಞಾನಕ್ಕೆ ಸ್ತ್ರೀ-ಪುರುಷರೆಂಬ ಲಿಂಗಭೇದ ಇಲ್ಲ ಎಂದು ಹೇಳಿದ್ದಳು. ಪುರುಷ ಪ್ರಧಾನ ಸಮಾಜ ಯಾವಾಗಲೂ ಹೆಣ್ಣನ್ನು ಒಡವೆ, ಆಸ್ತಿ ಎಂದೇ ಪರಿಗಣಿಸಿತ್ತು. ಅಲ್ಲದೆ ಪ್ರೀತಿಸುವ ಹಕ್ಕು, ಕೆಲಸ ಗಂಡಿಗೆ ಮಾತ್ರ ಎಂದು ಹೇಳಿದೆ. ಪುರುಷ ಅಹಂನ್ನು ಪ್ರದರ್ಶಿಸಿದ್ದ. ಆದರೆ ಹೆಣ್ಣು ತಾನಾಗಿಯೇ ಪ್ರೀತಿಸಿದ್ದರೆ, ಆಕೆಗೆ ನಡತೆಗೆಟ್ಟವಳು ಎಂದು ಒಂದು ಪದವಿ ನೀಡಿದ್ದ. ಇಂಥ ನೀತಿಯನ್ನು ಗೊಗ್ಗವ್ವೆ ಪ್ರಶ್ನಿಸಿ ಹೆಣ್ಣಿಗೂ ಮೋಹಿಸುವ ಹಕ್ಕು ಇದೆ ಎಂದು ಪುರುಷ ಪ್ರಧಾನ ಸಮಾಜದ ಸ್ಥಾಪಿತ ಮೌಲ್ಯವನ್ನು ಧಿಕ್ಕರಿಸಿದ್ದಾಳೆ. ಈಕೆ ಒಮ್ಮುಖ ಹೇರಿಕೆಯ ನೀತಿಯನ್ನು ವಿರೋಧಿಸಿದ್ದು ವ್ಯಕ್ತವಾಗಿದೆ.

## ೧೫. ವೀರಮ್ಮ

ವೀರಮ್ಮನ ಗಂಡ ದಸರಯ್ಯ. ವೀರಮ್ಮ 'ದಯವೇ ಧರ್ಮದ ಮೂಲ' 'ಜೀವಿಯ ನೋವೇ ಲಿಂಗದ ನೋವು' ಎಂದು ಭಾವಿಸಿದ್ದಳು. 'ಭಕ್ತ ವ್ರತಹೀನರನ್ನು ಅರಿತು ಬೆರೆಯಲಾರ, ಬೆರೆತರೆ ಅವನಿಗೆ ನರಕ ತಪ್ಪಿದ್ದಲ್ಲ' ಎಂದು ವ್ರತನಿಷ್ಠೆಯನ್ನು ತೋರಿದ್ದಾಳೆ.

## ೧೬. ದುಗ್ಗಳೆ

ದುಗ್ಗಳೆಯ ಗಂಡ ಜೇಡರ ದಾಸಿಮಯ್ಯ. ವಚನಕಾರರ ದಾಂಪತ್ಯ ಶ್ರೇಷ್ಠತೆಯ ತತ್ತ್ವಕ್ಕೆ ಬದ್ಧಳಾಗಿ ಗಂಡನ ಪರೀಕ್ಷೆಗಳಲ್ಲಿ ಯಶಸ್ವಿಯಾಗಿದ್ದಳು. ದುಗ್ಗಳೆಯು ಗುಣ-ಶೀಲ-ಸ್ವಭಾವಗಳನ್ನು ದಾಸಿಮಯ್ಯ -

"ಬಂದುದನರಿದು ಬಳಸುವಳು
ಬಂದುದ ಪರಿಣಾಮಿಸುವಳು
ಬಂಧುಬಳಗವ ಮರಸುವಳು
ದುಗ್ಗಳೆಯ ತಂದು ಬದುಕಿದೆನು ಕಾಣಾ ರಾಮನಾಥ"[೧೬೪].

- ಎಂದು ತನ್ನ ವ್ಯಕ್ತಿತ್ವ ವಿಕಾಸವಾಗುವಲ್ಲಿ ದುಗ್ಗಳೆಯ ಪಾತ್ರ ಎಂಥದ್ದು ಎಂದು ತಿಳಿಸಿದ್ದಾನೆ. ಚರಿತ್ರೆಯುದ್ದಕ್ಕೂ ಹೆಣ್ಣು ಗಂಡಿನ ಶ್ರೇಯಸ್ಸಿಗಾಗಿ ಜೀವಿಸಿದ್ದಾಳೆ ಎಂಬ ಈ ಉಲ್ಲೇಖ ಮಹತ್ತ್ವದ್ದು.

## ೧೭. ನಾಗಲಾಂಬಿಕೆ

ನಾಗಲಾಂಬಿಕೆ ತನ್ನ ಪೂರ್ವಾರ್ಧ ಬದುಕಿನಲ್ಲಿ ಬಸವಣ್ಣನನ್ನು ಉತ್ತರಾರ್ಧದಲ್ಲಿ ಚನ್ನಬಸವಣ್ಣನನ್ನು ರೂಪಿಸಿದ್ದಳು. ಕಲ್ಯಾಣ ಕ್ರಾಂತಿಯ ಸಮಯದಲ್ಲಿ ವಚನಕಾರರ ಬಳಗದ ನಾಯಕಿಯಾಗಿ ದಕ್ಷಿಣಕ್ಕೆ ಬಂದು ಉಳವಿಯಲ್ಲಿ ಐಕ್ಯಳಾದಳೆಂದು ತಿಳಿದು ಬರುತ್ತದೆ. ತನ್ನ ವಚನಗಳಲ್ಲಿ ವಚನಕಾರರನ್ನು ಸ್ತುತಿಸಿದ್ದಾಳೆ.

## ೧೮. ನೀಲಮ್ಮ

ನೀಲಮ್ಮ, ನೀಲಾಂಬಿಕೆ, ನೀಲಲೋಚನೆ ಎಂಬ ಹೆಸರುಗಳಿಂದ ಹೆಸರಾಗಿದ್ದ ನೀಲಮ್ಮ ಎರಡನೆಯ ಹೆಂಡತಿಯಾಗಿ ಬಸವಣ್ಣನನ್ನು ವರಿಸಿದ್ದಳು. ಸಾಮಾಜಿಕ ಸುಧಾರಣೆಯ, ಧಾರ್ಮಿಕ ಜಾಗ್ರತಿಯ ಸಂದರ್ಭದಲ್ಲಿ ಬಸವಣ್ಣನಿಗೆ ಹಿನ್ನೆಲೆ-ಮುನ್ನೆಲೆಯಾಗಿ ದುಡಿದಿದ್ದಳು. ಈಕೆ "ಬಸವನ ಅನುಭವದಿಂದ ವಿವರವ ಕಂಡು ವಿಚಾರ ಪತ್ನಿಯಾದೆನಯ್ಯ" ಎಂದಿದ್ದಾಳೆ.

## ೧೯. ಗುಡ್ಡವ್ವೆ

ಗುಡ್ಡವ್ವೆಯನ ಗಂಡ ಬತ್ತಲೇಶ್ವರ. ಈಕೆಯ ವಚನವು ವ್ರತದ ಆಚಾರ ನಿಷ್ಟೆಯನ್ನು ತಿಳಿಸುತ್ತದೆ. ಅಂತರಂಗ-ಬಹಿರಂಗವಾಗಿ ಮಾಡುವ ವ್ರತವೇ ಶುದ್ಧವಾದುದು ಎಂದಿದ್ದಾಳೆ. ವ್ರತವನ್ನು ಸರಿಯಾಗಿ ಮಾಡದೆ ಇರುವವರ ಸಹವಾಸ ನರಕವಾಸ ಎಂದಿದ್ದಾಳೆ.

## ೨೦. ಕಾಳವ್ವೆ

ಕಾಳವ್ವೆಯ ಗಂಡ ಬಾಚಿಕಾಯಕದ ಬಸವಯ್ಯ. ಕಾಳವ್ವೆಯು ತನ್ನ ವಚನಗಳಲ್ಲಿ ವ್ರತ-ಕಾಯಕ-ನುಡಿ ಕುರಿತಂತೆ ಹೇಳಿದ್ದಳು. "ಕೈತಪ್ಪಿ ಕೆತ್ತಲು ಕಾಲಿಗೆ ಮೂಲ, ಮಾತು ತಪ್ಪಿ ನುಡಿಯಲು ಬಾಯಿಗೆ ಮೂಲ, ವ್ರತಹೀನನ ನೆನೆಯಲು ನರಕಕ್ಕೆ ಮೂಲ" ಎಂದೂ, ಇವುಗಳನ್ನು ಸರಿಯಾಗಿ ಪಾಲಿಸಬೇಕು, ಇಲ್ಲವಾದರೆ ತೊಂದರೆಗೆ ಒಳಗಾಗಬೇಕಾಗುತ್ತದೆ ಎಂದು ಎಚ್ಚರಿಕೆಯನ್ನು ನೀಡಿದ್ದಾಳೆ.

## ೨೧. ಬೊಂತಾದೇವಿ

ಬೊಂತಾದೇವಿಯ ವಚನಗಳಲ್ಲಿ ಶಿವನ ಸ್ವರೂಪ, ಅನಂತತೆ, ಸರ್ವಂತರ್ಯಮಿತ್ತ್ವಗಳು ವ್ಯಕ್ತ ಆಗಿವೆ. "ಊರ ಒಳಗಣ ಬಯಲು, ಊರ ಹೊರಗಣ ಬಯಲೆಂದುಂಟೆ? ಎಂದು ಪ್ರಶ್ನಿಸಿದಾಕೆ.

## ೨೨. ಮುಕ್ತಾಯಕ್ಕ

ಮುಕ್ತಾಯಕ್ಕ ಅಣ್ಣನನ್ನೇ ಗುರುವಾಗಿಸಿಕೊಂಡಿದ್ದಳು. ಅಜಗಣ್ಣನ ಶವದ ಮುಂದೆ ದುಃಖಿಸುತ್ತಿದ್ದಾಗ ಅಲ್ಲಮಪ್ರಭುವಿನ ಸಮಾಧಾನ, ಅವನು ಕೇಳುವ ಜೀವನದ ನಿತ್ಯಾನಿತ್ಯತೆ, ಅನುಭಾವಿಯ ನಿಲುವು ಮೊದಲಾದವುಗಳಿಗೆ ಸರಿಯಾದ ಉತ್ತರವನ್ನು ನೀಡಿದ್ದಳು. ಅಲ್ಲಮನನ್ನು ಎದುರಿಸಿದವರಲ್ಲಿ ಮುಕ್ತಾಯಕ್ಕ ಹೊರತು ಬೇರೆ ಯಾರು ಇಲ್ಲ ಎನ್ನಬಹುದು. ಅಲ್ಲದೆ "ಸಿಡಿಲು ಹೊಯ್ದ ಬಾವಿಗೆ ಸೋಪಾನವುಂಟೆ ಕರ್ಪೂರದ ಪುತ್ಥಳಿಗೆ ಅಗ್ನಿಯ ಸಿಂಹಾಸನವನಿಕ್ಕಿ ಮೂಗನ ಕೈಯಲ್ಲಿ ಕಾವ್ಯವ ಕೇಳಿಸಿದಂತಿರಬೇಕು" ಮೊದಲಾದ ವಚನಗಳು ಮುಕ್ತಾಯಕ್ಕನ ಅಭಿವ್ಯಕ್ತಿಯ ಸೂಕ್ಷ್ಮತೆಯನ್ನು ಅಭಿವ್ಯಕ್ತಿಸುತ್ತವೆ.

## ೨೩. ಮಹಾದೇವಿ

ಮಹಾದೇವಿಯ ಗಂಡ ಮೋಳಿಗೆಯ ಮಾರಯ್ಯ. ಕಲ್ಯಾಣಕ್ಕೆ ಬಂದು ನೆಲೆಸಿದ ದಂಪತಿಗಳಿಬ್ಬರು ಕಟ್ಟಿಗೆಯನ್ನು ಮಾರುವ ಕಾರ್ಯದಲ್ಲಿ ನಿರತರಾಗಿದ್ದರು. ಇಂಥ ಕಾಯಕದಿಂದ ಬಂದ ಹಣವಲ್ಲಿಯೇ ಜಂಗಮರ ದಾಸೋಹಕ್ಕಾಗಿ ಖರ್ಚು ಮಾಡುತ್ತಿದ್ದವರು. ಇವರ ದಾಸೋಹಕ್ಕೆ ಬಂದವರು ಅಂಬಳಕದ ರುಚಿಯನ್ನು ಉಂಡವರು ಅಂಬಳಕದ ಬಗ್ಗೆ ಇತರರಿಗೂ ತಿಳಿಸುತ್ತಿದ್ದರು. ಈ ಅಂಬಳಕ ರುಚಿಯ ವಿಷಯ ಬಸವಣ್ಣನವರಿಗೆ ತಿಳಿಯಿತು. ಮಹಾದೇವಿಯ ಮನೆಗೆ ಹೋದ ಬಸವಣ್ಣ ಅಂಬಳಕವನ್ನು ಉಂಡು, ದಾಸೋಹದ ಕಾರ್ಯಕ್ಕಾಗಿ ಎರಡು ಸಾವಿರ ಹೊನ್ನಿನ ಚೀಲವನ್ನು ಬಿಟ್ಟು ಬಂದನೆಂದು ಹೇಳಲಾಗುತ್ತದೆ. ಪರರ ಹಣಕ್ಕೆ ಆಸೆ ಪಡದೆ ದಂಪತಿಗಳಿಬ್ಬರು ಆ ಹೊನ್ನನ್ನು ಜಂಗಮರಿಗೆ ಅರ್ಪಿಸಿದರು. ನಂತರದ ದಿನಗಳಲ್ಲಿ ಕಲ್ಯಾಣದಲ್ಲಿ ಕ್ರಾಂತಿಯಾಗಿ ಅನೇಕ ವಚನಕಾರರು, ವಚನಕಾರ್ತಿಯರು ಐಕ್ಯರಾಗಲು ಹೋಗುತ್ತಿದ್ದದು ಕಂಡುಬರುತ್ತದೆ. ಇದನ್ನು ಕಂಡ ಮಾರಯ್ಯನು ಕೂಡ ತಾನು ಕೈಲಾಸಕ್ಕೆ ಹೋಗುವೆ ಎಂದು ಹೇಳಿದ್ದನ್ನು ಕೇಳಿದ ಮಹಾದೇವಿ ಭಕ್ತರಿಗೆ "ಕಾಯಕವೇ ಕೈಲಾಸವಾದ ಬಳಿಕ ಬೇರೆ ಕೈಲಾಸವೇನು ಉಂಟು?" ಎಂದು ಪ್ರಶ್ನಿಸಿ, ಅವನು ಅಜ್ಞಾನವನ್ನು ಮುಚ್ಚಿದ ಕಣ್ಣನ್ನು ತೆರೆಸಿ, ಜ್ಞಾನ ಉಂಟಾಗಲು ಕಾರಣಳಾದಳು. ಅಲ್ಲದೆ ಮಾರಯ್ಯನನ್ನು ಸತ್ಯದ ಹಾದಿಗೆ ಕರೆದುಕೊಂಡು ಹೋದ ಕೀರ್ತಿ ಮಹಾದೇವಿಯದು.

## ೨೪. ರಾಯಮ್ಮ

ರಾಯಮ್ಮನ ಗಂಡ ರಾಯಸದ ಮಂಚಣ್ಣ. ರಾಯಮ್ಮನ ವಚನಗಳು ದೀಕ್ಷೆ, ವ್ರತದ ಮಹತ್ವ ಮೊದಲಾದವುಗಳನ್ನು ಒಳಗೊಂಡಿರುತ್ತವೆ. ಗುರುವಿನಿಂದ ಲಿಂಗದೀಕ್ಷೆಯಾದ ಬಳಿಕ ಭಕ್ತರಿಗೆ ಮೇಲುವ್ರತ, ಪುನರ್ದೀಕ್ಷೆ ಎಂಬುದು ಇಲ್ಲ. ವ್ರತ ತಪ್ಪಿದರೆ ಶರೀರವಿಡಿ ನರಕಕ್ಕೆ ಹೋಗುವುದು, ಮುಕ್ತಿಯಿಲ್ಲ ಎಂದಿದ್ದಾಳೆ.

## ೨೫. ಸತ್ಯಕ್ಕ

ಸತ್ಯಕ್ಕನ ವಚನಗಳು ಸತಿ-ಪತಿಭಾವ, ಸದಾಚಾರದಲ್ಲಿ ನಡೆಯುವ ಗುರು-ಶಿಷ್ಯ-ಜಂಗಮರ ಗುಣಲಕ್ಷಣ, ಡಾಂಭಿಕ ಗುರು-ಶಿಷ್ಯ-ಜಂಗಮರ, ಭವಿಗಳ ಟೀಕೆಯನ್ನು ಸ್ತ್ರೀ-ಪುರುಷರ ಸಮಾನತೆಯನ್ನು ಒಳಗೊಂಡಿವೆ. ಸತ್ಯಕ್ಕ ಲಿಂಗಭೇದವನ್ನು ನಿರಾಕರಿಸಿ ತನ್ನ ವಚನವೊಂದರ ಮುಖೇನ ಈ ರೀತಿ ತಿಳಿಸಿದ್ದಾಳೆ.

"ಮೊಲೆ ಮೂಡಿ ಇದ್ದುದೆ ಹೆಣ್ಣೆಂದು ಪ್ರಮಾಣಿಸಲಿಲ್ಲ
ಕಾಸೆ ಮೀಸೆ ಕಠಾರಿಯಿದ್ದುದೆ ಗಂಡೆಂದು ಪ್ರಮಾಣಿಸಲಿಲ್ಲ
ಅದು ಜಗದ ಹಾಹೆ, ಬಲ್ಲವರ ನೀತಿಯಲ್ಲ
ಏತರ ಹಣ್ಣಾದಡೂ ಮಧುರವೇ ಕಾರಣ
ಇದರಂದವ ನೀನೇ ಬಲ್ಲೆ ಶಂಭುಜಕ್ಕೇಶ್ವರಾ" [೧೭೫]

- ಎಂದು ಸ್ತ್ರೀಯರಲ್ಲಿನ ಮಧುರದಂತೆ, ಪುಷ್ಪದಲ್ಲಿಯ ವಾಸನೆಯಂತೆ, ದೇಹದಲ್ಲಿ ಅಡಗಿರುವ ಆತ್ಮನಿಗೆ ಸ್ತ್ರೀ-ಪುರುಷರೆಂಬ ಭೇದ ಕಲ್ಪಿಸಬಾರದು. ಅದು ಬಲ್ಲವರ ನೀತಿಯು ಅಲ್ಲ ಎಂದಿದ್ದಾರೆ. ಪರರ

ಹೆಣ್ಣು, ಹಣವನ್ನು ಬಯಸಬಾರದೆಂದು "ಪರಧನ ಪರಸ್ತ್ರೀ ಪರದೈವಂಗಳಿಗೆರಗದಿಪ್ಪುದೇ ನೇಮ" ಎಂದು ತಿಳಿಸಿದ್ದಾಳೆ.

### ೨೬. ಕಾಳವ್ವೆ

ಕಾಳವ್ವೆಯ ಗಂಡ ಸಿದ್ಧಬುದ್ಧಯ್ಯ. ಕಾಳವ್ವೆಯ ವಚನ ವ್ರತದ ಆಚರಣೆಯನ್ನು ಒಳಗೊಂಡಿರುವುದು. ವ್ರತಹೀನರ ಮತ್ತು ಲಿಂಗಬಾಹ್ಯರನ್ನು ಖಂಡಿಸಿದ ಕಾಳವ್ವೆ, ಅವರುಗಳ ಜೊತೆ ಮಾತನಾಡಲಾಗದು, ಅವರನ್ನು ಕಂಡರೆ ಸತ್ತ ನಾಯಿ, ಕಾಗೆಗಳು ಎಂದು ಹೇಳಿದಳು.

### ೨೭. ಸೂಳೆ ಸಂಕವ್ವೆ

ಸೂಳೆ ಸಂಕವ್ವೆಯ ವಚನವೂ ವ್ರತದ ಮಹತ್ತ್ವವನ್ನು ತಿಳಿಸುತ್ತದೆ. ವಚನಕಾರರ ಸಂಘಟನೆಯ ಮೂಲಕ ಸೂಳೆಯರು ಉತ್ತಮ ಬದುಕು ಕಂಡುಕೊಂಡರು ಎನ್ನುವುದಕ್ಕೆ ಸಂಕವ್ವೆ ಸಾಕ್ಷಿಯಾಗಿದ್ದಾಳೆ. ಸಂಕವ್ವೆ ವ್ರತವೊಂದನ್ನು ಕುರಿತಂತೆ "ವ್ರತಹೀನನರಿದು ಬೆರೆದಡೆ ಕಾದ ಕತ್ತಿಯಲ್ಲಿ ಕಿವಿ ಮೂಗು ಕೊಯ್ವರಯ್ಯ" ಎಂದಿದ್ದಾಳೆ. ವ್ರತ ತಪ್ಪಿದರೆ ಉಂಟಾಗುವ ಶಿಕ್ಷೆಯಿತ್ತು ಎಂದೂ ಅದಕ್ಕಾದರೂ ಹೆದರಿ ಜನ ಬದುಕುತ್ತಿದ್ದರು.

### ೨೮. ಲಿಂಗಮ್ಮ

ಲಿಂಗಮ್ಮನ ಗಂಡ ಹಡಪದ ಅಪ್ಪಣ್ಣ. ಲಿಂಗಮ್ಮನ ವಚನಗಳು ಮನದ ಚಂಚಲತೆ, ಮನದ ನಿಗ್ರಹವನ್ನು ಮಾಡುವ ವಿಧಾನ, ಗುರುಲಿಂಗ ಜಂಗಮರ, ವಚನಕಾರರ ನಡೆ-ನುಡಿ, ಆಚಾರನಿಷ್ಠೆ, ಡಾಂಭಿಕರ ಅವಹೇಳನ ಮೊದಲಾದವುಗಳನ್ನು ಒಳಗೊಂಡಿವೆ. ಲಿಂಗಮ್ಮ ವಚನಕಾರರಿಂದ ತನ್ನ ಕುಲದ ಸೂತಕ ಕಳೆದುಕೊಂಡಿದೆ ಎಂದು ತಿಳಿಸಿದ್ದಾಳೆ.

### ೨೯. ಗಂಗಮ್ಮ

ಗಂಗಮ್ಮನ ಗಂಡ ಹಾದರಕಾಯಕದ ಮಾರಯ್ಯ. ಕಾಯಕ ಸಮಾನತೆ ವ್ರತ ನಿಷ್ಠೆಗಳನ್ನು ವಚನಗಳು ಒಳಗೊಂಡಿರುತ್ತವೆ. "ಆವ ಕಾಯಕ ಮಾಡಿದರೂ ಒಂದೆ ಕಾಯಕವಯ್ಯಾ" ಎಂದು ತಿಳಿಸಿದಳು. ಜೊತೆಗೆ ವ್ರತಹೀನರ, ವ್ರತನಿಷ್ಠರನ್ನು ಬೆರೆಯುವುದು "ಕೋಗಿಲೆ ಕಾಗೆಯ ಸಂಗ ಮಾಡಿದಂತೆ" ಎಂದು ವ್ರತದ ಆಚರಣೆಯ ಮಹತ್ತ್ವವನ್ನು ತಿಳಿಸಿದ್ದಾಳೆ.

ಒಟ್ಟಿನಲ್ಲಿ ಸಮಾನತೆ, ಸ್ವಾತಂತ್ರ್ಯ ಪಡೆದ ಅನೇಕ ವಚನಕಾರ್ತಿಯರು ತಮ್ಮ ಕಾಲಘಟ್ಟದಲ್ಲಿ ಸಮಾಜದ ಸ್ಥಿತಿಗತಿ, ಜಾತಿವ್ಯವಸ್ಥೆ, ಧಾರ್ಮಿಕ ಆಚರಣೆಯ ವ್ರತಗಳನ್ನು ಡಾಂಭಿಕರನ್ನು ವಚನಗಳಲ್ಲಿ ವ್ಯಕ್ತಪಡಿಸಿದ್ದಾರೆ. ವೈದಿಕರನ್ನು ಟೀಕಿಸಿ, ಲಿಂಗಭೇದವನ್ನು ತಳ್ಳಿಹಾಕಿದ್ದಾರೆ. ಸ್ತ್ರೀವಾದಿ ನೆಲೆಯಿಂದ ವಚನಕಾರ್ತಿಯರ ಕುರಿತು ಇನ್ನಷ್ಟು ಅಧ್ಯಯನ ಕೈಗೊಳ್ಳುವ ಅವಶ್ಯಕತೆ ಇದೆ.

## ಈ. ವಚನಕಾರ್ತಿಯರು ವಚನಗಾರರ ಬಗ್ಗೆ ತಳೆದ ಚಿಂತನೆ

ವಚನಕಾರರು ಕಂಡ ರೀತಿಯಲ್ಲಿ ವಚನಕಾರ್ತಿಯರು ಸಮಾನತೆಯನ್ನು ಕುರಿತು ಚಿಂತಿಸಲಿಲ್ಲ. ತಮ್ಮ ಸಂಗಡದ ವಚನಕಾರರನ್ನು ಕುರಿತು ಆಲೋಚಿಸಿ, ವಚನಗಳನ್ನು ರಚಿಸಿದ್ದಾರೆ. ಅಕ್ಕಮಹಾದೇವಿ ಬಸವಣ್ಣನನ್ನು ವೇದ, ಶಾಸ್ತ್ರ, ಪುರಾಣಾದಿಗಳಿಗೆ ಅಗೋಚರವಾದ ವಾಙ್ಮಯಗಳಿಗೆ ನಿಲುಕದ, ಪರಶಿವ ಲಿಂಗವನ್ನು, ಅಜ್ಞಾನಿಗಳಾಗಿ ಹೋಗುತ್ತಿದ್ದ ಭವ ಭಾರಿಗಳಾದ ಹರಿಬ್ರಹ್ಮಾದಿ ದಾನವ, ಮಾನವರಿಗೆ ತಿಳಿಸಲು ಅವತರಿಸಿದ ಮಹಾಪುರುಷ ಎಂದು ಹೇಳಿದ್ದಾಳೆ. ಹಾಗೂ ಕಲ್ಯಾಣವನ್ನು ಕೈಲಾಸ ಮಾಡಿರುವ ಎಂದು ಭಾವಿಸಿಕೊಂಡಿರುವಳು. ಅಲ್ಲದೆ ತನ್ನ ಹೆತ್ತ ತಂದೆ, ಮೊದಲಾಚಾರ್ಯ ಗುರು, ಅವತಾರಿ ಎಂದು ಪೂಜ್ಯ ಭಾವನೆಯಿಂದ ಕಂಡು ಬಸವಣ್ಣ ಭಕ್ತಿ ಕೊಟ್ಟಣದ ಮನೆ ಎಂದು ಕರೆದಿದ್ದಾಳೆ. ನೀಲಮ್ಮನು ಕೂಡ ಬಸವಣನನ್ನು ಮಹಾಪುರುಷ ಎಂದಿದ್ದಾಳೆ. 'ಅನುಭವದ ಸಾರವೇ ನಿಜಸಾರವಾಗಿ ವಿವೇಕದ ಸಂಗವೇ ನಿಜ ಸಂಗವಾಗಿ ಭಾವದ ಬಯಲಿಗೆ ಬಣ್ಣವಿಬ್ಬವನು' ಎಂದು ಹೇಳಿ ತನ್ನ ಗಂಡ ಲೌಕಿಕ ಭಾವನೆಗಳಿಗಿಂತ ಆತ ಸಾಕ್ಷಾತ್ ಪರಮಾತ್ಮ ಎಂಬ ದೈವೀ ಭಾವನೆಯನ್ನು ಹೊಂದಿದ್ದಳು. ಅಕ್ಕನಾಗಮ್ಮ ಬಸವಣ್ಣನಿಗೆ ಸಹೋದರಿ ಆಗಿದ್ದರೂ ಆತನನ್ನೇ ಗುರುಸ್ವರೂಪದವನು ಎಂದು ಕೊಂಡಾಡಿದ್ದಾಳೆ. ಮುಕ್ತಾಯಕ್ಕನು ಬಸವಣ್ಣನನ್ನು ತನ್ನ ಭಾವಕ್ಕೆ ಗುರುವೆಂದು ಸ್ಮರಿಸಿದ್ದಳು. ಲಕ್ಕಮ್ಮ ಬಸವಪ್ರಸಾದಕೊಂಡು ತನ್ನ ಕಾಯ ಶುದ್ಧವಾಯಿತ್ತೆಂದು ಭಾವಿಸಿದಾಕೆ. ಕದಿರೆ ರೆಮ್ಮವ್ವೆ ತನ್ನ ಸ್ಥೂಲ ತನುವೇ ಆತ ಎಂದವಳು.

ವಚನಗಾರ್ತಿಯರಿಗೆ ಪುರುಷ 'ಮಾಯೆ'ಯಂತೆ ಕಂಡಿದ್ದಾನೆ. ಮಹಾದೇವಿಯಕ್ಕನಿಗೆ ಕೌಶಿಕ 'ಮಾಯೆ' ಆಗಿರುವಂತೆ ಇತರೆ ಸತಿ-ಪತಿಗಳಿಗೂ ಪರಸ್ಪರ ಅಸಹಕಾರ ವಿರುದ್ಧ ಸ್ವಭಾವಗಳು ಅವರಿಗೆ ಮಾಯೆಯಾಗಿ ಕಂಡಿವೆ. ಪುರುಷನಿಗೆ ಸ್ತ್ರೀಯರ ಚಾಂಚಲ್ಯ, ಅಪನಂಬಿಕೆಗಳು ಮಾಯೆ ಆಗಿ ಕೂಡಿವೆ. ಹೆಣ್ಣಿನ ಮನಸ್ಸು ಚಂಚಲ ಎನ್ನುವ ಪುರುಷನಿಗೆ ತಾನು ಹೆಣ್ಣಿಗೆ ಸೋಲುವ ಭಯವಿದುರುವುದು ತಿಳಿಯುತ್ತದೆ. ಅಂತೆಯೇ ಅವನು ಹೆಣ್ಣನ್ನು ಚಂಚಲನೆ ಎಂದು ಆರೋಪಿಸಿದ್ದಾನೆ. ಪುರುಷ ತನ್ನನ್ನು ಆಕರ್ಷಿಸುವ ಹೆಣ್ಣಿಗೆ ತಾಯಿಯಂತೆ ಕಂಡರೆ ಅವನಿಗೂ ಮಾಯಾ ನಿರಸನವಾಗುವುದು ಎಂದು ಅಕ್ಕಮಹಾದೇವಿ ಸೂಚಿಸಿದ್ದಾಳೆ.

ಮಹಿಳೆ ತನ್ನ ಗಂಡನನ್ನು ಕುರಿತು ಆಲೋಚಿಸುವುದು ಎಂದರೆ ಅವನಿಗಾಗಿ ತನ್ನನ್ನು ತಿದ್ದಿಕೊಳ್ಳುವುದು ಎನ್ನುವಂತಾಗಿದೆ. ಗಂಡಿನ ಹೊರತಾಗಿ ಅನ್ಯ ಪುರುಷರನ್ನು ಚಿಂತಿಸುವುದೇ ಅಪರಾಧ. ಅದು ಅಸಂಸ್ಕೃತಿಯ ಲಕ್ಷಣ ಎನ್ನುವ ಕಾಲದಲ್ಲಿ ಅನೇಕ ವಚನಕಾರ್ತಿಯರು ವಚನಕಾರರನ್ನು ಚಿಂತಿಸಿರುವುದು ವಿಶೇಷ ಹಾಗೂ ಗಮನಾರ್ಹ. ಈ ಬಗೆಯ ಅನೇಕ ವಿಚಾರಗಳನ್ನು ಸ್ತ್ರೀವಾದಿ ನೆಲೆಯಿಂದ ಗಂಭೀರವಾಗಿ ಚರ್ಚಿಸುವ ಜರೂರು ಇದೆ.

## ಉ. ಸಾಹಿತ್ಯ ಮತ್ತು ಮಹಿಳೆಯರು

ಕನ್ನಡ ಸಾಹಿತ್ಯದ ಮೊದಲ ಕವಿಯತ್ರಿ 'ಕಂತಿ' ಎನ್ನುವ ವಿಚಾರದಲ್ಲಿ ಒಮ್ಮತವಿಲ್ಲವಾಗಿದೆ. 'ಕಂತಿ' ಇದ್ದಳು ಎನ್ನಲು ಕಂತಿ-ಹಂಪರ ಸಮಸ್ಯೆಗಳ ಪದ್ಯಗಳು, ನಾಗಕುಮಾರ ಚರಿತ್ರೆ, ರಾಜಾವಳಿಕತೆ, ನಾಗಚಂದ್ರ-ಕಂತಿಯರ ದಂತಕಥೆಗಳು, ಕಂತಿ ಇರುವಿಕೆಯ ಬಗ್ಗೆ ಮಾಹಿತಿ ನೀಡುತ್ತವೆ. ಹೊಯ್ಸಳರ ಬಲ್ಲಾಳನ ಆಸ್ಥಾನದಲ್ಲಿ

ನಾಗಚಂದ್ರನೊಂದಿಗೆ ಕಂತಿ ಇದ್ದಳು ಎಂದು ತಿಳಿದುಬಂದಿದ್ದರೂ, ನಾಗಚಂದ್ರನು ಎಲ್ಲಿಯೂ ಕಂತಿ ಬಗ್ಗೆ ಹೇಳಿಲ್ಲ. ಹೀಗಿರುವಾಗ ಕಂತಿ ಕಾಲ್ಪನಿಕ ವ್ಯಕ್ತಿಯೆ ಎಂಬ ಅನುಮಾನ ಸೆಳೆಯುತ್ತದೆ. ಅಲ್ಲದೆ ಕಂತಿಯು ಇದ್ದರೆ ಯಾವ ಕಾಲಘಟ್ಟದಲ್ಲಿ ಇದ್ದಳು ಎನ್ನುವ ವಿಚಾರದಲ್ಲಿಯೂ ಒಮ್ಮತವಿಲ್ಲ. ಸ್ತ್ರೀವಾದಿ ಅಧ್ಯಯನಕಾರರಿಗೆ ಕಾಲಘಟ್ಟದ 'ಕಂತಿ' ಕುರಿತು ಅಧ್ಯಯನ ಸವಾಲಿನದಾಗಿದೆ.

ಹನ್ನೆರಡನೆಯ ಶತಮಾನದಲ್ಲಿ ಬಹುಸಂಖ್ಯೆಯ ವಚನಕಾರ್ತಿಯರು ವಚನಗಳನ್ನು ರಚಿಸಿದ್ದಾರೆ. ಅಲ್ಲದೆ ಬಹುಪಾಲು ವಚನಕಾರರು ಲಿಂಗಭೇದದ ಬಗ್ಗೆ ವಚನಗಳನ್ನು ರಚಿಸಿ, ಅದನ್ನು ನಿರಾಕರಿಸಿದ್ದಾರೆ. ಆದ್ದರಿಂದ ವಚನಗಳ ಕಾಲಘಟ್ಟವೂ ಕನ್ನಡ ಸಾಹಿತ್ಯ ಚರಿತ್ರೆ ಮತ್ತು ಸ್ತ್ರೀವಾದಿ ಅಧ್ಯಯನದ ನೆಲೆಯಲ್ಲಿ ಮಹತ್ತ್ವದ್ದು. ಹಿಂದಿನ ಭಾಗದಲ್ಲಿ ವಚನಕಾರ್ತಿಯರ ಹಾಗೂ ವಚನಕಾರರ ಬಗ್ಗೆ ಚರ್ಚಿಸಲಾಗಿದೆ. ಇತರೆ ಸಾಹಿತ್ಯ ಪ್ರಕಾರಗಳನ್ನು ಕುರಿತಂತೆ ಈ ಭಾಗದಲ್ಲಿ ಪರಿಶೀಲಿಸಲಾಗಿದೆ.

## ೧. ಆಸ್ಥಾನಿಕ ಕವಿಯತ್ರಿಯರು

### ೧. ಗಂಗಾದೇವಿ

ಗಂಗಾದೇವಿಯ ಅರಸ ವಿಜಯನಗರದ ವೀರಕಂಪಣ. ಗಂಗಾದೇವಿಯು ಸಂಸ್ಕೃತ ಭಾಷೆಯಲ್ಲಿ ಪಂಡಿತೆಯಾಗಿದ್ದಳು. ಈಕೆ ಸಂಸ್ಕೃತ ಭಾಷೆಯಲ್ಲಿ 'ವೀರಕಂಪಣರಾಯ ಚರಿತಮ್' ಅಥವಾ 'ಮಧುರ ವಿಜಯಂ' ಕಾವ್ಯವನ್ನು ರಚಿಸಿದ್ದಾಳೆ. ಈ ಕಾವ್ಯವೂ ಸಾಹಿತ್ಯಕವಾಗಿ, ಐತಿಹಾಸಿಕವಾಗಿಯೂ ಮಹತ್ತ್ವದ್ದಾಗಿದೆ. ಗಂಗಾದೇವಿ ತನ್ನ ಕಾವ್ಯದಲ್ಲಿ ಎಲ್ಲಿಯೂ ತಾನು ಹುಟ್ಟಿದ ಸ್ಥಳವನ್ನಾಗಲೀ, ತಾಯಿತಂದೆಯರನ್ನು ಕುರಿತಾಗಲಿ ವಿವರಗಳನ್ನು ನೀಡಿಲ್ಲ. ಕಾವ್ಯದ ಆರಂಭದಲ್ಲಿ ಅಗಸ್ತ್ಯ ಪಂಡಿತೆ ಗಂಗಾಧರ ತಿಮ್ಮಣ್ಣ ಮೊದಲಾದ ಕವಿಗಳನ್ನು ಸ್ಮರಿಸಿ ವಂದಿಸಿರುವುದನ್ನು ಗಮನಿಸಬಹುದು. ಆಕೆಯ ಗುರುಗಳಾದ ವಿಶ್ವನಾಥನನ್ನು ಸ್ಮರಿಸಿ ಕೃತಜ್ಞತೆ ಸಲ್ಲಿಸಿರುವುದು ತಿಳಿದು ಬರುತ್ತದೆ. ಇದರಲ್ಲಿ ಬುಕ್ಕರಾಯ ವಿಜಯನಗರದ ಅರಸನೆಂದು, ಅವನು ದುಷ್ಟರ ನಿಗ್ರಹ, ಶಿಷ್ಟರ ಪರಿಪಾಲನೆಗಾಗಿ ಆಳ್ವಿಕೆ ಮಾಡುತ್ತಿದ್ದನು. ಬುಕ್ಕನ ರಾಜಧಾನಿ ತುಂಗಭದ್ರಾ ನದಿ ತೀರದಲ್ಲಿ ಇತ್ತು ಎಂದು ತಿಳಿಸಿದ್ದಾಳೆ. ಈ ರಾಜಧಾನಿ ಎತ್ತರವಾದ ಗೋಪುರ, ಪ್ರಾಕಾರಗಳನ್ನು ಹೊಂದಿರುವ ದೇವಾಲಯಗಳು, ಸುಂದರವಾದ ಉದ್ಯಾನಗಳು, ಪದ್ಮಗರ್ಭಿತವಾದ ಸರೋವರಗಳು, ಕೋಟೆ-ಕೊತ್ತಲುಗಳು ಮೊದಲಾದವುಗಳ ವಿವರಣೆಗಳಿವೆ. ಬಹುಸಂಖ್ಯೆಯ ರಾಣಿಯರು ಬುಕ್ಕನನ್ನು ವಿವಾಹವಾಗಿದ್ದರು. ಈ ರಾಣಿಯರಲ್ಲಿ ದೇಪಾಯಿ ಎನ್ನುವ ರಾಣಿ ಗಂಡು ಮಗುವಿಗೆ ಜನ್ಮ ನೀಡಿದಳು. ಆ ಮಗುವೇ 'ಕಂಪಣ' ಎಂದು ತಿಳಿಸಿದ್ದಾಳೆ. ಕಾವ್ಯದಲ್ಲಿ ಕಂಪಣನ ಬಾಲ್ಯಜೀವನ, ವಿದ್ಯಾಭ್ಯಾಸ, ಯೌವ್ವನಗಳ ವಿವರಣೆ ಹೇಳಿದ್ದಾಳೆ. ಬುಕ್ಕನು ಕಂಪಣನನ್ನು ಕರೆದು ಹೇಳಿದ ಹಿತವಚನಗಳನ್ನು ತಿಳಿಸುತ್ತ ಸೂಳೆ ಮತ್ತು ಸ್ತ್ರೀಯರಿಂದ ದೂರವಿರಲು ಹೇಳಿದ್ದನು ಎಂದು ದಾಖಲಿಸಿದ್ದಾಳೆ. ಬುಕ್ಕನು ತನ್ನ ಆಸೆಯನ್ನು ಕಂಪನಿಗೆ ತಿಳಿಸಿದ್ದ. ಅಂತೆಯೆ ಕಂಪಣನ ತಂದೆಯ ಆಸೆಯಂತೆ ದಕ್ಷಿಣದ ಕಡೆಗೆ ದಂಡಯಾತ್ರೆಯನ್ನು ಕೈಗೊಂಡನೆಂದು ಉಲ್ಲೇಖವಾಗಿದೆ. ಕಂಪಣನು ದಂಡಯಾತ್ರೆಗೆ ಹೋಗುವಾಗ ಅರಮನೆಯ ಸುಮಂಗಲಿಯರು ಆರತಿ ಎತ್ತಿ ಶುಭಕೋರಿದ ಬಗ್ಗೆ ಕಾವ್ಯದಲ್ಲಿ ವಿವರಗಳಿವೆ. ಕಂಪಣ ಮತ್ತು ಚಂಪಣನ ಯುದ್ಧದ ಚಿತ್ರ ನೀಡಿದ್ದಾಳೆ. ಈ ಯುದ್ಧದ ನಂತರ ಕಂಪಣನು

ಪ್ರಜೆಗಳ ಪ್ರೀತಿಗೆ ಪಾತ್ರನಾದ ಅರಸನಾದನೆಂದೂ, ಸಾಮಂತರಾದ ಮಗಧ, ಮಾಳವ, ಸೇವುಣ, ಸಿಂಹಳ ಮೊದಲಾದವರು ಸ್ನೇಹದಿಂದ ಇದ್ದರು. ಕಂಪಣನ ಆಸ್ಥಾನ ಪಂಡಿತರು ಅಂತಃಪುರಕ್ಕೆ ಹೋಗಿ ರಾಣಿಯರ ಜೊತೆ ಆಡಳಿತಾತ್ಮಕ ವಿಷಯಗಳನ್ನು ಚರ್ಚಿಸುತ್ತಿದ್ದುದರ ವಿವರಗಳೂ ಇವೆ. ಒಮ್ಮೆ ಕಂಪಣನ ಬಯಕೆಯಂತೆ ಗಂಗಾದೇವಿಯು ಚಂದ್ರೋದಯವನ್ನು ವರ್ಣಿಸಿದ್ದಾಳೆ. ಇದನ್ನು ಗಂಗಾದೇವಿಯೇ ಉಲ್ಲೇಖಿಸುತ್ತಾಳೆ.

ಕಂಪಣನ ಕನಸಿನಲ್ಲಿ ಮಧುರೆಯ ದೇವತೆ ಬಂದು, ಮಧುರೆಯು ತುರುಕರಿಂದ ಅಸ್ತವ್ಯಸ್ತವಾಗಿರವುದರ ಬಗ್ಗೆ ಹೇಳಿದಳು. ಅಲ್ಲದೆ ಇಡೀ ವಾತಾವರಣವೇ ಬದಲಾಗಿದೆ ಎಂದು ತಿಳಿಸಿ, ಕಂಪಣನಿಗೆ ಒಂದು ಖಡ್ಗ ನೀಡಿದಳು. ಜೊತೆಗೆ ಮುಸ್ಲಿಮ್ ಸುಲ್ತಾನರ ಮೇಲೆ ಯುದ್ಧ ಸಾರಲು ಹೇಳಿದಳು. ದೇವತೆಯ ಪ್ರೇರಣೆಯಂತೆ ಕಂಪಣನ ಮಧುರೆಯ ಸುಲ್ತಾನನ ಮೇಲೆ ಧಾಳಿ ಮಾಡಿ ಅವನನ್ನು ಸೋಲಿಸಿದನೆಂದೂ ತಿಳಿಸಿದ್ದಾಳೆ. ಈ ಕಾವ್ಯದ ವಸ್ತುವಿಷಯ ಮಧುರೆಯನ್ನು ವಶಪಡಿಸಿಕೊಂಡಿರುವುದರ ಬಗ್ಗೆ ಯುದ್ಧದ ವಿವರಣೆಯನ್ನು ಸೊಗಸಾಗಿ ಗಂಗಾದೇವಿ ಚಿತ್ರಿಸಿದ್ದಾಳೆ. ವಿಜಯನಗರದ ಚರಿತ್ರೆಯನ್ನು ಕುರಿತಂತೆ ಈ ಕಾವ್ಯವು ಸಾಕಷ್ಟು ಮಾಹಿತಿಗಳನ್ನು ನೀಡುತ್ತದೆ.

### ೨. ತಿರುಮಲಾಂಬೆ

ತಿರುಮಲಾಂಬೆಯ ಅರಸ ವಿಜಯನಗರದ ಅಚ್ಯುತ ದೇವರಾಯ. ಈಕೆಯು ಸಹ ಸಂಸ್ಕೃತ ಭಾಷೆ ಬಲ್ಲವಳಾಗಿದ್ದು, ಸಂಸ್ಕೃತ ಭಾಷೆಯಲ್ಲಿ ಚಂಪೂ ಕಾವ್ಯ ರಚಿಸಿದ ಮಹಿಳೆಯರಲ್ಲಿ ಇವಳು ಒಬ್ಬಳು. ತನ್ನ ವೈಯಕ್ತಿಕ ಸಾಧನೆ, ಅಚ್ಚುಮೆಚ್ಚು ಒಲವು, ನಿಲುವುಗಳನ್ನು ಮುಕ್ತವಾಗಿ ಚರ್ಚಿಸಿದ್ದಾಳೆ. ತಿರುಮಲಾಂಬೆ ಬಹು ಬಗೆಯ ಭಾಷೆ, ಲಿಪಿಗಳನ್ನು ಬಲ್ಲವಳಾಗಿದ್ದು, ಮಧುರವಾದ ಕಂಠವನ್ನು ಸಹ ಹೊಂದಿದ್ದಳು. ಈಕೆ ಕಾವ್ಯ, ನಾಟಕ, ಪುರಾಣ, ಇತಿಹಾಸ, ವ್ಯಾಕರಣ ಮೊದಲಾದವನ್ನು ಅರಿತಿದ್ದಳು. ಅಚ್ಯುತದೇವರಾಯನ ವಿದ್ಯಾಭ್ಯಾಸ, ಯೌವ್ವನ ಕುರಿತಂತೆ ಹಾಗೂ ಅವನು ವರದಾಂಬಿಕೆಯನ್ನು ಗೌರಿ ಆಲಯದಲ್ಲಿ ಕಂಡು ಅನುರಕ್ತನಾದದರ ಬಗ್ಗೆ ವಿವರಗಳಿವೆ. ಎಲ್ಲಕ್ಕಿಂತ ಹೆಚ್ಚಾಗಿ ಇವರಿಬ್ಬರು ವಿವಾಹವಾದ ಘಟನೆಯೇ 'ವರದಾಂಬಿಕಾ ಪರಿಣಯ' ಈ ಕೃತಿಯು ಬಾಣ, ದಂಡಿ ಅವರುಗಳ ಪ್ರಭಾವಕ್ಕೆ ಒಳಗಾಗಿದೆ.

ಕಾವ್ಯವು ಒಮಾಂಬೆ, ವರದಾಂಬಿಕೆಯರ ಬಾಹ್ಯ ಸೌಂದರ್ಯ, ಸತೀತ್ವಗಳನ್ನು ಅರಸನ ಪೌರುಷ, ಪರಾಕ್ರಮ, ಬಾಹ್ಯ ಸೌಂದರ್ಯ ಮೊದಲಾದವುಗಳನ್ನು ಚಿತ್ರಿಸಿರುವಳು. ಕಾವ್ಯದಲ್ಲಿ ಸಮಾಸಗಳು, ಅಲಂಕಾರಗಳು ಉಪಯೋಗಿಸಿ ಉದ್ಯಾನಗಳನ್ನು ವರ್ಣಿಸಿದ್ದಾಳೆ.

### ೩. ರಾಮಭದ್ರಾಂಬೆ

ರಾಮಭದ್ರಾಂಬೆಯ ಪ್ರಿಯಕರ ರಘುನಾಥನಾಯಕ. ಇವನು ರಾಮಭದ್ರಾಂಬೆಯು 'ರಘುನಾಥಭ್ಯುದಯ' ಎಂಬ ಕಾವ್ಯ ಬರೆದಿದ್ದಾನೆ. ಹನ್ನೆರಡು ಸರ್ಗವುಳ್ಳ ಈ ಕಾವ್ಯವು ೭, ೮, ೯ ಮತ್ತು ೧೦ ಸರ್ಗಗಳು ಐತಿಹಾಸಿಕ ಘಟನೆಗಳಿಗೆ ಸೀಮಿತವಾಗಿರುತ್ತವೆ. ಮೊದಲ ಐದು ಸರ್ಗದಲ್ಲಿ ತಂಜಾವೂರು ಪಟ್ಟಣದ ವಿವರಣೆ, ರಘುನಾಥನ ದಿನನಿತ್ಯದ ಕರ್ತವ್ಯಗಳನ್ನು ವಿವರಿಸಿದ್ದಾಳೆ. ಹನ್ನೆರಡನೆಯ ಸರ್ಗವ

ಅರಮನೆಯ ವೈಭವ, ಶೃಂಗಾರಮಯ ಜೀವನದ ವಿವರಣೆಯನ್ನು ಒಳಗೊಂಡಿದೆ. ರಘುನಾಥನ ಆಸ್ಥಾನದಲ್ಲಿ ಸಾಮಾಜಿಕ, ರಾಜಕೀಯ, ಧಾರ್ಮಿಕ, ಸಾಹಿತ್ಯಕ ನೆಲೆಗಳ ಬಗ್ಗೆ ಚರ್ಚೆ ಆಗುತ್ತಿದ್ದವು. ಮಹಿಳಾ ಸಾಹಿತಿಗಳು, ವಿದ್ವಾಂಸರಿಂದ ಆಸ್ಥಾನ ತುಂಬಿತ್ತು. ''ನೂರು ಲೇಖನಗಳಿಂದ ಹದಿನೆಂಟು ಭಾಷೆಗಳಲ್ಲಿ ನಾಲ್ಕು ವಿಧವಾದ ಕವಿತೆಗಳನ್ನು ಬರೆದಿದ್ದು, 'ರಘುನಾಥಾಭ್ಯುದಯ ಮಹಾಕಾವ್ಯವೇ ಸರಿ'' ಎಂದು ಆಕೆ ಹೇಳಿಕೊಂಡಿರುವಳು.

### ೪. ಹೊನ್ನಮ್ಮ

ಸಂಚಿಯ ಹೊನ್ನಮ್ಮ ಕ್ರಿ.ಶ. ೧೬೭೭-೧೭೦೪ರ ವರೆಗೆ ಮೈಸೂರು ಅರಸರಾದ ಚಿಕ್ಕದೇವರಾಜ ಒಡೆಯರ ಆಸ್ಥಾನದಲ್ಲಿ ಇದ್ದಳು. ಈಕೆಯು ಅರಸ ಮತ್ತು ಮಹಾರಾಣಿ ದೇವರಾಜಮ್ಮಣ್ಣಿ ಸೂಚನೆಯ ಮೇರೆಗೆ 'ಹದಿಬದೆಯ ಧರ್ಮ'ವನ್ನು ರಚಿಸಿದಳು. 'ಹದಿಬದೆಯ ಧರ್ಮ' ಕನ್ನಡ ಸಾಹಿತ್ಯದಲ್ಲಿಯೆ ಒಂದು ಅಪೂರ್ವವಾದ ಗ್ರಂಥ. ಈಕೆಯನ್ನು ಅಳಸಿಂಗರಾರ್ಯ 'ಸರಸ ಸಾಹಿತ್ಯದ ವರದೇವತೆ' ಎಂದು ಹೊಗಳಿದ್ದಾನೆ. 'ಹದಿಬದೆಯ ಧರ್ಮ' ಎಂದರೆ 'ಪತಿವ್ರತೆ ಧರ್ಮ' ಸಂಸಾರಿಯಾದ ಹೆಣ್ಣು ಹೇಗೆ ನಡೆದುಕೊಳ್ಳಬೇಕೆಂಬುದನ್ನು ಈ ಗ್ರಂಥವು ಸೂಚಿಸುತ್ತದೆ.

'ಹದಿಬದೆಯ ಧರ್ಮ' ಗ್ರಂಥವು ಒಂಬತ್ತು ಸಂಧಿಗಳಿಂದ ಕೂಡಿದೆ. ಈಕೆ ಮೊದಲನೆಯ ಸಂಧಿಯನ್ನು ಪೀಠಿಕಾ ಸಂಧಿಯೆಂದೇ ಕರೆದು, ಈ ಭಾಗದಲ್ಲಿ ಮೈಸೂರು ಅರಸರ ವಂಶಾವಳಿಯನ್ನು ಸ್ಥೂಲವಾಗಿ ತಿಳಿಸಿ, ಚಿಕ್ಕದೇವರಾಜ ಒಡೆಯರ ಮತ್ತು ಪಟ್ಟಮಹಿಷಿಯಾದ ದೇವರಾಜಮ್ಮಣ್ಣಿಯನ್ನು ಕೊಂಡಾಡಿ, ತನ್ನ ಕಾವ್ಯ ರಚನೆಗೆ ಅವರೇ ಕಾರಣವೆಂದು, ತನ್ನ ಕಾವ್ಯದ ಮಹತ್ತ್ವವನ್ನು ತಿಳಿಸಿದ್ದಾಳೆ. ಎರಡನೆಯ ಸಂಧಿ ಸತಿ ಧರ್ಮದ ಮಹತ್ತ್ವವನ್ನು ಅದರ ಶಕ್ತಿಯನ್ನು ತಿಳಿಸುತ್ತ, ಸತೀಧರ್ಮ ಎಲ್ಲ ವ್ರತ ತಪಸ್ಸುಗಳಿಗಿಂತ ಶ್ರೇಷ್ಠ ಎಂಬುದನ್ನು ಅಂಥ ವ್ರತವನ್ನು ಪಾಲಿಸುವುದರಿಂದ ದೊರಕುವ ಸುಖ-ಶಾಂತಿ, ಗೌರವಗಳನ್ನು ವಿವರಿಸಿದ್ದಾಳೆ. ಮೂರನೆಯ ಸಂಧಿ ಗಂಡನ ಶುಶ್ರೂಷೆಯ ವಿಧಾನವನ್ನು ತಿಳಿಸುತ್ತದೆ. ನಾಲ್ಕನೆಯ ಸಂಧಿ ಅತ್ತೆ ಮಾವಂದಿರ ಸೇವೆ ಮತ್ತು ಆತ್ಮವಲ್ಲಭನ ಮನೋಗತವನ್ನು ತಿಳಿದು ನಡೆಯುವ ಕ್ರಮವನ್ನು ಹೇಳುತ್ತದೆ. ಐದನೆಯ ಸಂಧಿ ಒಡಹುಟ್ಟಿದವರು, ತಾಯಿತಂದೆಯರು, ಅತ್ತೆ ಮಾವಂದಿರು, ಇತರೆ ಬಂಧುಗಳನ್ನು ಕಾಣುವ, ಗೌರವಿಸುವ ವಿವರಗಳನ್ನು, ಆರನೆಯ ಸಂಧಿ ಯೌವನದಲ್ಲಿ ನಲ್ಲ-ನಲ್ಲೆಯರ ಮಾನಸಿಕ ಸ್ಥಿತಿಯನ್ನು, ಏಳನೆಯ ಸಂಧಿ ಗಂಡನ ವಿರಹದಿಂದ ತಲ್ಲಣಗೊಳ್ಳುವ ಸಾಧ್ವಿಯ ಮನಸ್ಥಿತಿಯನ್ನು ಎಂಟನೆಯ ಸಂಧಿ ಏಕಪತ್ನಿಯ ದಿನಚರ್ಯೆಯನ್ನು, ಒಂಭತ್ತನೆಯ ಸಂಧಿ ಗಂಡನನ್ನೇ ದೈವವೆಂದು, ಮುಕ್ತಿ ಸಂಪಾದಿಸುವ ರೀತಿಯನ್ನು ವಿವರಿಸುತ್ತದೆ. ಈ ಎಲ್ಲ ಸಂಧಿಗಳಲ್ಲಿ ಅಡಗಿರುವ ವಿಷಯ ಸ್ತ್ರೀಯ ಪಾತಿವ್ರತ್ಯದ ನಡವಳಿಕೆಗೆ ಸಂಬಂಧಿಸಿದ್ದಾಗಿವೆ. ಸ್ತ್ರೀವಾದಿ ಚಿಂತನೆ, ಅಧ್ಯಯನದ ನೆಲೆಯಿಂದ ಈ ಕಾಲಘಟ್ಟದಲ್ಲಿ ಇಂಥ ನೀತಿಗೆ ಮಹತ್ತ್ವ ಇತ್ತೆ? ಎಂದು ಆಲೋಚಿಸಬೇಕಾಗಿದೆ.

'ಹದಿಬದೆಯ ಧರ್ಮ'ವು ಮಧ್ಯಕಾಲೀನ ಸಮಾಜ ಮತ್ತು ಹೆಣ್ಣನ್ನು ಪ್ರತಿಬಿಂಬಿಸುವಂಥದ್ದು. ಸಮಾಜದಲ್ಲಿ ಹೆಣ್ಣಿನ ಎಂಥ ಗುಣಗಳನ್ನು ಬಯಸುತ್ತಿತ್ತು. ಆಕೆಯ ಸ್ಥಾನ-ಸ್ಥಿತಿಗತಿಗಳನ್ನು ವಿವರಿಸುತ್ತದೆ. ಈ ಕಾವ್ಯದಲ್ಲಿ ಹೆಣ್ಣಿನ ನಡವಳಿಕೆ ಬಗ್ಗೆ ನಿರ್ವಚಿಸಿದೆ. ಆದರೆ ಆಕೆಯು ಪಡೆಯುವ ಆರ್ಥಿಕ ನೆರವನ್ನು ಎಲ್ಲಿಯೂ ತಿಳಿಸದೆ, 'ಮನು'ವಿನಂತೆ ಹೆಣ್ಣು ಯಾವಾಗಲೂ ಪುರುಷ ರಕ್ಷಣೆಯಲ್ಲಿರಬೇಕು ಎಂದಿದ್ದಾಳೆ.

ಹೊನ್ನಮ್ಮನ ಕೃತಿಯಲ್ಲಿ ಲಿಂಗಭೇದವನ್ನು ನಿರಾಕರಿಸಿದ್ದನ್ನು ಕಾಣಬಹುದು. ''ಪೆಣ್ಣ ಪೆತ್ತವರ ಬಳೆವುದು ಬೇಗ'', ''ಪೆಣ್ಣಲ್ಲವೆ ನಮ್ಮನೆಲ್ಲ ಪಡೆದ ತಾಯಿ''. ''ಕುವರನಾದೊಡೆ ಬಂದ ಗುಣವೇನದರಿಂದ'' ಕುಲಕೋಟಿಯನುದ್ಧರಿಪಳು'' ಎಂಬುವವು ಹೆಣ್ಣಿನ ಪರವಾಗಿಯೇ ಇದ್ದು, ಲಿಂಗಭೇದ ಮಾಡದಂತೆ ತಿಳಿಸಿದೆ. ಅಂತೆಯೇ ಹೊನ್ನಮ್ಮನ ಕಾಲದಲ್ಲಿಯು ಲಿಂಗಭೇದವನ್ನು ಗುರುತಿಸುವುದು ಅತಿ ಸೂಕ್ಷ್ಮವಾಗಿ ನಡೆದಿತ್ತು. ಆದರೆ ಹೊನ್ನಮ್ಮ ಅರಸ, ಅರಸಿಯ ಹಂಬಲದಂತೆ ಕೃತಿ ರಚಿಸಬೇಕಾದುದರಿಂದ ಆಕೆ ಅಂದಿನ ಸಮಾಜ ಹೆಣ್ಣಿನಿಂದ ಬಯಸುವ ಗುಣಗಳನ್ನು ಆಧರಿಸಿ ಕೃತಿ ಬರೆದಿದ್ದಾಳೆ.

ಹೊನ್ನಮ್ಮ ಸುಖ-ಸಂಸಾರದ ಗಂಡ-ಹೆಂಡತಿಯರ ಮನಸ್ಸು ಹೇಗೆ ಇರಬೇಕು ಎಂಬುದನ್ನು ಹೇಳುವ 'ಮನಶಾಸ್ತ್ರ'ವಾಗಿದೆ. ಸ್ತ್ರೀಯರು ಹೇಗೆ ನಡೆದುಕೊಳ್ಳಬೇಕೆಂದು ತಿಳಿಸಿದ್ದು ಜೊತೆಗೆ ಗಂಡಸು ಸಹ ಹೆಣ್ಣಿನ ಜೊತೆ ಹೇಗೆ ವರ್ತಿಸಬೇಕು ಎಂದು ಆರನೆ ಸಂಧಿಯಲ್ಲಿ ಹೇಳಿದ್ದಾಳೆ. ಸ್ತ್ರೀವಾದಿ ಚಿಂತನೆಯಿಂದಲೂ ಗಮನಿಸಿದಾಗ, ಇಂದು ಮಹಿಳೆ ಪುರುಷನೊಡನೆ ಸರಿಸಮವಾಗಿ ಹೊರಗೆ ಹೋಗಿ ದುಡಿಯುತ್ತಿದ್ದರೂ ಸಂಸಾರದಲ್ಲಿ ಆಕೆಯ ಪಾತ್ರ ಎಷ್ಟು ಎಂಬುದು ಸ್ಪಷ್ಟವಾಗುತ್ತದೆ. ಹಾಗಾಗಿ ಈ ಕೃತಿ ಮಹತ್ತ್ವದಾಗಿದೆ.

**೫. ಚೆಲುವಾಂಬೆ**

ಚೆಲುವಾಂಬೆಯ ಅರಸ ದೊಡ್ಡಕೃಷ್ಣರಾಜ ಒಡೆಯರು. ಚೆಲುವಾಂಬೆಯು ಅರಸನ ಪ್ರೋತ್ಸಾಹದಿಂದ ಅನೇಕ ಕಾವ್ಯಗಳನ್ನು ಬರೆದಿದ್ದಾಳೆ. ಅವುಗಳೆಂದರೆ ವರನಂದಿ ಕಲ್ಯಾಣ, ವೆಂಕಟೇಶ ಮಹಾತ್ಮೆ, ಅಮ್ಮನವರ ಲಾಲಿಪದ, ತಲಕಾವೇರಿ ಮಹಾತ್ಮೆ ಟೀಕೆ, ಕೃಷ್ಣ ಕರ್ಣಾಮೃತ ವ್ಯಾಖ್ಯೆ ಇತ್ಯಾದಿ. ಈಕೆ ಬರೆದ ಕೃತಿಗಳಲ್ಲಿ ವರನಂದೀ ಕಲ್ಯಾಣವು ಪ್ರಧಾನವಾದುದು. ಸಾಂಗತ್ಯದಲ್ಲಿ ಬರೆಯಲಾದ ಈ ಕಾವ್ಯವು ೮೮೧ ಪದ್ಯಗಳಿಂದಲೂ, ೭ ಆಶ್ವಾಸಗಳಿಂದಲೂ ಕೂಡಿದೆ.

**೬. ಹೆಳವನಕಟ್ಟೆ ಗಿರಿಯಮ್ಮ**

'ಹೆಳವನಕಟ್ಟೆ ಗಿರಿಯಮ್ಮ' ವೈಷ್ಣವ ಭಕ್ತಿ ಪಂಥಕ್ಕೆ ಸೇರಿದವಳು. ಈಕೆಯ ಕಾಲದ ಬಗ್ಗೆ ಭಿನ್ನಾಭಿಪ್ರಾಯಗಳಿದ್ದರೂ ಕೆಲವು ಆಂತರಿಕ ಆಧಾರಗಳಿಂದ ಸುಮಾರು ಹದಿನೆಂಟನೆಯ ಶತಮಾನದ ಆದಿಭಾಗವೆಂದು ಹೇಳಲಾಗಿತ್ತು. ಧಾರವಾಡ ಜಿಲ್ಲೆಯ ರಾಣೇಬೆನ್ನೂರಿನ ಭಿಷ್ಟಪ್ಪ ಜೋಯಿಸರ ದಂಪತಿಗಳ ಮಗಳಾಗಿ ಜನಿಸಿದಳು. ಹೆಳವನಕಟ್ಟೆ ರಂಗನಾಥನ ದರ್ಶನದಿಂದ ಜ್ಞಾನೋದಯವಾದ ಗಿರಿಯಮ್ಮ ಕೃತಿ ರಚನೆಗೆ ತೊಡಗಿದಳು ಎಂಬ ಪ್ರತೀತಿ ಇದೆ. ಗಿರಿಯ್ಮನ ಪವಾಡಗಳಿಂದ ಜನಸಾಮಾನ್ಯರ ಶ್ರದ್ಧಾ ಗೌರವಗಳನ್ನು ಗಳಿಸಿಕೊಟ್ಟವು. ಈಕೆಯ ಕೃತಿಗಳೆಂದರೆ ಚಂದ್ರಹಾಸನ ಕತೆ, ಉದ್ದಾಳಿಕನ ಕತೆ, ಶಂಕರ ಗಂಡನ ಹಾಡು, ಲವಕುಶರ ಕಾಳಗ, ಕೃಷ್ಣ ಕೊರವಂಜಿ, ಬ್ರಹ್ಮ ಕೊರವಂಜಿ ಮೊದಲಾದವು. ಸಾಮಾನ್ಯವಾಗಿ ಕೃತಿಗಳೆಲ್ಲವೂ 'ಹೆಳವನ ಕಟ್ಟೆ ರಂಗ' ಎಂಬ ಅಂಕಿತದಿಂದ ಕೂಡಿವೆ. ಈಕೆಯ ಕಾವ್ಯಗಳು ಪಾಂಡಿತ್ಯ ಪ್ರತಿಭೆಗಳ ಪ್ರದರ್ಶನಕ್ಕಾಗಿ ಬರೆದವುಗಳಲ್ಲ. ಅಂತೆಯೆ ಸಂಸ್ಕೃತ, ಅಲಂಕಾರಗಳು ಇಲ್ಲವಾಗಿವೆ. ಲಕ್ಷ್ಮೀಶನ 'ಜೈಮಿನಿ ಭಾರತ'ದ ಪ್ರಭಾವವನ್ನು ಇವಳ ಕೃತಿಗಳಲ್ಲಿ ನೋಡಬಹುದು. ಕಾವ್ಯದಲ್ಲಿ ಪಾಂಡಿತ್ಯ ಪ್ರತಿಭೆಗಳಿಗಿಂತ, ಸಾಮಾಜಿಕ ಪ್ರಜ್ಞೆಯುಳ್ಳ ಕವಯಿತ್ರಿಯಾಗಿ, ವೈಷ್ಣವ ಭಕ್ತಿ ಪಂಥದವರಲ್ಲಿ ಪ್ರಮುಖಳಾಗಿ ಗುರುತಿಸಿಕೊಂಡಿದ್ದಾಳೆ.

## ೨. ದಾಸ ಸಾಹಿತ್ಯದಲ್ಲಿ ಕವಿಯತ್ರಿಯರು

### ೧. ಭೀಮವ್ವ

ಕನ್ನಡದ ಹರಿದಾಸ ಸಾಹಿತ್ಯದಲ್ಲಿ ಹರಪನಹಳ್ಳಿ ಭೀಮವ್ವ ಪ್ರಧಾನಳು. ಭೀಮವ್ವ ಬಳ್ಳಾರಿ ಜಿಲ್ಲೆಯ ಹೊಸಪೇಟೆ ತಾಲೂಕಿನ ನಾರಾಯಣದೇವರ ಕೆರೆಯಲ್ಲಿ ಕ್ರಿ.ಶ. ೧೮೨೨ರಲ್ಲಿ ಜನಿಸಿದಳು. ಆದರೆ ಇಂದು ಆ ಊರು ತುಂಗೆಯ ಆಣೆಕಟ್ಟಿನಿಂದ ಮುಳುಗಡೆಯಾಗಿದೆ. ಭೀಮವ್ವನ ತಾಯಿತಂದೆಯರು ರಾಘಮ್ಮ ಮತ್ತು ರಘುನಾಥಾಚಾರ್ಯರು. ಈಕೆಯ ಜನ್ಮನಾಮ ಕಮಲಾಕ್ಷಿ ಎಂದಿದ್ದರೂ ಮನೆಯಲ್ಲಿ ಭೀಮಾಬಾಯಿ ಎಂದೂ, ಮುದ್ದಿನಿಂದ 'ಭೀಮವ್ವ' ಎನ್ನುತ್ತಿದ್ದರು. ಹರಪನಹಳ್ಳಿಯ ಬೊಕ್ಕಸದ ಮನೆತನದವರೊಡನೆ ವಿವಾಹವಾಗಿ ಹರಪನಹಳ್ಳಿ ಭೀಮವ್ವ ಎಂದು ಹೆಸರು ಪಡೆದರು. ಇವರು ಹಾಡುಗಳನ್ನು ರಚಿಸಿ, ತಾನು ಹಾಡುವುದನ್ನು ಬೇರೆಯವರಿಗೂ ಕಲಿಸುತ್ತಿದ್ದರು. ಈಕೆಯ ಅನೇಕ ಕೃತಿಗಳು ಹಾಡಿನಂತೆ ಇರುತ್ತವೆ. ಅವುಗಳೆಂದರೆ ನಳಚರಿತ್ರೆ, ರತಿಕಲ್ಯಾಣ, ಸುಭದ್ರಾ ಪರಿಣಯ, ಪತಿದಾನ, ದ್ರೌಪದಿ ವಸ್ತ್ರಾಪಹರಣ, ಶ್ರೀಕೃಷ್ಣ ಜಲಕ್ರೀಡೆ, ಶಕುಂತಲ, ಶ್ರೀ ಸುಧಾಮನ ಹಾಡು, ಮುಯ್ಯದ ಹಾಡು, ಶ್ರಾವಣ ಶುಕ್ರವಾರ ಮತ್ತು ಶನಿವಾರದ ಹಾಡು, ಬುಧ-ಬೃಹಸ್ಪತಿ ಹಾಡು, ನಾರಾಯಣ ಸ್ತುತಿ, ಮದುವೆ-ಬಾಣಂತಿ ಸಂದರ್ಭದ ಹಾಡುಗಳನ್ನು, ಮುಯ್ಯಿಗೆ ಮುಯ್ಯಿ ಹಾಡು ಮೊದಲಾದವು ಹೀಗೆ ೧೪೨ ಕೃತಿಗಳಿರುತ್ತವೆ. ಈ ಕೃತಿಗಳನ್ನು 'ಭೀಮೇಶ ಕೃಷ್ಣ' ಎಂಬ ಅಂಕಿತದಿಂದ ರಚಿಸಿದ್ದಾಳೆ. ಎಲ್ಲ ಕೃತಿಗಳಲ್ಲಿ ಪ್ರಧಾನವಾಗಿ ಕಾಣುವುದು ಭೀಮವ್ವನವರ ಅನನ್ಯ ಕೃಷ್ಣಭಕ್ತಿ. ಕೃತಿಗಳಲ್ಲಿ ಎಲ್ಲವು ಭಕ್ತಿ ರಸದಿಂದ ತುಂಬಿವೆ. ಭಾವಪೂರ್ಣವಾಗಿದ್ದು ಪಾಂಡಿತ್ಯ ಪೂರ್ಣವಾಗಿವೆ. ನಾಟಕಗಳಂತೆ ಸಜೀವವಾಗಿವೆ. ಪಾತ್ರಗಳು ಶಕ್ತಿಯುತವಾಗಿ ಕಣ್ಮನ ತಣಿಸುವಂತೆ ಅನುಭವವಾಗುತ್ತದೆ. ಹಾಡುಗಳಲ್ಲಿಯೆ ನಾಟಕೀಯ ಸಂಭಾಷಣೆಗಳೇ ಒಂದು ವೈಶಿಷ್ಟ್ಯ ಪದ್ಧತಿಯಂತೆ ಗಣೇಶನನ್ನು, ಸರಸ್ವತಿಯನ್ನು ಮತ್ತು ಎಲ್ಲ ದೇವತೆಗಳನ್ನು ಮೊದಲು ನೆನೆದು ನಮಿಸಿ ಭಕ್ತಿಯಿಂದ ಲಕ್ಷ್ಮಿ ವಲ್ಲಭನ ಕತೆಗಳನ್ನು ವಿವರಿಸುತ್ತೇನೆ ಎಂದು ಹೇಳಿದ್ದಾಳೆ.

ಸ್ತ್ರೀಯರ ಸೌಂದರ್ಯ ವರ್ಣನೆಯಲ್ಲಿ ಭೀಮವ್ವ ಅದ್ವಿತೀಯಳು. ಜಲಕ್ರೀಡೆ ಹಾಡಿನಲ್ಲಿ ಸೀರೆಗಳನ್ನು ಕಳೆದುಕೊಂಡ ಗೋಪಿಕಾ ಸ್ತ್ರೀಯರ ಮನದ ಅಳಲು ಅವರು ಪರಸ್ಪರರಲ್ಲಿ ತಮ್ಮ ತಮ್ಮ ಸೀರೆಗಳ ಬಗ್ಗೆ ನೆನಪಿಸಿಕೊಂಡು ಕೊರಗುವುದು ಕಣ್ಣೆದುರು ಕಾಣಿಸುವಂತೆ ಚಿತ್ರಿಸಿದ್ದಾಳೆ. ದಾಂಪತ್ಯ ಜೀವನದ ಸರಸ-ವಿರಸಗಳ ಚಿತ್ರಣವನ್ನು 'ಪತಿದಾನ' ಹಾಡಿನಲ್ಲಿ ವಿವರಿಸಿದ್ದಾಳೆ. ಅನೇಕ ಹಾಡುಗಳಲ್ಲಿ ಸ್ತ್ರೀ ಪಾತ್ರಗಳನ್ನು ಚಿತ್ರಿಸಿರುವುದು ಕಂಡುಬರುತ್ತದೆ. ಉದಾಹರಣೆಗೆ 'ರತಿಕಲ್ಯಾಣ'ದಲ್ಲಿ ದ್ರೌಪದಿ ಪಾತ್ರಕ್ಕೆ ಮಹತ್ವ ನೀಡಿದ್ದಾಳೆ. ಅನೇಕ ಹಾಡುಗಳು ಪೌರಾಣಿಕ ಕತೆಗಳನ್ನು ಒಳಗೊಂಡಿರುವುದು. ಹಾಗಾಗಿ ಯಶೋದಾದೇವಿ, ರುಕ್ಮಿಣಿದೇವಿ, ಲಕ್ಷ್ಮಿದೇವಿ, ಸತ್ಯಭಾಮ, ರತಿದೇವಿ, ಗೋಪಿಕಾ ಸ್ತ್ರೀಯರು, ದಮಯಂತಿ, ಶಕುಂತಲೆ, ಸುಧಾಮನ ಪತ್ನಿಯರನ್ನು ಚಿತ್ರಿಸಿದ್ದಾಳೆ. ಆಭರಣಗಳನ್ನು ಧರಿಸುವುದು ಸಾಮಾಜಿಕವಾಗಿ ಗೌರವಕ್ಕೆ ಒಳಗಾಗುತ್ತಿದ್ದುದನ್ನು ಕಂಡ ಮಹಿಳೆಯರು ಹಲವು ಬಗೆಯ ಆಭರಣಗಳನ್ನು ಧರಿಸುತ್ತಿದ್ದರು ಎಂದು ಹೇಳಿರುವಳು. ಈ ಆಭರಣಗಳನ್ನು ಕೆಲವು ಅಂಗಗಳ ಮರೆಗಾಗಿ, ಸೌಂದರ್ಯಕ್ಕಾಗಿ, ಸೌಭಾಗ್ಯದ ಸಂಕೇತವಾಗಿ ಬಳಸುತ್ತಿದ್ದುದನ್ನು ತಿಳಿಸಿದ್ದಾಳೆ. ಅನೇಕ ಆಭರಣಗಳ ಹೆಸರನ್ನು ಸಹ ಹೇಳಿದ್ದಾಳೆ.

ಅನೇಕ ಹಾಡುಗಳಲ್ಲಿ ವ್ರತ-ನೇಮ-ನಿಷ್ಠೆಗೆ ಮಹತ್ತ್ವವನ್ನು ನೀಡಲಾಗಿದೆ. ಶ್ರಾವಣ ಶುಕ್ರವಾರದ ಹಾಡು, ಶನಿವಾರದ ಹಾಡು, ಮಂಗಳಗೌರಿ ವ್ರತ, ಬುಧ ಬೃಹಸ್ಪತಿ ಹಾಡು, ಸುಧಾಮ ಚರಿತೆ, ಕೃಷ್ಣದಾನ ವ್ರತ ಮೊದಲಾದ ಅನೇಕ ಹಾಡುಗಳ ಮುಖೇನ ಅಂದಿನ ಬ್ರಾಹ್ಮಣ ಕುಟುಂಬಗಳ ಮಹಿಳೆಯರು ಆಚರಿಸುವ ಹಲವು ಬಗೆಯ ವ್ರತಗಳನ್ನು ತಿಳಿಸಿದ್ದಾಳೆ. ಹಾಗೂ ಆ ವ್ರತಗಳನ್ನು ಆಚರಿಸುವ ಉದ್ದೇಶ, ಮಹಿಮೆ, ಆಚರಿಸುವ ಬಗೆ, ಪದ್ಧತಿಗಳನ್ನು ಜೊತೆಗೆ ಅವುಗಳಿಂದ ದೊರಕುವ ಫಲ ಮುಂತಾದ ವಿಷಯಗಳನ್ನು ಹಾಡುಗಳ ಮುಖೇನ ವ್ಯಕ್ತಪಡಿಸಿದ್ದಾಳೆ. ಒಟ್ಟಾರೆಯಾಗಿ ಹೇಳುವುದಾದರೆ ಭೀಮವ್ವ ದಾಸ ಸಾಹಿತ್ಯದಲ್ಲಿಯೇ ಪ್ರಧಾನಳು ಎನ್ನಬಹುದು. ಈಕೆಯ ಕುರಿತಂತೆ ಸ್ತ್ರೀವಾದಿ ನೆಲೆಯಿಂದ ಅಧ್ಯಯನ ಮತ್ತಷ್ಟು ಆಗಬೇಕಾಗಿದೆ.

### ೨. ಗಲಗಲಿಯ ಅವ್ವ

ಗಲಗಲಿಯ ಅವ್ವನವರು ವೈಷ್ಣವ ಪಂಥದ ಕವಿಯತ್ರಿ. ಹದಿನೆಂಟನೆಯ ಶತಮಾನದಲ್ಲಿ ಕೊಪ್ಪಳ ಜಿಲ್ಲೆಯ ಭೋಗಾಪುರ ಗ್ರಾಮದ ಶಾನುಭೋಗರ ಮಗಳಾಗಿ ಹುಟ್ಟಿದಳು. ಅವ್ವನವರ ವಿವಾಹವು ವಿಷಮ ವಿವಾಹ ಎಂದು, ಎರಡನೆಯ ಹೆಂಡತಿಯಾಗಿ ಮುದ್ಗಲಾಚಾರ್ಯನನ್ನು ವಿವಾಹವಾದಳು. ಮಲ ಮಕ್ಕಳಿಂದ ಶಿಕ್ಷಣ ಪಡೆದು ಶಾಸ್ತ್ರಗಳನ್ನು ಓದಿದಳೆಂದು ತಿಳಿಯುತ್ತದೆ. ಸಂಪೂರ್ಣ ಭಾಗವತವನ್ನು ರಂಗೋಲಿಯಲ್ಲಿ ಚಿತ್ರಿಸುತ್ತಿದ್ದಾಳೆ. ಈಕೆಗೆ ಪುಣೆಯ ಪೇಶ್ವೆಗಳಿಂದ ವರ್ಷಕ್ಕೆ ಒಂದೂವರೆ ನೂರು ರೂಪಾಯಿಗಳಷ್ಟು ಮಾಸಾಶನ ದೊರೆಯುತ್ತಿತ್ತು. ಮೈಸೂರು ಅರಸರಿಂದ ಮನ್ನಣೆ ಮರ್ಯಾದೆಗಳನ್ನು ಪಡೆದಿದ್ದಳು. ಈಕೆಯ ಕೃತಿಗಳೆಂದರೆ ಮುಯ್ಯದ ಪದಗಳು, ಮೋರೆಗೆ ನೀರು ತಂದ ಹಾಡುಗಳು, ಶೃಂಗಾರ ತಾರತಮ್ಯ, ಬೀಗರ ಹಾಡುಗಳು ಮೊದಲಾದವು. ಈ ಕೃತಿಗಳ ಅಂಕಿತನಾಮ 'ಶ್ರೀರಾಮೇಶ'.

### ೩. ಭಾಗ್ಯಮ್ಮ

ಭಾಗ್ಯಮ್ಮ ಎಂಬಾಕೆಯು ಒಬ್ಬ ವೈಷ್ಣವ ಕವಿಯತ್ರಿ ಹಾಗೂ ಅವ್ವನವರ ಶಿಷ್ಯೆ. ಭಾಗವತದ ತೃತೀಯ ಸ್ಕಂಧವನ್ನು ಕನ್ನಡಿಸಿದ್ದಾಳೆ. ತನ್ನನ್ನು ವಿಷ್ಣುದಾಸರ ದಾಸಿ ಎಂತಲೂ ಕರೆದುಕೊಂಡು, ಸೃಷ್ಟಿತತ್ತ್ವದ ರಹಸ್ಯವನ್ನು ಕುರಿತಂತೆ ಬರೆದಿದ್ದಾಳೆ.

### ೪. ಚೆಲ್ಲಮ್ಮ

ಚೆಲ್ಲಮ್ಮ ಹತ್ತೊಂಬತ್ತನೆಯ ಶತಮಾನದವಳು. ಈಕೆ ಮೈಸೂರಿನ ಮಹಾರಾಣಿ ಬಾಲಿಕಾ ಶಾಲೆಯಲ್ಲಿ ಉಪಾಧ್ಯಾಯಿನಿ ಆಗಿದ್ದಳು. ಈಕೆಯ ಊರು ಕೃಷ್ಣಾನದಿಯ ದಂಡೆಯಲ್ಲಿರುವ ಚೆರುಕುಪಲ್ಲಿ ಗ್ರಾಮ. ತಂದೆ ರಾಮಯ್ಯ, ತಾಯಿ ಸೀತಮಾಂಬೆ. ಚೆಲ್ಲಮ್ಮನ ಹಾಡುಗಳನ್ನು ಸಂಗ್ರಹಿಸಿ 'ಗೀತಿಕಾಲಹರಿ' ಎನ್ನಲಾಗಿದೆ. ಆರತಿಹಾಡು, ಉರುಟಣೆ, ಉಡುಗೊರೆ, ಚೆಂಡಾಟಗಳಿಗೆ ಸಂಬಂಧಿಸಿದ ಹಾಡುಗಳು, ಕೃಷ್ಣನ ಸ್ತುತಿಗಳು ಕೆಲವು ಹಾಡುಗಳಿಗೆ 'ಚೆಲ್ಲಮಾಂಬಾ' ಎಂಬ ಅಂಕಿತವಿದೆ. 'ರುಕ್ಮಿಣಿ ಪರಿಣಯ' ರುಕ್ಮಿಣಿ ಮತ್ತು ಕೃಷ್ಣರ ವಿವಾಹದ ಕತೆಯಾಗಿದ್ದು, ಭಾಮಿನೀ ಷಟ್ಪದಿಯಲ್ಲಿ ಐದು ಆಶ್ವಾಸಗಳಿಂದ ಕೂಡಿದೆ. 'ರಾಜಕಳಾ ನಿಧಿ' ಅನೇಕ ವಿಷಯಗಳನ್ನು ಒಳಗೊಂಡ ಸಂಕೀರ್ಣ ಗ್ರಂಥ. ಉದಾಹರಣೆಗೆ ಗೃಹಿಣಿ ಧರ್ಮ ಪ್ರಕರಣ, ಜನ್ಮ

ಪ್ರಕರಣ, ರಾಜಕೀಯ ಪ್ರಕರಣ ಮೊದಲಾಗಿ ಹದಿನಾರು ಪ್ರಕರಣಗಳಿವೆ. ಚೆಲ್ಲಮ್ಮ 'ಪಾರಿಜಾತಾಪಹರಣ' ಎಂಬ ಐದು ಅಂಕಗಳುಳ್ಳ ನಾಟಕವನ್ನು ಬರೆದಿದ್ದಾಳೆ. ಹರಿವಂಶಾಂತರ್ಗತವಾದ ಈ ಸುರಭಿಯ ಕತೆಯನ್ನು ಕನ್ನಡದಲ್ಲಿ ಹೇಳಲು ಹಂಬಲಿಸಿರುವಳು. ಬಾಲಗೋಪಾಲನ ಸ್ತುತಿ, ಸಭಾವಂದನೆ, ವಸಂತ ಋತುಗಳ ವರ್ಣನೆಯಿಂದ ಈ ನಾಟಕ ಆರಂಭವಾಗುತ್ತದೆ. ನಾರದ ತಂದು ಕೊಟ್ಟ ಪಾರಿಜಾತವನ್ನು ಕೃಷ್ಣ ರುಕ್ಮಿಣಿಗೆ ಕೊಟ್ಟಿರುವುದನ್ನು ಕಂಡು ಕೋಪಿಸಿಕೊಂಡ ಸತ್ಯಭಾಮೆಯನ್ನು ಸಮಾಧಾನಪಡಿಸಲು ಕೃಷ್ಣ ಪಾರಿಜಾತದ ವೃಕ್ಷವನ್ನೇ ಭೂಲೋಕದಲ್ಲಿ ನೆಟ್ಟು ಬೆಳೆಸಿದ ಹಾಡುಗಳಿವೆ. ರುಕ್ಮಿಣಿ ಇತರೆ ಲಲಿತವಾದ ಲಯಗಳೊಂದಿಗೆ ಪಿಟೀಲನ್ನು ನುಡಿಸುತ್ತಿರುವುದು ಗಮನಾರ್ಹ.

**೫. ಗಣಪಕ್ಕ**

ಸಣ್ಣಭಡತಿ ಗಣಪಕ್ಕ ಉತ್ತರ ಕನ್ನಡದ ಗೋಕರ್ಣದವಳು. ತಂದೆ ಗಣಪಭಟ್ಟ, ತಾಯಿ ಪಾರ್ವತಿ. ಗಣಪಕ್ಕನಿಗೆ ಹನ್ನೆರಡನೆಯ ವರುಷದಲ್ಲಿ ವಿವಾಹವಾಗಿತ್ತು. ಒಂಭತ್ತು ಮಕ್ಕಳೊಂದಿಗೆ ಬಡತನದ ಜೀವನ ಈಕೆಯದು. 'ಗೋಕರ್ಣ ಮಹಾತ್ಮೆ' ಕೃತಿಯು ಹದಿಮೂರು ನೆಲೆಗಳುಳ್ಳ ಕೃತಿಯಾಗಿ ಹಾಡಿನ ಮಾದರಿಯಲ್ಲಿದೆ. ಗೋಕರ್ಣದ ಕ್ಷೇತ್ರ ಮಹಿಮೆಯನ್ನು ರಾವಣನ ಆತ್ಮಲಿಂಗದ ಕತೆಯನ್ನು ಹೇಳುತ್ತದೆ. 'ಕೃಷ್ಣನ ಹುಟ್ಟು' ಕೃತಿಯು ಐದು ನೆಲೆಗಳುಳ್ಳ ಪುಟ್ಟ ಕೃತಿ. ದುಷ್ಟರ ಸಂಹಾರಾರ್ಥವಾಗಿ ಕೃಷ್ಣ ದೇವಕಿಯ ಎಂಟನೆಯ ಮಗನಾಗಿ ಜನಿಸಿದ್ದು ಕೃತಿಯ ವಸ್ತುವಾಗಿದೆ. ಇದೇ ಹೆಸರಿನಲ್ಲಿ ಯಕ್ಷಗಾನವೊಂದನ್ನು ಈಕೆ ರಚಿಸಿದ್ದು ಗಮನಾರ್ಹ. ದ್ವಿಪದಿ, ಕಂದಪದ್ಯ, ಷಟ್ಪದಿ ಹಾಡಿನ ದಾಟಿಗಳನ್ನು ಬಳಸಿರುವುದು ಈಕೆಯ ಪ್ರತಿಭೆಯನ್ನು ಅಭಿವ್ಯಕ್ತಿಸುತ್ತದೆ.

**೬. ಸುಂದರಬಾಯಿ**

ಸುಂದರಬಾಯಿ ಧಾರವಾಡದ ತಾಲೂಕಿನ ಹೆಬ್ಬಳ್ಳಿಯವಳು. ಕ್ರಿ.ಶ. ೧೮೭೫ರಲ್ಲಿ ಜೀವಿಸಿದ್ದಳು ಎಂತಲೂ, ಈಕೆ ಬಾಲವಿಧವೆ ಎಂದೂ ತಿಳಿದುಬರುತ್ತದೆ. ಈಕೆಯ ಕೃತಿಗಳು ಕೃಷ್ಣನ ಹುಟ್ಟು, ರುಕ್ಮಾಂಗದ ಚರಿತ್ರೆ, ಸುಭದ್ರಾಮುಯ್ಯ, ರುಕ್ಮಿಣೀಮುಯ್ಯಾ, ರುಕ್ಮಿಣಿ ಪರಿಣಯ, ಸುಭದ್ರಾ ಕಲ್ಯಾಣ, ಶುಕ್ರವಾರ ಶನಿವಾರದ ಗೌರಿಯ ಹಾಡು ಮೊದಲಾದವು. ಈಕೆಯ ಅಂಕಿತನಾಮ 'ಶ್ರೀ ವೆಂಕಟೇಶ' ಭೂಮಿದೇವಿ ದೈತ್ಯರ ಬಾಧೆಯಿಂದ ನೊಂದು ಹರಿಯಲ್ಲಿ ಹೋಗಿ ಕಾಪಾಡಬೇಕೆಂದು ಕೇಳಿಕೊಂಡಾಗ ಹರಿ 'ದೇವಕಿಯ ಮಗನಾಗಿ ಹುಟ್ಟಿ ಆನಂದ ನೀಡುವೆನು' ಎಂದು ಆಶ್ವಾಸನೆ ನೀಡುತ್ತಾನೆ. ಇದೇ 'ಕೃಷ್ಣನ ಹುಟ್ಟು' ಕೃತಿಯದ್ದು. 'ರುಕ್ಮಿಣಿ ಪರಿಣಯವೂ' ಕೃಷ್ಣ-ರುಕ್ಮಿಣಿಯರ ಸಂಭಾಷಣೆಯಾಗಿದೆ. 'ರುಕ್ಮಾಂಗದ ಚರಿತ್ರೆ'ಯಲ್ಲಿ ಏಕಾದಶಿಯ ಮಹಾತ್ಮೆ, ಭಕ್ತರ ಶ್ರೇಷ್ಠತೆಗಳನ್ನು ಹೇಳುವ ಕೃತಿ. ಇದು ವ್ರತ, ನೇಮ ಮಹಿಮೆಯನ್ನು ಹೇಳುವ ಮೂಲಕ ಜನರ ಗಮನ ಸೆಳೆದಿದೆ.

**೭. ಪನ್ನಿಲಕ್ಷ್ಮೀಬಾಯಿ**

ಪನ್ನಿಲಕ್ಷ್ಮೀಬಾಯಿ ಗೋಕರ್ಣದವಳು. ದೇವರ ನಾಮಗಳನ್ನು ರಚಿಸಿದ್ದಾಳೆ. ಈಕೆಯು ಶ್ರೀಹರಿ ಭಕ್ತಳು. ಗೋಕರ್ಣದ ಮನೆಮನೆಯಲ್ಲೂ ಈಕೆಯ ಹಾಡುಗಳು ಪ್ರಚಲಿತವಾಗಿವೆ.

### ೮. ಶಾಂತಿಬಾಯಿ

ಶಾಂತಿಬಾಯಿ ಕ್ರಿ.ಶ. ೧೮೮೦ರಲ್ಲಿ ಬದುಕಿದ್ದಳು. ಶಿವಮೊಗ್ಗ ಜಿಲ್ಲೆಯ ಸಾಗರದ ಕೊಪ್ಪಿ ವೆಂಕಟೇಶಯ್ಯನವರ ಮಗಳು. 'ಶಾಂತಿಪಾಲಿಗುರು' ಎಂಬ ಅಂಕಿತದಿಂದ ಕನ್ನಡ-ಮರಾಠಿಗಳೆರಡರಲ್ಲೂ ಭಕ್ತಿ ಪರವಾದ ಕೀರ್ತನೆಗಳನ್ನು ರಚಿಸಿದ್ದಾಳೆ.

### ೯. ಓರಬಾಯ್ ಲಕ್ಷ್ಮೀದೇವಮ್ಮ

ಈಕೆ ಬಳ್ಳಾರಿ ಜಿಲ್ಲೆಯ ಸಂಡೂರಿನ ಬಾಲವಿಧವೆ. ಈಕೆ ಬಳ್ಳಾರಿಯಲ್ಲಿನ ನರಸಿಂಹ ದೇವಾಲಯದ ಕರ್ತೃ. ಮಂತ್ರಾಲಯದ ಗುರುರಾಘವೇಂದ್ರ ಸ್ವಾಮಿಗಳನ್ನು ಕುರಿತಂತೆ ಕೀರ್ತನೆಗಳನ್ನು ರಚಿಸಿದ್ದಾಳೆ.

### ೧೦. ಜಗನ್ಮೋಹಿನಿ ಹಾಗೂ ಮೋಹನಾಂಗಿ

ಜಗನ್ಮೋಹಿನಿಯ ಗಂಡ ವಿಜಯನಗರದ ಅರಸನಾಗಿದ್ದ ಕೃಷ್ಣದೇವರಾಯ. ಇವಳು ಸಂಸ್ಕೃತದಲ್ಲಿ 'ತುಕ್ಕಾ ಪಂಚಕಂ' ಎಂಬ ಕೃತಿಯನ್ನು ರಚಿಸಿದವಳು. ಇದು ಐದು ಶ್ಲೋಕಗಳಿಂದ ಕೂಡಿದೆ. ಈ ಕೃತಿಯಲ್ಲಿ ಜಗನ್ಮೋಹಿನಿಯು ತನ್ನ ದಾಂಪತ್ಯ ಜೀವನ ಸುಖ-ಸಂತೃಪ್ತಿಗಳಿಂದ ಕೂಡಿರಲಿಲ್ಲ ಎಂದು ಹೇಳಿಕೊಂಡಿದ್ದಾಳೆ. ಮೋಹನಾಂಗಿಯ ತಂದೆ ವಿಜಯನಗರದ ಕೃಷ್ಣದೇವರಾಯ. ಮೋಹನಾಂಗಿಯು "ಮಾರೀಚ ಪರಿಣಯ" ಎಂಬ ಕಾವ್ಯವನ್ನು ಬರೆದಿದ್ದಾಳೆ.

ಸ್ತ್ರೀವಾದಿ ನೆಲೆಯಿಂದ ಈ ಮೇಲ್ಕಂಡ ಎಲ್ಲ ಕವಿಯತ್ರಿಯರನ್ನು ಹಾಗೂ ಇತರೆರನ್ನು ಕುರಿತಂತೆ ಮತ್ತಷ್ಟು ಸೂಕ್ಷ್ಮವಾದ ಅಧ್ಯಯನವನ್ನು ಮಾಡಲು ಅವಕಾಶಗಳಿವೆ.

### ೫. ಶಿಕ್ಷಣ ಮತ್ತು ಮಹಿಳೆ

ಮಧ್ಯಕಾಲೀನ ಕಾಲಘಟ್ಟದಲ್ಲಿಯೂ ಸಾರ್ವತ್ರಿಕ ಶಿಕ್ಷಣ ವ್ಯವಸ್ಥೆ ಇರದೆ, ಅದು ಕೆಲವರಿಗೆ ಮಾತ್ರ ಸೀಮಿತವಾಗಿತ್ತು. ಆದರೆ ಅರಮನೆಯಲ್ಲಿ ವಿವಿಧ ಬಗೆಯ ಕಲೆಗಳಲ್ಲಿ ಮತ್ತು ಇತರೆ ಕ್ಷೇತ್ರಗಳಲ್ಲಿ ಪರಿಣತಿ ಪಡೆದವರು ಇರುತ್ತಿದ್ದರು. ಹನ್ನೆರಡನೆಯ ಶತಮಾನದಿಂದ ಈಚೆಗೆ ಸಮಾನತೆ, ಸ್ವಾತಂತ್ರ್ಯದಿಂದಾಗಿ ಕೆಳವರ್ಗದ ಅನೇಕ ಮಹಿಳೆಯರು ಸಾಹಿತ್ಯಕ ರಚನೆಯಲ್ಲಿ ತೊಡಗಿದ್ದು ಅವರ ಶಿಕ್ಷಣದ ಅಭಿರುಚಿಯನ್ನು ವ್ಯಕ್ತಪಡಿಸುತ್ತದೆ. ಮಹಿಳೆಗೆ ಪ್ರೇರಣೆ ಮತ್ತು ಸಮಾನ ಅವಕಾಶಗಳು ದೊರೆತರೆ ಆಕೆಯು ಶಿಕ್ಷಣ ಪಡೆಯಲು ಹಂಬಲಿಸುತ್ತಿದ್ದಳು ಎನ್ನುವುದಕ್ಕೆ ವಚನಕಾರ್ತಿಯರ ಕಾಲಘಟ್ಟವೇ ಸಾಕ್ಷಿಯಾಗಿದೆ. ಕರ್ನಾಟಕದಲ್ಲಿ ಬಹುಮಟ್ಟಿಗೆ ಮಹಿಳೆಯರಿಗೆ ಶಿಕ್ಷಣ ಕೊಡಿಸುವ ವ್ಯವಸ್ಥೆ ಇತ್ತು ಎನ್ನಬಹುದು. ಇಸ್ಲಾಂ ಧರ್ಮದ ಮಹಿಳೆಯರು ಶಿಕ್ಷಣದಲ್ಲಿ ಹಿಂದುಳಿದಿರಲಿಲ್ಲ. ಉತ್ತರ ಕನ್ನಡ ಜಿಲ್ಲೆಯ ಹೊನ್ನಾವರವನ್ನು ಸಂದರ್ಶಿಸಿದ ಇಬ್ನಾ ಬತೂತನು "ತಾನು ಎಲ್ಲಿಯೂ ಇಂಥ ಶಾಲೆಗಳನ್ನು ಕಂಡಿಲ್ಲ" ಎಂದೂ, ಹದಿಮೂರು ಶಾಲೆಗಳು ಬಾಲಕಿಯರಿಗೆಂದು ಇದ್ದವು ಹಾಗೂ ಈ ಶಾಲೆಗಳಲ್ಲಿ ಕುರಾನನ್ನು ಕಂಠಪಾಠ ಮಾಡಿಸುತ್ತಿದ್ದರು ಎಂದು ಹೇಳಿದ್ದಾನೆ. ಅಲ್ಲದೆ ಬಾಲಕಿಯರು ಯಾರೂ 'ಪರದೆ' ಧರಿಸುತ್ತಿರಲಿಲ್ಲ. ಎಂದು ಆ ಕಾಲಘಟ್ಟದ

ಮಹಿಳೆಯರಿಗೆ ಮೂರು ಸುಲ್ತಾನರು ನೀಡಿದ ಸ್ವಾತಂತ್ರ್ಯವನ್ನು ದಾಖಲಿಸಿದ್ದಾನೆ. ವಿಜಯನಗರಕ್ಕೂ ಭೇಟಿ ನೀಡಿದ ವಿದೇಶಿ ಪ್ರವಾಸಿಗರು ಅರಮನೆಯಲ್ಲಿ ಹಲವು ಕಲೆಗಳಲ್ಲಿ ಪರಿಣತಿಯನ್ನು ಪಡೆದವರು ಇರುತ್ತಿದ್ದರು ಎಂದು ತಿಳಿಸುತ್ತ ''ಲೆಕ್ಕಪತ್ರಗಳ ತಪಾಸಿಗರು, ಬೇಲಿಫರು, ನ್ಯಾಯಾಧೀಶರು, ಮಹಿಳಾ ಮಲ್ಲರು, ಜ್ಯೋತಿಷಿಗಳು, ಲಿಪಿಗಾರರು, ದಾದಿಯರು, ಹೂ ಕಟ್ಟುವವರು, ಹಲವು ಬಗೆಯ ಸುಗಂಧಗಳನ್ನು ತಯಾರಿಸುವವರು, ಘಟ್ಟವಳ್ತಿಯರು, ಮಸಾಜು ಮಾಡುವವರು, ಹೊಲಿಗೆ-ಹೆಣಿಗೆ ಕಲಿಸುವವರು ಮೊದಲಾದವರು ಇದ್ದರು'' ಎಂದು ದಾಖಲಿಸಿದ್ದಾರೆ. ಅರಸ ಮತ್ತು ರಾಣಿಯರು ಸಹ ಅವರಿಗೆ ಆಪ್ತರಾದವರಿಗೆ ಶಿಕ್ಷಣ ಕೊಡಿಸುವ ವ್ಯವಸ್ಥೆ ಮಾಡುತ್ತಿದ್ದರು. ಉದಾಹರಣೆಗೆ ಸಂಚಿ ಹೊನ್ನಮ್ಮನನ್ನು ಹೆಸರಿಸಬಹುದು. ಆದರೆ ಹೊನ್ನಮ್ಮನಿಗೆ ದೊರೆತಂತೆ ಎಲ್ಲ ಮಹಿಳೆಯರಿಗೂ ಶಿಕ್ಷಣ ದೊರೆಯಲಿಲ್ಲ. ಸ್ವಾದಿಯ ಮನೆತನದ ಮಲ್ಲಮ್ಮನಿಗೆ ಸಹೋದರರ ಸಂಗಡವೇ ಶಿಕ್ಷಣ ನೀಡಿಸಿದ್ದರು ಎಂಬ ಉಲ್ಲೇಖವಿದೆ. ಮಲ್ಲಮ್ಮ ಕನ್ನಡ, ಮರಾಠಿ, ಉರ್ದು ಮತ್ತು ಸಂಸ್ಕೃತ ಭಾಷೆಗಳನ್ನು ಕಲಿಸುತಿದ್ದಳು.

ಅನೇಕ ಮಹಿಳೆಯರು ಸೈನಿಕ ತರಬೇತಿ ಪಡೆದವರಾಗಿ ಬಿಲ್ಲು-ಬಾಣಗಳ ಪ್ರಯೋಗ, ಕುದುರೆ ಸವಾರಿ, ಖಡ್ಗ ವಿದ್ಯೆ, ಇತರೆ ಯುದ್ಧ ವಿದ್ಯೆಗಳಲ್ಲಿ ಪರಿಣಿತಿಯನ್ನು ಪಡೆದವರು ಇರುತ್ತಿದ್ದರು. ಉದಾಹರಣೆಗೆ ಬಮ್ಮಲದೇವಿ ಕುದುರೆಗಳನ್ನು ನೋಡಿಯೆ ಅವುಗಳ ಬಗ್ಗೆ ವಿವರಗಳನ್ನು ನೀಡುತ್ತಿದ್ದಳು ಎನ್ನಲಾಗಿದೆ.

ಅರಮನೆಗಳಲ್ಲಿನ ದೃಶ್ಯಾವಳಿಗಳು ಶಿಕ್ಷಣದ ವ್ಯವಸ್ಥೆಯನ್ನು ಪ್ರತಿನಿಧಿಸುತ್ತಿದ್ದವು. ಅರಮನೆಯಲ್ಲಿನ ಪರಿವಾರದ ಶಿಕ್ಷಣಕ್ಕಾಗಿ ವಿವಿಧ ಜನಾಂಗಗಳ ಜೀವನ ರೀತಿಯನ್ನು ಪೋರ್ಚುಗೀಸರನ್ನೂ ಒಳಗೊಂಡಂತೆ ಬಣ್ಣಗಳಲ್ಲಿ ಚಿತ್ರಿಸಲಾಗಿತ್ತು. ಕಂಠೀರವ ನರಸರಾಜ ಒಡೆಯರ ಕಾಲದಲ್ಲಿ ಅರಮನೆಯ ಚಿತ್ರಶಾಲೆಯಲ್ಲಿ ಮಹಾಭಾರತ, ರಾಮಾಯಣ, ಭಾಗವತಗಳ ಕಥಾ ಪ್ರಸಂಗಗಳು ತಿಳಿಸುವ ಪುತ್ಥಳಿಗಳೂ, ಕಾವ್ಯಭಾಗಗಳನ್ನು ರೂಪಿಸುವ ಚಿತ್ರಗಳು ವಿವಿಧ ಪಕ್ಷಿ, ಪ್ರಾಣಿಗಳ ಪ್ರತಿಮೆಗಳು ಇದ್ದವು.

ಓದು-ಬರೆಹಕ್ಕಿಂತ ಲಕ್ಷ್ಯಗೊಟ್ಟು ಕೇಳಿ ತಿಳಿದು ಅರಗಿಸಿಕೊಂಡು ಪುನರುಚ್ಚರಿಸುವುದು ಭಾರತೀಯ ಪದ್ಧತಿ. ಹೀಗಾಗಿ ಮಹಾಭಾರತ, ರಾಮಾಯಣ ಇತರೆ ಕಾವ್ಯಗಳನ್ನು ಓದಿ ಹೇಳುವುದಕ್ಕಾಗಿಯೇ ಅರಮನೆಯಲ್ಲಿ ಪಂಡಿತೆಯರು ಇರುತ್ತಿದ್ದರು. ಉದಾಹರಣೆಗೆ ಚಿಕ್ಕದೇವರಾಯ ಒಡೆಯರ ಕಾಲಕ್ಕೆ ಹೊನ್ನಮ್ಮ, ಅಚ್ಯುತದೇವರಾಯನಿಗೆ ತಿರುಮಲಾಂಬೆ ಶಿಕ್ಷಣವನ್ನು ನೀಡಿ, ಕಾವ್ಯ ಓದಿ ತಿಳಿಸುತ್ತಿದ್ದರು.

ಕರ್ನಾಟಕದಲ್ಲಿ ನೃತ್ಯ, ಕಲೆ, ಸಂಗೀತಗಳಿಗೆ ಮಹಿಳೆಯರು ಹೆಸರಾಗಿರುವರು. ಅರಮನೆಯಲ್ಲಿನ ರಾಣಿಯರಿಗೆ ಮತ್ತು ಸೂಳೆಯರಿಗೆ ಇವು ಅವಶ್ಯಕವಾಗಿದ್ದವು. ಸಾವಲದೇವಿ ಕಲಚೂರಿಗಳ ರಾಣಿ, ಈಕೆಯ ಸಹೋದರಿ ಬವಲಾದೇವಿ ಗಾನ, ನೃತ್ಯ, ಕಲಾಪಾರಂಗತೆ ಎನ್ನಿಸಿಕೊಂಡಿದ್ದಳು ಎಂದೂ ಶಾಂತಲೆ 'ನಾಟ್ಯರಾಣಿ' ಎಂದೇ ಹೆಸರು ಪಡೆದಿದ್ದಳು. ಶಾಂತಲೆಯಿಂದ ಸಂಗೀತ-ನೃತ್ಯಗಳು ಮರ್ಯಾದೆ ಪಡೆದಿದ್ದವು. ಬೇಲೂರು ಮತ್ತು ಹಳೇಬೀಡಿನ ದೇವಾಲಯದ ಶಿಲ್ಪ ವಿಗ್ರಹಗಳು ನೃತ್ಯಗಳ ಭಂಗಿಯಲ್ಲಿದ್ದು, ಶಾಂತಲೆಯ ನೃತ್ಯವನ್ನು ತಿಳಿಸುತ್ತವೆ ಎನ್ನುವಂತೆ ಆಗಿರುವುದು. ಶಾಂತಲೆಗೆ ''ಭರತಾಗಮಭವನಸಹಿತ ಮಹನೀಯ ಮತಿ ಪ್ರದೀಪೆ ವಿಚಿತ್ರ ನರ್ತನ ಪ್ರವರ್ತನ ಪಾತ್ರ ಶಿರೋಮಣಿ, ಸಂಗೀತ ಸಂಗತ ಸರಸ್ವತಿ, ಸಂಗೀತಾ ವಿದ್ಯಾ ಸರಸ್ವತಿ, ವಿದ್ಯೆಯೊಳ್ ವಾಗ್ದೇವತೆ, ಸಕಳಕಳಾಗಮನೂಮನೆ, ವಿವೇಕದೊಳ್ ಬೃಹಸ್ಪತಿ, ಪ್ರತ್ಯುತ್ಪನ್ನವಾಚಸ್ಪತಿ, ಗೀತವಾದ್ಯ

ನೃತ್ಯ ಸೂತ್ರಧಾರೆ" ಎಂದು ಕರೆಸಿಕೊಂಡಿದ್ದಳು. ವಿಜಯನಗರದ ಅರಮನೆಯಲ್ಲಿ ನಾಟ್ಯ ಕಲಿಯಲು ಪ್ರತ್ಯೇಕ ವ್ಯವಸ್ಥೆಯೇ ಇತ್ತು. ನೃತ್ಯ ಮೇಲೆ ನೃತ್ಯದ ಭಂಗಿಗಳನ್ನು ಚಿತ್ರಿಸುತ್ತಿದ್ದರು ಹಾಗೂ ಲೋಹದ ಪ್ರತಿಮೆಗಳನ್ನೂ ನಿಲ್ಲುಸುತ್ತಿದ್ದುದು, ಹೈದರಾಲಿಯು ಲಾಹೋರ್, ಕಾಬೂಲ್, ಕಂದ್ಹಾರ, ಕಾಶ್ಮೀರ, ಗುಜರಾತ, ಅರಬ್ ಸ್ಥಾನಗಳಿಂದ ಕನ್ಯೆಯರನ್ನು ಬರಮಾಡಿಕೊಂಡು ಅವರಲ್ಲಿ ಸುಂದರಿಯರನ್ನು ಗುರುತಿಸಿ, ಅವರಿಗೆ ಎಲ್ಲ ನೃತ್ಯ-ಕಲೆಗಳನ್ನು ಕಲಿಸಲು ವ್ಯವಸ್ಥೆ ಮಾಡುತ್ತಿದ್ದ.

ಸೂಳೆಯರು ನೃತ್ಯ-ಸಂಗೀತ, ಪಗಡೆ, ಲೆತ್ತ, ಚದುರಂಗದ ಆಟ, ಜನರನ್ನು ಆಕರ್ಷಿಸುವ ಕಲೆಗಳನ್ನು ಕರಗತ ಮಾಡಿಕೊಳ್ಳುತ್ತಿದ್ದರು. ಸೂಳೆಯರು ಅರವತ್ತುನಾಲ್ಕು ಕಲೆಗಳಲ್ಲಿ ಪರಿಣತಿ ಹೊಂದಿದವರಾಗಿ ಇರುತ್ತಿದ್ದರು. ಅವರು ಕಾಮಸೂತ್ರದಂಥ ಗ್ರಂಥಗಳನ್ನು ಓದುತ್ತಿದ್ದರು. ಅಲ್ಲದೆ ಅನೇಕ ಕಾವ್ಯಗಳನ್ನು ಅರಿಯುವ ಆಸಕ್ತಿಯುಳ್ಳವರಾಗಿದ್ದರು. ನೃತ್ಯ ಕಲಿಯುವವರಿಗೆ ಕೆಲವೊಂದು ಅರ್ಹತೆಗಳು ಅವಶ್ಯಕವಾಗಿದ್ದವು. ನರ್ತಿಸುವವರಿಗೆ ದೇಹರಚನೆ ಸುಂದರವಾಗಿದ್ದು ರೂಪ, ಲಾವಣ್ಯ, ಯೌವನದಿಂದ ಶಕ್ತಿಯುತವಂತರೂ ಭಾವನೆಗಳನ್ನು ವ್ಯಕ್ತಪಡಿಸುವ ಸಾಮರ್ಥ್ಯ, ಮಧುರವಾದ ಕಂಠ, ಆಕರ್ಷಕವಾದ, ಆರೋಗ್ಯಕರ ನಗು ಮುಖ ಅವಶ್ಯಕವಾಗಿತ್ತು. ಅಲ್ಲದೇ ದೇಹದ ಮೇಲೆ ನಿಯಂತ್ರಣ ಪಡೆಯಬೇಕಿತ್ತು. ಸಂಗೀತ ವಾದ್ಯಗಳ ಪರಿಚಯವನ್ನು ಪಡೆದಿರಬೇಕೆಂದು ಹೇಳಲಾಗಿತ್ತು.

ಶಿವಶರಣೆಯರಾದ ಶಿವಮಾಯಿ ಊರೂರು ತಿರುಗಿ ಶರಣರ ಕತೆಗಳನ್ನು ಹೇಳುತ್ತಿದ್ದಳು. ವೀರದೇವಮ್ಮ ಕತಾವಾಚನ ಕಲೆಯಲ್ಲಿ ಹೆಸರಾಗಿ, ಗ್ರಾಮಸ್ಥರ, ಸಾಮಂತ ಅರಸರ ಮೆಚ್ಚುಗೆಗೆ ಪಾತ್ರಳಾಗಿದ್ದಳು. ನಾಟಕವನ್ನೇ ಕಾಯಕವಾಗಿ ಮಾಡಿಕೊಂಡು ಶರಣರ ಜೀವನ ಸಂದೇಶಗಳನ್ನು ಜನರಿಗೆ ತಿಳಿಸುವಾಗ ಒಮ್ಮೆಲೆ ಬೋಧನೆ ಮತ್ತು ರಂಜನೆಯನ್ನು ನೀಡುತ್ತಿದ್ದಳು. ಸ್ತ್ರೀವಾದಿ ಅಧ್ಯಯನಕಾರರು ಮಧ್ಯಕಾಲೀನ ಕಾಲಘಟ್ಟದ ಮಹಿಳಾ ಶಿಕ್ಷಣದ ಬಗ್ಗೆ ಇನ್ನಷ್ಟು ಆಳವಾದ ಅಧ್ಯಯನ ಮಾಡಲು ವಿಪುಲ ಅವಕಾಶಗಳಿವೆ.

**ಅಡಿಟಿಪ್ಪಣಿಗಳು**

೧. ಕುವೆಂಪು ಮತ್ತು ಮಾಸ್ತಿ ವೆಂಕಟೇಶ ಅಯ್ಯಂಗಾರ, ಕುಮಾರ ವ್ಯಾಸ ಕರ್ನಾಟಕ ಭಾರತ ಕಥಾ ಮಂಜರಿ, ಪು. ೩೮೧
೨. ಅದೇ, ಪು. ೩೧೦
೩. ನಾಗರಾಜ ಸಿ.ಕೆ, ವೀರಗಂಗ ವಿಷ್ಣುವರ್ಧನ ಕಾದಂಬರಿ
೪. ಎ.ಕ. II, ಶ್ರವಣಬೆಳಗೊಳ, ೧೬೨ (ಕ್ರಿ.ಶ. ೧೧೨೩)
೫. ಮಧುವೆಂಕಾರೆಡ್ಡಿ, ಹದಿಬದೆಯ ಧರ್ಮ : ಒಂದು ಅಧ್ಯಯನ, ಪು. ೩೪
೬. ಚಂಪಬಾಯಿ ಡಿ, ಹದಿಬದೆಯ ಧರ್ಮ, ಪು. ೪೧
೭. ಶಾಮರಾಯ ತ.ಸು, ಭರತೇಶ ವೈಭವ, ಪು. ೧೦೦
೮. ಅದೇ, ಪು. ೧೧೮
೯. ಸೀವೆಲ್ ರಾಬರ್ಟ್, ಮರೆತು ಹೋಗಿರುವ ಸಾಮ್ರಾಜ್ಯ, ಪು. ೨೬೮
೧೦. ವೀರಗಂಗ ವಿಷ್ಣುವರ್ಧನ ಕಾದಂಬರಿ, ಪು. ೨೭
೧೧. ರಾಮಚಂದ್ರರಾವ್ ಎಸ್.ಕೆ, ಪುರಂದರ ಸಾಹಿತ್ಯ, ಪು. ೧೯೯
೧೨. ದೇವೀರಪ್ಪ, ರಾಮನಾಥ ಚರಿತ್ರೆ, ಸಂಪುಟ-೨, ಪು. ೧೩೩
೧೩. ರಾಮಚಂದ್ರರಾವ್ ಎಸ್.ಕೆ, ಪುರಂದರ ಸಾಹಿತ್ಯ, ಪು. ೧೯೯
೧೪. ಬಸವರಾಜು ಎಲ್, ಸೋಮೇಶ್ವರ ಶತಕ
೧೫. ವಿದ್ಯಾಶಂಕರ ಎಸ್, ಪ್ರಭುಲಿಂಗ ಲೀಲೆ, ಪು. ೬೯

೧೬. ಕೃಷ್ಣಮೂರ್ತಿ ಕೆ.ಎಸ್, ತೊರವೆ ರಾಮಾಯಣ, ಪು. ೬೧
೧೭. ಬಸವರಾಜ ಎಲ್, ಧರ್ಮನಾಥ ಪುರಾಣ, ಪು. ೪೨೭
೧೮. ವೆಂಕಟರಾಮಪ್ಪ, ಧರ್ಮಾಮೃತ, ಪು. ೩೪
೧೯. ಬಸವರಾಜು ಎಲ್, ಸರ್ವಜ್ಞನ ವಚನಗಳು, ಸಂಪುಟ-೧, ಪು. ೨೬೧
೨೦. ಮಹೀಶವಾಡಿ ಬಿ.ಬಿ, ಸಂಯುಕ್ತ ಕೌಮುದಿ, ಪು. ೯೫
೨೧. ಎ.ಕ. Vii, ಶಿಕಾರಿಪುರ ೩೮, ಹಿರೇಹಾರಕ (ಕ್ರಿ.ಶ. ೧೧೯೧)
೨೨. Majar, **India in the fifteenth Centuary**, P. ೨೩
೨೩. ಧಾ.ಶಾ.ಸೂ. ೧೭೬, ಬಾಳೂರು (ತಾ) ಹಾನಗಲ್ಲು (೧೧೯೭)
೨೪. ಶಂಕರರಾವ್, ಭಾರತೀಯ ಸಮಾಜ, ಪು. ೪೯೫
೨೫. ಅದೇ, ಪು. ೪೯೫
೨೬. ಬಸವರಾಜು ಎಲ್, ಸರ್ವಜ್ಞನ ವಚನಗಳು, ಪು. ೨೫೭
೨೭. ಎ.ಕ. IX, ಕೊಡುಗು, ೫೯, ಚೌಡ್ಲು ಸುಗ್ಗಿ (ಕ್ರಿ.ಶ. ೧೨೯೭)
೨೮. ಎಂ.ಎ.ಆರ್. ೧೯೪೭-೫೬, ೩೦, ತಿಪ್ಪೂರು (ತಾ) ಚಿಕ್ಕರಸಿನಕೆರೆ (ಕ್ರಿ.ಶ. ೧೨೨೦)
೩೦. ಎ.ಕ. X, ಬೌರಿಂಗಪೇಟೆ, ೭೨, ಮರಗಲ್ಲು (ಕ್ರಿ.ಶ. ೧೪೩೦)
೩೧. ಕಾಮತ್ ಜ್ಯೋತ್ಸ್ನಾ, ಮಹಿಳೆ ಒಂದು ಅಧ್ಯಯನ, ಪು. ೫೧, ಹೈದರಾಲಿಯು ಲಾಹೋರ್ , ಅಬ್ಬಾಲ್ , ಕಾಬೂಲ್, ಕಂದ್ಹಾರ್, ಕಾಶ್ಮೀರ, ಗುಜರಾತ ಅರಬ್‌ಸ್ತಾನಗಳಿಂದ ತನ್ನ ಆಸ್ಥಾನಕ್ಕೆ ಸುಂದರಿಯರನ್ನು ಬರಮಾಡಿಕೊಂಡು ಜಾಣೆಯರನ್ನು ಗುರುತಿಸಿ, ನೃತ್ಯ ಹಾಡುಗಾರಿಕೆ ವಾದ್ಯವಾದನ ಅಭಿನಯ ತರಬೇತಿ ಕೊಡಿಸಿದ್ದ.
೩೨. ಎ.ಕ. iii, ಮಂಡ್ಯ ೧೨೨, ಬಸರಾಳು (ಕ್ರಿ.ಶ. ೧೨೩೫)
೩೩. ಎಸ್.ಆಯ್.ಆಯ್. XX, ೩೦೦, ಕಲಕೇರಿ (ತಾ) ಸಿಂದಗಿ (ಕ್ರಿ.ಶ. ೧೨೦೦)
೩೪. ಎ.ಕ. V, ಬೇಲೂರು ೧೧೦, ಹಳೇಬೀಡು (ಕ್ರಿ.ಶ. ೧೨೭೯)
೩೫. ಎಸ್.ಆಯ್.ಆಯ್. i-ii, ೪೧೭, ಕೋಟೇಶ್ವರ (ತಾ) ಕುಂದಾಪುರ (ಕ್ರಿ.ಶ. ೧೨೭೭)
೩೬. ಅದೇ
೩೭. ಹೊ.ಅ.ಸೀ. ೮, ಪು. ೩೦, ನಾಗಾಯಿ (ಕ್ರಿ.ಶ. ೧೦೮೫)
೩೮. ಎ.ಕ. IV, ಗುಂಡ್ಲುಪೇಟೆ ೩೨, ಗುಂಡ್ಲುಪೇಟೆ (ಕ್ರಿ.ಶ. ೧೩೭೨)
೩೯. ಎ.ಕ. XII, ಗುಬ್ಬಿ ೨೯, ಸಂಪಿಗೆ (ಕ್ರಿ.ಶ. ೧೩೩೫)
೪೦. ಎ.ಕ. V, ಬೇಲೂರು ೧೮೯, ಹಳೇಬೀಡು (ಕ್ರಿ.ಶ. ೧೨೨೦)
೪೧. ಎ.ಕ. Xii, ಗುಬ್ಬಿ ೨೯, ಸಂಪಿಗೆ (ಕ್ರಿ.ಶ. ೧೩೩೫)
೪೨. ಎ.ಕ. V, ಬೇಲೂರು ೨೪೦, ಹಳೇಬೀಡು (ಕ್ರಿ.ಶ. ೧೧೨೦)
೪೩. ತಾಪಿ ಧರ್ಮಾರಾವ್, ದೇವಾಲಯಗಳಲ್ಲಿ ಲೈಂಗಿಕ ಶಿಲ್ಪಗಳು
೪೪. ಕಡೆತೋಟದ ಎನ್.ಕೆ, ಎಲ್ಲಮ್ಮನ ಜೋಗತಿಯರು ಹಾಗೂ ದೇವದಾಸಿ ಪದ್ಧತಿ, ಪು. ೨೮
೪೫. ಜವರೇಗೌಡ ದೇ, ಕಬ್ಬಿಗರ ಕಾವ್ಯ, ಪು. ೮೬
೪೬. ಶ್ರೀನಿವಾಸ ಅಯ್ಯಂಗಾರ್ ಜೆ.ಆರ್, ದಶಕುಮಾರ ಚರಿತ್ರೆ, ಪು. ೨೮
೪೭. ಶಾಮಶಾಸ್ತ್ರಿ, ಜಗನ್ನಾಥ ವಿಜಯ, ಪು. ೩೫೯
~~೪೮.~~ ವೀರಗಂಗ ವಿಷ್ಣುವರ್ಧನ ಕಾದಂಬರಿ
೪೯. ಎ.ಕ. VII, ನಾಗಮಂಗಲ ೭, ನಾಗಮಂಗಲ (ಕ್ರಿ.ಶ. ೧೧೩೪)
೫೦. ವೀರರಂಗ ವಿಷ್ಣುವರ್ಧನ, ಪು. ೩೭
೫೧. ಎ.ಕ. V, ಅರಸಿಕೆರೆ, ೧೨೪, ಹಾರನಹಳ್ಳಿ (ಕ್ರಿ.ಶ. ೧೧೩೮)
೫೨ ಎ.ಕ. XII, ಗುಬ್ಬಿ ೧೩, ಬೆನಚಿಗೆರೆ (ಕ್ರಿ.ಶ. ೧೧೪೦)
೫೩. ಎ.ಕ. V, ಅರಸಿಕೆರೆ ೪೦, ಕಣಕಟ್ಟೆ (ಕ್ರಿ.ಶ. ೧೨೦೯)
೫೪ ಎ.ಕ. V, ಅರಸಿಕೆರೆ ೯೦, ಅರಸಿಕೆರೆ (ಕ್ರಿ.ಶ. ೧೧೮೯)
೫೫ ಎ.ಕ. V, ಅರಸಿಕೆರೆ ೪೦, ಕಣಕಟ್ಟೆ (ಕ್ರಿ.ಶ. ೧೨೦೯)
೫೬. ಎ.ಕ. V, ಹಾಸನ ೨೦೫, ಕೆಂಬಾಳು
೫೭. ಎ.ಕ. VII, ಹಾಸನ ೧೧೭, ಜಕ್ಕೇನಹಳ್ಳಿ (ಕ್ರಿ.ಶ. ೧೧೭೬)
೫೮. ಎ.ಕ. VII, ಶಿಕಾರಿಪುರ ೨೩೫, ಬಂದಳಿಕೆ (ಕ್ರಿ.ಶ. ೧೨೦೭)

೫೯. ಎ.ಕ. XI, ದಾವಣಗೆರ ೧೦೫, ಕುಂದವಾಡ (ಕ್ರಿ.ಶ. ೧೨೪೦)

೬೦. ಎ.ಕ. VI, ತರಿಕೆರೆ ೮೧, ಗಡಿಹಳ್ಳಿ (ಕ್ರಿ.ಶ. ೧೧೮೦) ಎ.ಕ. VI, ಚಿಕ್ಕಮಗಳೂರು ೧೫೮, ಕೆಂಕರೆ (ಕ್ರಿ.ಶ. ೧೧೯೫)

೬೧. ಎ.ಕ. VI, ಕಡೂರು ೧೨೯, ಮಾದಾಪುರ (ಕ್ರಿ.ಶ. ೧೨೧೭)

೬೨. ರತ್ನಮ್ಮ ಕನ್ನಡನಾಡಿನ ವೀರಜನ ಮಹಿಳೆಯರು, ಪು. ೨೬

೬೩. ಅದೇ, ಪು. ೯೫, ೧೦೨, ೧೦೭, ೧೨೫

೬೪. ವೀರಗಂಗ ವಿಷ್ಣುವರ್ಧನ

೬೫. ಎ.ಕ. VII, ಹೊನ್ನಾಳ್ಳಿ ೩೭, ೪೦, ೨೮, ಬೆಳಗುತ್ತಿ (ಕ್ರಿ.ಶ. ೧೧೯೭)

೬೬. ಎ.ಕ. VI, ಚಿಕ್ಕಮಗಳೂರು ೪೭, ೪೮, ೧೫೭, ೧೫೮, ಕೆಂಕರೆ (ಕ್ರಿ.ಶ. ೧೧೯೫)

೬೭. ಕನ್ನಡ ಕಾವ್ಯಗಳಲ್ಲಿ ಸಮರ ಚಿತ್ರಗಳು, ಪು. ೪೨

೬೮. SII, IX, Pt II, No. ೪೨೪

೬೯. ಕೆ.ಆಯ್. III, Pt I, No, ೧೧

೭೦. ಕೆ.ಆಯ್. VI, No. ೬೯

೭೧. ಎಸ್.ಆಯ್.ಆಯ್ . IX, No. ೫೪

೭೨. Saraswathi Nandiah N, **The Position of Women During Vijayanagar period**, p. 46

೭೩. ಎಸ್.ಆಯ್.ಆಯ್. XX, ೧೫೭, ಹಿರೇ ಬೇವನೂರು (ತಾ) ಇಂಡಿ (ಕ್ರಿ.ಶ. ೧೧೯೦)

೭೪. ಎ.ಕ. XI, ದಾವಣಗೆರೆ ೧೦೫, ಕುಂದವಾಡ (ಕ್ರಿ.ಶ. ೧೨೧೮)

೭೫. ಎ.ಕ. XI, ದಾವಣಗೆರೆ ೫೭, ಹರಿಹರ (ಕ್ರಿ.ಶ.೧೨೫೯)

೭೬. ಎ.ಕ. XI, ದಾವಣಗೆರೆ ೫೫, ಹರಿಹರ (ಕ್ರಿ.ಶ. ೧೨೫೯)

೭೭. ಎ.ಕ. V, ಬೇಲೂರು ೯೧, ಹಳೇಬೀಡು (ಕ್ರಿ.ಶ. ೧೨೮೬)

೭೮. ಎಸ್.ಆಯ್.ಆಯ್. XViii, ಬಿಜಾಪುರ (ತಾ) ವಿಜಾಪುರ (ಕ್ರಿ.ಶ. ೧೨೭೮)

೭೯. B.KI, -ii, ೧೩೭, ಸೊರಟೂರು (ತಾ) ಗದಗ (ಕ್ರಿ.ಶ. ೧೧೯೨)

೮೦. ಮರಿಯಾನೆ ದಂಡನಾಯಕನ ತಾಯಿ ಶಾಂತಲಾದೇವಿ ಘನತರಕೂಟ ಕೋಟಿಯುತ ಪಾರ್ಶ್ವ ಜಿನೇಶ್ವರಗೇಹ ಮಾಡಿಸಿದ್ದಳು. ಎ.ಕ. IV, ನಾಗಮಂಗಲ ೩೨, ಹಳೇಸಂದ್ರ (ಕ್ರಿ.ಶ. ೧೧೦೩)

೮೧. ಎ.ಕ. ii, ಶ್ರವಣಬೆಳಗೊಳ ೧೬೨, (ಕ್ರಿ.ಶ. ೧೧೨೩)

೮೨. ಎ.ಕ. ii, ಶ್ರವಣಬೆಳಗೊಳ ೧೩೬ (ಕ್ರಿ.ಶ. ೧೧೨೦)

೮೩. ಎ.ಕ. ii, ಶ್ರವಣಬೆಳಗೊಳ ೮೨ (ಕ್ರಿ.ಶ. ೧೧೧೭)

೮೪. ಎ.ಕ. ii, ಶ್ರವಣಬೆಳಗೊಳ ೧೬೦ (ಕ್ರಿ.ಶ. ೧೨೦೦)

೮೫. ಎ.ಕ. ii, ಶ್ರವಣಬೆಳಗೊಳ ೧೫೫ (ಕ್ರಿ.ಶ. ೧೧೧೩)

೮೬. ಎ.ಕ. ii, ಶ್ರವಣಬೆಳಗೊಳ ೩೬೭ (ಕ್ರಿ.ಶ. ೧೧೨೦)

೮೭. ಎ.ಕ. ii, ಶ್ರವಣಬೆಳಗೊಳ ೩೮೫ (ಕ್ರಿ.ಶ. ೧೧೯೦)

೮೮. ಎ.ಕ. ii, ಶ್ರವಣಬೆಳಗೊಳ ೮೧ (ಕ್ರಿ.ಶ. ೧೨೦೦)

೮೯. ಎ.ಕ. ii, ಶ್ರವಣಬೆಳಗೊಳ ೧೭೦ (ಕ್ರಿ.ಶ. ೧೧೧೭)

೯೦. ಎ.ಕ. IV, ಕೃಷ್ಣರಾಜಪೇಟೆ ೩, ಹೊಸಹೊಳಲು (ಕ್ರಿ.ಶ. ೧೧೨೫)

೯೧. ಎ.ಕ. VI, ಮೂಡಗೆರೆ ೨೨, ಹಂತೂರು (ಕ್ರಿ.ಶ. ೧೧೩೦)

೯೨. ಎಸ್.ಆಯ್.ಆಯ್. ix-i, ೧೫೦ ಕೋನಕೊಂಡಲ (ತಾ) ಗೂಟಿ (ಕ್ರಿ.ಶ. ೧೧೮೧)

೯೩. ಎ.ಕ. ii, ಶ್ರವಣಬೆಳಗೊಳ ೪೪೪, (ಕ್ರಿ.ಶ. ೧೧೮೨)

೯೪. ಎ.ಕ. ii, ಶ್ರವಣಬೆಳಗೊಳ ೧೪೯, ೩೪೧ (ಕ್ರಿ.ಶ. ೧೩೨೫)

೯೫. ಎಂ.ಎ.ಆರ್. ೧೯೩೭-೩೫, ಹಳೇಬೀಡು (ತಾ) ಹಳೇಬೀಡು (ಕ್ರಿ.ಶ. ೧೨೦೦)

೯೬. ಎ.ಕ. ii, ಶ್ರವಣಬೆಳಗೊಳ ೩೪೧ (ಕ್ರಿ.ಶ. ೧೨೭೮, ೧೨೯೮)

೯೭. ಎಸ್.ಆಯ್.ಆಯ್. XViii, ೪೦೧, ಲಕ್ಕುಂಡಿ (ತಾ) ಗದಗ (ಕ್ರಿ.ಶ. ೧೩೦೦)

೯೮. ಎ.ಕ. XV, ಬೇಲೂರು (ಕ್ರಿ.ಶ. ೧೧೧೭)

೯೯. ಎ.ಕ. IV, ನಾಗಮಂಗಲ ೩, ನಾಗಮಂಗಲ (ಕ್ರಿ.ಶ. ೧೧೩೫)

೧೦೦. ಎ.ಕ. Vii, ಶಿಕಾರಿಪುರ ೧೨೩, ಬಳ್ಳಿಗಾವೆ (ಕ್ರಿ.ಶ. ೧೧೫೯)

೧೦೧. ಎ.ಕ. Vi, ಕಡೂರು ೧೨೯, ಮಾದಾಪುರ (ಕ್ರಿ.ಶ. ೧೨೧೮)

೧೦೨. ಎ.ಕ. V, ಬೇಲೂರು ೧೮೨, ಅಡಗೂರು (ಕ್ರಿ.ಶ. ೧೨೨೭, ೧೨೩೫)

೧೦೩. ಎ.ಕ. V, ಅರಸಿಕೆರೆ ೧೨೩, ಹಾರನಹಳ್ಳಿ (ಕ್ರಿ.ಶ. ೧೨೩೪)

೧೦೪. ಶಾಸನ ಸಂಚಯ, ಕೊಪ್ಪಳ ಜಿ. ಶಾಸನಗಳು ೨೨, ಕೌಲೂರು (ಕ್ರಿ.ಶ. ೧೧೮೮)

೧೦೫. ಎ.ಕ. XV, ಬೇಲೂರು ೩೭೫, ಪುಟ್ಟಮ್ಮನಕಟ್ಟೆ (ಕ್ರಿ.ಶ. ೧೧೯೫)

೧೦೬. ಎ.ಕ. V, ಹಾಸನ ೧೭೮, ಗೇರೂರು

೧೦೭. ಎ.ಕ. XV, ಬೇಲೂರು ೨೫೧, ಬೇಲೂರು (ಕ್ರಿ.ಶ. ೧೨೯೮)

೧೦೮. ಎ.ಕ. VII, ಶಿಕಾರಿಪುರ ೮೭, ಬಳ್ಳಿಗಾವೆ (ಕ್ರಿ.ಶ. ೧೧೩೧)

೧೦೯. ಆಯ್.ಎನ್.ಡಿ. ೩೨, ಭೀಮರಾ (ತಾ) ದೇಗಳೂರು (ಕ್ರಿ.ಶ. ೧೧೨೩)

೧೧೦. ಎ.ಕ. XV, ಬೇಲೂರು ೨೫೧, ಬೇಲೂರು (ಕ್ರಿ.ಶ. ೧೨೯೮)

೧೧೧. ಎ.ಕ. V, ಚೆನ್ನರಾಯಪಟ್ಟಣ ೧೬೬, ಬಾಗೂರು (ಕ್ರಿ.ಶ. ೧೧೮೧)

೧೧೨. ಎ.ಕ. V, ಚೆನ್ನರಾಯಪಟ್ಟಣ ೨೫೪, ಅತ್ತಿಹಳ್ಳಿ (ಕ್ರಿ.ಶ. ೧೧೮೪)

೧೧೩. ಎಂ.ಎ.ಆರ್. ೧೯೩೭ ಹಳೇಬೀಡು (ತಾ) ಹಳೇಬೀಡು (ಕ್ರಿ.ಶ. ೧೧೪೦)

೧೧೪. ಕೆ.ಆಯ್. VI, ೩೩, ಕುನ್ನೂರು (ತಾ) ಬ್ಯಾಡಗಿ (ಕ್ರಿ.ಶ. ೧೧೯೫)

೧೧೫. ಎಸ್.ಆಯ್.ಆಯ್. XV, ೪೫, ಹಂಡರಗಲ್ಲು (ತಾ) ಮುದ್ದೇಬಿಹಾಳ

೧೧೬. ಎ.ಕ. V, ಬೇಲೂರು ೭೭, ಬೇಲೂರು (ಕ್ರಿ.ಶ. ೧೧೯೮)

೧೧೭. ಎ.ಕ. V, ಚೆನ್ನರಾಯಪಟ್ಟಣ ೨೦೪, ಕೆಂಬಾಳು (ಕ್ರಿ.ಶ. ೧೨೨೮)

೧೧೮. ಶರಣಸಾಹಿತ್ಯ, ೨೧:೧, ಇಂಗಳಗಿ (ಕ್ರಿ.ಶ. ೧೨೦೯)

೧೧೯. ಎ.ಕ. V, ಅರಸಿಕೆರೆ ೧೦೮, ಹಿರಿಯೂರು ಕ್ರಿ.ಶ. ೧೨೫೫

೧೨೦. ಎಂ.ಎ.ಆರ್. ೧೯೩೦, ೫, ಅಂಬಳೆ (ತಾ) ಚಿಕ್ಕಮಗಳೂರು

೧೨೧. ಎ.ಕ. XV, ಹೊಳೆನರಸೀಪುರ ೧೧೨, ಮಾವನೂರು (ಕ್ರಿ.ಶ. ೧೨೮೨)

೧೨೨. ಎ.ಕ. ಬೇಲೂರು ೩೨೫, ಬಂಟೇನಹಳ್ಳಿ (ಕ್ರಿ.ಶ. ೧೨೪೪)

೧೨೩. ಸಂಕೀರ್ಣ ವಚನ ಸಂಪುಟ-೨, ವಚನ-೮೫೩

೧೨೪. ಅದೇ, ಸಂಪುಟ-೧, ವಚನ-೨೬೫

೧೨೫. ಅದೇ, ಸಂಪುಟ-೨, ಪು. ೫೬೬

೧೨೬. ಬಸವಣ್ಣನವರ ವಚನ ಸಂಪುಟ, ವಚನ-೫೯೦

೧೨೭. ಅದೇ, ವಚನ-೭೭೦

೧೨೮. ಅಲ್ಲಮಪ್ರಭುದೇವರ ವಚನ ಸಂಪುಟ, ವಚನ-೧೪೮

೧೨೯. ಶಿವಶರಣೆಯರ ವಚನ ಸಂಪುಟ, ಪ್ರಸ್ತಾವನೆ, ಪು. ೪

೧೩೦. ಚೆನ್ನಬಸವಣ್ಣನವರ ವಚನ, ಸಂಪುಟ-೧೪, ೯೨

೧೩೧. ಬಸವಣ್ಣನವರ ವಚನ ಸಂಪುಟ, ವಚನ-೬೭೭, ೪೪೭, ೬೪೧, ೬೪೨

೧೩೨. ಸರ್ವಜ್ಞ ವಚನ, ಸಂಪುಟ-೪, ವಚನ-೧೭೩

೧೩೩. ಅದೇ, ವಚನ-೩೯೭

೧೩೪. ಅದೇ, ಸಂಪುಟ-೪, ವಚನ-೭೬೨

೧೩೫. ಸರ್ವಜ್ಞ ವಚನ, ಸಂಪುಟ-೨, ವಚನ-೮೯೭

೧೩೬. ಅದೇ, ವಚನ-೭೨೩

೧೩೭. ಬಸವಣ್ಣನವರ ವಚನ ಸಂಪುಟ, ವಚನ-೭೩೯

೧೩೮. ವಚನ ಸಾಹಿತ್ಯ ಸಂಪುಟ, ಪು. ೬೧೩

೧೩೯. ಸಿದ್ಧರಾಮ ವಚನ, ಪು. ೮೭

೧೪೦. ಜೇಡರ ದಾಸಿಮಯ್ಯ ವಚನ-೫೫

೧೪೧. ವೀರಣ್ಣ ಸಿ, ಹನ್ನೆರಡನೆ ಶತಮಾನದ ಕಾಯಕ ಜೀವಿಗಳ ಚಳುವಳಿ, ಪು. ೧೪

೧೪೨. ಹಿರೇಮಠ ಆರ್.ಸಿ, ಬಸವಣ್ಣನವರ ವಚನಗಳು, ಪು. ೯೯. ಈ ವಚನದಲ್ಲಿ ಹೆಣ್ಣನ್ನು ಮಾಯೆ ಎಂದು ಕರೆದಿದ್ದನ್ನು ಹೀಗೆ ತಿಳಿಯಬಹುದಾಗಿದೆ. ಹೆಣ್ಣು ಸೃಷ್ಟಿಯ ಸಂಕೇತ ಜೀವನ ಅಸ್ತಿತ್ವಕ್ಕೆ ಕಾರಣಳಾದವಳು ಹಾಗೂ ಲೌಕಿಕವನ್ನು ಎಂದರೆ ಜೀವನ ಪ್ರವೃತ್ತಿ ಮಾರ್ಗವನ್ನು ವಿಸ್ತರಿಸಲು ಕಾರಣಳಾದಳು. ಹೆಣ್ಣು ಆಸೆ ಆಮಿಷಗಳಿಗೆ ತನ್ನ ಆಕರ್ಷಣೆಯಿಂದ ಒಳಪಡಿಸಿಕೊಂಡು ಮುಕ್ತಿಗೆ ಕಾರಣ ಆಗುವ ಮಾಯೆಯವಳು ಎಂಬ ನೆಲೆಯಿಂದ ನೋಡಲು ಸಾಧ್ಯವಿದೆ

೧೪೩. ಹಳಕಟ್ಟಿ, ವಚನಶಾಸ್ತ್ರಸಾರ, ಪು. ೩೪೦

೧೪೪. ತೋಂಟದ ಸಿದ್ಧಲಿಂಗ ಯತಿಗಳು, ವಚನ-೩೦೬

೧೪೫. ಸುಂಕಾಪುರ ಎಂ.ಎಸ್, ಸಕಲ ಪುರಾತನರ ವಚನಗಳು, ಸಂಪುಟ-೩. ಪು. ೩೪೪

೧೪೬. ಚೆನ್ನಬಸವಣ್ಣನ ವಚನ, ಪು. ೧೨೧

೧೪೭. ಬಸವಣ್ಣನ ವಚನ, ಪು. ೩೬

೧೪೮. ಜೇಡರ ದಾಸಿಮಯ್ಯ ದುಗ್ಗಲೆಯನ್ನು ಮದುವೆಯಾಗುವ ಮೊದಲು ಅವಳನ್ನು ಪರೀಕ್ಷಿಸಿದ ಕತೆ ಹೆಸರಾಗಿದೆ. ಮರಳು ಬೆರಸಿದ ಅಕ್ಕಿ ಕಬ್ಬು ಕೊಟ್ಟಾಗ ಪಾಯಸ ತಯಾರಿಸಿದಳಂತೆ, ಸನ್ಯಾಸ ಹೆಚ್ಚು ಸಂಸಾರ ಹೆಚ್ಚು ಎಂಬ ಪ್ರಶ್ನೆ ಬಂದಾಗ ದಾಸಿಮಯ್ಯ ಅಭಿಪ್ರಾಯ ಮಧ್ಯಾಹ್ನದ ಬಿಸಿಲಿದ್ದರೂ ದಾರ ಹರಿದವೆ ದೀಪ ತಾರೆಂದಾಗ ದುಗ್ಗಲೆ ಕೊಟ್ಟಂಳತೆ ಮೊನ್ನೆ ಮಾಡಿದ ಅಂಬಲಿ ಸುಡತ್ತಿದೆ ಎಂದರೆ ಆಕೆ ಅದನ್ನು ತಣ್ಣಗಾಗಿಸಲು ಮೊರದಿಂದ ಬೀಸಿದಳಂತೆ. ದಾಸಿಮಯ್ಯ ದುಗ್ಗಲೆಯಂಥ ಹೆಣ್ಣು ಸಂಸಾರಕ್ಕೆ ಬೇಕು ಎಂದಿದ್ದಾನೆ.

೧೪೯. ಸಣ್ಣಯ್ಯ ಬಿ.ಎಸ್, ಮೋಳಿಗೆ ಮಾರಯ್ಯನ ವಚನಗಳು, ಪು. ೨೧

೧೫೦. ಹಿರೇಮಠ ಆರ್.ಸಿ, ಬಸವಣ್ಣನವರ ವಚನಗಳು, ಪು. ೮೦

೧೫೧. ಅದೇ, ಪು. ೯೧

೧೫೨. ಅದೇ, ಪು. ೪೯

೧೫೩. ಉಮಾಪತಿ ಎಸ್, ಮಡಿವಾಳ ಮಾಚಿದೇವರ ವಚನಗಳು, ಪು. ೧೦೦

೧೫೪. ಸುಂಕಾಪುರ ಎಂ.ಎಸ್, ಸಕಲ ಪುರಾತನರ ವಚನಗಳು, ಸಂಪುಟ-೨, ಪು. ೧೫೭

೧೫೫. ಅದೇ, ಪು. ೪೩೦

೧೫೬. ಅದೇ, ಸಂಪುಟ-೨, ಪು. ೪೩೦

೧೫೭. ಹಿರೇಮಠ ಆರ್.ಸಿ, ಬಸವಣ್ಣನವರ ವಚನಗಳು, ಪು. ೨೫೩

೧೫೮. ಸಣ್ಣಯ್ಯ ಬಿ.ಎಸ್, ಅಕ್ಕಮಹಾದೇವಿಯ ವಚನಗಳು, ಪು. ೧೧೬

೧೫೯. ಸಿದ್ಧಾಶ್ರಮ ಸಿ.ಪಿ, ವಿದ್ಯಾಶಂಕರ ಎಸ್, ಅಂಬಿಗರ ಚೌಡಯ್ಯನ ವಚನಗಳು, ಪು. ೨೨

೧೬೦. ಅದೇ, ಪು. ೧೨೦

೧೬೧. ಹಿರೇಮಠ ಆರ್.ಸಿ, ಬಸವಣ್ಣನವರ ವಚನಗಳು, ಪು. ೧೨೮

೧೬೨. ಚೆನ್ನಬಸವಣ್ಣನ ವಚನ, ಪು. ೧೭೮

೧೬೩. ಬಸವರಾಜು ಎಲ್, ಅಕ್ಕಮಹಾದೇವಿಯ ವಚನಗಳು, ಪು. ೧೨೫

೧೬೪. ಅದೇ, ಪು. ೮೯

೧೬೫. ಅದೇ, ಪು. ೪೩

೧೬೬. ಚೆನ್ನಬಸವಣ್ಣನವರ ವಚನ ಸಂಪುಟ, ವಚನ-೨೨೧

೧೬೭. ಶಿವಶರಣರ ವಚನ ೧೫೧, ಪು. ೫೨೮

೧೬೮. ಶಿವಶರಣರ ವಚನ ೧೫, ಪು. ೪೬೬

೧೬೯. ಶಿವಶರಣರ ವಚನ ೩೧, ಪು. ೪೨೨

೧೭೦. ಶಿವಶರಣರ ವಚನ ೫೫, ಪು. ೪೩

೧೭೧. ಶಿವಶರಣರ ವಚನ ೭೩, ಪು. ೩೨೯

೧೭೨. ಶಿವಶರಣರ ವಚನ ೨೧೭, ಪು. ೩೯೧

೧೭೩. ಶಿವಶರಣೆಯರ ವಚನಗಳು, ಪು. ೨೧೨, ೬೬೫

೧೭೪. ಅದೇ

೧೭೫. ಅದೇ, ಪು. ೩೧೬, ೯೮೨

❖❖

ಅಧ್ಯಾಯ - ೫

# ವಸಾಹತುಶಾಹಿ ಕಾಲಘಟ್ಟ ಮತ್ತು ಸ್ತ್ರೀ

೫. ಹಿನ್ನೆಲೆ

೫.೧ ಭಾರತೀಯ ಪ್ರತಿಕ್ರಿಯೆ

೫.೨ ಕನ್ನಡ ಮಹಿಳೆಯರ ಪ್ರತಿರೋಧಗಳು

ಅ. ಕನ್ನಡದ ರಾಣಿಯರು ಮತ್ತು ಸ್ವಾತಂತ್ರ್ಯ ಪ್ರಿಯರು ನಡೆಸಿದ ಸಶಸ್ತ್ರ ಹೋರಾಟ

೧. ಕಿತ್ತೂರು ೨. ಹಲಗಲಿ ೩. ನರಗುಂದ

ಆ. ಭಾರತದ ರಾಷ್ಟ್ರೀಯ ಚಳವಳಿಗೆ ಕನ್ನಡತಿಯರು ತೋರಿದ ಪ್ರತಿಕ್ರಿಯೆ

೧. ಮುಂಬಯಿ ಕರ್ನಾಟಕದ ಮಹಿಳೆಯರ ಪ್ರತಿಕ್ರಿಯೆ

೨. ಮದ್ರಾಸ್ ಕರ್ನಾಟಕದ ಮಹಿಳಾ ಸ್ಪಂದನೆ

೩. ಮೈಸೂರು ಸಂಸ್ಥಾನದ ಮಹಿಳೆಯರ ಪ್ರತಿರೋಧಗಳು

೪. ಹೈದರಾಬಾದ್ ಸಂಸ್ಥಾನದಲ್ಲಿನ ಮಹಿಳೆಯರ ವಿರೋಧ

೫. ಕೊಡಗಿನ ಮಹಿಳೆಯರ ಪ್ರತಿಕ್ರಿಯೆಗಳು

೫.೩ ಏಕೀಕರಣ ಚಳವಳಿ ಮತ್ತು ಮಹಿಳೆ

೫.೪ ಉಪಸಂಹಾರ

ಅಧ್ಯಾಯ - ೫

# ವಸಾಹತುಶಾಹಿ ಕಾಲಘಟ್ಟ ಮತ್ತು ಸ್ತ್ರೀ

## ೫.೦ ಹಿನ್ನೆಲೆ

ಕ್ರಿ.ಶ. ಹದಿನೈದು ಮತ್ತು ಹದಿನಾರನೆಯ ಶತಮಾನ ಯುರೋಪಿಯನ್ನರಿಗೆ ಪ್ರಧಾನವಾದುದು. ಕಾರಣ ಇವರುಗಳು ಪ್ರಪಂಚದ ವಿಭಿನ್ನ ದೇಶಗಳಿಗೆ ಜಲಮಾರ್ಗವನ್ನು ಕಂಡುಹಿಡಿದದ್ದು. ಹೀಗೆ ಅನ್ಯದೇಶಗಳಿಗೆ ಜಲಮಾರ್ಗವನ್ನು ಕಂಡುಹಿಡಿದು ತಮ್ಮ ವ್ಯಾಪಾರ-ವಾಣಿಜ್ಯದ ಅಭಿವೃದ್ಧಿಗೆ ಕೇಂದ್ರಗಳಾನ್ನಾಗಿಸಿದ್ದರು. ಅಂತೆಯೇ ಪೋರ್ಚುಗೀಸರ ವಾಸ್ಕೋಡಿಗಾಮ ಹಿಂದೂ ಮಹಾಸಾಗರದ ಮುಖೇನ ಭಾರತದ ಪಶ್ಚಿಮ ಕರಾವಳಿಯ ಕಲ್ಲಿಕೋಟೆಗೆ ಬಂದು ಇಳಿಯುವುದರ ಜೊತೆಗೆ, ತನ್ನೊಂದಿಗೆ ಕ್ರೈಸ್ತ ಪಾದ್ರಿ ಹಾಗೂ ವರ್ತಕರನ್ನು ಸಹ ಕರೆತಂದಿದ್ದ. ಇವರೆಲ್ಲಾ ತಮ್ಮ ತಾಯ್ನಾಡಿಗೆ ಹಿಂತಿರುಗುವಾಗ ಭಾರತದ ಅನೇಕ ವಸ್ತುಗಳನ್ನು ತೆಗೆದುಕೊಂಡು ಹೋದರು. ಇವರ ನಂತರ ಕ್ರಿ.ಶ. ೧೫೬೫ರಲ್ಲಿ ಡಚ್ಚರು, ಕ್ರಿ.ಶ. ೧೬೬೪ರಲ್ಲಿ ಬ್ರಿಟಿಷರು, ಕೊನೆಗೆ ಫ್ರೆಂಚರು ಬಂದರು. ಹೀಗೆ ಬಂದವರು ಭಾರತದಲ್ಲಿನ ವಸ್ತುಗಳನ್ನು ಕಡಿಮೆ ಬೆಲೆಗೆ ಕೊಂಡು ತಮ್ಮ ದೇಶದಲ್ಲಿ ದುಬಾರಿ ಬೆಲೆಗೆ ಮಾರಿ ಲಾಭ ಗಳಿಸುತ್ತಿದ್ದರು. ಇದರಿಂದಾಗಿ ಈ ನಾಲ್ಕು ದೇಶದವರಿಗೆ ವ್ಯಾಪಾರ-ವಾಣಿಜ್ಯಗಳ ವಿಸ್ತರಣೆಯಲ್ಲಿ ತೀವ್ರ ಸ್ಪರ್ಧೆ ಉಂಟಾಯಿತು. ಈ ಸ್ಪರ್ಧೆಯಲ್ಲಿ ಅಂತಿಮವಾಗಿ ವಿಜೇತರಾದವರು ಬ್ರಿಟಿಷರು ಮಾತ್ರ. ಅಂದರೆ ಫ್ರೆಂಚರು, ಪೋರ್ಚುಗೀಸರು ಕೆಲವು ಪ್ರದೇಶಗಳನ್ನು ಮಾತ್ರ ವಶಪಡಿಸಿಕೊಂಡಿದ್ದರು.

ಬ್ರಿಟಿಷರು ಭಾರತಕ್ಕೆ ಬಂದಾಗ ಇಲ್ಲಿನ ಸಾಮಾಜಿಕ ಅನಿಷ್ಟ ಪದ್ಧತಿ, ಸಂಪ್ರದಾಯಗಳ ಜೊತೆಗೆ ಮಹಿಳೆಯರ ಸ್ಥಿತಿಯು ಸಹ ಉತ್ತಮವಾಗಿರಲಿಲ್ಲ. ರಾಜಕೀಯ ಅನೈಕ್ಯತೆ ಜಾರಿಯಲ್ಲಿ ಇತ್ತು. ಅಲ್ಲದೆ ಉತ್ತಮ ಮಿಲಿಟರಿ ವ್ಯವಸ್ಥೆಯೂ ಇರಲಿಲ್ಲ. ಇಲ್ಲಿನ ಅರಸರು ಯಾವಾಗಲೂ ಕಾದಾಡುತ್ತಲೇ ಇದ್ದರು. "ಇಬ್ಬರ

ಜಗಳ ಮೂರನೆಯವನಿಗೆ ಲಾಭ'' ಎನ್ನುವಂತೆ ಇವರುಗಳ ಅನೈಕ್ಯತೆ ಬ್ರಿಟಿಷರ ವಾಣಿಜ್ಯ ವ್ಯಾಪಾರಕ್ಕೆ ಅನುಕೂಲವಾಯಿತು. ಬ್ರಿಟಿಷರು ತಮ್ಮ ''ಒಡೆದು ಆಳುವ'' ನೀತಿಗೆ ಅನುಗುಣವಾಗಿ ಇಲ್ಲಿನ ದೇಶೀಯ ರಾಜಕಾರಣವನ್ನು ಪ್ರವೇಶಿಸಿದರು. ಆ ಮೂಲಕ ಒಬ್ಬರ ವಿರುದ್ಧ ಇನ್ನೊಬ್ಬರನ್ನು ಎತ್ತಿಕಟ್ಟಿ, ಅವರ ಸೆಣಸಾಟದಲ್ಲಿ ತಮ್ಮ ಆಶಯಗಳನ್ನು ಸಾಕಾರಗೊಳಿಸಿಕೊಳ್ಳಲು ತೊಡಗಿದರು. ಆಂಗ್ಲರು ಭಾರತದಲ್ಲಿ ತಳವೂರುವುದರ ಜೊತೆಗೆ ಕಾಲಕ್ರಮೇಣ ಭಾರತೀಯರ ಭೌತಿಕ ಹಾಗೂ ಬೌದ್ಧಿಕ ಜೀವನದಲ್ಲಿ ಸುಧಾರಣೆಗಳನ್ನು ತಂದರು. ಅವುಗಳೆಂದರೆ ರೈಲ್ವೆ, ಸಾರಿಗೆ, ಅಂಚೆ-ತಂತಿ, ಪೊಲೀಸ್, ಮಿಲಿಟರಿ, ಶಿಕ್ಷಣ, ಮಹಿಳೆಯರ ಸ್ಥಾನಮಾನದ ಸ್ಥಿತಿಗತಿಗಳ ಸುಧಾರಣೆ ಇತ್ಯಾದಿ. ಬ್ರಿಟಿಷರಿಗಿಂತಲೂ ಮೊದಲು ಬಂದ ಮುಸ್ಲಿಮರು ಹೊಸ ಧರ್ಮವನ್ನು ಸ್ಥಾಪಿಸಿ ಅಧಿಕಾರ ಸಂಬಂಧಗಳನ್ನು ಯೋಜಿಸುವ ಹೊಸ ಪದ್ಧತಿಗಳನ್ನೇ ಪರಿಚಯಿಸಿದ್ದರು. ಆದರೆ ಸಾಮಾನ್ಯ ಪ್ರಜೆಗಳ ಬದುಕನ್ನು ಪ್ರಭಾವಿಸುವಂಥ ಮಹತ್ತ್ವದ ಬದಲಾವಣೆಗಳನ್ನು ತಂದವರು ಬ್ರಿಟಿಷರು ಮಾತ್ರ. ಹಿಂದಿನವರು ಕಂದಾಯ ವಸೂಲಿ, ಪ್ರಜೆಗಳ ವಿಧೇಯತೆಯ ಬಗ್ಗೆ ಗಮನ ನೀಡಿದ್ದರೇ ವಿನಹ ಸಾಮಾಜಿಕ ಪದ್ಧತಿ, ಮಹಿಳೆಯರ ಸ್ಥಿತಿಗತಿಗಳನ್ನು ಕುರಿತು ಯೋಚಿಸಲಿಲ್ಲ. ಬ್ರಿಟಿಷರಿಗೆ ವ್ಯಾಪಾರವೇ ಪ್ರಧಾನ ಗುರಿಯಾಗಿತ್ತು. ಆದ್ದರಿಂದ ಅವರು ಸಂಬಂಧಗಳನ್ನು ನವೀಕರಿಸಲು ಬಯಸಿದರು. ಅದಕ್ಕಾಗಿ ಅವರು ''ತಮ್ಮ ಪ್ರತಿಯೊಂದು ವರ್ತನೆಯೂ ನಿರ್ಮಲ, ನಿರ್ದುಷ್ಟ, ಉತ್ತಮ ಸಾಧನ, ತಾಂತ್ರಿಕ ವೈಜ್ಞಾನಿಕ ಪರಿಣಾಮಕಾರಿ ಸತ್ಯವೆನಿಸುವಂಥದು ಹಾಗೂ ತಮ್ಮ ವರ್ತುಲಕ್ಕೆ ಬಂದ ಪ್ರತಿಯೊಬ್ಬರಿಗೂ ಲಾಭದಾಯಕವಾದದ್ದು ಎಂಬುದನ್ನು''[7] ಜಗಜ್ಜಾಹೀರಾಗುವಂತೆ ಅವರು ಘೋಷಿಸಿದರು ಎನ್ನಬಹುದು. ಇಂಥ ಘೋಷಣೆಗಳ ಮುಖೇನ ತಾವು ಶ್ರೇಷ್ಠರು, ಉತ್ತಮ ನಾಗರಿಕರು ಎಂದೂ, ಭಾರತೀಯರು ಅನಾಗರಿಕರು, ಆಡಳಿತದ ವ್ಯವಹಾರ ಜ್ಞಾನ ಇಲ್ಲದವರು ಎಂಬ ಅಭಿಪ್ರಾಯಗಳು ಮೂಡುವಂತೆ ಮಾಡಿದ್ದರು. ಈ ತರಹದ ಧೋರಣೆಗಳು ಇಂದಿಗೂ ಬದಲಾಗಿಲ್ಲ. 'ಪಾಶ್ಚಿಮಾತ್ಯವಾದ' ಈ ನೆಲೆಗಳಲ್ಲಿಯೇ ಹುಟ್ಟಿಕೊಂಡಿದ್ದು. ಪೂರ್ವದ ಬಗೆಗಿನ ಕೀಳರಿಮೆ, ಅಸಡ್ಡೆಗಳನ್ನು ಇಂದು 'ನವ ವಸಾಹತುಶಾಹಿ'ಯ ಸನ್ನಿವೇಶದಲ್ಲೂ ನೋಡಬಹುದು.

ಯುರೋಪ ಹತ್ತೊಂಬತ್ತನೆಯ ಶತಮಾನದ ವೇಳೆಗೆ ಸಾಮಾಜಿಕವಾಗಿ, ರಾಜಕೀಯವಾಗಿ ಹಾಗೂ ವೈಜ್ಞಾನಿಕವಾಗಿ ಅತ್ಯುತ್ತಮ ಸಾಧನೆಗಳನ್ನು ಸಾಧಿಸಿತ್ತು. ಹೀಗಾಗಿ ಇತರೆ ಉಪಖಂಡಗಳ ಮೇಲಿನ ನಿಯಂತ್ರಣ, ಅಧೀನ ಮಾಡಿಕೊಳ್ಳುವ ಪ್ರಕ್ರಿಯೆಗಳನ್ನು ತನ್ನ ಹಕ್ಕು ಎಂದು ಪರಿಭಾವಿಸಿತ್ತು. ಜೊತೆಗೆ ಉಚ್ಛ್ರಾಯ ಸ್ಥಿತಿಯಲ್ಲಿರುವುದು ಒಂದು ಹೆಗ್ಗಳಿಕೆ ಎಂದೇ ತಿಳಿದಿತ್ತು. ತನ್ನ ವಸಾಹತಿನ ಪ್ರಜೆಗಳನ್ನು ಆಳುವ ವಿಧಾನಗಳನ್ನು ಕುರಿತಂತೆಯೂ ಇವರು ಚರ್ಚೆಗಳನ್ನು ನಡೆಸಿದ್ದರು. ಇಂಥ ಚರ್ಚೆಗಳಲ್ಲಿ ''ಸ್ತ್ರೀ-ಪುರುಷರು ಆದರ್ಶ ಸಂಬಂಧಗಳನ್ನು ಸಾಧಿಸಬೇಕು'' ಎಂಬ ಮಾತು ಪ್ರಧಾನವಾಗಿ ಕೇಳಿ ಬರತೊಡಗಿತ್ತು. ಇದೇ ಹೊತ್ತಿಗೆ ಜೇಮ್ಸ್ ಮಿಲ್ 'History of British India' ಎಂಬ ಕೃತಿಯನ್ನು ರಚಿಸಿದ್ದ. ಈ ಕೃತಿಯಲ್ಲಿ ಒಂದು ಸಮಾಜದ ಅಭಿವೃದ್ಧಿಯನ್ನು ತಿಳಿಯಲು, ಅಲ್ಲಿನ ಮಹಿಳೆಯ ಸ್ಥಿತಿಗತಿಗಳನ್ನು ಗಮನಿಸಬೇಕು ಎಂದು ಬರೆದ. ಮನುಸ್ಮೃತಿಯ ಅನುವಾದಕಾರ ಹಾಲ್ ಹೆಡ್ ತನ್ನ 'ಕೋಡ್ ಆಫ್ ಜಂಟೂ ಲಾಸ್' ಕೃತಿಯಲ್ಲಿ ಹಾಗೂ ಧಾರ್ಮಿಕ ಕೃತಿಗಳನ್ನು ಪ್ರವಾಸಿಗರ, ಮಿಷನರಿಗಳ ಬರೆಹ, ಲೇಖನಗಳನ್ನು ಅಭ್ಯಾಸಿಸಿದ ಮಿಲ್ 'ಹಿಂದೂಗಳು

ತಮ್ಮ ಮಹಿಳೆಯರನ್ನು ಕೀಳಾಗಿ, ಹೀನಾಯವಾಗಿ ಕಾಣುವ ದುರಭ್ಯಾಸದವರಾಗಿದ್ದಾರೆ. ಹಾಗಾಗಿ ಆ ಮಹಿಳೆಯರ ಸ್ಥಿತಿ ತೀರಾ ಶೋಚನೀಯವಾದುದಾಗಿದೆ''[೨] ಎಂಬ ಅಂತಿಮ ನಿರ್ಣಯಗಳನ್ನು ದಾಖಲಿಸಿದ್ದರು.

ರೆವೆರೆಂಡ್ ಇ.ಸ್ಪೊರೋ ೧೮೪೮ರಲ್ಲಿ ಭಾರತಕ್ಕೆ ಬಂದದ್ದೇ ಮಹಿಳೆಯರ ಸ್ಥಾನಮಾನ ತಿಳಿದುಕೊಳ್ಳಲು. ಇವನು ಭಾರತೀಯರು ಮಹಿಳೆಯರನ್ನು ಹೀನಾಯವಾಗಿ ಕಾಣುವುದರಿಂದ ಭಾರತದಲ್ಲಿ ಐಕ್ಯತೆ ಉಂಟಾಗಿಲ್ಲ ಎಂದು ಸಾರುತ್ತಾನೆ. ಅಲ್ಲದೆ ಇಸ್ರೇಲ್, ರೋಮ್, ಪಶ್ಚಿಮ ಯುರೋಪುಗಳನ್ನು ಶಕ್ತ ರಾಷ್ಟ್ರಗಳೆಂದು ಗುರುತಿಸಿ, ಈ ರಾಷ್ಟ್ರಗಳು ತಮ್ಮ ಮಹಿಳೆಯರಿಗೆ ಕೊಟ್ಟ ಉನ್ನತ ಸ್ಥಾನಮಾನಗಳಿಂದಾಗಿ ಅವು ನೈತಿಕ ಧೈರ್ಯ, ಮೌಲ್ಯಗಳನ್ನು ಗಳಿಸಿಕೊಂಡಿವೆ ಎಂದು ವಿವರಿಸುತ್ತಾನೆ. ಅಷ್ಟೇ ಅಲ್ಲದೆ ಈತ ಬ್ರಿಟಿಷರು ಭಾರತದ ಮೇಲೆ ಪ್ರಭುತ್ವ ಹೇರಿರುವ ಕಾರಣಗಳಲ್ಲಿ ಇಲ್ಲಿನ ಮಹಿಳೆಯರ ಹೀನಾಯ ಸ್ಥಿತಿಯು ಒಂದು ಎಂದಿದ್ದಾನೆ. ಇವನ ನಂತರ ಸರ್ ರಾಬರ್ಟ್ ರಿಸ್ಲೆಯು ಭಾರತೀಯ ಸಮಾಜವನ್ನು ಕುರಿತು ಹೇಳುತ್ತಾ -

> ''ಭೌದ್ಧಿಕವಾಗಿ ನಿಷ್ಕ್ರಿಯರಾಗಿರುವುದು, ನೈತಿಕವಾಗಿ ಜಡವಾಗಿರುವುದೇ ತಮ್ಮ ಮಹಿಳೆಯರ ಸಹಜ ಗುಣ ಎಂದು ಯಾವ ಸಮಾಜವು ಒಪ್ಪಿಕೊಂಡು ಬಂದಿದೆಯೋ ಅಂಥ ಸಮಾಜದಲ್ಲಿ ರಾಷ್ಟ್ರವೊಂದನ್ನು ನಿರ್ಮಿಸುವ ಅಗತ್ಯವಾದ ಧೈರ್ಯ, ತ್ಯಾಗ, ಸಮರ್ಪಣಾ ಭಾವಗಳಂತಹ ಉತ್ತಮ ಗುಣಗಳು ವರ್ಧಿಸುವ ನಿರೀಕ್ಷೆಯನ್ನು ಮಾಡಲಾಗದು''[೩] ಎಂದಿದ್ದಾನೆ.

ಭಾರತ ಅಭಿವೃದ್ಧಿಯಾಗಬೇಕಾದರೆ ವಿದೇಶಗಳಲ್ಲಿನ ಕಲ್ಪನೆ-ಆದರ್ಶಗಳು ಬೇಕು ಎನ್ನಲಾಯಿತು. ಇವರು ಭಾರತವು ಮಾನವತಾವಾದ, ಉಪಯುಕ್ತವಾದ, ಸಾಮಾಜಿಕ ಡಾರ್ವಿನ್ ವಾದ, ರಾಷ್ಟ್ರೀಯತಾ ವಾದಗಳಂಥ ಪರಿಕಲ್ಪನೆಗಳಿಗೆ ಒಳಗಾಗುವಂತೆ ಚಾಲನೆ ಕೊಟ್ಟರು. ಭಾರತಕ್ಕೆ ಬಂದ ಬ್ರಿಟಿಷರಿಗೆ ಭಾರತೀಯ ಸಮಾಜ, ಮಹಿಳೆ ಪ್ರಮುಖ ಚರ್ಚೆಯ ವಿಷಯಗಳಾದವು. ಅದಕ್ಕಾಗಿ ಅವರು -

> ''In the nineteenth Century The Women question loomed large. This was not a question of what do Women want?'' But rather ''How can they be modernized. It became the central question in nineteenth century British India, because the foreign rulers had foccused their attention on this praticular aspect of society''[೪]

- ಎನ್ನುವುದರ ಮುಖೇನ ಮಹಿಳೆಯ ಸಮಸ್ಯೆಯನ್ನೇ ಪ್ರಧಾನವನ್ನಾಗಿಸಿದ್ದರು.

ಬ್ರಿಟಿಷರ ಆಗಮನಕ್ಕಿಂತ ಮೊದಲು 'ಶಿಕ್ಷಣ' ಸಾರ್ವತ್ರಿಕವಾಗಿರದೆ ಕೆಲವು ಉನ್ನತ ವರ್ಗದವರಿಗೆ ಮಾತ್ರ ಮೀಸಲಾಗಿತ್ತು ಹಾಗೂ ಒಂದು ವೇಳೆ ಸ್ತ್ರೀಯರಿಗೆ ಶಿಕ್ಷಣ ಕೊಡಿಸುವುದೇ ಆಗಿದ್ದಲ್ಲಿ ಅದು ಸಹ ಸಾಂಪ್ರದಾಯಿಕ ಶಿಕ್ಷಣವೇ ಆಗಿರುತ್ತಿತ್ತು. ಇನ್ನೂ ಕೆಲವು ಕುಟುಂಬಗಳಲ್ಲಿ ''ಓದು ಬರಹ ಕಲಿತ ಹುಡುಗಿ, ಮದುವೆಯಾದ ಸ್ವಲ್ಪ ದಿನಗಳಲ್ಲಿ ವಿಧವೆಯಾಗುತ್ತಾಳೆ ಎಂಬ ಮೂಢನಂಬಿಕೆ ಇತ್ತು. ಇಂಥ ಮೂಢ ನಂಬಿಕೆಗಳನ್ನು ಪುರುಷರೂ ಸಹ ಬೆಂಬಲಿಸಿದ್ದರು. ಹಿಂದೂಗಳಾಗಲಿ, ಮುಸ್ಲಿಮರಾಗಲಿ ಅಕ್ಷರಾಭ್ಯಾಸ

'ಹೆಣ್ಣನ್ನು' ಕೆಡಿಸುತ್ತದೆ ಎಂಬ ಭಯವಿತ್ತು''[೯] ಎಂದು ದಾಖಲಿಸಿದ್ದಾನೆ. ಹೀಗಾಗಿ ಹೆಣ್ಣು ಮಕ್ಕಳಿಗೆ ಮನೆಯಲ್ಲಿಯೇ ಸಾಂಪ್ರದಾಯಿಕ ಶಿಕ್ಷಣ ನೀಡಲಾಗುತ್ತಿತ್ತು.

೧೮೪೦ರಲ್ಲಿ ಹಿಂದೂಗಳನ್ನು ಕ್ರೈಸ್ತರನ್ನಾಗಿ ಮತಾಂತರಗೊಳಿಸಲು ಮಿಷನರಿಗಳ ಆಗಮನವಾಯಿತು. ಆರಂಭದಲ್ಲಿ ಇವರು ಭಾರತೀಯ ಸ್ತ್ರೀಯರ ಮನೆ ಮನೆಗಳಿಗೆ ಹೋಗಿ ಕಥೆ ಹೇಳುವ, ಕಸೂತಿ ಕಲಿಸುವ, ಯೇಸುವಿನ ಉಪದೇಶಗಳನ್ನು ಹೇಳುತ್ತಿದ್ದರು. ಆದರೆ ಇವರ ಈ ಚಟುವಟಿಕೆಗಳಿಂದ ಅಷ್ಟಾಗಿ ಪರಿಣಾಮ ಬೀರಲಿಲ್ಲ. ಆದ್ದರಿಂದ ಅವರು ಹೆಣ್ಣುಮಕ್ಕಳ ಶಾಲೆಗಳನ್ನು ಆರಂಭಿಸಿದರು. ಮುಂದೆ ಭಾರತದ ವಿವಿಧ ಭಾಗಗಳಲ್ಲಿಯೂ ಹೆಣ್ಣುಮಕ್ಕಳ ಶಾಲೆಗಳನ್ನು ತೆರೆದರು. ೧೮೪೮-೫೬ರ ಅವಧಿಯಲ್ಲಿ ಭಾರತದ ಗವರ್ನರ್ ಜನರಲ್‌ನಾಗಿ ಲಾರ್ಡ್ "ಡಾಲ್ ಹೌಸಿ" ಅಧಿಕಾರ ವಹಿಸಿಕೊಂಡ. ಇವನು ಭಾರತದಲ್ಲಿ ಮೊದಲು ಸ್ತ್ರೀ ಶಿಕ್ಷಣದಲ್ಲಿ ಬದಲಾವಣೆ ತಂದರೆ ಮಾತ್ರ ಇತರೆ ವಿಷಯಗಳಲ್ಲಿ ಬದಲಾವಣೆ, ಅಭಿವೃದ್ಧಿ ತರಲು ಸಾಧ್ಯ ಎಂದು ನಂಬಿದವನು. ಹೀಗಾಗಿ ಡಾಲ್ ಹೌಸಿ ಸ್ತ್ರೀ ಶಿಕ್ಷಣದಲ್ಲಿ ಹಲವು ಬದಲಾವಣೆಗಳನ್ನು ತರಲು ಪ್ರಯತ್ನಿಸಿದ್ದನ್ನು ಗಮನಿಸಬಹುದು. ಮಹಿಳಾ ರಕ್ಷಣೆಗೆಂದೇ ಹಲವು ಬಗೆಯ ಸ್ತ್ರೀ ಪರವಾದ ಅನೇಕ ಕಾನೂನುಗಳನ್ನು ಬ್ರಿಟಿಷ್ ವಸಾಹತುಶಾಹಿ ಆಡಳಿತ ಜಾರಿಗೆ ತಂದಿತು. ಈ ಕಾನೂನುಗಳಿಂದಾಗಿ ಮಹಿಳೆಯರು ಹಿಂದಿನ ಸಂಪ್ರದಾಯ, ಮೂಢನಂಬಿಕೆಗಳ ಹೊರಗೆ ಬಂದು ಆಲೋಚಿಸುವಂತಾಯಿತು. ಅವುಗಳಲ್ಲಿ

ಅ. ೧೮೨೯ರಲ್ಲಿ ಸತಿ ನಿಷೇಧ ಕಾಯ್ದೆ

ಆ. ೧೮೫೬ರಲ್ಲಿ ವಿಧವಾ ಪುನರ್ವಿವಾಹ ಕಾಯ್ದೆ

ಇ. ೧೮೭೨ರಲ್ಲಿ ನಾಗರೀಕ ವಿವಾಹ ಕಾಯ್ದೆ

ಈ. ೧೮೭೪ರಲ್ಲಿ ವಿವಾಹಿತ ಸ್ತ್ರೀಯರ ಆಸ್ತಿಯ ಕಾಯ್ದೆ

ಉ. ೧೮೮೧ರಲ್ಲಿ ಬಾಲ್ಯ ವಿವಾಹ ನಿಷೇಧ ಕಾಯ್ದೆ

ಊ. ವೇಶ್ಯಾ ಪದ್ಧತಿ ನಿಷೇಧ

ಮೊದಲಾದವು ಪ್ರಮುಖವಾಗಿವೆ.

ವಸಾಹತುಶಾಹಿ ಪ್ರಭುತ್ವದ ಪರಿಣಾಮವಾಗಿ ಆಧುನಿಕ ಆರ್ಥಿಕ ಕ್ಷೇತ್ರ ಮಹಿಳೆಯರಿಗೆ ಹೊಸ ಉದ್ಯೋಗಗಳನ್ನು ಸೃಷ್ಟಿಸಿತು. ಉದಾಹರಣೆಗೆ ಶಿಕ್ಷಣ, ವೈದ್ಯಕೀಯ ಕ್ಷೇತ್ರಗಳಲ್ಲಿ ಕೆಲವು ಮಹಿಳೆಯರು ವೃತ್ತಿ ನಿರತರಾದರು. ಕಾರ್ಖಾನೆ, ಗಣಿ, ಪ್ಲಾಂಟೇಷನ್ ಹಾಗೂ ಇತರೆ ಕ್ಷೇತ್ರಗಳಲ್ಲಿಯೂ ಮಹಿಳೆಯರು ತೊಡಗಿದರು. ವಸಾಹತುಶಾಹಿ ಆಡಳಿತದಿಂದಾಗಿ ಗ್ರಾಮೀಣ ಕುಶಲ ಕೆಲಸಗಳು ಅವನತಿಯಾಗಿ ಹೊಸ ಉದ್ಯೋಗಗಳು ದೊರಕುವ ಅವಕಾಶಗಳೂ ಹುಟ್ಟಿಕೊಂಡವು. ಇದರಿಂದಾಗಿ ನಗರೀಕರಣವಾಯಿತು. ಗ್ರಾಮೀಣ ಅವಿಭಕ್ತ ಕುಟುಂಬಗಳು ವಿರಳವಾದವು. ನಗರಗಳಲ್ಲಿ ಕಾರ್ಖಾನೆಗಳಲ್ಲಿ ದುಡಿಯಲು ತಾಂತ್ರಿಕತೆಯ ಅಭಾವವಿದ್ದವರು ಸಣ್ಣಪುಟ್ಟ ವೃತ್ತಿಗಳಲ್ಲಿ ನಿರತರಾದರು. ಈ ದಿಸೆಯಲ್ಲಿ ಮಹಿಳೆಯ ಅಂದಿನ ಅವಸ್ಥಾಂತರಗಳನ್ನು ಇನ್ನಷ್ಟು ಗಂಭೀರವಾದ ಅಧ್ಯಯನಕ್ಕೆ ಒಳಪಡಿಸುವ ಜರೂರು ಇದೆ.

## ೫.೧ ಭಾರತೀಯ ಪ್ರತಿಕ್ರಿಯೆ

ಭಾರತದಲ್ಲಿ ಹಲವಾರು ಸುಧಾರಣೆಗಳನ್ನು ತಂದ ಬ್ರಿಟಿಷ್ ವಸಾಹತುಶಾಹಿ ಪ್ರಭುತ್ವ ತನ್ನದೇ ಆದ ಸ್ಥಾನ ಪಡೆಯಿತು. ಭಾರತವು ಸಹ ಬದಲಾವಣೆಗಳನ್ನು ಹೊಂದಲು ಬಯಸಿ ಪಾಶ್ಚಾತ್ಯ ಮಾದರಿಯಂತೆ ಇಲ್ಲಿಯೂ ಕಲ್ಪನೆ ಆದರ್ಶಗಳಂಥ ಅನೇಕ ಸಂಸ್ಥೆಗಳು ಸ್ಥಾಪನೆಯಾದವು. ಇಲ್ಲಿನ ಸ್ತ್ರೀ-ಪುರುಷರಿಬ್ಬರು ಆಧುನಿಕವಾದ ವಿಚಾರಗಳನ್ನು ಸ್ವಾಗತಿಸಲಾರಂಭಿಸಿದರು. ಭಾರತೀಯ ಮಹಿಳೆಯನ್ನು ಪಾಶ್ಚಾತ್ಯ ಮಹಿಳೆಗೆ ಹೋಲಿಕೆ ಮಾಡಿನೋಡುವ ನೋಟ ಬೆಳೆಯಿತು. ಸಮಾಜಕ್ಕೂ ಮಹಿಳೆಗೂ ಸಂಬಂಧಗಳಿರುವುದರಿಂದ ಸ್ತ್ರೀಯರ ಶಿಕ್ಷಣಕ್ಕೆ ಮೊದಲ ಆದ್ಯತೆ ನೀಡುವ ಪರಿಪಾಠ ಬೆಳೆದುಬಂದಿತು. ಕ್ರಿ.ಶ. ೧೮೩೯ರಲ್ಲಿ ಮಹೇಶ ಚಂದ್ರದೇವ ಅವರು 'ಇಂಡಿಯಾದ ಮಹಿಳೆಯರ ಬವಣೆಗಳು' ಎನ್ನುವ ವಿಷಯವನ್ನು ಕುರಿತು -

> "ಭಾರತೀಯ ಮಹಿಳೆಯರು ತಮ್ಮ ಗಂಡಂದಿರಲ್ಲಿ ದಯೆ ದಾಕ್ಷಿಣ್ಯಗಳಿಂದ ವರ್ತಿಸುತ್ತಾರೆ. ನಯ-ನಾಜೂಕು ಶ್ರದ್ಧೆಗಳಿಂದ ಕರ್ತವ್ಯಗಳನ್ನು ನಿರ್ವಹಿಸುತ್ತಾರೆ. ವಿಧೇಯರಾಗಿ ಅವರನ್ನು ಸೇವಿಸುತ್ತಾರೆ. ಆದರೂ ಗಂಡಂದಿರು ಅವರನ್ನು ಬೈದು ಗದರಿಸುತ್ತಾರೆ. ಎಷ್ಟೋ ಸಲ ಕಾರಣವಿಲ್ಲದೆ ಹೊಟ್ಟೆಕಿಚ್ಚು ಮತ್ತು ಅಹಂಕಾರಗಳಿಂದ ಮತ್ತರಾಗಿ ಕ್ರೂರವಾಗಿ ಶಿಕ್ಷಿಸುತ್ತಾರೆ"[೬]

- ಎಂದು ಅಭಿಪ್ರಾಯಪಟ್ಟು ಭಾರತೀಯ ಸಮಾಜವನ್ನು ಟೀಕಿಸಿದ್ದಾರೆ. ರಾಜಾ ರಾಮಮೋಹನ್ ರಾಯ್, ಪಂಡಿತ್ ವಿದ್ಯಾಸಾಗರ್, ಸ್ವಾಮಿ ದಯಾನಂದ ಸರಸ್ವತಿ ಮೊದಲಾದ ಚಿಂತಕರು ಭಾರತವು ಪ್ರಗತಿಯತ್ತ ಚಲಿಸಬೇಕೆಂದೇ ಬಯಸಿದ್ದವರು. ಹೀಗಾಗಿ ಹಲವು ಬಗೆಯ ಸ್ತ್ರೀಪರ ಸುಧಾರಣೆಗಳನ್ನು ಜಾರಿಗೆ ತರಲು ಪ್ರಯತ್ನಿಸಿದರು. ಭಾರತವು ಬ್ರಿಟಿಷರ ವಸಾಹತುವಾಗಲು ಪ್ರಧಾನವಾಗಿ ಹಲವು ಕಾರಣಗಳಿವೆ. ಆದರೆ ಅವುಗಳಲ್ಲಿ "ಲಿಂಗವ್ಯವಸ್ಥೆಯ ಸಂಬಂಧದ ಆಯಾಮಗಳ ಸ್ವರೂಪಗಳೇ ಪ್ರಧಾನ ಕಾರಣ"[೭] ಎಂದು ಗುರುತಿಸಲಾಗಿದೆ.

ಹದಿನೆಂಟನೆಯ ಶತಮಾನದಲ್ಲಿ ತ್ರಿಯಂಬಕ ಯಾಜ್ಞಿಕನ "ಸ್ತ್ರೀ ಧರ್ಮ" ಎಂಬ ಕೃತಿ ಉನ್ನತವರ್ಗದ ಮಹಿಳೆಯರ ಬದುಕನ್ನು ಮಾತ್ರ ವಿವರಿಸಿತ್ತು. ಆದರೆ ಸಾಮಾನ್ಯ ಮಹಿಳೆಯ ಕುರಿತು ಯಾವ ಮಾಹಿತಿಯನ್ನೂ ನೀಡಿರಲಿಲ್ಲ. ಹತ್ತೊಂಬತ್ತನೆಯ ಶತಮಾನದ ಮಧ್ಯದ ವೇಳೆಗೆ ಅನೇಕ ಸುಧಾರಣಾವಾದಿ ಗುಂಪುಗಳು ಭಾರತದ ಬೇರೆ ಬೇರೆ ಭಾಗಗಳಲ್ಲಿ ಹುಟ್ಟಿಕೊಂಡವು. ಅಲ್ಲದೆ ಮಹಿಳಾ ಸಂಘ-ಸಂಸ್ಥೆಗಳು ಆರಂಭವಾಗಿದ್ದವು. ಇದರ ಜೊತೆಗೆ ವಿದೇಶಿ ಮಹಿಳೆಯರಾದ ಅನಿಬೆಸೆಂಟ್, ನಿವೇದಿತಾ, ಮೇಡಂ ಬ್ಲವಾಟ್-ಸ್ಕಿ ಮೊದಲಾದವರು ಭಾರತದಲ್ಲಿನ ಮಹಿಳೆಯರ ಸುಧಾರಣೆಗಾಗಿ ಪ್ರಯತ್ನಿಸಿದ್ದರು. ಇವರೆಲ್ಲರ ಪ್ರಯತ್ನಗಳಿಂದ ಭಾರತೀಯ ಮಹಿಳೆ ಹಿಂದಿನ ಸಂಪ್ರದಾಯ, ಅನಿಷ್ಟ ಪದ್ಧತಿಗಳಿಂದ ಆಚೆ ಬರಲು ಆಲೋಚಿಸುವಂತೆ ಆಯಿತು. ಮಹಿಳೆ ತನ್ನ ಹಕ್ಕುಗಳ ಕುರಿತು ಚಿಂತಿಸಿ ಅವುಗಳನ್ನು ಪಡೆಯಲು ಒತ್ತಾಯಿಸತೊಡಗಿದಳು. 'ಬ್ರಿಟಿಷರ ಒಡೆದು ಆಳುವ' ನೀತಿ ಮತ್ತು 'ದತ್ತು ಮಕ್ಕಳಿಗೆ ಹಕ್ಕಿಲ್ಲ' ಎಂಬುವುಗಳನ್ನು ವಿರೋಧಿಸಲಾಯಿತು. ಅಂತೆಯೇ ಬ್ರಿಟಿಷರ

ವಿದೇಶಾಂಗ ನೀತಿ, ಆಡಳಿತ, ಆಕ್ರಮಣಗಳನ್ನು ವಿರೋಧಿಸಿ ಅವುಗಳಿಗೆ ಅಸಹಕಾರ ವ್ಯಕ್ತಪಡಿಸಿದ್ದಾರೆ. ದೇಶ ಸ್ವಾತಂತ್ರ್ಯ ಹೊಂದಲು ತಮ್ಮ ತನು, ಮನು, ಧನಗಳನ್ನು ಅರ್ಪಿಸಿ ಹೋರಾಡಿದ್ದು ಗಮನಾರ್ಹ.

### ೫.೨ ಕನ್ನಡ ಮಹಿಳೆಯರ ಪ್ರತಿರೋಧಗಳು

ಮೈಸೂರಿನ ಚಾಮರಾಜರು ೧೭೯೬ರಲ್ಲಿ ತೀರಿಕೊಂಡರು. ಆಗ ಟಿಪ್ಪು ಎರಡನೆಯ ವರ್ಷದ ಮುಮ್ಮಡಿ ಕೃಷ್ಣರಾಜ ಒಡೆಯರಿಗೆ ಪಟ್ಟ ಕಟ್ಟಿದ. ಆದರೆ ಈ ಅಧಿಕಾರದ ಪಟ್ಟ ಹೆಸರಿಗೆ ಮಾತ್ರ ಇತ್ತು. ಟಿಪ್ಪು ತಾನೇ ಅಧಿಪತಿಯಂತೆ ವರ್ತಿಸತೊಡಗಿದ್ದ. ಮಹಾರಾಣಿ ಲಕ್ಷ್ಮಮ್ಮಣ್ಣಿ ತಮ್ಮ ಮನೆತನದ ಉಳಿವಿಗಾಗಿ, ಕೀರ್ತಿಗಾಗಿ ಚಿಂತಿಸತೊಡಗಿದರು. ಟಿಪ್ಪುವಿನ ವಶವಾದ ರಾಜ್ಯವನ್ನು ಉಳಿಸಿಕೊಳ್ಳಲು ತನ್ನ ನಂಬಿಕೆಯ ಮಂತ್ರಿಗಳಾದ ತಿರುಮಲರಾಯ, ನಾರಾಯಣರನ್ನು ಮದ್ರಾಸಿನಲ್ಲಿದ್ದ ಬ್ರಿಟಿಷ್ ಅಧಿಕಾರಿಗಳಾದ ಜನರಲ್ ಹ್ಯಾರಿಸ್, ಕರ್ನಲ್ ವೆಲ್ಲೆಸ್ಲಿ ಬಳಿ ಕಳುಹಿಸಿ ಕೊಟ್ಟು ಮತ್ತೆ ರಾಜ್ಯವನ್ನು ಹೊಂದಲು ಸಹಾಯ ಮಾಡುವಂತೆ ಕೇಳಿದಳು. ಈಗಾಗಲೇ ಭಾರತದ ಬಹು ಪ್ರಾಂತ್ಯಗಳನ್ನು ಆಕ್ರಮಿಸಿದ್ದ ಬ್ರಿಟಿಷರು ಕೂಡ ಮೈಸೂರನ್ನು ಪ್ರವೇಶಿಸಲು ತಯಾರಿ ನಡೆಸಿದ್ದರು. ಅದೆ ವೇಳೆಗೆ ರಾಣಿಯ ಸಹಾಯ ಕೋರಿಕೆಯ ಕರೆ ಅತ್ಯುತ್ತಮ ಅವಕಾಶವೆಂದು ತಿಳಿದು, ಮೈಸೂರನ್ನು ಪ್ರವೇಶಿಸುವಂತಾಯಿತು. ಆಂಗ್ಲರು ಕ್ರಿ.ಶ. ೧೭೯೯ರಲ್ಲಿ ಟಿಪ್ಪುವನ್ನು ಅಂತ್ಯಗೊಳಿಸಿ ಮುಮ್ಮಡಿ ಕೃಷ್ಣರಾಜ ಒಡೆಯರನ್ನು ಮೈಸೂರಿನ ರಾಜನನ್ನಾಗಿ ಮಾಡಿದರು. ಬ್ರಿಟಿಷರು ಭಾರತದಲ್ಲಿ, ಅಂತೆಯೇ ಕನ್ನಡ ನಾಡಿನಲ್ಲಿ ಭದ್ರವಾಗಿ ತಳವೂರಲು ಇಂಥ ಸಹಾಯಕ ಕೆಲಸಗಳಿಗಾಗಿ ಕಾಯುತ್ತಿದ್ದರು. ಒಬ್ಬರಿಗೆ ಸಹಾಯ ಮಾಡಿ, ಇನ್ನೊಬ್ಬನ ಸೋಲಿಗೆ ಕಾರಣರಾಗಿ ಗೆದ್ದವನಿಂದ ಭೂಪ್ರದೇಶ, ಅಧಿಕಾರ ಹಣ ಇತ್ಯಾದಿಗಳನ್ನು ಪಡೆಯುವುದು ಆಂಗ್ಲರ ತಂತ್ರವಾಗಿತ್ತು. ಅಲ್ಲದೆ ಸಹಾಯಕ ಸೈನ್ಯ ಪದ್ಧತಿಯ ಕರಾರಿನ ಪ್ರಕಾರ ರಾಜ್ಯಗಳನ್ನು ಒಳಪಡಿಸಿಕೊಳ್ಳುತ್ತಿದ್ದರು. ಈ ಹಿನ್ನಲೆಯಲ್ಲಿಯೆ ೧೭೯೯ರಲ್ಲಿ ಮೈಸೂರಿನೊಂದಿಗೆ ಸಹಾಯಕ ಸೈನ್ಯ ಪದ್ಧತಿಯ (ಶ್ರೀರಂಗಪಟ್ಟಣ) ಒಪ್ಪಂದವಾಗಿತ್ತು. ಆ ಮೂಲಕ ಬ್ರಿಟಿಷರು ಮೈಸೂರನ್ನು ನಾಲ್ಕು ಭಾಗಗಳನ್ನಾಗಿಸಿ, ಮೂರು ಭಾಗಗಳನ್ನು ಬ್ರಿಟಿಷರು ಹಾಗೂ ಅವರ ಮಿತ್ರರು ಹಂಚಿಕೊಂಡರು. ಇನ್ನೊಂದು ಭಾಗವನ್ನು ಮೈಸೂರಿನ ಒಡೆಯರಿಗೆ ಬಿಟ್ಟುಕೊಟ್ಟರು. ಕ್ರಿ.ಶ. ೧೮೧೮ರಲ್ಲಿ ಎರಡನೆಯ ಬಾಜೀರಾಯ ಸಹ ಸೋತ. ಇದರಿಂದಾಗಿ ಉತ್ತರ ಕರ್ನಾಟಕದ ಅನೇಕ ಭಾಗಗಳು ಆಂಗ್ಲರ ವಶವಾದವು. ಇದಕ್ಕೂ ಮೊದಲು ಬ್ರಿಟಿಷರು ರಾಯಲ ಸೀಮೆಯನ್ನು ಕೂಡ ವಶಪಡಿಸಿಕೊಂಡು ಮದ್ರಾಸ್ ಪ್ರಾಂತ್ಯಕ್ಕೆ ಜೋಡಿಸಿದ್ದರು. ಅಲ್ಲದೆ ಇತರೆ ಪ್ರಾಂತ್ಯಗಳಲ್ಲಿನ ಚಳವಳಿಗಳನ್ನು ಹತ್ತಿಕ್ಕಲು ಒಡೆದು ಆಳುವ ನೀತಿಯನ್ನು ಅನುಸರಿಸುತ್ತಿದ್ದರು. ಉದಾಹರಣೆಗೆ "ಕ್ರಿ.ಶ. ೧೮೬೨ರಲ್ಲಿ ಉತ್ತರ ಹಾಗೂ ದಕ್ಷಿಣ ಕನ್ನಡ ಜಿಲ್ಲೆಗಳಲ್ಲಿನ ಚಳವಳಿಗಳನ್ನು ಹತ್ತಿಕ್ಕಲು ಎರಡು ಹೋಳುಗಳನ್ನಾಗಿ ತುಂಡರಿಸಿ ಒಂದನ್ನು ಮುಂಬಯಿ (ಉತ್ತರಕನ್ನಡ), ಇನ್ನೊಂದನ್ನು (ದಕ್ಷಿಣಕನ್ನಡ) ಮದ್ರಾಸ್ ಪ್ರಾಂತ್ಯದ ಆಳ್ವಿಕೆಗೂ ಜೋಡಿಸಿದ್ದರು"[೮] ಎಂದು ತಿಳಿದುಬರುತ್ತದೆ. ಅದೆ ರೀತಿಯಲ್ಲಿ "ಕ್ರಿ.ಶ. ೧೮೩೪ರಲ್ಲಿ ಕೊಡಗಿನ ವೀರರಾಜನನ್ನು ಹತ್ತಿಕ್ಕಿ ರಾಜ್ಯವನ್ನು ವಶಪಡಿಸಿಕೊಂಡು, ಒಬ್ಬ ಆಂಗ್ಲ ಅಧಿಕಾರಿಯನ್ನು ನೇಮಿಸಿ ನೇರವಾಗಿ ಆಳ್ವಿಕೆ ಕೈಗೊಂಡಿದ್ದನ್ನು"[೯] ಪರಿಶೀಲಿಸಬಹುದು.

ಈ ವೇಳೆಗಾಗಲೇ ಚಿಕ್ಕಪುಟ್ಟ ಸಂಸ್ಥಾನಗಳು ಬ್ರಿಟಿಷರಿಗೆ ವಿರೋಧ ವ್ಯಕ್ತಪಡಿಸಲಾರಂಭಿಸಿದ್ದವು. ಅವುಗಳಲ್ಲಿ ಕಿತ್ತೂರಿನ ಚೆನ್ನಮ್ಮ, ಹಲಗಲಿ ಬೇಡತಿಯರು, ನರಗುಂದದ ಯಮುನಾಬಾಯಿ, ಸಾವಿತ್ರಿಬಾಯಿ ಮೊದಲಾದವರ ಪ್ರತಿಕ್ರಿಯೆ ದಾಖಲಾರ್ಹವಾದುದು. ಇಂಥ ಪ್ರತಿರೋಧಗಳನ್ನು ಎರಡು ಭಾಗಗಳಾಗಿ ವಿಭಜಿಸಿ ಅರಿತುಕೊಳ್ಳಬಹುದು. ಅಂದರೆ -

೧. ಕನ್ನಡದ ರಾಣಿಯರು ಮತ್ತು ಸ್ವಾತಂತ್ರ್ಯ ಪ್ರಿಯರು ನಡೆಸಿದ ಸಶಸ್ತ್ರ ಹೋರಾಟ ಹಾಗೂ

೨. ಭಾರತದ ರಾಷ್ಟ್ರೀಯ ಚಳವಳಿಗೆ ಕನ್ನಡತಿಯರು ತೋರಿದ ಪ್ರತಿಕ್ರಿಯೆ ಎಂಬ ನೆಲೆಗಳಲ್ಲಿ.

**ಕನ್ನಡ ರಾಣಿಯರು ಮತ್ತು ಸ್ವಾತಂತ್ರ್ಯ ಪ್ರಿಯರು ನಡೆಸಿದ ಸಶಸ್ತ್ರ ಹೋರಾಟ** ಇದರಲ್ಲಿ ೧. ಕಿತ್ತೂರು ೨. ಹಲಗಲಿ ೩. ನರಗುಂದ ಹೋರಾಟಗಳು ಮುಖ್ಯವಾದವು -

### ೧. ಕಿತ್ತೂರಿನ ಹೋರಾಟ

ನಾಡಿನ ಬಯಲು ಸೀಮೆಯ ಕಡೆಗೆ ಕಿತ್ತೂರು ಚೆನ್ನಮ್ಮನ ಹೋರಾಟ ಪ್ರಧಾನವಾದುದು. ಚೆನ್ನಮ್ಮ ಮತ್ತು ರುದ್ರಮ್ಮ ಇಬ್ಬರೂ ಕಿತ್ತೂರು ಮಲ್ಲಸರ್ಜನನ್ನು ವಿವಾಹವಾಗಿದ್ದರು. ಹಿರಿಯ ರಾಣಿ ರುದ್ರಮ್ಮನಿಗೆ ಶಿವಲಿಂಗರುದ್ರ ಸರ್ಜ ಎಂಬ ಮಗನಿದ್ದ. ಆದರೆ ಆತ ಅಕಾಲಿಕ ಮರಣ ಹೊಂದಲಾಗಿ ಚೆನ್ನಮ್ಮ ದೂರದ ಸಂಬಂಧಿಯ ಮಗನನ್ನು ದತ್ತಕ್ಕೆ ತೆಗೆದುಕೊಳ್ಳಲು ನಿರ್ಧರಿಸಿದ್ದಳು. ಈ ಸಂದರ್ಭಕ್ಕಾಗಲೇ ಎಲ್ಲೆಡೆ ಬ್ರಿಟಿಷರು "ದತ್ತು ಮಕ್ಕಳಿಗೆ ಹಕ್ಕಿಲ್ಲ" ಎಂಬ ಕಾನೂನನ್ನು ಜಾರಿಗೆ ತಂದಿದ್ದರು. ಇದರಿಂದ ಅವರಿಗೆ ಇಂಥ ಹಲವು ರಾಜ್ಯಗಳನ್ನು ವಶಪಡಿಸಿಕೊಳ್ಳುವ ಕುತಂತ್ರ ಫಲಿಸಿತ್ತು. ಆ ಕಾನೂನಿನ ಅನ್ವಯ ದತ್ತು ಮಗನಿಗೂ ಅವಕಾಶ ಕೊಡದೆ, ರಾಜ್ಯವನ್ನು ಅಧೀನ ಪಡಿಸಿಕೊಳ್ಳಲು ಮುಂದಾದರು. ಆದರೆ ಇದರಿಂದ ಚೆನ್ನಮ್ಮ ಬ್ರಿಟಿಷರ ನೀತಿಯನ್ನು ವಿರೋಧಿಸಿದಳು. ಅಲ್ಲದೆ ಬ್ರಿಟಿಷರ ವಿರುದ್ಧ ಯುದ್ಧವನ್ನೇ ಕೈಗೊಂಡಳು. ಕ್ರಿ.ಶ. ೧೮೨೪ರಲ್ಲಿ ಬ್ರಿಟಿಷ್ ಅಧಿಕಾರಿ ಥ್ಯಾಕರೆ ಕಿತ್ತೂರು ಚೆನ್ನಮ್ಮನೊಂದಿಗೆ ಯುದ್ಧ ಹೂಡಿದ. ಈ ಯುದ್ಧದಲ್ಲಿ ಕಿತ್ತೂರು ಸೈನ್ಯ ಥ್ಯಾಕರೆಯನ್ನು ಕೊಂದುಹಾಕಿತು. ಈ ಘಟನೆಯಿಂದ ಚೆನ್ನಮ್ಮ ಇಡೀ ಬ್ರಿಟಿಷ್ ಸಮೂಹವನ್ನೇ ಎದುರು ಹಾಕಿಕೊಂಡಂತಾಯಿತು. ಆದರೂ ಚೆನ್ನಮ್ಮ ಹೆದರದೆ ಬ್ರಿಟಿಷ್ ಸೈನ್ಯವನ್ನು ಎದುರಿಸಲು ಸಿದ್ಧಳಾದಳು. ಎರಡನೆಯ ಬಾರಿ 'ಚ್ಯಾಪ್ಲಿನ್' ಎಂಬ ಅಧಿಕಾರಿ ಕಿತ್ತೂರನ್ನು ಮುತ್ತಿಗೆ ಹಾಕಿದ. ಈ ಸಂದರ್ಭದಲ್ಲಿ ಅವಳ ಜನರೇ ಅವಳಿಗೆ ಮೋಸ ಮಾಡಿದರು. ಹೀಗಾಗಿ ಸೆರೆಸಿಕ್ಕ ಚೆನ್ನಮ್ಮ ಜೈಲು ಸೇರಬೇಕಾಯಿತು. ೧೮೨೯ರಲ್ಲಿ ಚೆನ್ನಮ್ಮ ಕೊನೆಯುಸಿರೆಳೆದಳು. ಚೆನ್ನಮ್ಮನ ಬ್ರಿಟಿಷ್ ವಿರೋಧಿ ನೀತಿ ಪ್ರತಿರೋಧಗಳು ಇತರೆ ಭಾಗಗಳಿಗೂ ಪ್ರೇರಣೆಯಾದವು. ಅಲ್ಲದೆ ಇತರೆ ಸಂಸ್ಥಾನಗಳು ಸಹ ಬ್ರಿಟಿಷರ ವಿರುದ್ಧ ಯುದ್ಧ ಸಾರಿದವು. ರುದ್ರಮ್ಮ ಕೂಡ ಟಿಪ್ಪುವಿನ ಸೈನ್ಯವನ್ನು ಸೋಲಿಸಿದ್ದಳು. ಜೊತೆಗೆ ಪರ್ಶಿಯನ್, ಉರ್ದು ಭಾಷೆಯಲ್ಲಿ ಪ್ರವೀಣೆಯಾಗಿದ್ದ ಈಕೆ ಮಲ್ಲಸರ್ಜನು ಟಿಪ್ಪುವಿಗೆ ಬರೆಯುವ ಪತ್ರಗಳ ಕರಡನ್ನು ಸಿದ್ಧಮಾಡುತ್ತಿದ್ದಳು. ಕಿತ್ತೂರು ಚೆನ್ನಮ್ಮನ ಸೊಸೆ ವೀರವ್ವ ಸಹ ಬ್ರಿಟಿಷರು ತಮ್ಮ ರಾಜ್ಯದಲ್ಲಿ ಮಾಡುವ ಹಸ್ತಕ್ಷೇಪವನ್ನು ವಿರೋಧಿಸಿದಳು. ಈಕೆ ಬ್ರಿಟಿಷರ ವಿರುದ್ಧ ನಾಲ್ಕು ಗೋಡೆಗಳೊಳಗಿದ್ದೇ ಹೋರಾಡಿ, ಬ್ರಿಟಿಷರ ಕುತಂತ್ರಕ್ಕೆ ಬಲಿಯಾದಳು.

೨. ಹಲಗಲಿಯ ಬೇಡತಿಯರು

ಬ್ರಿಟಿಷರ ವಿರುದ್ಧ ನಡೆದ ಹೋರಾಟದಲ್ಲಿ ಜನಸಾಮಾನ್ಯರನ್ನು ಕುರಿತು ಹೇಳುವಾಗ ಹಲಗಲಿಯ ಬೇಡತಿಯರನ್ನು ಮರೆಯುವಂತಿಲ್ಲ. ಕ್ರಿ.ಶ. ೧೮೫೭ರಲ್ಲಿ ಬ್ರಿಟಿಷರು ಭಾರತೀಯರನ್ನು ನಿರಾಯುಧರನ್ನಾಗಿಸುವ ಕಾನೂನೊಂದನ್ನು ರೂಪಿಸಿದರು. ಅದೇ "ನಿಶ್ಯಸ್ತ್ರೀಕರಣ ಕಾನೂನು". ಈ ಕಾನೂನಿನ ಪ್ರಕಾರ ಯಾವ ಭಾರತೀಯನು ಸಹ ಯಾವುದೇ ಬಗೆಯ ಆಯುಧಗಳನ್ನು ತಮ್ಮ ಬಳಿ ಇಟ್ಟುಕೊಳ್ಳುವಂತಿರಲಿಲ್ಲ. ಜನ ಈ ಕಾನೂನನ್ನು ವಿರೋಧಿಸಲಾರಂಭಿಸಿದರು. ಹೀಗೆ ಬ್ರಿಟಿಷರ ವಿರುದ್ಧ ಸಿಡಿದೆದ್ದವರಲ್ಲಿ ಬೇಡ ಜನಾಂಗದ ಮಹಿಳೆಯರು ಪ್ರಮುಖರು. "ಇವರುಗಳಿಗೆ ಪ್ರಾಣಿ-ಪಕ್ಷಿಗಳ ಬೇಟೆಗಾಗಿ ಶಸ್ತ್ರಾಸ್ತ್ರಗಳ ಅವಶ್ಯಕತೆ ಬಹಳವಿತ್ತು. ಶಸ್ತ್ರಗಳೇ ಇವರ ಜೀವನೋಪಾಯವಾಗಿದ್ದವು. ಇಂಥ ಶಸ್ತ್ರಾಸ್ತ್ರಗಳನ್ನೇ ಬ್ರಿಟಿಷರಿಗೆ ಒಪ್ಪಿಸಿದಲ್ಲಿ ತಮ್ಮ ಜೀವನದ ನಿರ್ವಹಣೆ ಹೇಗೆಂಬ ಪ್ರಶ್ನೆ ಕಾಡತೊಡಗಿತು. ಜೊತೆಗೆ ಅವುಗಳನ್ನು ಒಪ್ಪಿಸುವುದು ಹೇಡಿಗಳ ಲಕ್ಷಣ ಎಂಬ ಆತ್ಮಾಭಿಮಾನವು ಮೂಡಿತು. ಅದಕ್ಕಾಗಿ ಬ್ರಿಟಿಷರ ನಿಶ್ಯಸ್ತ್ರೀಕರಣ ಕಾನೂನಿನ ವಿರುದ್ಧ ಬೇಡತಿಯರು ಪ್ರತಿಭಟನೆಯನ್ನು ವ್ಯಕ್ತಪಡಿಸಿದರು. ಅಂಥ ಮಹಿಳೆಯರಲ್ಲಿ 'ಹನುಮವ್ವ', 'ಲಗುಮವ್ವ', 'ರಾಮವ್ವೆ' ಮೊದಲಾದವರು"[೧೨] ಮುಂಚೂಣಿಯಲ್ಲಿದ್ದರು. ಹಲಗಲಿ ಬೇಡತಿಯರ ಕುರಿತು ಬರೆಯುವಾಗ 'ರಾಮಿ' ಎಂಬ ಹೆಸರು ಪ್ರಸ್ತಾಪವಾಗುತ್ತದೆ. ಈ ರಾಮವ್ವಳೆ 'ರಾಮಿ' ಇರಬಹುದು ಎಂಬ ಗುಮಾನಿಗಳಿವೆ. ಈ ಕುರಿತು -

"ರಾಮಿ ಗುಂಡಿಲಿ ಜೊರ ಮಾಡಿ ಹೊಡೆದಳೋ ಮೂರ ಮಂದಿ ಶಿರಕ
ಆರ ಕುದುರಿಯ ಕಡದ ಸಿಡದಳೂ ಸೂರಾಯಕ" [೧೩]

- ಎಂಬ ಉಲ್ಲೇಖಗಳು ಸಹ ಸಮರ್ಥನೆಯನ್ನು ನೀಡುತ್ತವೆ.

೩. ನರಗುಂದದ ಪ್ರತಿಭಟನೆ

ಸ್ವಾತಂತ್ರ್ಯ ಚಳವಳಿಗೆ 'ನರಗುಂದ' ಸಹ ಪ್ರತಿಕ್ರಿಯಿಸಿದೆ. ಇದಕ್ಕೆ ಕಾರಣರಾದ ಮಹಿಳೆಯರು ಎಂದರೆ 'ಯಮುನಾಬಾಯಿ' ಮತ್ತು 'ಸಾವಿತ್ರಿಬಾಯಿ'. ಯಮುನಾಬಾಯಿ ಮಗ, ಸಾವಿತ್ರಿಬಾಯಿಯ ಪತಿ ಬಾಬಾಸಾಬ. ಈತ ಬ್ರಿಟಿಷರ ವಿರುದ್ಧ ಹೋರಾಟದಲ್ಲಿ ವೀರಮರಣ ಪಡೆದ. ಇವನ ಮರಣದ ನಂತರ ಯಮುನಾಬಾಯಿ, ಸಾವಿತ್ರಿಬಾಯಿ ಅವರು ಬ್ರಿಟಿಷರಿಗೆ ಸೆರೆಸಿಕ್ಕು ಸಾಯುವುದಕ್ಕಿಂತ ತಾವೇ ಸಾವನ್ನು ಹೊಂದಲು ನಿರ್ಧರಿಸಿ ಮಲಪ್ರಭಾ ನದಿಯಲ್ಲಿ ಹಾರಿ ವೀರಮರಣ ಹೊಂದಿದರು.

ಆ. ಭಾರತದ ರಾಷ್ಟ್ರೀಯ ಚಳವಳಿಗೆ ಕನ್ನಡಿತಿಯರು ತೋರಿದ ಪ್ರತಿಕ್ರಿಯೆ

ನರಗುಂದ ಕಿತ್ತೂರಿನಂತೆ ಅನೇಕ ಸಂಸ್ಥಾನಗಳನ್ನು ಬ್ರಿಟಿಷರು ವಶಪಡಿಸಿಕೊಂಡರು. ಇಂಥ ಸಂದರ್ಭದಲ್ಲಿ ಪ್ರತಿಭಟನೆ, ವಿರೋಧವನ್ನು ಎದುರಿಸಿದ ಬ್ರಿಟಿಷರು ಹಲವು ಬಗೆಯ ತೊಂದರೆ ಸಮಸ್ಯೆಗಳನ್ನು ಅನುಭವಿಸಬೇಕಾಯಿತು. ಆದರೂ ಕನ್ನಡದ ಹಲವು ಭೂ-ಭಾಗಗಳನ್ನು ವಶಪಡಿಸಿಕೊಂಡ ಬ್ರಿಟಿಷರು ಅನೇಕ ಪ್ರದೇಶಗಳನ್ನು ತಮ್ಮ ಆಡಳಿತದ ಅನುಕೂಲಕ್ಕಾಗಿ ವಿಭಿನ್ನ ಆಡಳಿತ ಘಟಕಗಳನ್ನಾಗಿ ವಿಂಗಡಿಸಿದರು.

ಹೀಗೆ ವಿಂಗಡಿಸಿದ ಕನ್ನಡ ನಾಡಿನ ಪ್ರದೇಶಗಳನ್ನು ಇಪ್ಪತ್ತೆರಡು[೧೨] ವಿಭಾಗಗಳನ್ನಾಗಿಸಿದರು. ಅನಂತರ ಅವುಗಳನ್ನು ಐದು ಪ್ರಮುಖ ಆಡಳಿತ ಘಟಕಗಳನ್ನಾಗಿಸಿದರು. ಅವುಗಳೇ ಸ್ವತಂತ್ರ ಕನ್ನಡ ನಾಡಿನಲ್ಲಿಯೂ ಮುಂದುವರೆದವು ಆ ಘಟಕಗಳೆಂದರೆ

೧. ಮುಂಬಯಿ ಕರ್ನಾಟಕ

೨. ಮದರಾಸು ಕರ್ನಾಟಕ

೩. ಮೈಸೂರು ಸಂಸ್ಥಾನ

೪. ಹೈದರಬಾದ್ ಸಂಸ್ಥಾನ

೫. ಕೊಡಗು (ಪ್ರತ್ಯೇಕ ಆಡಳಿತ)

ಈ ಮೇಲಿನ ಐದು ಘಟಕಗಳಲ್ಲಿ ಮಹಿಳೆಯರ ಸ್ಥಿತಿ ವಿಭಿನ್ನವಾಗಿತ್ತು. ಅಂತೆಯೇ ಮಹಿಳೆಯರ ಪ್ರತಿಕ್ರಿಯೆಯೂ ವಿಭಿನ್ನವಾಗಿತ್ತು. ಭಾರತದ ರಾಷ್ಟ್ರೀಯ ಚಳವಳಿಗೆ ಈ ಘಟಕಗಳಲ್ಲಿನ ಮಹಿಳೆಯರ ಪ್ರತಿಕ್ರಿಯೆ ಮಹತ್ವದ್ದು. ಈ ಮಹಿಳೆಯರಿಗೆ ಪ್ರೇರಣೆಯಾಗಿ ಪ್ರೋತ್ಸಾಹ ಕೊಟ್ಟ ಹಲವು ಅಂಶಗಳಲ್ಲಿ ಮಹಿಳಾ ಜಾಗೃತಿ ಕಾರ್ಯಗಳು, ರಾಷ್ಟ್ರನಾಯಕಿ ನಾಯಕರ ಭೇಟಿ, ಆಧುನಿಕ ಸ್ತ್ರೀ ಶಿಕ್ಷಣ, ಆಧುನಿಕ ಕನ್ನಡ ಸಾಹಿತ್ಯ, ಸಾಹಿತ್ಯ ಸಮ್ಮೇಳನಗಳು ಮೊದಲಾದವು. ಅಲ್ಲದೆ ವಿದೇಶಿ ಮಹಿಳೆಯರು ಪ್ರಭಾವ ಬೀರಿ, ಪ್ರೇರಣೆಯಾಗಿದ್ದರು. ಪ್ರತಿ ಘಟಕವು ಕೆಲವು ಜಿಲ್ಲೆಗಳನ್ನು ಒಳಗೊಂಡಿದ್ದಿತು. ಈ ಘಟಕಗಳು ತಮ್ಮ ಪರಿಸರಕ್ಕೆ ತಕ್ಕಂತೆ ವಸಾಹತುಶಾಹಿಯ ಆಳ್ವಿಕೆಗೆ ವಿರೋಧವನ್ನು ವ್ಯಕ್ತಪಡಿಸಿವೆ. ಈ ದಿಸೆಯಲ್ಲಿ ಅಲ್ಲಿನ ಸ್ತ್ರೀವಾದಿ ಚಳವಳಿಗಳನ್ನು ಪರಿಶೀಲಿಸಬಹುದು.

### ೧. ಮುಂಬಯಿ ಕರ್ನಾಟಕದ ಮಹಿಳೆಯರ ಪ್ರತಿಕ್ರಿಯೆ

ರಾಷ್ಟ್ರದ ಸ್ವಾತಂತ್ರ್ಯ ಚಳವಳಿಗೆ ಮುಂಬಯಿ ಕರ್ನಾಟಕದ ಪಾತ್ರ ಪ್ರಧಾನವಾಗಿದೆ. ವಸಾಹತುಶಾಹಿ ಆಳ್ವಿಕೆಯಲ್ಲಿ ಮುಂಬಯಿ ಕರ್ನಾಟಕವೂ ನಾಲ್ಕು ಜಿಲ್ಲೆಗಳನ್ನು ಒಳಗೊಂಡಿತ್ತು. ಅವುಗಳೆಂದರೆ ಬೆಳಗಾಂವ, ಧಾರವಾಡ, ವಿಜಾಪುರ, ಉತ್ತರಕನ್ನಡ ಜಿಲ್ಲೆಗಳು. ಇವುಗಳಲ್ಲದೆ ಹಲವು ಚಿಕ್ಕಪುಟ್ಟ ಸಂಸ್ಥಾನಗಳು ಸಹ ಇದ್ದವು. ಅವುಗಳೇ ಮುಧೋಳ, ಸಾಂಗ್ಲಿ, ರಾಮದುರ್ಗ. ಕ್ರಿ.ಶ. ೧೮೧೮ರ ವೇಳೆಗೆ ಈ ಭಾಗ ಪೇಶ್ವೆಗಳ ಆಳ್ವಿಕೆಗೆ ಒಳಗಾಗಿತ್ತು. ಇಲ್ಲಿನ ಕನ್ನಡ ಭಾಷೆಯ ಸ್ಥಾನವನ್ನು ಬಂಗಾಳಿ, ಗುಜರಾತಿ, ಮರಾಠಿ ಭಾಷೆಗಳು ಆಕ್ರಮಿಸಿದ್ದವು. ಈ ಭಾಗದ ಆಡಳಿತ, ಸಭೆ ಸಮಾರಂಭ, ಶಾಲಾ-ಕಾಲೇಜುಗಳಲ್ಲಿ ಮರಾಠಿ ಭಾಷೆಯೇ ಪ್ರಧಾನವಾಯಿತು. ಅಂದು ಮುಂಬಯಿ ಕರ್ನಾಟಕದವರು ಎಂದರೆ ಮರಾಠಿ ಭಾಷಿಕರೆ ಎಂಬ ನಂಬಿಕೆ ಇತ್ತು. ಜೊತೆಗೆ ಅಂದು 'ಮುಂಬಯಿ', 'ಪುಣೆ' ಪ್ರಮುಖ ನಗರಗಳಾಗಿದ್ದು, ಇವುಗಳು ಉತ್ತರ ಕನ್ನಡ, ಧಾರವಾಡ, ವಿಜಾಪುರ ಜಿಲ್ಲೆಯವರೆಗೆ ತುಂಬ ದೂರವಾಗಿದ್ದವು. ಈ ಭಾಗದ ಜನ ವಸಾಹತುಶಾಹಿಯ ಒಡೆದು ಆಳುವ ನೀತಿ, ಆರ್ಥಿಕನೀತಿ, ಪ್ರಕೃತಿ ಪ್ರಕೋಪಗಳು, ಕಂದಾಯನೀತಿ ಇತ್ಯಾದಿಗಳಿಂದಲೂ ನೊಂದಿದ್ದರು. ಮಹಿಳೆಯರು ಕುಟುಂಬದ ಆಚೆ ಹೋಗುವುದು ನಿಷೇಧವಾಗಿತ್ತು. ಬಾಲ್ಯ ವಿವಾಹ, ಸಾಂಪ್ರದಾಯಿಕ ಶಿಕ್ಷಣದ ವ್ಯವಸ್ಥೆಗಳು ಜಾರಿಯಲ್ಲಿದ್ದವು. ಈ ಭಾಗದ ಕನ್ನಡದ ಹೆಣ್ಣುಮಕ್ಕಳು ಸಹ ಮರಾಠಿ ಕಲಿಯಬೇಕಿತ್ತು. ಏಕೆಂದರೆ ಅಂದು ಇವರು "ಮರಾಠಿ ಪ್ರದೇಶಗಳಿಗೆ ಮದುವೆಯಾಗಿ ಹೋಗಬೇಕಾದ ಸ್ಥಿತಿಗಳು ಇದ್ದುದರಿಂದ." ಮರಾಠಿ

ಭಾಷೆ ಎಲ್ಲ ದಿಸೆಯಿಂದಲೂ ಅವಶ್ಯಕವಾಗಿತ್ತು. ಈ ಭಾಗದ ಜನತೆ ಒಂದೇ ವೇಳೆಗೆ ರಾಷ್ಟ್ರದ ಸ್ವಾತಂತ್ರ್ಯಕ್ಕೆ ಹಾಗೂ ನಾಡಿನ ಏಕೀಕರಣಕ್ಕೆ ತೊಡಗಿಸಿಕೊಳ್ಳಬೇಕಾದ ಅನಿವಾರ್ಯ ಕಾರಣಗಳು ಸೃಷ್ಟಿಯಾಗಿದ್ದವು. ಬ್ರಿಟಿಷರು ನಾಡಿನ ಕಚ್ಚಾವಸ್ತುಗಳನ್ನು ಇಂಗ್ಲೆಂಡಿಗೆ ಕಳುಹಿಸಿ, ಇಂಗ್ಲೆಂಡಿನಿಂದ ಸಿದ್ಧವಸ್ತುಗಳನ್ನು ಆಮದು ಮಾಡಿಕೊಂಡು ದುಬಾರಿ ಬೆಲೆಗೆ ಮಾರಿ ಲಾಭ ಗಳಿಸುತ್ತಿದ್ದರು. ಇದರಿಂದಾಗಿ ನಾಡಿನ ಮೂಲ ಗೃಹ ಕೈಗಾರಿಕೆಗಳು ಸಹ ನಶಿಸಿದ್ದವು. ಮಹಿಳೆಯರು ಆಧುನಿಕ ಯಂತ್ರಗಳ ಪರಿಚಯವಿರದೇ ಇದ್ದರೂ ಅವುಗಳ ಜೊತೆ ಕೆಲಸ ಮಾಡಬೇಕಾದ ತುರ್ತು ಕಾಣಿಸಿಕೊಂಡಿತು. ಎಲ್ಲಾ ರಂಗಗಳಲ್ಲೂ ವಿದೇಶಿ ವಸ್ತುಗಳು ಆಕ್ರಮಿಸಿ ಜನತೆಗೆ ದೇಶೀಯ ವಸ್ತುಗಳು ದೊರೆಯದ ಪರಿಸ್ಥಿತಿ ನಿರ್ಮಾಣವಾಯಿತು. ಅಂಥ ಸಂದರ್ಭದಲ್ಲಿಯೆ ಮಹಿಳೆಯರು ಸ್ವದೇಶಿ ಚಳವಳಿಯನ್ನು ಆರಂಭದಲ್ಲಿ ತಮ್ಮ ತಮ್ಮ ಮನೆಗಳಿಂದ ಆರಂಭಿಸಬೇಕು ಎಂದು ನಿರ್ಧರಿಸಿ, ಇತರರಿಗೂ ಅನುಸರಿಸಲು ಸೂಚಿಸಿದರು. ಬ್ರಿಟಿಷರ ಆರ್ಥಿಕ ನೀತಿಯನ್ನು ವಿರೋಧಿಸುವ ಘೋಷಣೆ, ಹಾಡು-ಲಾವಣಿಗಳು ಹುಟ್ಟಿಕೊಂಡವು.

"ಬಂಗಾರ ಹೋಯಿತು ಹಿಂದೂ ದೇಶವ ಬಿಟ್ಟು
ಉಂಗುರವಿನ್ನೆಲ್ಲೋ ನನ ಮಗನೆ ನಾಳಿನ್ನು
ಮಂಗಳ ಸೂತ್ರಕ್ಕೆ ಮೊದಲಿಲ್ಲ" ೧೩

ಎನ್ನುವುದರ ಮೂಲಕ ನಾಡಿನ ಸಂಪತ್ತು ಇಂಗ್ಲೆಂಡಿಗೆ ಹೋಗಿ ಹುಟ್ಟಿದ ಮಗುವಿಗೆ ಉಂಗುರ, ಮದುವೆಯಾದ ಹೆಣ್ಣಿಗೆ ಮಂಗಳ ಸೂತ್ರಕ್ಕೂ ಬಂಗಾರ ಇಲ್ಲದಂತೆ ಆಯಿತೆಂಬ ಪರಿಸ್ಥಿತಿಗಳನ್ನು ವರ್ಣಿಸಿದರು. ನಾಡಿನ ತುಂಬೆಲ್ಲಾ ಬಡತನ ವ್ಯಾಪಿಸಿ, ವಿದೇಶಿ ವಸ್ತುಗಳು ನಾಡನ್ನು ಪ್ರವೇಶಿಸಿದವು. ಬ್ರಿಟಿಷರ ಸಾಂಸ್ಕೃತಿಕ, ಆರ್ಥಿಕ ಆಕ್ರಮಣಗಳನ್ನು ಎದುರಿಸಬೇಕಾಗಿ ಬಂದಿತು. ಮಹಿಳೆಯರು ತಾವು ಧರಿಸುವ ಸಾಂಪ್ರದಾಯಿಕ ಆಭರಣಗಳ ಸ್ಥಾನದಲ್ಲಿ ಪೈಗೊಂದು ಸಾಲಿನ ಪರದೇಶಿ ಕರಿಮಣಿ ಆಭರಣಗಳು ಧರಿಸಬೇಕಾಯಿತು. ನಾಡಿನ ತುಂಬ ಯಂತ್ರಗಳು-ತಂತ್ರಜ್ಞಾನ ಬಳಕೆಗೆ ಬಂದಿತು. ಅಂಥವುಗಳಲ್ಲಿ ಬೀಸುವ ಕಲ್ಲುಗಳ ಬದಲು ಯಂತ್ರದ ಗಿರಣಿಗಳು ಕಾಣಿಸಿಕೊಂಡದ್ದು ಗಮನಾರ್ಹವಾದುದು. ಅವುಗಳನ್ನು ಕುರಿತು ಹೇಳುತ್ತಾ

"ಕಲ್ಲು ಪೂಜೆಯ ಮಾಡಿ ಇಲ್ಲಿ ಬೀಸುವರಿಲ್ಲ
ಎಲ್ಲ ಗೋಧಿಯ ಗಿರಣಿಗೆ ಬೀಸಿದರೆ
ಎಲ್ಲಿಂದ ಬರಬೇಕು ಸವರಾಜ್ಯ" ೧೪

- ಎಂಬ ಹಾಡುಗಳು ಅಭಿವ್ಯಕ್ತಗೊಂಡವು. "ನಾಡಿನ ತುಂಬ ವಿದೇಶಿ ವಸ್ತು ಯಂತ್ರಗಳು ತುಂಬಿದ್ದು, ಪಾಶ್ಚಾತ್ಯೀಕರಣಗೊಂಡಾಗ ಸ್ವರಾಜ್ಯ-ಸ್ವಾತಂತ್ರ್ಯ ಎಂದರೇನು? ಎಂಬ ಪ್ರಶ್ನೆಗಳು ಜನರಲ್ಲಿ ಮೂಡತೊಡಗಿದವು.

"ಅಡಗಿ ಮನಿ ಬಂದ ಮಾಡಬೇಕ್ರಿ ಜರಾ
ಪರದೇಶಿ ಮೂಲ ತರಬಾರದಂತ ಬುದ್ಧಿ ಹೇಳ್ರಿ
ತಂದರ ಸುದ್ದಾ ಅದನ ಕೈಲೆ ಹಿಡಿಯದರ
ಮತ್ತೊಮ್ಮೆ ತರುದಿಲ್ರಿ ಗಂಡಸರಾ" ೧೫

ಎನ್ನುವುದರ ಮೂಲಕ ಗಂಡಸರಿಗೆ ವಿದೇಶಿ ವಸ್ತುಗಳನ್ನು ತರದಂತೆ ಮಹಿಳೆಯರು[೯] ಹೇಳಿದ್ದರು. ನಾಡಿನ ಇತರೆ ಭಾಗಗಳು ಸ್ವದೇಶಿ ಚಳವಳಿಯಿಂದ ಪ್ರೇರಿತವಾಗಿ ವಿದೇಶಿ ವಸ್ತುಗಳನ್ನು ಮಾರದಂತೆ, ಕೊಳ್ಳದಂತೆ ನಿರ್ಧರಿಸಿದವು. ಬೆಳಗಾವಿ ಜಿಲ್ಲೆಯ ಅಂಬಕ್ಕ ಎಂಬಾಕೆ ಬಳೆಗಾರ ವೃತ್ತಿಯವಳು. ಸ್ವದೇಶಿ ಚಳವಳಿ ಆರಂಭವಾಗುತ್ತಿದ್ದಂತೆ ಈಕೆ ಮನೆ ಮನೆಗೂ ಹೋಗಿ ಮಹಿಳೆಯರಿಗೆ 'ಬಳೆ' ಹಾಕುವ ಮುಖೇನ 'ಸ್ವದೇಶಿ' ಕುರಿತು ಜಾಗೃತಿ ಮೂಡಿಸಿದಳು. ಅಲ್ಲದೆ ತಾನು ಸಹ ಸ್ವದೇಶಿ ವಸ್ತುಗಳನ್ನೇ ಉಪಯೋಗಿಸಲು ನಿರ್ಧರಿಸಿ ಮಣ್ಣಿನ ಮಗ್ಗಿಯಲ್ಲಿ ನೀರು ಕುಡಿಯುವುದು, ಪ್ರಯಾಣದಲ್ಲಿ ಊಟ ಮಾಡುವುದನ್ನು ಇತ್ಯಾದಿಗಳನ್ನು ಅನುಸರಿಸಿದ್ದಳು. ಇದರ ಜೊತೆಗೆ ವಿದೇಶಿ ಸಕ್ಕರೆಯನ್ನು ಸಹ ಉಪಯೋಗಿಸುತ್ತಿರಲಿಲ್ಲ. ಸಿದ್ದಾಪುರದಲ್ಲಿ (ಉತ್ತರಕನ್ನಡ) ಭವನಿಬಾಯಿ ಕಾನಗೋಡ ಮನೆ ಮನೆಗಳಿಗೆ ಹೋಗಿ ಸ್ವದೇಶಿ ಬಟ್ಟೆಗಳನ್ನು ಬಳಸುವಂತೆ ಹೇಳಿ, ಕಾಂಗ್ರೆಸ್ ಸದಸ್ಯೆಯಾಗಿ ನೋಂದಾಯಿಸಿಕೊಂಡಳು. ಗೋಕರ್ಣ ತಾಲೂಕಿನಲ್ಲಿ ತುಂಗಾಬಾಮಿಪನ್ನಿ, ಸರಸ್ವತಿಬಾಯಿ ಭಟ್ಟ, ಸ್ವದೇಶಿ ಕುರಿತು ಪ್ರಚಾರ ಮಾಡಿದರು. ಇದೇ ಸಂದರ್ಭದಲ್ಲಿಯೇ ಸ್ವದೇಶಿ ವಸ್ತುಗಳ ಉತ್ಪಾದನೆಗೆ ಗದಗ, ಹುಬ್ಬಳ್ಳಿ, ಧಾರವಾಡದಲ್ಲಿ ಕಾರ್ಖಾನೆಗಳು ಸ್ಥಾಪನೆಯಾದವು. ನರಗುಂದ, ನವಲಗುಂದದಲ್ಲಿ ರಾಷ್ಟ್ರೀಯ ಶಾಲೆಗಳು ಆರಂಭವಾದವು.

೧೮೮೫ರಲ್ಲಿ ಸ್ಥಾಪನೆಯಾಗಿದ್ದ ಭಾರತೀಯ ರಾಷ್ಟ್ರೀಯ ಕಾಂಗ್ರೆಸ್ ಪ್ರತಿವರ್ಷ ತನ್ನ ಅಧಿವೇಶನವನ್ನು ಭಾರತದ ಬೇರೆ ಬೇರೆ ಭಾಗಗಳಲ್ಲಿ ನಡೆಸುತ್ತಿತ್ತು. ಅಂತೆಯೇ ಕ್ರಿ.ಶ. ೧೯೨೪ರಲ್ಲಿ ಮುಂಬಯಿ ಕರ್ನಾಟಕದ ಬೆಳಗಾವಿಯಲ್ಲಿ ಕರೆಯಲು ನಿರ್ಣಯಿಸಿತು. ಇದರಿಂದಾಗಿ ಕ್ರಿ.ಶ. ೧೯೨೪ರ ಭಾರತ ರಾಷ್ಟ್ರೀಯ ಕಾಂಗ್ರೆಸ್‌ನ ಅಧಿವೇಶನಕ್ಕೆ ಭರದಿಂದ ಸಿದ್ಧತೆಗಳು ಆರಂಭವಾದವು. ಈ ಅಧಿವೇಶನದ ಅಧ್ಯಕ್ಷತೆಯನ್ನು ಗಾಂಧಿಯವರು ವಹಿಸಬೇಕೆಂದು ನಿರ್ಣಯಿಸಲಾಗಿತ್ತು. ಈ ಅಧಿವೇಶನಕ್ಕೆ ರಾಷ್ಟ್ರದ ಹಾಗೂ ನಾಡಿನ ಪ್ರಮುಖ ನಾಯಕಿಯರು, ಲೇಖಕಿಯರು, ಗಾಯಕಿಯರನ್ನು ಆಹ್ವಾನಿಸಿದರು. ಈ ಅಧಿವೇಶನದ ಮಂಟಪ, ವಸ್ತುಗಳು ಇತರೆ ಸಾಮಗ್ರಿಗಳು ಎಲ್ಲವೂ ಸ್ವದೇಶೀಯವೇ ಆಗಿದ್ದದ್ದು ಗಮನಾರ್ಹ. ಬೆಳಗಾವಿ ಅಧಿವೇಶನ ರಾಷ್ಟ್ರಕ್ಕೂ, ನಾಡಿಗೂ ಉಪಯುಕ್ತವಾಗಿತ್ತು. ಇದೇ ಅಧಿವೇಶನದಲ್ಲಿ ಮಹಿಳಾ ಪರಿಷತ್ತಿನ ಸಭೆಯನ್ನು ಕರೆಯಲಾಗಿತ್ತು. ಈ ಸಭೆಯ ಅಧ್ಯಕ್ಷತೆಯನ್ನು ಸರೋಜಿನಿನಾಯ್ಡು ಅವರು ವಹಿಸಿದ್ದರು. ಶಂಕರನಾಯಕ ಎಂಬುವರು ಮಹಿಳೆಯರ ಸ್ಥಾನಮಾನ ಕುರಿತು ಮಾತನಾಡಿದರೆ, ಮಹಿಳಾ ಪರಿಷತ್ತಿನ ಸಭೆ ಮಹಿಳೆಯರ ಸಮಸ್ಯೆಗಳನ್ನು ಕುರಿತು ಚರ್ಚಿಸುವುದರ ಜೊತೆಗೆ ಹಲವು ಸಮಸ್ಯೆಗಳಿಗೆ ಪರಿಹಾರಗಳನ್ನು ಸೂಚಿಸಿತ್ತು. ಉಮಾಬಾಯಿ ಕುಂದಾಪುರ ಅವರು ಸ್ತ್ರೀ ವಿಭಾಗದ ಸೇವಾದಳದ ದಳಪತಿಯಾಗಿ ಸ್ತ್ರೀಯರದೇ ಆದ ಸೇವಾದಳವನ್ನು ಸ್ಥಾಪಿಸಿದರು. ಅಧಿವೇಶನದ ವೆಚ್ಚಕ್ಕಾಗಿ ಅಪಾರ ಕಾಣಿಕೆಗಳು ದೊರೆಯಲಾರಂಭಿಸಿದ್ದವು. ಅವುಗಳಲ್ಲಿ ಬಳ್ಳಾರಿ, ಕಾರವಾರ ಜಿಲ್ಲೆಗಳದ್ದು ಹೆಚ್ಚಿನ ಪಾಲು ಆಗಿತ್ತು. ಈ ಅಧಿವೇಶನಕ್ಕೆ ವೀಣಾವಾದನ, ಸಂಗೀತ ಸಾಹಿತ್ಯದಲ್ಲಿ ಪ್ರಸಿದ್ಧಿ ಪಡೆದ ತಿರುಮಲೆ ರಾಜಮ್ಮ ಗಾಯಕಿಯಾಗಿದ್ದುದು ವಿಶೇಷ. ಅಧಿವೇಶನದಲ್ಲಿ ಸ್ವದೇಶಿ, ವಿದೇಶಿ ವಸ್ತುಗಳ ಕುರಿತು ಖಾದಿ, ಹರಿಜನೋದ್ಧಾರ, ಮಹಿಳೆಯರ ಸುಧಾರಣೆ, ಹಿಂದೂ-ಮುಸ್ಲಿಂ ಐಕ್ಯತೆ ಇತ್ಯಾದಿ ವಿಷಯಗಳ ಬಗ್ಗೆ ಚರ್ಚೆ ತೀರ್ಮಾನಗಳಾದವು. ಈ ಅಧಿವೇಶನಕ್ಕೆ ರಾಷ್ಟ್ರದ, ನಾಡಿನ ಬೇರೆ ಬೇರೆ ಕಡೆಗಳಿಂದ ಅಪಾರ ಸಂಖ್ಯೆಯಲ್ಲಿ ಸ್ತ್ರೀಯರು ಬಂದಿದ್ದರು. ಈ ಮಹಿಳೆಯರಿಗೆ ಅಧಿವೇಶನ ಸ್ಫೂರ್ತಿ ನೀಡಿತ್ತು. ಅಲ್ಲದೇ

ಮಹಿಳೆಯರು ಚಳವಳಿಯಲ್ಲಿ ಹೇಗೆ ಭಾಗವಹಿಸಬೇಕು, ಇತರೆ ಭಾಗಗಳಲ್ಲಿನ ಮಹಿಳೆಯರು ಹೇಗೆ ಚಳವಳಿಯಲ್ಲಿ ಭಾಗವಹಿಸಿ ಯಶಸ್ವಿಯಾಗಿದ್ದಾರೆ, ಹೀಗೆ ಹಲವಾರು ಸ್ತ್ರೀ ಪರ ವಿಷಯಗಳನ್ನು ಮಾತನಾಡಲು ಅವಕಾಶ ಮಾಡಿಕೊಡಲಾಗಿತ್ತು. ಬಳ್ಳಾರಿ ಸಿದ್ದಮ್ಮ, ಜಯಲಕ್ಷ್ಮಿ, ಲಕ್ಷ್ಮೀದೇವಿ ಮೊದಲಾದ ಮಹಿಳಾ ನಾಯಕಿಯರು ಭಾಗವಹಿಸಿದ್ದರು. ಈ ಅಧಿವೇಶನದ ಪರಿಣಾಮಗಳು ಹಲವು ಅವುಗಳಲ್ಲಿ ಪ್ರಮುಖವಾದವು.

ಅ. ವಿಧವಾ ವಿವಾಹ ಆಚರಣೆ ಜಾರಿಗೆ ತರುವ ವಿಚಾರ

ಆ. ವಿಜಾಪುರ, ಧಾರವಾಡ, ಹುಬ್ಬಳ್ಳಿ, ಹಾವೇರಿ, ಬಳ್ಳಾರಿ, ಕಾರವಾರ, ಸಿದ್ದಾಪುರ ಇತ್ಯಾದಿ ಸ್ಥಳಗಳಲ್ಲಿ ಭಗಿನಿ ಮಂಡಳಿಗಳ ಸ್ಥಾಪನೆ

ಇ. ಹಿಂದಿ ಭಾಷೆಗೆ ಪ್ರೋತ್ಸಾಹ

ಈ. ಹರಿಜನ ಕಲ್ಯಾಣ ಸಂಘಗಳ ಸ್ಥಾಪನೆ

ಉ. ಸ್ವದೇಶಿ ವಸ್ತುಗಳ ಬಳಕೆಗೆ ಉತ್ತೇಜನ

ಊ. ಖಾದಿ ಪ್ರಚಾರಕ್ಕೆ ಬೆಂಬಲ

ಋ. ಸ್ತ್ರೀ ಸೇವಾದಳ ಸ್ಥಾಪನೆ ಹಾಗೂ ಪ್ರಾಂತ್ಯದ ಎಲ್ಲಾ ಭಾಗಗಳಿಂದ ಸ್ವಯಂ ಸೇವಕಿಯರನ್ನು ಸಂಘಟಿಸುವುದು

ಎ. ಭಾಷಾವಾರು ಪ್ರಾಂತಗಳ ರಚನೆಗೆ ಒತ್ತು

ಏ. ಚಳವಳಿಯಲ್ಲಿ ಮಹಿಳೆಯರು ಭಾಗವಹಿಸಲು ಕರೆ - ಇತ್ಯಾದಿಗಳು

ಹರಿಜನೋದ್ಧಾರ ಮತ್ತು ಖಾದಿ ಪ್ರಚಾರ ಕಾರ್ಯಗಳಲ್ಲೂ ಮಹಿಳೆಯರು ಭಾಗವಹಿಸಿದ್ದರು. ಅಂಥ ಮಹಿಳೆಯರಲ್ಲಿ ಬೆಳಗಾವಿ ಜಿಲ್ಲೆಯ ಪದ್ಮಾವತಿ ಉರ್ಫ್ ಚಂದ್ರಾಬಾಯಿ ದೇಸಾಯಿ ಅವರು ಕುಮಾರಿ ಆಶ್ರಮಕ್ಕೆ ಸೇರಿ, ರಾಷ್ಟ್ರೀಯ ಕಾರ್ಯಗಳಲ್ಲಿ ಭಾಗವಹಿಸಿ "ಕೊಳವಿ, ಡುಮರಕಟ್ಟಿ, ಈರನಟ್ಟಿ, ಅಕ್ಕತಂಗೇರಹಾಳ ಊರುಗಳಲ್ಲಿ ವಾಸ್ತವ್ಯ ಹೂಡಿದರು. ಜೊತೆಗೆ ಕುಮಾರಿ ಆಶ್ರಮದ ಮುಖೇನ ಹರಿಜನ ಕಾರ್ಯ, ಖಾದಿ ಗ್ರಾಮೋದ್ಯೋಗ ಮೊದಲಾದ ವಿಧಾಯಕ ಕಾರ್ಯಗಳನ್ನು ಕೈಗೊಂಡದ್ದು ವಿಶೇಷ."[೧೬]

ಸ್ವದೇಶಿ ಚಳವಳಿ ವ್ಯಾಪಕವಾಗಿ ಖಾದಿ ಪ್ರಚಾರದ್ದೇ ಆಗಿತ್ತು. ಅಂತೆಯೇ ವಿದೇಶಿ ಬಟ್ಟೆಗಳ ಬಹಿಷ್ಕಾರವು ಸಹ ಆಯಿತು. ಮಹಿಳೆಯರು ವಿದೇಶಿ ಬಟ್ಟೆ ಮಾರದಂತೆ, ಮಾಲೀಕರಿಗೆ ಮನದಟ್ಟು ಮಾಡಿ ವಿದೇಶಿ ಬಟ್ಟೆ ಮಾರುವವರ ಅಂಗಡಿಯ ಮುಂದೆ ಪಿಕೆಟಿಂಗ್ ಕಾರ್ಯ ಕೈಗೊಂಡರು. ೧೯೩೩ರಲ್ಲಿ ಬೆಳಗಾವಿಯಲ್ಲಿ ಸಂಗಮ್ಮ ಯಮಕನ ಮರಡಿ ಎಂಬಾಕೆಯ ನೇತೃತ್ವದಲ್ಲಿ ಚಂದ್ರಬಾಯಿದೇಸಾಯಿ, ಬಸವಣ್ಣೆವ್ವ, ಗೌರವ್ವ ಸಾವಳಗಿ ಮೊದಲಾದವರು ಕೂಡಿ ಬೆಳಗಾವಿಯ ಯಶವಂತರಾವ್ ದೇಶಪಾಂಡೆ ಅವರ ಬಟ್ಟೆ ಅಂಗಡಿಯ ಮುಂದೆ ಪಿಕೆಟಿಂಗ್ ಮಾಡಿದರು. ಈ ಪಿಕೆಟಿಂಗ್ ಮಾಡಿದ್ದಕ್ಕಾಗಿ ಸಂಗಮ್ಮ, ಬಸವಣ್ಣೆವ್ವ ಒಂದು ತಿಂಗಳ ಶಿಕ್ಷೆಗೆ ಒಳಗಾದರೆ, ಚಂದ್ರಬಾಯಿದೇಸಾಯಿ, ಗೌರವ್ವ ಸಾವಳಗಿ ಎಂಬುವವರಿಗೆ ಆರು ತಿಂಗಳ ಶಿಕ್ಷೆ ಆಯಿತು. ಪದ್ಮಾವತಿ ಗೋಕಾಕದ ವಿದೇಶಿ ಬಟ್ಟೆ ಅಂಗಡಿಯ ಮುಂದೆ ಪಿಕೆಟಿಂಗ್ ಕೈಗೊಂಡಳು. ಉತ್ತರಕನ್ನಡದಲ್ಲಿ ಯಶೋಧ ರಾಮರಾವ್ ನೇತೃತ್ವದಲ್ಲಿ 'ನಾಡವರ' ಎಂಬ ಜನಾಂಗದ ಮಹಿಳೆಯರು ವಿದೇಶಿ ಬಟ್ಟೆ ಮಾರದಂತೆ ಮಾಲೀಕರಿಗೆ ಮನವರಿಕೆ ಮಾಡಿ, ಮನೆಮನೆಗಳಿಗೆ ಹೋಗಿ ವಿದೇಶಿ

ಬಟ್ಟೆಯನ್ನು ಸುಟ್ಟರು. ಅಂಗಡಿಗಳ ಮುಂದೆ ಧರಣಿ, ಸತ್ಯಾಗ್ರಹಗಳನ್ನು ಆರಂಭಿಸಿದರು. ಇದನ್ನು ಕಂಡ ಮಾಲೀಕರು ವಿದೇಶಿ ಬಟ್ಟೆ ಮಾರುವುದಿಲ್ಲ ಎಂದು ಮುಚ್ಚಳಿಕೆ ಬರೆದು ಕೊಟ್ಟಿದ್ದು ಉಂಟು. ಹೀಗೆ ಮಹಿಳೆಯರ ಪ್ರತಿಕ್ರಿಯೆ, ಪ್ರತಿಭಟನೆ, ಪ್ರತಿರೋಧಗಳು ವಿಭಿನ್ನವಾಗಿದ್ದವು.

ಲಾಹೋರ್ ಅಧಿವೇಶನ ಕಾನೂನುಭಂಗ ಚಳವಳಿ ಮತ್ತು ಕರ ನಿರಾಕರಣೆಯ ಆಂದೋಲನಗಳನ್ನು ಕೈಗೊಳ್ಳಲು ಕಾಂಗ್ರೆಸ್ ವರ್ಕಿಂಗ್ ಕಮಿಟಿಗೆ ಅಧಿಕಾರ ನೀಡಿತು. ತತ್ಫಲವಾಗಿ ಕಾಂಗ್ರೆಸ್ ಸಮಿತಿ ಹೋರಾಟದ ಸ್ಥಳ ಹಾಗೂ ಸಮಯವನ್ನು ನಿರ್ಧರಿಸಲು ಗಾಂಧಿ ಅವರಿಗೆ ಹೇಳಿತು. ಗಾಂಧಿ ಅವರು ೧೯೩೦ರಲ್ಲಿ ಲಾರ್ಡ್ ಇರ್ವಿನ್ನರಿಗೆ ಹನ್ನೊಂದು ಬೇಡಿಕೆಗಳ ಪಟ್ಟಿಯನ್ನು ನೀಡಿದ್ದರು. ಅದಕ್ಕೆ ಯಾವುದೇ ಪ್ರತಿಕ್ರಿಯೆ ಬಂದಿರಲಿಲ್ಲ. ಇದರಿಂದಾಗಿ ಬ್ರಿಟಿಷರ ವಿರುದ್ಧ ಚಳವಳಿ ಅನಿವಾರ್ಯವಾಯಿತು. ಬ್ರಿಟಿಷ್ ಸರಕಾರ ಉಪ್ಪಿನ ಮೇಲೆ ಅಧಿಕ ತೆರಿಗೆ ಹಾಕಿದ್ದೇ ಅಲ್ಲದೇ, ಅದನ್ನು ತಯಾರಿಸುವುದನ್ನು ಸಹ ನಿಷೇಧಿಸಿತ್ತು. ಇದನ್ನು ಪ್ರತಿಭಟಿಸಲು ವಿವಿಧ ಪ್ರಾಂತ್ಯಗಳಿಂದ ಸತ್ಯಾಗ್ರಹಿ ಮಹಿಳೆಯರು ಆಗಮಿಸುವುದರೊಂದಿಗೆ ಉತ್ತರ ಕನ್ನಡದ 'ಅಂಕೋಲ'ವನ್ನು ಸತ್ಯಾಗ್ರಹದ ಸ್ಥಳವನ್ನಾಗಿಸಿದರು. ಅಂಕೋಲವನ್ನು ಸತ್ಯಾಗ್ರಹದ ಸ್ಥಳವೆಂದು ಘೋಷಿಸಿದ ಮೇಲೆ ಸತ್ಯಾಗ್ರಹಕ್ಕಾಗಿ ವಿವಿಧ ಸಿದ್ಧತೆಗಳು ಆರಂಭವಾಗಿ ವಿಭಿನ್ನ ಭಾಗಗಳಿಂದ ದಿವಾಕರರ ಪತ್ನಿಯ ನೇತೃತ್ವದಲ್ಲಿ ಮಹಿಳಾ ಗುಂಪುಗಳು ಬಂದವು. ಹೀಗೆ ಬರುತ್ತಿರುವ ಸತ್ಯಾಗ್ರಹಿಗಳಿಗೆ ದತ್ತಬಾಯಿ ನಾರ್ವೇಕರ್ ಆಶ್ರಯ ನೀಡಿದ್ದರು. ಹೀಗಾಗಿ ದತ್ತಬಾಯಿ ಅವರ ಮನೆ ಸತ್ಯಾಗ್ರಹಿಗಳ ಮನೆಯಾಗಿ ಶಿಬಿರದಂತೆ ಕಾಣುತ್ತಿತ್ತು. ಪ್ರತಿದಿನ ಸಂಜೆ ಸಭೆ ಸೇರಿ ಸತ್ಯಾಗ್ರಹದ ವಿಧಾನಗಳನ್ನು ಚರ್ಚಿಸುತ್ತಿದ್ದರು. ಮಹಿಳೆಯರು ತಮ್ಮ ಮಕ್ಕಳನ್ನು ಸೊಂಟಕ್ಕೆ ಕಟ್ಟಿಕೊಂಡು ದೂರದ ಪ್ರಾಂತ್ಯಗಳಿಂದ ಬರುತ್ತಲೇ ಇದ್ದರು. ಹೆಂಗಸರ ಸಹಕಾರ ಇರದಿದ್ದರೆ ಅಂಕೋಲಾದಲ್ಲಿ ಸತ್ಯಾಗ್ರಹ ಯಶಸ್ವಿಯಾಗದು ಎಂಬಂತೆ ನಾಡವರ ಕುಟುಂಬಗಳಿಂದ ಪ್ರತಿಯೊಬ್ಬ ಹೆಂಗಸು ಕಡ್ಡಾಯವಾಗಿ ಸತ್ಯಾಗ್ರಹದಲ್ಲಿ ಭಾಗವಹಿಸಿದ್ದರು. ಈ ಹಳ್ಳಿಯ ವನಿತೆಯರಿಗೆ ಪ್ರೇರಣೆಯಾಗಿದ್ದವರು ಯಶೋಧಾ, ಸೀತಾಬಾಯಿ ಸರಾಫ್, ಆನಂದಬಾಯಿ ಮೊದಲಾದವರು. ಸತ್ಯಾಗ್ರಹದಲ್ಲಿದ್ದ ಮಹಿಳೆಯರನ್ನು ಉದ್ದೇಶಿಸಿ ಸೀತಾಬಾಯಿ ಸರಾಫ್ ತಮ್ಮ ಭಾಷಣದಲ್ಲಿ "ಬ್ರಿಟಿಷರಿಗೆ ತೆರಿಗೆ ಕೊಟ್ಟು ನಾವ್ಯಾರೂ ಉಪ್ಪನ್ನು ತಿನ್ನಬಾರದು. ಉಪ್ಪಿನ ಸತ್ಯಾಗ್ರಹ ಎಂದರೆ ನಮ್ಮ ಮೇಲೆ ಬ್ರಿಟಿಷರು ಹೇರಿದ ಉಪ್ಪಿನ ಪರೋಕ್ಷ ತೆರಿಗೆಯ ನಿರಾಕರಣೆ ಆಗಿರುವುದು. ನಾವುಗಳು ಯಾರೂ ತೆರಿಗೆ ನೀಡದೆ ಉಪ್ಪನ್ನು ತಯಾರಿಸಿ ತಿನ್ನೋಣ. ಆ ಮುಖೇನ ಸ್ವಾತಂತ್ರ್ಯವನ್ನು ಅನುಭವಿಸೋಣ" ಎಂದು ಪ್ರತಿಕ್ರಿಯಿಸಿದ್ದರು. ಇವರ ನಂತರ ಆನಂದಬಾಯಿ ಹನುಮಟ್ಟೆಕರರು ಸಹ ಸತ್ಯಾಗ್ರಹಿಗಳನ್ನು ಉದ್ದೇಶಿಸಿ ಮಾತನಾಡುತ್ತ "ಉಪ್ಪಿನ ಸತ್ಯಾಗ್ರಹ ನಮ್ಮ ಪವಿತ್ರ ಕರ್ತವ್ಯ ಕಾರ್ಯ ಎಂದು ಹೇಳಿ ಸತ್ಯಾಗ್ರಹಿಗಳಿಗೆ ಪ್ರೇರಣೆ, ಬೆಂಬಲ ನೀಡಿದರು. ಇದರಿಂದಾಗಿ ಸುತ್ತಮುತ್ತಲಿನ ಗ್ರಾಮದ ಸ್ತ್ರೀಯರು ಅಂಕೋಲೆಯ ಬೆಂಡಿ ಬಜಾರದಲ್ಲಿ ಉಪ್ಪನ್ನು ಮಾರಿದರು. ಹೀಗೆ ತಯಾರಿಸಿದ ಉಪ್ಪನ್ನು ಮಾರುವಾಗ ಗಂಗೊಳ್ಳಿಯವರ ಮನೆಯ ಸ್ತ್ರೀಯೊಬ್ಬಳೆ ಹದಿನಾರು ರೂಪಾಯಿ ಉಪ್ಪನ್ನು ಕೊಂಡಳು.

ಗೋಕಾಕ್ ತಾಲೂಕಿನಲ್ಲಿ ೧೯೩೦ರಲ್ಲಿ ಉಪ್ಪಿನ ಚಳವಳಿ ಉಗ್ರವಾಯಿತು. ಗೋಕಾಕ್ ಚಳವಳಿ ಮುರಿಯಬೇಕೆಂದು ಅಸಿಸ್ಟೆಂಟ್ ಕಲೆಕ್ಟರ್ ವೇಲ್ಸ್ ಎಂಬ ಅಧಿಕಾರಿ ಬಂದು ಎಂಟು ದಿನಗಳ ಕಾಲ ತಂಗಿದ್ದ. ವಿದೇಶಿ ಬಟ್ಟೆ ಸುಡುವ ಕ್ರಿಯೆ ಅಧಿಕವಾಗಿತ್ತು. ಗಂಡಸರೆಲ್ಲಾ ಸೇಂದಿ ಗಿಡ ಕಡಿಯಲು ಹೋಗಿದ್ದರು. ನಾಗವ್ವ

ಮತ್ತು ಆಕೆಯ ನೆಗಣ್ಣಿಯರಷ್ಟೇ ಮನೆಯಲ್ಲಿದ್ದುದು. ಸತ್ಯಾಗ್ರಹ ಮಾಡದಂತೆ ಮನೆ ಮನೆಗೆ ಹೋಗಿ ವೇಲ್ಸ್ ಹೇಳುತ್ತಿದ್ದ. ಹೀಗೆ ಹೋಗುವಾಗ ನಾಗವ್ವನ ಮನೆಗೆ ಹದ, ಅವನಿಗೆ ತಕ್ಷಣ ಕಂಡದ್ದು ಗಾಂಧಿ-ನೆಹರೂ ಅವರ ಫೋಟೊಗಳು. ಈ ಫೋಟೊಗಳಿಂದಾಗಿ ಕೋಪಗೊಂಡ ವೇಲ್ಸ್ ಅವುಗಳನ್ನು ಒಡೆದು ಕೆಳಗೆ ಹಾಕಿ ಬೂಟುಗಾಲಿನಿಂದ ತುಳಿಯತೊಡಗಿದ. ನಾಗವ್ವನಂಥ ಅನೇಕ ಮಹಿಳೆಯರಿಗೆ ಅಂದಿನ ರಾಷ್ಟ್ರನಾಯಕರು ದೇವರಿಗೆ ಸಮವಾಗಿದ್ದರು. ಇದನ್ನು ಕಂಡ ನಾಗವ್ವ ಮತ್ತು ಆಕೆಯ ನೆಗಣ್ಣಿಯರಾದ ಕಲ್ಲವ್ವ, ಮಲ್ಲವ್ವ, ನೀಲವ್ವ ಸೇರಿ ಚಪ್ಪಲಿಯಿಂದ ವೇಲ್ಸ್‌ನನ್ನು ಥಳಿಸಿದರು. ಇದು ಮಹಿಳೆಯರ ದೇಶಾಭಿಮಾನವನ್ನು ಅಭಿವ್ಯಕ್ತಿಸುವಂಥದ್ದು. ನಾಡಿನ ಮಹಿಳೆಯರ ಇಂಥ ಅಭಿಮಾನಗಳಿಂದಲೇ ಸ್ವಾತಂತ್ರ್ಯ ಲಭಿಸಿದ್ದು ಎಂದರೆ ತಪ್ಪಲ್ಲ. ಈ ಕುರಿತ ಅಧ್ಯಯನಗಳ ಜರೂರು ಆಗಬೇಕಾಗಿದೆ.

೧೯೩೦ರ ಜನವರಿ ೨೪ರಂದು ಗಂಗೂಬಾಯಿ ಕಿನ್ನರೆ ಎಂಬಾಕೆ ನಿಪ್ಪಾಣಿಯ ನೆಹರು ಚೌಕಿನಲ್ಲಿ ಉಪ್ಪಿನ ಸತ್ಯಾಗ್ರಹ ಕೈಗೊಂಡು ಬಂಧಿತಳಾದಳು. ಅಂದರೆ ಬನವಾಸಿಯಲ್ಲೂ ಸಂಜೆ ಐದಕ್ಕೆ ಸತ್ಯಾಗ್ರಹ ಎಂದು ಪ್ರಕಟಿಸಲಾಗಿತ್ತು. ಆಗ ಯಾರು ಮುಂದೆ ಬಂದಿರಲಿಲ್ಲ. ಆದೆ ಅಲ್ಲಿ ನಡೆದ ಘಟನೆಯೊಂದರಿಂದ ಪ್ರಸಿದ್ಧಿಗೆ ಬಂದಿತು. ಆ ಘಟನೆಯೆಂದರೆ "ವಿವಾಹಿತ ತರುಣಿಯೋರ್ವಳು ತನ್ನ ಹೆಗಲ ಮೇಲೆ ಕೊಡಲಿ ತೆಗೆದುಕೊಂಡು ಬಂದು ಸತ್ಯಾಗ್ರಹ ಮಾಡಿ ಬಂಧನಕ್ಕೆ ಒಳಗಾದದ್ದು." ಇಂಥ ಘಟನೆಗಳೇ ಮುಂದಿನ ಚಳವಳಿಗೆ ಇತರೆ ಮಹಿಳೆಯರಿಗೂ ಪ್ರೇರಣೆಯಾದವು. ಇಂಥ ಹಲವು ಅಂಶಗಳನ್ನು ಸ್ತ್ರೀವಾದಿ ನೆಲೆಯಿಂದ ದಾಖಲಿಸಿ ಮತ್ತಷ್ಟು ಅಧ್ಯಯನ ಮಾಡಬೇಕಾಗಿದೆ.

ಅರಣ್ಯ ಸತ್ಯಾಗ್ರಹಕ್ಕಾಗಿ ಸಿದ್ದಾಪುರ, ಅಂಕೋಲಾಗಳು ಪ್ರಧಾನ ಕೇಂದ್ರಗಳಾಗಿದ್ದವು. ಅರಣ್ಯಕ್ಕೆ ಹೋಗುವ ಪುರುಷರಿಗೆ ಆರತಿ ಎತ್ತಿ ಶುಭಕೋರಿ ಕಳಿಸುತ್ತಿದ್ದವರು ಮಹಿಳೆಯರೆ. ಅಲ್ಲದೇ ಸ್ತ್ರೀ-ಪುರುಷರು ಒಂದೊಂದು ಸಾಲು ಮಾಡಿಕೊಂಡು ದೇಶಭಕ್ತಿ ಗೀತೆಗಳನ್ನು ಹಾಡುತ್ತಾ ಸತ್ಯಾಗ್ರಹಕ್ಕೆ ಹೋಗುತ್ತಿದ್ದರು. ಹೀಗೆ ಹೋಗುವಾಗ ಮಾರ್ಗದಲ್ಲಿ ಪುರುಷ ಸತ್ಯಾಗ್ರಹಿಗಳು ಬಂಧಿತರಾದರೆ ಅವರ ಹೆಂಡತಿಯರು ಸತ್ಯಾಗ್ರಹವನ್ನು ಮುಂದುವರಿಸಿಕೊಂಡು ಹೋದದ್ದು ಗಮನಾರ್ಹ. ಈ ವೇಳೆಯಲ್ಲಿಯೇ 'ಮುಕ್ಕಾಂಜಿಯ' ಶ್ಯಾಮಭಟ್ಟರ ಹೆಂಡತಿ ಸತ್ಯಾಗ್ರಹದಲ್ಲಿ ಭಾಗವಹಿಸಿದ್ದಳು. ಆದರೆ ಆಕೆಯನ್ನು ಪೋಲೀಸರು ಬಂಧಿಸಲಿಲ್ಲ. ಮುಂದೆ ಗಂಗವ್ವ ಆರೇರ ಎಂಬಾಕೆ ಸೇಂದಿ ಗಿಡ ಕಡಿಯುವ ಗುಂಪಿನ ಮುಂದಾಳಾದಳು. ಹೀಗೆ ಹಲವು ಬಗೆಯ ಪ್ರತಿಕ್ರಿಯೆ ಪ್ರತಿಭಟನೆಗಳಲ್ಲಿ ಮಹಿಳೆಯರ ಪಾತ್ರ ಗಮನಾರ್ಹವಾದುದು. ಆದರೆ ಈ ಕುರಿತ ಸ್ತ್ರೀವಾದಿ ಅಧ್ಯಯನಗಳು ವಿರಳ.

ಕರನಿರಾಕರಣೆ ಚಳವಳಿಗೂ ಸಿರ್ಸಿ, ಸಿದ್ದಾಪುರಗಳು ಆಪ್ತವಾಗಿ ಸ್ಪಂದಿಸಿದ್ದವು. ಕರ ನಿರಾಕರಣೆ ಮಾಡಬೇಕೆ? ಬೇಡವೆ? ಎಂದು ಅಭಿಪ್ರಾಯ ಸಂಗ್ರಹಿಸುವಾಗ ಮಹಿಳೆಯರು ತಾವೇ ಮುಂದೆ ಬಂದು ಕರ ನಿರಾಕರಣೆ ಮಾಡಬೇಕು ಎಂದು ಅಂಕಿತ ಹಾಕಿದ್ದು ವಿಶೇಷವಾಗಿತ್ತು. ಅವರಲ್ಲಿಯೂ ನಾಡವರ ಜನಾಂಗದ ಮಹಿಳೆಯರು ಧ್ವಜದಡಿಯಲ್ಲಿ ನಿಂತು ಕರ ನಿರಾಕರಣೆ ಮಾಡುತ್ತೇವೆ ಎಂದು ಪ್ರತಿಜ್ಞೆ ಮಾಡಿದರು. ಹೀಗೆ ಪ್ರತಿಜ್ಞೆ ಮಾಡಿ ಅಭಿಪ್ರಾಯ ಸಂಗ್ರಹಕ್ಕೆ ಸಹಿ ಹಾಕುತ್ತಿದ್ದರು. ಅವರುಗಳಲ್ಲಿ ಪ್ರಮುಖರು ಗೌರಮ್ಮ, ಕಾವೇರಮ್ಮ, ಗೋದಾಬಾಯಿ ಕನ್ನಳ್ಳಿ, ಸೀತಾಬಾಯಿ, ದುಗ್ಗಮ್ಮ, ಮುಗದೂರು ಸುಬ್ಬಮ್ಮ, ಶಿರಗಾಗಿ

ಗಂಗಾಬಾಯಿ, ಪಾರ್ವತಿಬಾಯಿ, ಗುಂಜಿಗೋಡೆ ಮಹದೇವಮ್ಮ, ಸೀತಾಬಾಯಿ ಸಿರ್ಸಿ ಮೊದಲಾದವರು ಪ್ರಮುಖರು.

ಕೃಷ್ಣಬಾಯಿ ಪಣಜೀಕರ ಎಂಬಾಕೆ ನಾಡಿನ ಬೇರೆ ಬೇರೆ ಪ್ರದೇಶಗಳಿಗೆ ಹೋಗಿ ಕರ ನಿರಾಕರಣೆ ಮಾಡಲು ಜನರಿಗೆ ಸಭೆ ಕರೆದರು. ಇದರಿಂದಾಗಿ ಜನರಲ್ಲಿ ಜಾಗೃತಿ ಉಂಟಾಗಿ ವಿಭಿನ್ನ ಪ್ರಾಂತ್ಯಗಳಿಂದ ಮಹಿಳೆಯರು ಬರತೊಡಗಿದರು. ೧೯೩೦-೩೧ರಲ್ಲಿ ಚಳವಳಿ ಆರಂಭವಾಗಿ ಸತ್ಯಾಗ್ರಹಗಳು ಕರ ನೀಡಲು ನಿರಾಕರಿಸಿದರು. ಬ್ರಿಟಿಷರು ಆಗ ಕರ ನಿರಾಕರಿಸಿದವರ ಆಸ್ತಿ ದನ-ಕರುಗಳನ್ನು ಜಪ್ತಿ ಮಾಡಿ ಹರಾಜು ಹಾಕಿದ್ದೂ ಇದೆ. ಬ್ರಿಟಿಷರ ಈ ನೀತಿಯು ಜನರ ಆರ್ಥಿಕ ಬಲವನ್ನು ಕುಗ್ಗಿಸಿತ್ತು. ಇನ್ನೇನು ಸತ್ಯಾಗ್ರಹ ನಿಂತೇ ಹೋಗುತ್ತದೆ ಎನ್ನುವ ಸಂದರ್ಭದಲ್ಲಿ ಮಹಿಳೆಯರು ಮುಂದೆ ಬಂದು ಸತ್ಯಾಗ್ರಹದ ಮುಂದುವರಿಕೆಗೆ ಪಣತೊಟ್ಟರು. ಮಹಿಳೆಯರ ಇಂಥ ನಿರ್ಧಾರಗಳಿಂದ ಚಳವಳಿ ವ್ಯಾಪಕವಾಗಲೂ, ಉಗ್ರವಾಗಿ ಮುಂದುವರಿಯಲೂ ಸಹಾಯಕವಾಯಿತು. ಬ್ರಿಟಿಷ್ ಸರಕಾರದ ಅಧಿಕಾರಿಗಳು ಹಳ್ಳಿ ಹಳ್ಳಿಗೆ ಬಂದು ಕರ ನಿರಾಕರಣೆ ಕೈಬಿಡುವಂತೆ ಮನವಿ ಮಾಡಿಕೊಳ್ಳುತ್ತಿದ್ದರು. ಜೊತೆಗೆ ಕರನಿರಾಕರಣೆ ಮಾಡಿದರೆ ಉಂಟಾಗುವ ತೊಂದರೆಗಳನ್ನು ತಿಳಿಸಿದರು. ಆಗ ತಿಪ್ಪ ಹಮ್ಮಣ್ಣ ನಾಯಕಿ ಎಂಬಾಕೆ ಮುಂದೆ ಬಂದು, "ನಾವು ಸ್ವರಾಜ್ಯಕ್ಕಾಗಿ ಕರನಿರಾಕರಣೆ ಮಾಡುತ್ತೇವೆ ಬ್ರಿಟಿಷರ ಅಧಿಕಾರಿಗಳಾದ ನೀವು ನಮ್ಮ ದಾರಿಗೆ ಅಡ್ಡ ಬರಬೇಡಿ. ನಿಮಗೆ ಗಂಡಸುತನ ಇದ್ದರೆ ನೌಕರಿ ಬಿಟ್ಟು ಸತ್ಯಾಗ್ರಹ ಸೇರಿಕೊಳ್ಳಿ" ಎಂದು ಪುರುಷರಿಗೆ ಸವಾಲು ಹಾಕಿದಳು. ಇಂಥ ಸವಾಲುಗಳೇ ಪುರುಷರನ್ನು ಅವಮಾನ ಮಾಡುವುದರೊಂದಿಗೆ ಅವರು ಸಹ ಸತ್ಯಾಗ್ರಹದಲ್ಲಿ ಭಾಗವಹಿಸುವಂತೆ ಪ್ರೇರೆಪಿಸುತ್ತಿದ್ದವು. ಇನ್ನೂ ಕೆಲವು ಪ್ರಾಂತ್ಯಗಳಲ್ಲಿ ಕರ ನಿರಾಕರಣೆಯನ್ನು ನಿರಾಕರಿಸದಂತೆ ಹೇಳಲು ಬಂದ ಅಧಿಕಾರಿಗಳಿಗೆ ಆ ಪ್ರಾಂತ್ಯದವರು ಆಹಾರ, ನೀರು, ಆಶ್ರಯ ಕೊಡದೆ ಹಳ್ಳಿಗಳಿಂದ ಹಿಂತಿರುಗುವಂತೆ ಮಾಡಿದರು. ಹೀಗಿದ್ದರೂ ಜನ ಕರ ನಿರಾಕರಣೆ ಮಾಡುತ್ತಲೇ ಇದ್ದರು. ಸರಕಾರ ಸಹ ಅವರ ಆಸ್ತಿಯನ್ನು ಹರಾಜು ಹಾಕುತ್ತಿತ್ತು. ಈ ಹರಾಜುಗಳಿಂದ ಅನೇಕ ಕುಟುಂಬಗಳು ಬೀದಿ ಪಾಲಾದವು. ಈ ರೀತಿಯಿಂದ ಬೀದಿಗೆ ಬಂದವರಲ್ಲಿ ಹೊಸಕೇರಿ ಹೊನ್ನಮ್ಮ, ಸಣ್ಣಮ್ಮ, ಸಾಂತಮ್ಮ ಮೊದಲಾದವರು ಪ್ರಮುಖರು. ಕರ ನಿರಾಕರಣೆಯ ಸಂದರ್ಭದಲ್ಲಿ ಗಂಗಾವಳಿ ನದಿ ತೀರದಲ್ಲಿನ ಸರಕಾರಿ ಉರುವಲು ಕಟ್ಟಿಗೆ ರಾಶಿಗೆ ಸತ್ಯಾಗ್ರಹಿಗಳು ಬೆಂಕಿ ಹಚ್ಚಿದರು. ಈ ಬೆಂಕಿ ಎರಡು - ಮೂರು ದಿನಗಳವರೆಗೂ ಉರಿದು ಅಪಾರ ನಷ್ಟಕ್ಕೆ ಕಾರಣವಾಯಿತು. ಬ್ರಿಟಿಷ್ ಸರಕಾರ ಈ ಕೃತ್ಯದಿಂದ ರೊಚ್ಚಿಗೆದ್ದು ಗೋಕರ್ಣದ ಮೇಲೆ ಐವತ್ತಾರು ಸಾವಿರ ರೂಪಾಯಿಗಳ ಸಾಮೂಹಿಕ ಪುಂಡುಗಂದಾಯವನ್ನು ಹಾಕಿತು. ಬ್ರಿಟಿಷ್ ಸರಕಾರದ ಈ ಪುಂಡುಗಂದಾಯವನ್ನು ಜನ ಕೊಡಲಿಲ್ಲ. ಆಗ ಜಪ್ತಿ ವಾರೆಂಟುಗಳು ಹೊರಬಿದ್ದವು. ಕರನಿರಾಕರಿಸಿದವರು ತಮ್ಮ ಮನೆಯಲ್ಲಿದ್ದ ಕಂಚು, ತಾಮ್ರದ ವಸ್ತುಗಳನ್ನು ಮುಚ್ಚಿಟ್ಟು ಗಡಿಗೆ-ಮಡಿಕೆಗಳನ್ನು ಬಳಕೆಗೆ ತಂದರು. ಹೀಗಿದ್ದರೂ ಪೋಲೀಸರ ಉಪಟಳ ತಪ್ಪಲಿಲ್ಲ. ಜನ ಬೇಸತ್ತರು. 'ಸುಬ್ಬಮ್ಮ ಮಾರಿಗೋಳಿ' ಎಂಬ ಮುದುಕಿಗೆ ಹುಚ್ಚು ಹಿಡಿದು ಆಕೆ "ಪುಂಡದಂಡೆ, ಪುಂಡದಂಡೆ" ಎಂದು ಹೇಳುತ್ತಾ" ಪ್ರಾಣಬಿಟ್ಟಳು ಎಂಬುದರ ಬಗ್ಗೆ ದಾಖಲೆಗಳು ಹೇಳುತ್ತವೆ. ಜನರಿಗೆ ಹುಚ್ಚು ಹಿಡಿಯಬೇಕಾದರೆ ಬ್ರಿಟಿಷರ ಕಂದಾಯ ನೀತಿ ಎಷ್ಟು ಭೀಕರವಾಗಿತ್ತು ಎಂದು ತಿಳಿದುಬರುತ್ತದೆ. ಒಟ್ಟಾರೆ ಕರನಿರಾಕರಣೆ ಚಳವಳಿ ಗಂಭೀರವಾಗಿದ್ದು, ಅಂಕೋಲಾದಲ್ಲಿನ ಹೆಂಗಸರು ಕರ ನಿರಾಕರಿಸಿ, ಕೈಲಾ

ಸೇರಿದ್ದು ದಾಖಿಲಾರ್ಹವಾದುದು. ಸ್ತ್ರೀಯರ ಈ ಕರ ನಿರಾಕರಣೆ ದೇಶವ್ಯಾಪ್ಯಂತ ವ್ಯಾಪಕವಾಗಿ ಹರಡಿತು. ಇಂಥ ಮಹಿಳೆಯರ ಚಳವಳಿ ಸ್ವರೂಪವನ್ನು ತಿಳಿದುಕೊಳ್ಳಲು ಬ್ರಿಟಿಷ್ ಗವರ್ನರ್ ಬರಬೇಕಾಯಿತು. ಕಣಗಿಲದ ತಾಣಕ್ಕನ ಬೊಮ್ಮ ಎಂಬಾಕೆ ಕಾರವಾರಕ್ಕೆ ಬಂದು ಗವರ್ನರಿಗೆ ವಿರೋಧ ವ್ಯಕ್ತಪಡಿಸಲು ಕಪ್ಪು ಬಾವುಟ ತೋರಿಸಿ ಬಂಧಿತಳಾದದ್ದು ಗಮನಾರ್ಹವಾದದ್ದು.

ಬ್ರಿಟಿಷರು ತಮಗೆ ವಿರೋಧ ವ್ಯಕ್ತಪಡಿಸಿದವರನ್ನು ಬಂಧಿಸುವುದು, ಕರ ನಿರಾಕರಿಸಿದ ಸತ್ಯಾಗ್ರಹಿಗಳನ್ನು ಅಡಗಿಸಲು, ಅವರ ಮನೆ-ಆಸ್ತಿ-ಪಾಸ್ತಿಗಳನ್ನು ಜಪ್ತಿ ಮಾಡುವುದು ಸಾಮಾನ್ಯವಾಗಿತ್ತು. ಅನೇಕ ಮನೆಗಳಿಗೆ ಸೀಲು ಹಾಕಿದ್ದುದು ಕಂಡು ಬರುತ್ತಿತ್ತು. ಆದರೆ ಮನೆಗಳ ಸೀಲು ಒಡೆದು ಬ್ರಿಟಿಷರ ವಿರುದ್ಧ ಮತ್ತೊಂದು ಬಗೆಯ ಸತ್ಯಾಗ್ರಹವನ್ನು ಮಹಿಳೆಯರು ರೂಪಿಸಿದ್ದು ವಿಶೇಷ. ಈ ಸತ್ಯಾಗ್ರಹದಲ್ಲಿಯೂ ಸ್ತ್ರೀಯರೇ ಮುಂದಾಳತ್ವ ವಹಿಸಿದ್ದು ಪ್ರಧಾನ. ಬೋಳೆ ಗ್ರಾಮವೊಂದರಲ್ಲಿ ಜಂಬಗೋಡ ಸಾಂತಮ್ಮ ಮುಖಂಡಳಾಗಿದ್ದರೆ, ಈ ಚಳವಳಿಯಲ್ಲಿ ಹಿಚ್ಕಡದ ಮಾಣುದೇವಿ ಎಂಬಾಕೆ ಪ್ರಧಾನ ಪಾತ್ರ ವಹಿಸಿದ್ದಳು. ಮಾಣುದೇವಿ ವಾಸ್ರೆಯ ಬೊಮ್ಮಯ್ಯ ನಾಯಕರ ಮನೆಯ ಸೀಲು ಒಡೆಯುವವರಲ್ಲಿ ಪ್ರಧಾನಳಾಗಿದ್ದಳು. ಈಕೆ ಅನೇಕ ಮನೆಗಳ ಸೀಲು ಒಡೆಯುವಲ್ಲಿ ಯಶಸ್ವಿಯಾದಳು. ಆದರೆ ಪೋಲೀಸರು ಮಾಣುದೇವಿಯನ್ನು ಎಳೆದು ಮತ್ತೆ ಮನೆಗೆ ಸೀಲು ಹಾಕಲು ಪ್ರಯತ್ನಿಸಿದರು, ಮಾಣುದೇವಿ ಕೂಡ ಮತ್ತೆ ಸೀಲು ತೆಗೆದು ಮನೆ ಪ್ರವೇಶಿಸಲು ಹೋದಳು. ಆಗ ಪೋಲೀಸರು ಆಕೆಯ ರಟ್ಟೆ ಹಿಡಿದು ಹೊರಗೆ ಹಾಕಿದರು. ಮಾಣುದೇವಿ ಮತ್ತೆ ಮತ್ತೆ ಒಳನುಗ್ಗಲು ಪ್ರಯತ್ನಿಸಿದ್ದರಿಂದ ಪೋಲೀಸರು ಆಕೆಯ ಕಪಾಳಕ್ಕೆ ಹೊಡೆದು, ಕಣ್ಣಿಗೆ ಮೆಣಸಿನ ಪುಡಿ ಹಾಕಿದ ಕ್ರೂರ ಘಟನೆ ನಡೆಯಿತು. ಪೋಲೀಸರ ಈ ವರ್ತನೆಯಿಂದ ಮಾಣುದೇವಿ ಪ್ರಜ್ಞಾ ಹೀನಳಾಗಿ ಬಿದ್ದಳು. ನಂತರ ಎಚ್ಚರ ಬಂದ ಮೇಲೂ ಮತ್ತೆ ಸತ್ಯಾಗ್ರಹ ಮಾಡಿ ಬಂಧಿತಳಾದಳು. ಇಂಥ ಮಾಣುದೇವಿಯ ಸಾಹಸವನ್ನು 'ಇಂಪರೀಯಲ್ ಲೀಗಿ'ನ ಮಂಡಳಿಯವರ ವರದಿಯಲ್ಲಿ ಸೇರ್ಪಡೆಯಾಗಿರುವುದನ್ನು ಗಮನಿಸಬಹುದು. ಮಾಣುದೇವಿಯ ಜೊತೆ ದಾಕಮ್ಮ, ಬೊಮ್ಮಕ್ಕ ಎಂಬ ಮಹಿಳೆಯರು ಇದ್ದದ್ದನ್ನು ಇಲ್ಲಿ ಪ್ರಸ್ತಾಪಿಸಲೇಬೇಕಾಗುತ್ತದೆ.

ಕರ ನಿರಾಕರಿಸಿದವರ ಆಸ್ತಿ-ಪಾಸ್ತಿಗಳನ್ನು ಸರಕಾರ ವಶಪಡಿಸಿಕೊಂಡು ಅವುಗಳನ್ನು ಹರಾಜು ಹಾಕುತ್ತಿತ್ತು. ಈ ಹರಾಜಿನಲ್ಲಿನ ಆಸ್ತಿ-ಪಾಸ್ತಿ, ದನ-ಕರುಗಳನ್ನು ಕೊಂಡುಕೊಂಡವರ ಮನೆಯ ಮುಂದೆಯೂ ಸಹ ಸತ್ಯಾಗ್ರಹವನ್ನು ಆರಂಭಿಸಿ ಪ್ರತಿಭಟಿಸಲಾಗುತ್ತಿತ್ತು. ಇದು ಉಪವಾಸ ಸತ್ಯಾಗ್ರಹ ಆಗಿರುತ್ತಿತ್ತು. ಈ ಸತ್ಯಾಗ್ರಹಕ್ಕೆ ಬಂದ ಮಹಿಳೆಯರಲ್ಲಿ ಗೌರಮ್ಮ ಮೊದಲನೆಯವಳು. 'ಹಚ್ಚಿ' ಗ್ರಾಮದವರು ದನಕರುಗಳನ್ನು ಹಿಂತಿರುಗಿಸುವಂತೆ ಕೇಳಿಕೊಂಡವರ ಮನೆಯ ಮುಂದೆ ಉಪವಾಸ ಸತ್ಯಾಗ್ರಹ ಆರಂಭಿಸಿತು. ಗೌರಮ್ಮನ ಮುಂದಾಳತ್ವದಲ್ಲೂ ಈ ಉಪವಾಸ ಸತ್ಯಾಗ್ರಹ ಮೂರು ದಿನಗಳವರೆಗೂ ನಡೆಯಿತು. ಇದನ್ನು ಕಂಡ ಹಚ್ಚಿ ಗ್ರಾಮದ ಮಾಲೀಕರು ಮುಂದೆ ಬಂದು, ತಾವು ದನಕರುಗಳನ್ನು ಹಿಂತಿರುಗಿಸುತ್ತೇವೆ ಎಂದೂ ಉಪವಾಸ ಸತ್ಯಾಗ್ರಹ ನಿಲ್ಲಿಸಲು ಕೇಳಿಕೊಂಡು ತಾವು ಕೊಂಡ ದನಕರುಗಳನ್ನು ಅಲಂಕರಿಸಿ, ಗೌರಮ್ಮನಿಗೆ 'ದಾನ' ಎಂದು ನೀಡಿದರು. ಗೌರಮ್ಮ ಈ ದನಕರುಗಳನ್ನು ಅವುಗಳ ಮನೆಗಳಿಗೆ ಕಳಿಸಿಕೊಟ್ಟಳು. ಈ ಬಗೆಯ ಅನೇಕ ಘಟನೆಗಳನ್ನು ಅಧ್ಯಯನಕ್ಕೆ ಒಳಪಡಿಸಬೇಕಿದೆ.

ತಿಗಣೆ ಗ್ರಾಮ ಶಿರಸಿಯ ತಾಲೂಕಿನಲ್ಲಿದೆ. ತಿಗಣೆಯ ಗದಿಗೆಪ್ಪಗೌಡರು ಹರಾಜಿನಲ್ಲಿ ಮೂರು ಎಮ್ಮೆಗಳನ್ನು ಕೊಂಡುಕೊಂಡಿದ್ದರು. ಇದನ್ನು ಪ್ರತಿಭಟಿಸಲು ಗೌಡರ ಮನೆಯ ಮುಂದೆ ನಾಗವೇಣಿಬಾಯಿ, ಮಹಾಲಕ್ಷ್ಮಿ ಬೆಳ್ಳಿಕೇರಿ ಎಂಬವವರು ಉಪವಾಸ ಸತ್ಯಾಗ್ರಹ ಮಾಡಿ ಬಂಧನಕ್ಕೆ ಒಳಗಾದರು. ಇವರ ನಂತರ ಕಮಲಾದೇವಿ, ಗಂಗಮ್ಮ ಸತ್ಯಾಗ್ರಹ ಮುಂದುವರಿಸಿ ಬಂಧನಕ್ಕೆ ಒಳಗಾದರು. ಗೌಡರು ತಮ್ಮ ಮನೆಯ ಅಂಗಳವನ್ನು ಅಗೆಯಿಸಿ ಕೊಳೆನೀರು ಬಂದು ಸೇರುವಂತೆ ಮಾಡಿದರು. ಜೊತೆಗೆ ಕೊಳೆ ನೀರಿನಲ್ಲಿ ಮುಳ್ಳು, ಗಾಜುಗಳನ್ನು ಹಾಕಿದರು. ಇದರಿಂದ ಕುಪಿತರಾದ ವೆಂಕೋಬಾಯಿ, ಪರಮೇಶ್ವರಮ್ಮ ಸತ್ಯಾಗ್ರಹ ಮುಂದುವರಿಸಿದರು. ಇವರು ಕೂಡ ಮಳೆಯಲ್ಲಿ ಸತ್ಯಾಗ್ರಹಿಗಳ ಪಕ್ಕದ ಮಾರಿ ಗುಡಿಯಲ್ಲಿ ಆಶ್ರಯ ಪಡೆದರು. ರಾತ್ರಿ ಕುಡುಕರು ಈ ಮಹಿಳೆಯರ ಬಳಿಗೆ ಬಂದು ಮಾನಭಂಗ ಮಾಡಲು ಯತ್ನಿಸಿದಾಗ ಮಹಿಳೆಯರು ತಮ್ಮ ಬಳಿ ಇರುವ ಚೂರಿಯನ್ನು ತೆಗೆದುಕೊಂಡು ಕುಡುಕರನ್ನು ಎದುರಿಸಿದ್ದೂ ಇದೆ. ಈ ಮಹಿಳೆಯರ ಜೊತೆ ಕಾವೇರಮ್ಮ, ಕಮಲಮ್ಮ ಸಹ ಸೇರಿಕೊಂಡರು. ಕಾವೇರಮ್ಮ ಚಿಕ್ಕ ಮಗುವಿನೊಂದಿಗೆ ಸತ್ಯಾಗ್ರಹಕ್ಕೆ ಕುಳಿತಳು. ಗದಿಗೆಪ್ಪ ಗೌಡರ ಹೆಂಡತಿ ಗೌರಮ್ಮ ಎಮ್ಮೆಗಳನ್ನು ಹಿಂತಿರುಗಿಸಬೇಕೆಂಬ ಒತ್ತಡವನ್ನು ಗೌಡರಿಗೆ ಹೇರಿ, ಅವರು ಎಮ್ಮೆಗಳನ್ನು ಹಿಂತಿರುಗಿಸಿದರು. ಹೀಗೆ ಮಹಿಳೆಯರು ಕೆಲವೊಮ್ಮೆ ನೇರವಾಗಿ ಸತ್ಯಾಗ್ರಹ ಕೈಗೊಂಡರೆ ಮತ್ತೆ ಕೆಲವೊಮ್ಮೆ ಸತ್ಯಾಗ್ರಹಿಗಳಿಗೆ ಪರೋಕ್ಷವಾಗಿ ಸಹಾಯ ಮಾಡಿದ್ದಾರೆ. ಇಂಥ ಮಹಿಳೆಯರ ದಾಖಲೆಗಳನ್ನು ಸ್ತ್ರೀವಾದಿ ನೆಲೆಯಿಂದ ಮತ್ತಷ್ಟು ಗುರುತಿಸಿ ಸ್ತ್ರೀ ಸ್ವಾತಂತ್ರ್ಯ ಚಳವಳಿಯ ಚರಿತ್ರೆಯಲ್ಲಿ ಸೇರಿಸಬೇಕಾಗಿದೆ.

ಉಪವಾಸ ಸತ್ಯಾಗ್ರಹ ಶೀರಳಗಿ, ಅಕ್ಕುಂಜಿ, ಮಾವಿನಗುಂಡಿ, ತ್ಯಾಗ್ಲಿ, ಹೊಸತೋಟ ಇತ್ಯಾದಿಗಳಲ್ಲಿ ಆರಂಭವಾಗಿತ್ತು. ಮಾವಿನಗುಂಡಿಯ ಸತ್ಯಾಗ್ರಹದಲ್ಲಿ ಕಲ್ಲಾಳ ಲಕ್ಷ್ಮಮ್ಮ ಹಾಗೂ ಇತರೆ ಮೂವತ್ತೊಂದು ಸ್ತ್ರೀಯರು ಇದ್ದರು. ಒಟ್ಟಿನಲ್ಲಿ ಕರ ನಿರಾಕರಣೆ, ಉಪವಾಸ ಸತ್ಯಾಗ್ರಹ, ಸೀಲು ಒಡೆಯುವ ಸತ್ಯಾಗ್ರಹಗಳಲ್ಲಿ ಮಹಿಳೆಯರು ವಿಭಿನ್ನ ಸಮಸ್ಯೆಗಳನ್ನು ಎದುರಿಸಿ, ಚಿಕ್ಕ ಮಕ್ಕಳೊಂದಿಗೆ ಜೈಲು ಕಂಡದ್ದು ತಿಳಿದುಬರುತ್ತದೆ.

ಈ ಘಟ್ಟದಲ್ಲಿಯೆ ಬ್ರಿಟಿಷ್ ಸರಕಾರ ಧ್ವಜ ಹಾರಿಸದಂತೆ ಆಜ್ಞೆ ಹೊರಡಿಸಿತ್ತು. ಈ ಆಜ್ಞೆಯನ್ನು ಉಲ್ಲಂಘಿಸಿದ ಮಹಿಳೆಯರು ಧ್ವಜ ಹಾರಿಸಿಯೂ ಬಂಧನಕ್ಕೆ ಒಳಗಾದರು. ಗಂಗೂಬಾಯಿ ಕಿನರೆ ಎಂಬಾಕೆ ಪ್ರಭಾತಫೇರಿಯನ್ನು, ನೆಹರೂ ಚೌಕಿನಲ್ಲಿ ಧ್ವಜ ವಂದನೆಯನ್ನು ಮಾಡಿ ಒಂದು ವರ್ಷ ಜೈಲು ಶಿಕ್ಷೆ ಮತ್ತು ಒಂದು ನೂರು ರೂಪಾಯಿಗಳನ್ನು ದಂಡವಾಗಿ ನೀಡಿದಳು. ಸವದತ್ತಿಯಲ್ಲಿಯೂ ಒಂದು ಸಾವಿರ ಸ್ತ್ರೀಯರು ಧ್ವಜ ವಂದನೆ ಮಾಡಿ ಬಂಧಿತರಾದರು. ೧೯೩೨ರ ಮಾರ್ಚ್ ಮೂರರಂದು ಹಾಲಾಗಿ, ಮರೋಳದ ನಾಲ್ಕು ರೈತಾಪಿ ಮಹಿಳೆಯರು ಗಂಡು ವೇಷ ಧರಿಸಿ, ಹಾವೇರಿಯ ಕಚೇರಿಯ ಮೇಲೆ ಝಂಡಾ ಹಾರಿಸುವ ಮುಖೇನ ಜೈಲು ಸೇರಿದರು. ೧೯೩೦ರಲ್ಲಿ ಗುಳೇದಗುಡ್ಡದ ಪುರಸಭೆಯನ್ನು ಪೋಲೀಸರು ಕಾಯುತ್ತಿದ್ದಾಗ್ಯೂ ಫಕೀರವ್ವ ಹಂಪಿ ಹೊಳೆ ಎಂಬಾಕೆ ಪುರಸಭೆಯ ಮೇಲೆ ಧ್ವಜ ಹಾರಿಸಿದ್ದು ಕಂಡುಬಂದಿದೆ. 'ಭದ್ರೆ' ಎಂಬಾಕೆಯೂ ಮಲ್ಲಾಪುರ ಕಚೇರಿಯ ಮುಂದೆ ಧ್ವಜ ಹಾರಿಸಿ, ಆರು ತಿಂಗಳ ಶಿಕ್ಷೆ ಮತ್ತು ಐವತ್ತು ರೂಪಾಯಿ ಹಣವನ್ನು ದಂಡವಾಗಿ ಕೊಟ್ಟಳು. ಸೀತಾಬಾಯಿ ಮತ್ತು ಹನ್ನೆರಡು ಮಹಿಳೆಯರು ಪೊಲೀಸ್ ಠಾಣೆಗೆ ಹೋಗಿ ಧ್ವಜ ಹಾರಿಸಿದ ದಾಖಲೆಗಳು ದೊರೆಯುತ್ತವೆ. ದುರ್ಗಮ್ಮಯಾನೆ ೧೯೩೨ರ ಜನವರಿ ಇಪ್ಪತ್ತಾರರಂದು

ಧ್ವಜಕ್ಕೆ ವಂದಿಸಿ ಬಂಧಿತಳಾದಳು. ದೇವಯಾನಿಯಾನೆ ಪ್ರತಿದಿನ ಮಕ್ಕಳನ್ನು ಸೇರಿಸಿ, ಪ್ರಭಾತಫೇರಿ ಮಾಡುತ್ತಿದ್ದಳು. ಮನೆಯ ಅಂಗಳದಲ್ಲಿ ಧ್ವಜಕ್ಕೆ ವಂದಿಸುತ್ತಿದ್ದಾಗ ಪೊಲೀಸರು ಆಕೆಯಿಂದ ಧ್ವಜವನ್ನು ವಶಪಡಿಸಿಕೊಂಡರು. ಆದರೂ ದೇವಯಾನಿ ಗೋಡೆಯ ಮೇಲೆ ಧ್ವಜದ ಚಿತ್ರವನ್ನು ಬರೆದು ವಂದಿಸುತ್ತಿದ್ದಳು. ಬ್ರಿಟಿಷ್ ಸರಕಾರದ ಎಷ್ಟೋ ನಿರ್ಬಂಧಗಳನ್ನು ಹೇರಿದರೂ ಅವುಗಳ ಉಲ್ಲಂಘನೆ ತಮಗೆ ಅಪಾಯವೆಂದು ತಿಳಿದಿದ್ದರೂ ಅನೇಕ ಮಹಿಳೆಯರು ಅವುಗಳನ್ನು ಲೆಕ್ಕಿಸದೆ ರಾಷ್ಟ್ರದ ಸ್ವಾತಂತ್ರ್ಯ ಚಳವಳಿಗೆ ಸಹಕಾರ ಕೊಟ್ಟರು. ಇವು ಸಹ ಸ್ತ್ರೀವಾದಿ ಅಧ್ಯಯನಕ್ಕೆ ವಸ್ತು ವಿಷಯಗಳಾಗಬಹುದು.

ಇನ್ನೂ ಕೆಲವು ಮಹಿಳೆಯರು ಕರಪತ್ರ, ಬುಲೆಟಿನ್ ಹಂಚುವ ಕಾರ್ಯಗಳಲ್ಲಿ ನಿರತರಾಗಿದ್ದರು. ಅವರು ಶಾಂತಾಬಾಯಿ ಕೊಪ್ಪಿಕರ ಸ್ಫೋಟಕಗಳನ್ನು ಕಾರ್ಯಕರ್ತರಿಗೆ ಹಂಚುತ್ತಿದ್ದಳು. ಸಿದ್ದಾಪುರದ ದುರ್ಗಮ್ಮಯಾನೆ ಎಂಬಾಕೆ ವಾರಕ್ಕೆ ಎರಡು ಬಾರಿಯಾದರೂ ಕುಮಟಾ, ಹೊನ್ನಾವರಗಳಿಗೆ ಹೋಗಿ ಕರಪತ್ರಗಳನ್ನು ಹಂಚುತ್ತಿದ್ದಳು. ಧಾರವಾಡದಲ್ಲಿ ಶಕುಂತಲಾ ಧಾಮಣಕರ ಮತ್ತು ನಲವತ್ತು-ಐವತ್ತು ತರುಣಿಯರು ಬುಲೆಟಿನ್ ಹಂಚಿದರು. ಇನ್ನೂ ಕುತೂಹಲಕರವಾದ ವಿಷಯವೆಂದರೆ ಜಾತ್ರೆ-ಹಬ್ಬ ಹರಿದಿನಗಳಲ್ಲಿ ಉತ್ಸವಗಳಲ್ಲಿ ಸತ್ಯಾಗ್ರಹಿಗಳು ಕರಪತ್ರಗಳನ್ನು ಹಂಚುತ್ತಿದ್ದುದು. ಸ್ವಾತಂತ್ರ್ಯ ಚಳವಳಿ ಬಗ್ಗೆ ಜನರಿಗೆಲ್ಲಾ ತಿಳಿಸುತ್ತಿದ್ದರು. ಅಂತೆಯೇ ರಾಣೇಬೆನ್ನೂರು ತಾಲೂಕಿನ ದೇವರಗುಡ್ಡ ಜಾತ್ರೆಯಲ್ಲಿಯೂ, ಹಾಗೂ ಸವದತ್ತಿಯ ಕರೀಕಟ್ಟೆಯ ಜಾತ್ರೆಯಲ್ಲಿಯೂ ಬುಲೆಟಿನ್ ಹಂಚಿದ ಹಾಗೂ ಮಹಿಳಾ ಪರಿಷತ್ತಿನ ಸಭೆಗಳನ್ನು ನಡೆಸಿದ ದಾಖಲೆಗಳು ದೊರೆತಿವೆ. ಭವಾನಿಬಾಯಿ ಕಾನಗೋಡ ಎಂಬಾಕೆಯು ಗುಪ್ತ ಶಿಬಿರಗಳಿಂದ ಕರಪತ್ರಗಳನ್ನು ತಂದು, ಕೆಲವೊಮ್ಮೆ ಕರಪತ್ರಗಳನ್ನು ಓದಿ ತಿಳಿಸುತ್ತಿದ್ದಳು. ಭಾಗೀರಥಿಬಾಯಿ ಅವರು ತಮ್ಮ ಹಾಸಿಗೆ ಒಳಗಡೆ ಕರಪತ್ರಗಳನ್ನು ಅಡಗಿಸಿಟ್ಟುಕೊಂಡು ಅವಶ್ಯವಿದ್ದಾಗ ಅವುಗಳನ್ನು ಮುರಗೋಡ ಮಹಾದೇವಿಗೆ ರೊಟ್ಟಿ ಕೊಡುವ ನೆಪದಲ್ಲಿ ಕರಪತ್ರಗಳನ್ನು ಕೊಡುತ್ತಿದ್ದುದು ಸಹ ಗಮನಾರ್ಹವಾದುದು. ಮಹಾದೇವಿಯ ಫೋಟೊ ಇಂದಿಗೂ ವಿಜಾಪುರದ ಇಂಚಗೇರಿ ಮಠದಲ್ಲಿದೆ.

ವಿಭಿನ್ನ ಬಗೆಯ ಚಳವಳಿ ಸತ್ಯಾಗ್ರಹಗಳಲ್ಲಿ ತೊಡಗಿದವರನ್ನು ಪೋಲೀಸರು ಬಂಧಿಸುತ್ತಿದ್ದರು. ಹಲವು ಬಾರಿ ಸತ್ಯಾಗ್ರಹಿಗಳು ಪೋಲೀಸರಿಂದ ತಪ್ಪಿಸಿಕೊಳ್ಳುತ್ತಿದ್ದರು. ಆಗ ಪೋಲೀಸರು ಅಂಥವರನ್ನು ಹುಡುಕಲು ಬೀದಿ ಬೀದಿಗಳಿಗೆ ಬರುತ್ತಿದ್ದುದುಂಟು. ಪೋಲೀಸರು ಬಂದ ಸುಳಿವು ನೀಡಿ ಸತ್ಯಾಗ್ರಹಿಗಳು ತಪ್ಪಿಸಿಕೊಳ್ಳುವಂತೆ ಮಾಡಲು ಮಹಿಳೆಯರು ತಮ್ಮದೇ ಆದ ವಿಧಿ-ವಿಧಾನಗಳನ್ನು ಬಳಸುತ್ತಿದ್ದುದು ಕಂಡುಬರುತ್ತದೆ. ಅವುಗಳೆಂದರೆ ಪೋಲೀಸರು ಕಂಡ ತಕ್ಷಣ ಜಗಳವಾಡುವುದು, ಕಾಯಿಲೆ ಬಂದಂತೆ ನರಳುವುದು, ಇಲ್ಲವೆ ಸಣ್ಣಮಕ್ಕಳಿಗೆ ಬೈಯುತ್ತಿದ್ದುದು. ಅಷ್ಟೇ ಅಲ್ಲದೆ ಸಂಜೆ ಹೊತ್ತಿಗೆಲ್ಲಾ ಸತ್ಯಾಗ್ರಹಿಗಳಿಗೆ ಸ್ತ್ರೀಯರಂತೆ ಅಲಂಕರಿಸಿ ಊರಿನಿಂದ ಊರಿಗೆ ಕಳುಹಿಸುತ್ತಿದ್ದ ವಿವರಗಳು ಸಹ ಇವೆ. ಕೆಲವು ಬಾರಿ ಬಾವಿಯಲ್ಲಿಯೂ ಅವಿತುಕೊಳ್ಳುವಂತೆ ಮಾಡುತ್ತಿದ್ದರು. ಇನ್ನೂ ವಿಚಿತ್ರವಾದದ್ದು ಎಂದರೆ ಬಾಣಂತಿಯ ಕೋಣೆಯಲ್ಲಿನ ಹೊರಸಿನ ಮೇಲೆ ಸತ್ಯಾಗ್ರಹಿಗಳನ್ನು ಮಲಗಿಸಿ ರಕ್ಷಿಸಿದ ಉದಾಹರಣೆಗಳೂ ಇಲ್ಲದಿಲ್ಲ. ಸತ್ಯಾಗ್ರಹಿಗಳು ದೊರೆಯದಿದ್ದಾಗ ಪೋಲೀಸರು ಮನೆ ಮನೆಗೆ ಹೋಗಿ ಹುಡುಕಿ ಅಲ್ಲಿದ್ದ ಮಹಿಳೆಯರಿಗೆ ವಿಚಿತ್ರ ಬಗೆಯ ಚಿತ್ರಹಿಂಸೆಗಳನ್ನು ಕೊಟ್ಟು, ಕೆಲವು ಬಾರಿ ಮಹಿಳೆಯರನ್ನು ಬೆತ್ತಲೆಗೊಳಿಸಿದಂಥ ಘಟನೆಗಳು ಜರುಗುತ್ತಲಿದ್ದವು. ಅಂತೆಯೇ ಅಶ್ಲೀಲ ಮಾತುಗಳಿಂದ ಬೈದು ಹೋಗುತ್ತಿದ್ದರು. ಇಂಥ ಘಟನೆಗಳಿಗೆ

ಆಧಾರವಾಗಿ ಶಂಕರಪ್ಪ ಬಿಡಿಗೇರನನ್ನು ಹಿಡಿಯುವಾಗ ಮುದುಕಿ ಸಿಪ್ಪಾಣಿಯ ಕಾಶಿಬಾಯಿ ಅವರನ್ನು ಉಲ್ಲೇಖಿಸಬಹುದು. ಮಹಿಳೆಯರು ತಮ್ಮ ಮಾನ, ಪ್ರಾಣ ಹೋಗುವ ಸಂದರ್ಭ ಬಂದರೂ ಸತ್ಯಾಗ್ರಹಿಗಳ ಸುಳಿವು ಕೊಡುತ್ತಿರಲಿಲ್ಲ. ಇಂಥ ಮಹಿಳೆಯರ ಬಗ್ಗೆ ಅನೇಕ ದಾಖಲೆಗಳಿದ್ದರೂ ಚರಿತ್ರೆಯಲ್ಲಿ ನಮೂದಾಗಿಲ್ಲ. ಇದನ್ನು ಸ್ತ್ರೀವಾದ ಪ್ರಶ್ನಿಸಿ ದಾಖಲೆಗಳನ್ನು ಬಳಸಿಕೊಳ್ಳುವಲ್ಲಿ ಮುಂದಾಗಿದೆ. ಆದರೆ ಕೆಲವು ದಾಖಲೆಗಳು ಮುಚ್ಚಿಹೋಗಿವೆ. ಅಂಥ ಎಲ್ಲ ಮಾಹಿತಿಗಳನ್ನು ಒರೆಗೆ ಹಚ್ಚಿ ಅವುಗಳನ್ನು ಚರಿತ್ರೆಯಲ್ಲಿ ಸೇರಿಸಬೇಕಾಗಿದೆ.

೧೯೨೨ರಲ್ಲಿ ಹುಬ್ಬಳ್ಳಿಯಲ್ಲಿ ಉಮಾಬಾಯಿ ಕುಂದಾಪುರ ಅವರು 'ಭಗಿನಿ' ಮಂಡಳಿ ಸ್ಥಾಪಿಸಿದ್ದರು. ಈ ಭಗಿನಿ ಮಂಡಳಿ ಹಾವೇರಿಯ ಇಂದಿರಾಬಾಯಿ ಒರೆ, ಸುಮತಿಬಾಯಿ ಜೋಗಳೇಕರ, ಗಂಗಾಬಾಯಿ ದಿಡ್ಡಿ ಇತರೆ ಮಹಿಳೆಯರಿಗೆ ಪ್ರೇರಣೆಯಾಯಿತು. ೧೯೩೦ರಲ್ಲಿ ಕೃಷ್ಣಬಾಯಿ, ಉಮಾಬಾಯಿ ಕುಂದಾಪುರ ಅವರು ಧಾರವಾಡದ ಜನತೆಗೆ ಚಳವಳಿ ಸೇರುವಂತೆ ಸಭೆ ನಡೆಸಿದರು. ಈ ಸಭೆಗೆ ಬಂದ ಮಹಿಳೆಯರು ಎಲ್ಲ ಸತ್ಯಾಗ್ರಹದ ನಿಧಿಗಾಗಿ ತಮ್ಮ ಆಭರಣಗಳನ್ನು ನೀಡಿದ್ದು ಕಂಡುಬಂದಿರುತ್ತದೆ. ೧೯೩೨ರಲ್ಲಿ ಹುಲಿಮನೆಯಲ್ಲಿ ಮಹಿಳಾ ಪರಿಷತ್ತಿನ ಸಭೆ ಕರೆದು ಸಭೆಯ ಅಧ್ಯಕ್ಷೆಯಾಗಿ ತಾರಾಬಾಯಿ ಪೈ ಅವರು ಇದ್ದರು. ೧೯೩೪ರಲ್ಲಿ ಲೀಲಾವತಿ ಮಾಗಡಿ ಅವರು 'ಹರಿಜನ ಬಾಲಿಕಾಶ್ರಮ' ಸ್ಥಾಪಿಸಿದರು. ಸ್ತ್ರೀ ಪುರೋಗಮನವನ್ನು ಆಶಿಸಿ 'ಅಕ್ಕಮಹಾದೇವಿ ಜಯಂತಿ'ಯನ್ನು ಆಚರಣೆಗೆ ತಂದದ್ದು ವಿಶೇಷ. ೧೯೩೭ರಲ್ಲಿಯೇ ರೈತ ಮಹಿಳೆಯರು ಒಟ್ಟಾಗಿ ಸೇರಿ "ಮಹಿಳಾ ಮಂಡಳಿ"ಯನ್ನು ಸ್ಥಾಪಿಸಿಕೊಂಡು ಅದರ ಅಧ್ಯಕ್ಷೆಯನ್ನಾಗಿ ಬಸವ್ವ ಅಗಸರನ್ನು ಆಯ್ಕೆ ಮಾಡಿಕೊಂಡಿದ್ದರು.

ಅನ್ನಪೂರ್ಣದೇವಿ ಎಂಬಾಕೆ ಸಂಯುಕ್ತ ಕರ್ನಾಟಕ, ಲೋಕಮತ, ಮಂಗಳೂರಿನ ಸ್ವಾತಂತ್ರ್ಯಭಾರತ ಪತ್ರಿಕೆಗಳಲ್ಲಿ "ಮಹಿಳಾಲೋಕ" ಎಂಬ ಶೀರ್ಷಿಕೆಯಲ್ಲಿ ಮಹಿಳೆಯರನ್ನು ಉದ್ದೇಶಿಸಿ ಲೇಖನಗಳನ್ನು ಬರೆಯುತ್ತಿದ್ದರು. ಅನ್ನಪೂರ್ಣದೇವಿಯ ಲೇಖನಗಳನ್ನು ಓದಿದ ಆರ್.ಕಲ್ಯಾಣಮ್ಮ, ಸಾವಿತ್ರಿ ಅವರು ಪ್ರಶಂಸಾ ಪತ್ರಗಳನ್ನು ಬರೆದದ್ದೂ ಇದೆ. ಕಮಲಾದೇವಿ ಚಟ್ಟೋಪಾಧ್ಯಾಯರನ್ನು ಆಹ್ವಾನಿಸಿ ಮಹಿಳೆಯರ ಸಮಸ್ಯೆಗಳೂ, ರಾಷ್ಟ್ರಕಾರಣವೂ ಎಂಬ ವಿಷಯದ ಮೇಲೆ ಮಾತನಾಡಿಸಿದ ಉದಾಹರಣೆ ಸಹ ಇದೆ. ಚಳವಳಿಯ ವ್ಯಾಪಕತೆಯ ಹಿನ್ನಲೆಯಲ್ಲಿ ಆಗಾಗ ಬೇರೆ ಬೇರೆ ಊರುಗಳಿಗೆ ಹೋಗಿ ಮಹಿಳೆಯರೇ ಸಭೆ-ಸಮಾರಂಭಗಳನ್ನು ಏರ್ಪಡಿಸುತ್ತಿದ್ದರು. ಹಾಲಗಿಗೆ ಸಿದ್ದಮ್ಮ ಮೈಲಾರ ಅವರು ಆಗಾಗ ಇಂಥ ಸಭೆಗಳಿಗೆ ಹೋಗುತ್ತಿದ್ದ ದಾಖಲೆಗಳು ಇವೆ. ಕೃಷ್ಣಬಾಯಿ ಅವರು ಅಂಕೋಲೆಯ ಹಳ್ಳಿಯ ಸ್ತ್ರೀಯರ ಜೊತೆ ಸರಳವಾಗಿದ್ದು, ಊಟ ತಿಂಡಿ ಪಾನೀಯಗಳನ್ನು ಸೇವಿಸುತ್ತಿದ್ದರು. ಕೃಷ್ಣಬಾಯಿ ಅವರು ಇಷ್ಟು ಸಲಿಗೆಯಿಂದ ಹಿಚ್ಚಡದ ಲಕ್ಷ್ಮಿ, ಜಂಬುಗೋಡ ಸಾಂತಮ್ಮ, ವಾಸರೆ ಚಂದ್ರಿ ಮೊದಲಾದವರು ಅವರ ಗೆಳತಿಯರಾದರು. ಇಂಥ ಗೆಳೆತನಗಳು ಇತರೆ ಮಹಿಳೆಯರಿಗೂ ಪ್ರೋತ್ಸಾಹ ಕೊಟ್ಟು ಚಳವಳಿಯಲ್ಲಿ ಭಾಗವಹಿಸುವಂತೆ ಮಾಡಿದವು.

ಸ್ವಾತಂತ್ರ್ಯ ಹೋರಾಟದ ಘಟ್ಟದಲ್ಲಿ ೧೯೪೨ರ 'ಚಲೇಜಾವ್ ಚಳವಳಿ' ಪ್ರಧಾನವಾದದ್ದು. ಈ ಚಳವಳಿಯಲ್ಲಿ ವಿದೇಶಿ ಬಟ್ಟೆಗಳ ಬಹಿಷ್ಕಾರ, ಪಿಕೆಟಿಂಗ್, ಕಛೇರಿಗಳ ಮೇಲೆ ದಾಳಿ, ಅಂಚೆ-ತಂತಿ ಇಲಾಖೆಗಳ ಲೂಟಿ, ರೈಲ್ವೆ ಹಳಿ ತಪ್ಪಿಸುವ ಹಲವು ಬಗೆಯ ವಿಧಾನಗಳನ್ನು ಬಳಸಿಕೊಂಡರು. ಮೀನಾಕ್ಷಿ ಕೇಶವರಾವ್ ಗುಂಜಕರ ನಿತ್ಯವೂ ಪ್ರಭಾತಫೇರಿ ಪಿಕೆಟಿಂಗ್ ಮಾಡಿ ಬಂಧಿತರಾಗಿ ಏಳು ತಿಂಗಳು ಹಿಂಡಲಗಿ ಜೈಲಿನಲ್ಲಿದ್ದದ್ದು

ಗಮನಾರ್ಹ. ಶಾಂತಬಾಯಿ ವೆಂಕಟೇಶ ಮಠದ ವಿದ್ಯಾರ್ಥಿನಿಯಾಗಿ ಮುಂದಾಳತ್ವದಲ್ಲಿ ಮೂವತ್ತು ವಿದ್ಯಾರ್ಥಿನಿಯರು ಇದ್ದರು. ಇವರೆಲ್ಲಾ ಬುಲೆಟಿನ್ ಹಂಚುವ, ಚರ್ಚಿಲರ ಪ್ರತ್ಥಳಿ ಸುಡುವ, ವಿದೇಶಿ ಬಟ್ಟೆಗಳ ದಹನ ಮಾಡಿ ಕರಪತ್ರಗಳ ವಿಲೇವಾರಿ ಮೊದಲಾದವುಗಳನ್ನು ಮಾಡುತ್ತಿದ್ದಾಗ ಬಂಧಿತರಾದರು. ಅಂಬಕ್ಕ ಬಳಿಗಾರ ತಾರ ತಂತಿ ಕತ್ತರಿಸುವ, ಕಂಬ ಕೀಳುವ, ರೈಲ್ವೆ ಡಬ್ಬಿಗಳ ಲೂಟಿ, ಸೇಂದಿ ಅಂಗಡಿಯ ಮುಂದೆ ಪಿಕೆಟಿಂಗ್, ಮದ್ದು ತಯಾರಿಸುವುದು, ಭಾಷಣ ಇತ್ಯಾದಿ ಕಾರ್ಯಗಳಲ್ಲಿ ನಿರತಳಾಗಿದ್ದಳು. ಗಂಗೂಬಾಯಿ ಕಿನರೆ ಪ್ರಭಾತಫೇರಿ ಮಾಡುವುದರ ಮುಖೇನ ಬಂಧನಕ್ಕೆ ಒಳಗಾದಳು. ಹೀಗೆ ಹತ್ತು ಹಲವು ಉದಾಹರಣೆಗಳಿವೆ.

ಗೋಕಾಕ್ ತಾಲೂಕಿನಲ್ಲಿ ಚಲೇಜಾವ್ ಚಳವಳಿ ಉಗ್ರವಾಗಿತ್ತು. ಈ ಚಳವಳಿಯಲ್ಲಿ ತಾಲೂಕು ಕಚೇರಿ, ಫೌಜುಧಾರ, ಸಬ್ ರಿಜಿಸ್ಟ್ರಾರ್ ಕಚೇರಿಗಳು ಎಲ್ಲವೂ ಒಂದೇ ಕಟ್ಟಡದಲ್ಲಿ ಇದ್ದವು. ಈ ಕಚೇರಿಗಳ ಮೇಲೆ ದಾಳಿಮಾಡಿ ಅಲ್ಲಿರುವ ಕಾಗದ-ಪತ್ರಗಳನ್ನು ಹರಿದು ಹಾಕುವ ಕಾರ್ಯಕ್ರಮವಿತ್ತು. ಈ ಕಾರ್ಯವನ್ನು ಮಹಿಳೆಯರೇ ಮಾಡಿದ್ದು ಗಮನಾರ್ಹ. ಈ ಕಾರ್ಯಕ್ಕೆ ನಿಯೋಜಿಸಿದ ಮಹಿಳೆಯರೆಂದರೆ ಅಕ್ಕತಂಗೇರಹಾಳದ ಶ್ರೀಮತಿ ಗಂಗವ್ವಾ ಹೊಳೆಯಾಚೆ, ತಂಗೆವ್ವೆ ಬಡಿಗೇರ, ಚನ್ನಬಸವ್ವ ಭಡಕರ, ಬಾಳವ್ವ ಬೋರಗಲ್ಲ, ಕಾಶವ್ವ ಹೊಸಮನಿ, ಸರಸ್ವತಿಬಾಯಿ ಜಾಗುಲೆ, ನಿಂಗವ್ವ ಚಿಕ್ಕೋಡಿ ಮೊದಲಾದವರು. ಇವರೆಲ್ಲಾ ಕಚೇರಿಗಳ ಮೇಲೆ ದಾಳಿ ಮಾಡಿ ಇಪ್ಪತ್ತೊಂದು ಪ್ರಕರಣಗಳನ್ನು ಹರಿದು ಚೆಲ್ಲಿದರು.

ಚಳವಳಿಯಲ್ಲಿ ನಿರತರಾದ ಪುರುಷರು ಬಂಧಿತರಾಗಿ ಜೈಲಿನಲ್ಲಿದ್ದರೂ ಮಹಿಳೆಯರು ತಮ್ಮ ಮನೆಯ ಧಾರ್ಮಿಕ, ಆರ್ಥಿಕ ಇತರ ಪ್ರಧಾನ ಕಾರ್ಯಗಳನ್ನು ತಾವೇ ಮುಂದುವರಿಸಿಕೊಂಡು ಬರುತ್ತಿದ್ದರು. ಅಂಥವರಲ್ಲಿ ವಿಜಾಪುರ ಜಿಲ್ಲೆಯ ಮಹಿಳೆಯರೂ ಪ್ರಧಾನರಾಗಿದ್ದು ಅವರುಗಳೆಂದರೆ ಸೀತಮ್ಮ, ಕಾಳಮ್ಮ, ಶಾಂತಮ್ಮ, ಶಿವಲೀಲಾ, ಅನ್ನಪೂರ್ಣ, ಗಿರಿಜವ್ವ, ನಾಗವ್ವ, ಪಾರ್ವತಿ, ಕಸ್ತೂರಿ, ಮಹಾದೇವಿ, ಸುಭದ್ರ, ಈರವ್ವ, ಗಿರಿಜವ್ವ, ಸಿದ್ದವ್ವ ಮೊದಲಾದವರು ತಮ್ಮ ಗಂಡಂದಿರು ಜೈಲಿಗೆ ಹೋಗಿದ್ದಾಗ ಮೂರು-ನಾಲ್ಕು ವರ್ಷ ತಾವೇ ಮುನ್ನೂರು ಎಕರೆ ಭೂಮಿಯನ್ನು ಹದ ಮಾಡಿ, ಉತ್ತಿ ಬಿತ್ತಿ ಕಳೆ ತೆಗೆದು, ರಾಶಿ ಮಾಡಿ ತಮ್ಮ ಬೆಳೆಗಳನ್ನು ಮಠಕ್ಕೆ ನೀಡಿದ್ದರು. ಜೊತೆಗೆ ಮಠದಲ್ಲಿ ಕಾಲ ಕಾಲಕ್ಕೆ ನಡೆಸುವ ಸಾಮೂಹಿಕ ಆರತಿ, ದಾಸ ಬೋಧನೆಗಳ ಪಠಣ, ಶಿಸ್ತನ್ನು ಕಾಪಾಡಿಕೊಂಡು ಬಂದಿದ್ದರು. ಅಲ್ಲದೆ ಭೂಗತರಾದವರಿಗೆ ರೊಟ್ಟಿಗಳನ್ನು ಮಾಡಿ ಕಳುಹಿಸುತ್ತಿದ್ದದ್ದು ಉಂಟು. ತಿಮ್ಮಕ್ಕಜ್ಜಿ ಎಂಬಾಕೆ ತನ್ನ ನಾಲ್ಕು ಮಕ್ಕಳಿಗೂ ಚಳವಳಿಗೆ ಹೋಗುವಂತೆ ಪ್ರೋತ್ಸಾಹ, ಪ್ರೇರಣೆ ನೀಡಿದ್ದಳು. ಒಟ್ಟಾರೆ ಮುಂಬಯಿ ಕರ್ನಾಟಕದ ಮಹಿಳೆಯರಿಗೆ ಪ್ರೇರಣೆಯಾಗಿದ್ದ ಮಹಿಳೆಯರಲ್ಲಿ ಪ್ರಮುಖರೆಂದರೆ ಚೂಡಾಮಣಿ, ತುಂಗಭಾಯಿ ಪನ್ನಿ, ಸರಸ್ವತಿ, ರಮಾಬಾಯಿ, ಗಂಗಾಬಾಯಿ ಎಂ. ಮಿರ್ಜಾನಕರ, ಭವಾನಿಬಾಯಿ ಕಾನಗೋಡ, ಸೀತಾಬಾಯಿ ರಾಮಚಂದ್ರ ಮಡಗಾಂವಕರ, ಶಾಂತಬಾಯಿ ಕೊಪ್ಪಿಕರ, ಶಾಂತದೇವಿ ಮಾಳವಾಡ, ಉಮಾಬಾಯಿ ಕುಂದಾಪುರ, ಕೃಷ್ಣಬಾಯಿ ಪಣಜಿಕರ ಮೊದಲಾದವರು. ಈ ಮಹಿಳೆಯರ ಕುರಿತು ಸಾಕಷ್ಟು ಆಕರ ಸಾಮಾಗ್ರಿಗಳು ಲಭ್ಯವಾಗಿಲ್ಲ. ಆದರೆ ಸ್ತ್ರೀವಾದಿ ನೆಲೆಯಿಂದ ಮುಂಬಯಿ ಕರ್ನಾಟಕದ ಮಹಿಳೆಯರ ಸ್ವಾತಂತ್ರ್ಯ ಹೋರಾಟದ ಅಧ್ಯಯನದ ಸಾಧ್ಯತೆಗಳನ್ನು ಪರಿಶೀಲಿಸಲು ಅವಕಾಶವಿದೆ.

## ೨. ಮದ್ರಾಸ್ ಕರ್ನಾಟಕದ ಮಹಿಳಾ ಸ್ಪಂದನೆ

ರಾಷ್ಟ್ರದ ಸ್ವಾತಂತ್ರ್ಯ ಚಳವಳಿಗೆ ಈ ಭಾಗದ ಮಹಿಳೆಯರ ಪಾತ್ರವು ಸಹ ಪ್ರಧಾನವಾದದ್ದು. ಸ್ವಾತಂತ್ರ್ಯಪೂರ್ವ ಮದ್ರಾಸ್ ಕರ್ನಾಟಕ ಬಳ್ಳಾರಿ, ದಕ್ಷಿಣ ಕನ್ನಡ, ಉಡುಪಿ, ಮಂಗಳೂರು ಹಾಗೂ ಆಂಧ್ರದ ಕೆಲವು ಪ್ರದೇಶಗಳನ್ನು ಒಳಗೊಂಡಿತ್ತು. ಈ ಭಾಗದಲ್ಲಿ ವಸಾಹತುಶಾಹಿ ಆಳ್ವಿಕೆಯ ವಿರೋಧ ಚಳವಳಿಯ ಜೊತೆಗೆ ಸ್ತ್ರೀಪರ ಚಿಂತನೆ ಸುಧಾರಣೆಗಳು ಸಹ ನಡೆದಿದ್ದವು. ಗಾಂಧಿ ಅವರ ರಚನಾತ್ಮಕ ಅಂಶಗಳನ್ನು ತಮ್ಮ ಜೀವನದಲ್ಲಿ ಮಹಿಳೆಯರು ಅಳವಡಿಸಿಕೊಂಡಿದ್ದರು. ಕಮಲಾದೇವಿ ಚಟ್ಟೋಪಾಧ್ಯಾಯ ಅವರು ಬಳ್ಳಾರಿಗೆ ಆಗಾಗ ಬರುತ್ತಲೇ ಇದ್ದರು. ಹೀಗೆ ಬಂದಾಗ ಶಾಲೆಗಳಿಗೆ ಭೇಟಿ ನೀಡಿ, ವಿದ್ಯಾರ್ಥಿಗಳು ಚಳವಳಿ ಸೇರುವಂತೆ ಪ್ರೋತ್ಸಾಹ ಕೊಡುತ್ತಿದ್ದು, ಮಹಿಳೆಯರಿಗಾಗಿ ಸರ್ಕ್ಯುಲೇಟಿಂಗ್ ಲೈಬ್ರರಿಯನ್ನು ಆರಂಭಿಸಿದ್ದರು. ೧೯೩೪ರಲ್ಲಿ ಹರಿಜನ ಬಾಲಕಿಯರಿಗಾಗಿ ಹಾಸ್ಟೆಲ್‌ನ್ನು ತೆರೆದದ್ದು ಉಂಟು. ಮಂಗಳೂರಿನ ಮಹಿಳೆಯರು ಸ್ವರಾಜ್ಯ ನಿಧಿಗಾಗಿ ತಮ್ಮ ಆಭರಣಗಳನ್ನು ನೀಡಿದ್ದರು. ಮದ್ರಾಸ್ ಕರ್ನಾಟಕದಲ್ಲಿಯೂ ವಿದ್ಯಾರ್ಥಿನಿಯರ ಪಾತ್ರ ಪ್ರಧಾನವಾಗಿತ್ತು. ಅಂಥ ವಿದ್ಯಾರ್ಥಿನಿಯರೆಂದರೆ ಬಳ್ಳಾರಿ ಜಿಲ್ಲೆಯ ರತ್ನ, ಕಮಲ, ಸುಬ್ಬು, ವೆಂಕು ಮೊದಲಾದವರ ಪ್ರಭಾವದಿಂದ ಇತರೆ ಬಾಲಕಿಯರೂ, ನಲವತ್ತಕ್ಕೂ ಹೆಚ್ಚು ಗೃಹಿಣಿಯರು ಚಳವಳಿಗೆ ಸೇರಿಕೊಂಡರು. ಇವರೆಲ್ಲಾ ಸೇರಿಕೊಂಡು ಪ್ರತಿ ಸಂಜೆ ಐದು ಗಂಟೆಗೆ ಪ್ರಭಾತಫೇರಿ ಮಾಡುತ್ತಾ ಕ್ರಾಂತಿಕಾರಿ ಗೀತೆಗಳನ್ನು ಬೀದಿಗಳಲ್ಲೂ ಹಾಡಿಕೊಂಡು ಹೋಗುತ್ತಿದ್ದರು. ಇಂಥ ಪ್ರಭಾತಫೇರಿ ಊರಿನ ಎಲ್ಲ ಜನರಲ್ಲಿ ಜಾಗೃತಿ ಉಂಟುಮಾಡುತ್ತಿತ್ತು. ಉಡುಪಿಯ ಚಾಂದ್‌ಬೀಬಿಯು ಸ್ವತಃ ತಾನೇ ತನ್ನ ಬಟ್ಟೆಯನ್ನು ನೂಲಿಕೊಂಡು ಧರಿಸಿ ಇತರೆ ಮಹಿಳೆಯರಿಗೂ ನೂಲುವುದನ್ನು ಹೇಳಿಕೊಡುತ್ತಿದ್ದಳು. ಮುಸ್ಲಿಂ ಮಹಿಳೆಯರಲ್ಲಿ ಅಹಿಂಸಾತ್ಮಕ, ಅಸಹಕಾರ, ಖಿಲಾಫತ್ತಿನ ವಿಷಯವನ್ನು ಪ್ರಚಾರಪಡಿಸಲು 'ಬಿ ಅಮ್ಮ' ಎಂಬಾಕೆ ಮಂಗಳೂರಿಗೆ ಬಂದಳು. ಅಂಥ ಸಂದರ್ಭದಲ್ಲಿ ಚಾಂದ್-ಬೀಬಿ ಮುಸ್ಲಿಂ ಸ್ತ್ರೀಯರ ಸಭೆ ಮಾಡಿ ಅವರಲ್ಲಿಯೂ ಚಳವಳಿ ಕುರಿತ ಜಾಗೃತಿಯನ್ನು ಬೆಳೆಸಿದರು.

ರಾಧ ಕರ್ನಾಡರ ಮನೆಯಲ್ಲಿ ರಾಷ್ಟ್ರೀಯ ಶಾಲೆ, ತಿಲಕ ಮಹಾವಿದ್ಯಾಲಯಗಳು ಆರಂಭವಾಗಿದ್ದವು. ರಾಧ ಕರ್ನಾಡರ ಸಹೋದರಿ 'ಸುಗುಣಾ' ಮನೆ ಮನೆಗೆ ಹೋಗಿ ಖಾದಿ ಪ್ರಚಾರ ಮಾಡುತ್ತ ಸರಕಾರಿ ಶಾಲೆಗಳನ್ನು ಬಿಟ್ಟು ಬರುವಂತೆ ಹೇಳುತ್ತಿದ್ದರು. ತಮ್ಮ ತಾಯಿಯ ನೆರವಿನಿಂದ 'ಮಹಿಳಾ ಸಭಾ' ಸ್ಥಾಪಿಸಿ, ವಿಧವಾ ವಿವಾಹಗಳನ್ನು ಪ್ರೋತ್ಸಾಹಿಸಿದ್ದು ಗಮನಾರ್ಹವಾದುದು. ಈ ಘಟ್ಟದಲ್ಲಿ ಖಾದಿ ವ್ಯಾಪಕವಾಗಿ ಪ್ರಚಾರಗೊಂಡಿತ್ತು. ಬಂಟವಾಳದ ಪ್ರತಿ ಮನೆಯ ಮಹಿಳೆಯರೆ ಚರಕ ನೂಲುತ್ತಿದ್ದರು. ಕನಿಷ್ಟ ಮೂರು ಚರಕಗಳಿಲ್ಲದ ಮನೆಗಳೇ ಇರುತ್ತಿರಲಿಲ್ಲ. ಪೆದ್ದ ಕಡಬೂರಿನಲ್ಲಿ ಭಾರದ್ವಜ ಆಶ್ರಮ ಸ್ಥಾಪನೆಯಾಯಿತು. ಇಲ್ಲಿ ಶ್ರೀಮತಿ ರಾಮಲಿಂಗಮ್ಮನವರ ಸಹಾಯದಿಂದ ಖಾದಿ ಬಟ್ಟೆ, ಕಾಗದ ತಯಾರಿಸುವ ಘಟಕಗಳನ್ನು ಆರಂಭಿಸಲಾಯಿತು. ಇಂಥ ದಾಖಲೆಗಳು ಅಂದು ಖಾದಿ ವ್ಯಾಪಕವಾಗಿ ಪ್ರಚಾರದಲ್ಲಿ ಇತ್ತೆಂಬುದನ್ನು ಸಾಬೀತು ಪಡಿಸುತ್ತವೆ. ಜೊತಗೆ ಮಹಿಳಾ ಪ್ರಾತಿನಿಧ್ಯತೆಯನ್ನು ಉದಾಹರಿಸುತ್ತವೆ.

ಈ ಭಾಗದಿಂದ ೧೯೨೪ರ ಬೆಳಗಾವಿ ಅಧಿವೇಶನಕ್ಕೆ ಟಿ.ಬಿ.ಜಯಲಕ್ಷ್ಮಿದೇವಿ ಅವರು ಹೋಗಿದ್ದರು. ನಂತರ ಅಧಿವೇಶನದಿಂದ ಮರಳಿ ಬಂದು ತಮ್ಮ ಮನೆಯಲ್ಲಿ ಹರಿಜನ ಬಾಲಕನನ್ನು ಸಲಹಿದರು. ಇವರು

ಚಳವಳಿ ಬಗ್ಗೆ ಪ್ರಚಾರ ಮಾಡಲು ಬಳ್ಳಾರಿ ಜಿಲ್ಲೆಯ ಎಲ್ಲಾ ಪ್ರದೇಶಗಳಿಗೂ ಹೋಗುತ್ತಿದ್ದುದು ಕಂಡುಬರುತ್ತದೆ. ಒಮ್ಮೆ ಹಡಗಲಿ ತಾಲೂಕಿನ ಜನರು ಇವರನ್ನು ಬಹಿಷ್ಕರಿಸಿದರು. ಆಗ ಜಯಲಕ್ಷ್ಮಿಯವರು ತಮ್ಮ ಕಾರ್ಯ ವೈಖರಿಯ ಬಗ್ಗೆ ಜನರಿಗೆ ತಿಳುವಳಿಕೆ ನೀಡಿದ್ದು ಇದೆ. ಉಪ್ಪಿನ ಸತ್ಯಾಗ್ರಹದಲ್ಲಿ ಮಂಗಳೂರಿನ ಮೈದಾನ ಸತ್ಯಾಗ್ರಹ ಸಮರದ ಕುರುಕ್ಷೇತ್ರವಾಗಿತ್ತು. ಸ್ವಯಂಸೇವಕ-ಸೇವಕಿಯರು ಕೈಯಿಂದ ಉಪ್ಪು ಕಸಿದುಕೊಳ್ಳುತ್ತಿದ್ದಾಗ, ರತ್ನಬಾಯಿಯ ಮಗ ಕೈಯಲ್ಲಿನ ಉಪ್ಪನ್ನು ಪೋಲೀಸರಿಗೆ ಹೆದರಿ ಬಿಟ್ಟು ಓಡಿ ಬಂದಿದ್ದ. ಈ ಸುದ್ದಿ ತಿಳಿದ ರತ್ನಬಾಯಿ ತಾನೇ ಸ್ವಯಂ ಸೇವಕಿಯಾದಳು. ಸುಂದರಬಾಯಿ ವಿದೇಶಿಬಟ್ಟೆಯ ರಾಶಿಗೆ ಜರತಾರಿ ಸೀರೆಯನ್ನು ಹಾಕಿ ಸುಟ್ಟಳು. ೧೯೩೦ರಲ್ಲಿ ಉಡುಪಿಯಿಂದ ಅಂಬಾಬಾಯಿ ಪೈ, ಗಿರಿಜಾಬಾಯಿ ನಡೆದುಕೊಂಡು ಮಲ್ಪೆ ಸಮುದ್ರಕ್ಕೆ ಬಂದು ಉಪ್ಪನ್ನು ತಯಾರಿಸಿದ್ದರು. ಇವರುಗಳ ಜೊತೆ ಮನೋರಮಾಬಾಯಿ ಎಂಬಾಕೆ ಸಹ ಇದ್ದಳು. ಗಿರಿಜಾಬಾಯಿ ಅವರು ದೊಡ್ಡ ದೊಡ್ಡ ಜವಳಿ ಅಂಗಡಿಗಳ ಎದುರು ಪಿಕೆಟಿಂಗ್ ಮಾಡಿ, ಸತ್ಯಾಗ್ರಹಕ್ಕೆ ಮಹಿಳೆಯರು ಸೇರುವಂತೆ ಪ್ರೋತ್ಸಾಹ ಕೊಡುತ್ತಾ ಮಹಿಳೆಯರನ್ನು ನೊಂದಾಯಿಸಿಕೊಳ್ಳುತ್ತಿದ್ದರು. ಹೀಗೆ ಚಳವಳಿಗೆ ಸೇರುವಂತೆ ಮಾಡಲು ಮನೆಮನೆಗೆ ಹೋಗುತ್ತಿದ್ದರು. ಒಮ್ಮೆ ಬಂಟ್ವಾಳದಲ್ಲಿ ರಂಗರಾವ್ ತಲಚೇರ್‌ಕರ ಅಂಬಾಬಾಯಿ ಕಿಲ್ಪಾಡಿ ಮನೆಗೆ ಹೋಗಿದ್ದರು. ಆಗ ಅರವತ್ತು ವರ್ಷದ ಮುದುಕಿ ಅಂಬಾಬಾಯಿ ತಾನೇ ಚಳವಳಿಗೆ ಸೇರಿ, ಕಾಯ್ದೆಭಂಗ ಚಳವಳಿಯಲ್ಲಿ ಬಂಧಿತಳಾಗಿ ನಾಲ್ಕು ತಿಂಗಳ ಶಿಕ್ಷೆಗೆ ಒಳಗಾದ ಉದಾಹರಣೆ ಇದೆ. ಇಂಥ ಉದಾಹರಣೆಗಳಿಂದ ಮಹಿಳೆಯರು ಚಳವಳಿ ಸೇರಲು ಹೇಗೆ ಮುಂದೆ ಬರುತ್ತಿದ್ದರು ಎಂದೂ ಅವರ ದೇಶಾಭಿಮಾನದ ಉತ್ಕಟತೆ ಯಾವ ಬಗೆಯದು ಎಂಬುದನ್ನು ಅರಿಯಬಹುದು. ಅರವತ್ತು ವರ್ಷದ ಮುದುಕಿಯೋರ್ವಳು ಇತರೆ ಮಹಿಳೆಯರಿಗೂ ಪ್ರೇರಣೆಯಾ[illegible] ಹೆಚ್ಚಿನ ಸಂಖ್ಯೆ[illegible]ಲ್ಲಿ ಅ[illegible]ು ಭಾಗವಹಿಸುವ[illegible] ಆಗಿದ್ದು ಪ್ರಧಾನವಾದದ್ದು.

ಟಿ.ಬಿ.ಜಯಲಕ್ಷ್ಮಿ ಅ[illegible] ಹೊಸಪ[illegible]ಟೆಯಲ್ಲಿ ಕಾಯ್ದೆಭಂಗ ಮಾಡಿ ವೆಲ್ಲೂರಿನ ಜೈಲು ಸೇರಿದರು. ಶ್ರೀಮತಿ ಅಧಿಕಾರಿ ಅವರು [illegible]ರಿನಲ್ಲಿ ಮನೋರಮಾ, ಸುಶೀಲಾ ಪೈ, ತಾರಾಬಾಯಿ ಕುಂದಾಪುರದಲ್ಲಿ ವೈಯಕ್ತಿಕ ಚಳವಳಿ ಮಾಡಿ[illegible] ಸ್ವಾತಂತ್ರ್ಯ ಚಳವಳಿಯನ್ನು ಹೇಗೆ ಆಚರಿಸಬೇಕು ಇತರೆ ದೇಶಗಳಲ್ಲಿ ಸ್ವಾತಂತ್ರ್ಯ ಕುರಿತ ಚಳವ[illegible] ಹೇಗೆ ಇರುತ್ತವೆ ಎಂದು ತಿಳಿಸಲು ತರಗತಿಗಳನ್ನು ಸಹ ನಡೆಸುತ್ತಿದ್ದರು. ೧೯೩೬ರಲ್ಲಿ ಅಖಿಲಭ[illegible] ಕಾಂಗ್ರೆ[illegible]ನ ಸ್ವರ್ಣ ಮಹೋತ್ಸವವನ್ನು ಹರಪನಹಳ್ಳಿಯಲ್ಲಿ ಏರ್ಪಡಿಸಿದ್ದರು. ಆಗ ಕಮಲಾದೇವಿ ಅ[illegible]ವ ಸಮತಾವಾದ, ಸಮಾಜವಾದದ ಬಗ್ಗೆ ಪಾಠ ಮಾಡಿಸಿ ಚೀನಾ, ರಷ್ಯಾ, ತುರ್ಕಿಗಳಲ್ಲಿ ಸ್ವಾತಂತ್ರ್ಯ ಚಳವಳಿ ಹೇಗೆ ಯಶಸ್ವಿಯಾಗಿದೆ ಎಂಬುದನ್ನು ಕುರಿತು ಪುಸ್ತಕ ಬಿಡುಗಡೆ ಮಾಡಿದ್ದರು. ಇಂಥ ಪುಸ್ತಕಗಳು ಸಹ ಚಳವಳಿಗೆ ಪ್ರೇರಣೆಯಾಗುತ್ತಿದ್ದವು.

೧೯೩೭ರಲ್ಲಿ ಕಮಲಾದೇವಿ ಅವರು ಹೈಸ್ಕೂಲ್ ವಿದ್ಯಾರ್ಥಿಗಳ ಸಭೆ ಕರೆದು ವಿದ್ಯಾರ್ಥಿ ಸಂಘವನ್ನು ಸ್ಥಾಪಿಸಿದ್ದರು. ಆ ಸಂಘದ ಕಾರ್ಯದರ್ಶಿಯನ್ನಾಗಿ ಅಲಬೂರು ನಂಜಪ್ಪನನ್ನು ನೇಮಿಸಿದ್ದು ಗಮನಾರ್ಹ. ಕೊಟ್ಟೂರಿನಲ್ಲಿ ಕರ್ನಾಟಕ ಉಚಿತ ವಾಚನಾಲಯವನ್ನು ಆರಂಭಿಸಿದ್ದರು. ೧೯೪೦ರಲ್ಲಿ ಹರಪನಹಳ್ಳಿಯ ವಸ್ತ್ರಕಟ್ಟಿ ಚೆನ್ನಬಸಮ್ಮ ಸಹ ಬಂಧಿತರಾದರು. ಹೊಸಪೇಟೆಯಲ್ಲಿ ಮತ್ತಿಹಳ್ಳಿ ಸುಂದರಮ್ಮ, ಆಕೆಯ ಮಗಳು ವನಜಾಬಾಯಿ ಅವರುಗಳು ಪ್ರತಿದಿನ ಪ್ರಭಾತಫೇರಿ, ಖಾದಿ ಧರಿಸುವ ಕಾರ್ಯಕ್ರಮಗಳನ್ನು ಕೈಗೊಂಡಿದ್ದರು.

ಈ ಭಾಗದಲ್ಲಿಯೂ ಸತ್ಯಾಗ್ರಹಿಗಳು ಬಂಧಿತರಾಗಿ, ಜೈಲಿನಲ್ಲಿದ್ದಾಗ ಗೃಹಿಣಿಯರೇ ಸಂಸಾರದ ಭಾರ ಹೊತ್ತು ಮಕ್ಕಳನ್ನು ಬೆಳೆಸಿಕೊಂಡು ವಿಭಿನ್ನ ಸಮಸ್ಯೆಗಳನ್ನು, ನಿಂದನೆ ಅಪಮಾನಗಳನ್ನು ಅನುಭವಿಸಿದ್ದಾರೆ. ಪೋಲೀಸರು ಸತ್ಯಾಗ್ರಹಿಗಳನ್ನು ಹುಡುಕಲು ಮನೆ ಮನೆಗಳಿಗೂ ಬರುತ್ತಿದ್ದರು. ಅಂಥ ಸಂದರ್ಭದಲ್ಲಿ ಮಹಿಳೆಯರು ಪೋಲೀಸರಿಗೆ ಥಳಿಸಿದ್ದೂ ಉಂಟು. ಜೈಲಿಗೆ ಗಂಡನಾದವ ಹೋದಾಗ ವಿಭಿನ್ನ ಸಮಸ್ಯೆಗಳನ್ನು ಎದುರಿಸಿದ್ದಾರೆ. ಇಂಥ ಮಹಿಳೆಯರಿಗೆ ಆಧಾರವಾಗಿದ್ದ ಶಾಂತಬಾಯಿ ಮಲೆಬೆನ್ನೂರರನ್ನು ಹೆಸರಿಸಬಹುದು. ಇವರು ತಮ್ಮ ಗಂಡ ಜೈಲಿಗೆ ಹೋದಾಗ, ಜಿಲ್ಲಾ ಬೋರ್ಡಿನ ಶಾಲೆಯಲ್ಲಿ ಅಧ್ಯಾಪಕಿಯಾಗಿ ಕೆಲಸಮಾಡಿ ಸಂಸಾರ ಸಾಗಿಸಿದರು. ೧೯೪೨ರಲ್ಲಿ ಬಳೇಕಲ್ಲು ರಾಮಕ್ಕ, ನಂಬೆ ಯಂಕಮ್ಮ, ಬಂಧಿತರಾಗಿ ಶಿಕ್ಷೆಗೆ ಒಳಗಾದರು. ಕೋಗಳಿ ರುದ್ರಮ್ಮ, ಲಕ್ಷ್ಮಿದೇವಿಯರು ಬಾಲ್ಯ ವಿಧವೆಯರಾಗಿದ್ದು, ಅಂದು ಸ್ತ್ರೀ ಸುಧಾರಣೆಯ ಕಾರ್ಯಕ್ರಮಗಳ ಪ್ರೇರಣೆಯಿಂದ ಕೋಗಳಿ ರುದ್ರಮ್ಮ ಗೊರ್ಲಿ ಶರಣಪ್ಪನನ್ನು ಲಕ್ಷ್ಮಿದೇವಿಯರು ಎಂ.ಎನ್.ಮೃತ್ಯುಂಜಯ ಅವರನ್ನು ಮರುವಿವಾಹವಾದರು. ಇಂಥ ಹಲವು ವಿಚಾರಗಳನ್ನು ಕುರಿತಂತೆ ಸ್ತ್ರೀವಾದಿ ನೆಲೆಯಿಂದ ಅಧ್ಯಯನ ಕೈಗೊಳ್ಳಬೇಕಾಗಿದೆ.

## ೩. ಮೈಸೂರು ಸಂಸ್ಥಾನದ ಮಹಿಳೆಯರ ಪ್ರತಿರೋಧಗಳು

ಮೈಸೂರು ಸಂಸ್ಥಾನವು ದೇಶೀಯ ಮಹಾರಾಜರ ಆಳ್ವಿಕೆಯಲ್ಲಿಯೇ ಇದ್ದುದ್ದರಿಂದ ಈ ಭಾಗದವರಿಗೆ ಬ್ರಿಟಿಷರ ದಾಸ್ಯ ಅಷ್ಟಾಗಿ ಇರಲಿಲ್ಲ. ಆದರೆ ವಸಾಹತುಶಾಹಿಯ ಸಾರ್ವತ್ರಿಕ ಶಿಕ್ಷಣ, ಆಡಳಿತದ ಶಿಸ್ತು, ವೈಜ್ಞಾನಿಕ ಅನ್ವೇಷಣೆ, ಅಂಚೆ-ತಂತಿ, ರೈಲ್ವೆ ಇತ್ಯಾದಿಗಳ ಪರಿಣಾಮಗಳು ಆಗದಿರಲಿಲ್ಲ. ಅಂತೆಯೇ ಜನರಲ್ಲಿ ಹೊಸ ವಿಚಾರಗಳು ಮೂಡಿದ್ದವು. ದಿವಾನರ ಆಳ್ವಿಕೆಯು ಸಹ ಮೈಸೂರನ್ನು 'ಮಾದರಿ ರಾಜ್ಯ'ವನ್ನಾಗಿಸುವಲ್ಲಿ ನಿರತವಾಗಿತ್ತು. ಆ ಮೂಲಕ ಸಂಸ್ಥಾನಿ ಪ್ರಜೆಗಳ ವಿಶ್ವಾಸ ಪಡೆಯುವುದು ಅನಿವಾರ್ಯವಾಗಿತ್ತು. ಈ ದಿಸೆಯಲ್ಲಿ ಹಲವಾರು ಸ್ತ್ರೀಪರ ಸುಧಾರಣೆಗಳು ಕಾಣಿಸಿಕೊಂಡವು. ಇದೇ ಸಂದರ್ಭದಲ್ಲಿಯೇ ರಾಷ್ಟ್ರೀಯವಾದಿಗಳು ಸಹ ಸ್ತ್ರೀ ಶಿಕ್ಷಣಕ್ಕೆ ಹೆಚ್ಚಿನ ಉತ್ತೇಜನ ನೀಡಿದರು. ಇವೆಲ್ಲವುಗಳಿಂದಾಗಿ ಈ ಭಾಗದ ಸ್ತ್ರೀಯರಿಗೆ ಪುರುಷರಿಗಿಂತಲೂ ಹೆಚ್ಚಿನ ಅನುಕೂಲಗಳಾದವು. ಸ್ತ್ರೀಯರು ಚಳವಳಿ ಸುಧಾರಣೆ ಮೊದಲಾದ ಕಾರ್ಯಗಳಲ್ಲಿ ತೊಡಗಲು ಸಾಧ್ಯವಾಯಿತು. ಈ ಭಾಗದ ವಿಶೇಷವೆಂದರೆ ರೈತ ಮಹಿಳೆಯರು ಹಲವು ಆಧುನಿಕ ವಿಚಾರಗಳಿಂದ ಪರಿವರ್ತನೆಯಾಗಿದ್ದು.

ಮೈಸೂರು ಸಂಸ್ಥಾನವು ಒಂಬತ್ತು ಜಿಲ್ಲೆಗಳಾದ ಕೋಲಾರ, ಬೆಂಗಳೂರು, ಮೈಸೂರು, ಮಂಡ್ಯ, ಚಿಕ್ಕಮಗಳೂರು, ತುಮಕೂರು, ಚಿತ್ರದುರ್ಗ, ಶಿವಮೊಗ್ಗ ಜಿಲ್ಲೆಗಳಿಂದ ಕೂಡಿತ್ತು. ಇಲ್ಲಿನ ಪತ್ರಿಕೆಗಳ ಮೇಲೆ ನಿರ್ಬಂಧವಿತ್ತು. ಈ ಭಾಗದಲ್ಲಿಯೂ ಸ್ವದೇಶಿ ಚಳವಳಿ ಆರಂಭವಾದಾಗ ವಿದೇಶಿ ಬಟ್ಟೆ, ವಸ್ತುಗಳು ಬಹಿಷ್ಕಾರಗೊಂಡವು. ಪ್ರತಿದಿನದ ಉಪಯೋಗಕ್ಕಾಗಿ ಸ್ವದೇಶಿ ವಸ್ತುಗಳು ಬಳಕೆಗೆ ಬಂದಿದ್ದವು. ೧೯೨೯-೩೦ರಲ್ಲಿ ಚಿಕ್ಕಪೇಟೆಯಲ್ಲಿ ಸ್ವದೇಶಿ ನೀತಿ ಪ್ರಚಾರವಾಗಿ ಬಟ್ಟೆ ಅಂಗಡಿಯ ಮುಂದೆ ದೀರ್ಘಕಾಲ ಪಿಕೆಟಿಂಗ್ ನಡೆಯಿತು. ಈ ಪಿಕೆಟಿಂಗನ್ನು ಸ್ವಯಂ ಸೇವಕಿಯರು ಕಾಂಗ್ರೆಸ್ ಕಚೇರಿಯಿಂದ ಚಿಕ್ಕಪೇಟೆಯವರೆಗೂ ಮೆರವಣಿಗೆ ಮಾಡುತ್ತಾ ದೇಶಭಕ್ತಿ ಗೀತೆಗಳನ್ನು ಹಾಡಿ ಜಾಗೃತಗೊಳಿಸಿದರು. ಅಂಗಡಿಯ ಮಾಲೀಕರಿಗೆ

ವಿದೇಶಿ ಬಟ್ಟೆ ಮಾರದಂತೆ ಮನದಟ್ಟು ಮಾಡಿ ಹೇಳುತ್ತಿದ್ದರು. ಈ ಭಾಗದಿಂದ ಉಪ್ಪಿನ ಸತ್ಯಾಗ್ರಹಕ್ಕಾಗಿ ಶಾಂತಬಾಯಿ ಕರಮಕರ, ರಮಾಬಾಯಿ, ಕಮಲಾದೇವಿಯವರು ಹೋಗಿದ್ದರು. ಕರ ನಿರಾಕರಣೆಯು ಶಿಕಾರಿಪುರದಲ್ಲಿ ಆರಂಭವಾಯಿತು. ಆಗ ಸೊರಬ ತಾಲೂಕಿನ ಬಸಮ್ಮ ಕರನಿರಾಕರಣೆಯಲ್ಲಿ ಭಾಗವಹಿಸಿ, ಬಂಧಿತಳಾಗಿ ಬಿಜಾಪುರ, ಯರವಾಡ ಜೈಲುಗಳಲ್ಲಿ ಆರುತಿಂಗಳ ಶಿಕ್ಷೆಗೆ ಗುರಿಯಾದಳು. ಸಿದ್ದಾಪುರದ ಕರನಿರಾಕರಣೆಗೆ ಈರಮ್ಮ ಎಂಬಾಕೆ ಹೋಗಿದ್ದಳು. ಈರಮ್ಮ ಕರನಿರಾಕರಣೆಯಲ್ಲಿ ಬಂಧಿತಳಾಗಿ ಬೆಳಗಾವಿ, ಯರವಾಡ ಜೈಲಿನಲ್ಲಿದ್ದಳು. ನಂತರ ಬಿಡುಗಡೆಯಾಗಿ ಬಂದ ಮೇಲೆ ವಾರ್ಧಾ ಆಶ್ರಮಕ್ಕೆ ಹೋಗಿ ಹಿಂದಿ ಕಲಿತು ಹರಿಜನ ಬಾಲಕನನ್ನು ಮನೆಯಲ್ಲಿ ಸಾಕಿ-ಸಲಹಿ ತನ್ನ ಮನೆಯವರಿಂದಲೇ ಬಹಿಷ್ಕಾರಕ್ಕೆ ಒಳಗಾದಳು.

ಮೈಸೂರು ಸಂಸ್ಥಾನವು ಸಹ ಎಲ್ಲೆಡೆಯಂತೆ ಧ್ವಜ ಹಾರಿಸುವುದನ್ನು ಇಲ್ಲಿಯೂ ನಿಷೇಧಿಸಿತು. ಆದರೂ ಅಲ್ಲಲ್ಲಿ ಧ್ವಜ ಹಾರಿಸುವ ಚಟುವಟಿಕೆಗಳು ನಡೆಯುತ್ತಲೇ ಇದ್ದವು. ಮೈಸೂರಿನಲ್ಲಿ ಶಿವಪುರ ಧ್ವಜಾರೋಹಣ ಪ್ರಧಾನವಾದದು. ಕಾಂಗ್ರೆಸ್ ಧ್ವಜವನ್ನು ಹಾರಿಸಿದರೆ ಮೈಸೂರು ಮಹಾರಾಜರ ಪ್ರಭುತ್ವಕ್ಕೆ ಕುಂದು ಬರುವುದು ಎಂದು ಜಿಲ್ಲಾ ಮ್ಯಾಜಿಸ್ಟ್ರೇಟರು ಧ್ವಜಾರೋಹಣವನ್ನು ನಿಲ್ಲಿಸಿದ್ದರು. ಆದರೆ ಈ ಆಜ್ಞೆಯನ್ನು ವಿರೋಧಿಸಿ ಶಿವಪುರಕ್ಕೆ ಮೂವತ್ತು ಸಾವಿರ ಜನರು ಬಂದಿದ್ದರು. ಯಶೋಧರಮ್ಮನ ಗಂಡ ಹೆಚ್.ಸಿ.ದಾಸಪ್ಪ ಧ್ವಜಾರೋಹಣದ ಅಧ್ಯಕ್ಷತೆ ವಹಿಸಿಕೊಂಡಿದ್ದರು. ಈ ಧ್ವಜಾರೋಹಣಕ್ಕೆ ಸುಬ್ಬಮ್ಮ ಜೋಯಿಸ್, ಬಳ್ಳಾರಿ ಸಿದ್ದಮ್ಮ, ಕಮಲಾದೇವಿ ಚಟ್ಟೋಪಾಧ್ಯಾಯ, ವೆಂಕಮ್ಮ, ಕಮಲಮ್ಮ, ಸಾವಿತ್ರಮ್ಮ ಮೊದಲಾದ ಮಹಿಳೆಯರು ಬಂದಿದ್ದರು. ಕಮಲಾದೇವಿ ಚಟ್ಟೋಪಾಧ್ಯಾಯ ಸಭೆಯಲ್ಲಿ ಮಾತನಾಡುತ್ತಾ "ಕೆಲಸಕ್ಕೆ ಬಾರದ ಚಟುವಟಿಕೆಗಳಲ್ಲಿ ತೊಡಗದೆ, ಸ್ವಾತಂತ್ರ್ಯಕ್ಕಾಗಿ ಅಖಿಲ ಭಾರತ ರಾಷ್ಟ್ರೀಯ ಹೋರಾಟದ ಒಂದು ಅವಿಭಾಜ್ಯ ಅಂಗವಾಗಿ ಇರಬೇಕು" ಎಂದು ಹೇಳಿದರು. ಬಳ್ಳಾರಿ ಸಿದ್ದಮ್ಮನವರು ಸಭೆಯನ್ನು ಉದ್ದೇಶಿಸಿ "ನಾವು ರಾಷ್ಟ್ರ ಧ್ವಜವನ್ನು ರಕ್ಷಿಸುವಲ್ಲಿ ವೀರಸ್ವರ್ಗ ಪಡೆಯೋಣ" ಎಂದು ತಿಳಿಸಿದರು. ಟಿ.ಸುನಂದಮ್ಮ ಸ್ವಯಂ ಸೇವಕಿಯರ ನಾಯಕಿಯಾಗಿ ಧ್ವಜ ಹಾರಿಸುವಾಗ 'ವಂದೇಮಾತರಂ' ಗೀತೆಯನ್ನು ಹಾಡಿದರು. ಧ್ವಜಾರೋಹಣದ ನಂತರ ಸಿದ್ದಲಿಂಗಯ್ಯ, ಬಳ್ಳಾರಿ ಸಿದ್ದಮ್ಮ ದಸ್ತಗಿರಿಯಾದರು.

ಮೈಸೂರು ಸಂಸ್ಥಾನದ ಸರಕಾರವು ಕಾಂಗ್ರೆಸ್ಸಿನ ಕೋರಿಕೆಯಂತೆ ಪಾನ ನಿರೋಧವನ್ನು ಜಾರಿಗೆ ತರಲಿಲ್ಲ. ಆದ್ದರಿಂದ ಕಾಂಗ್ರೆಸ್ ಅನಿವಾರ್ಯವಾಗಿ ಅರಣ್ಯ ಸತ್ಯಾಗ್ರಹವನ್ನು ಆರಂಭಿಸಿತು. ಈ ಚಳವಳಿಯ ಉದ್ದೇಶ ಈಚಲು ಮರಗಳನ್ನು ಕಡಿದು, ಹೆಂಡ ಸರಬರಾಜು ಆಗದಂತೆ ಮಾಡುವುದು. ೧೯೩೯ರಲ್ಲಿ ಆರಂಭವಾದ ಈ ಸತ್ಯಾಗ್ರಹ ಸ್ವಾತಂತ್ರ್ಯ ಚಳವಳಿಯಲ್ಲಿ ಹಲವು ಪಲ್ಲಟಗಳಿಗೆ ಕಾರಣವಾಗಿದೆ.

ಚಿತ್ರದುರ್ಗದ ತುರುವನೂರು ಗ್ರಾಮ ಅರಣ್ಯ ಸತ್ಯಾಗ್ರಹಕ್ಕೆ ಎಂದು ಗೊತ್ತುಪಡಿಸಲಾಯಿತು. ಈ ಸತ್ಯಾಗ್ರಹ ಆರಂಭಿಸುವುದಕ್ಕೆ ಬಳ್ಳಾರಿ ಸಿದ್ದಮ್ಮನವರ ಸಲಹೆ ಪಡೆದುಕೊಂಡು, ಎಲ್ಲಾ ಸತ್ಯಾಗ್ರಹಿಗಳು ಒಂದೇ ದಿನ ಸತ್ಯಾಗ್ರಹ ಮಾಡಬಾರದೆಂದು ಯೋಚಿಸಿ "ಪ್ರತಿ ದಿನ ಐದು ಜನರು ಮಾತ್ರ ಸತ್ಯಾಗ್ರಹಕ್ಕೆ ಹೋಗಬೇಕೆಂದು ಸತ್ಯಾಗ್ರಹಿಗಳು ಸರಕಾರದ ಕಣ್ಣಿಗೆ ಕಾಣಿಸಬಾರದೆಂದು ನಿರ್ಧರಿಸಲಾಗಿತ್ತು. ಸತ್ಯಾಗ್ರಹಕ್ಕೆ ಹುಡುಗಿ, ಮುದುಕಿಯರು, ಹುಡುಗ, ಮುದುಕ, ಮಕ್ಕಳು ಎಲ್ಲ ವಯಸ್ಸಿನವರೂ ಸೇರಿದರು. ಈಚಲು ಮರ ಕಡಿಯಲು ಹೋಗುವವರಿಗೆ ಮಹಿಳೆಯರು ಹೂವಿನ, ನೂಲಿನ ಹಾರಗಳನ್ನು ಹಾಕಿ ಹಣೆಗೆ ಕುಂಕುಮ

ಹಚ್ಚಿ, ಆರತಿ ಎತ್ತಿ, `ಜೈ ಬೋಲೋ ಭಾರತ ಮಾತಾಕೀ` ಎಂಬ ಘೋಷಣೆಯಿಂದ ಕಳಿಸಿಕೊಡುತ್ತಿದ್ದರು. ಹೀಗೆ ಸತ್ಯಾಗ್ರಹಕ್ಕೆ ಹೋದವರು ಬಂಧಿತರಾದರು. ಅಂದೇ ಮಧ್ಯರಾತ್ರಿಯಲ್ಲಿ ಬಳ್ಳಾರಿ ಸಿದ್ದಮ್ಮ, ನಾಗರತ್ನಮ್ಮ ಹಿರೇಮಠ ಬಂಧಿತರಾಗಿದ್ದರು. ಎರಡನೆ ದಿನದ ಸತ್ಯಾಗ್ರಹದಂದು ಶ್ರೀಮತಿ ಲಕ್ಷ್ಮಮ್ಮ, ಹನುಮಕ್ಕ, ಗೊಲ್ಲರ ತಿಮ್ಮಕ್ಕ ಸತ್ಯಾಗ್ರಹದಲ್ಲಿ ಭಾಗವಹಿಸಿ ಬಂಧಿತರಾದರು. ಹೊಳಲ್ಕೆರೆಯ ರಂಗಾಪುರದ ಸಾಂತಮ್ಮ, ಹಿರಿಯೂರು ತಾಲೂಕಿನ ಮರಡಿಹಳ್ಳಿಯ ಗೋವಿಂದರೆಡ್ಡಿಯವರ ಹೆಂಡತಿ ಸೇಂದಿ ಪಿಕೆಟಿಂಗ್ ಮಾಡಿ" ಬಂದಿತರಾದುದು ಗಮನಾರ್ಹ.[೧೮]

ವಿದೇಶಿ ವಸ್ತುಗಳನ್ನು ಬಹಿಷ್ಕರಿಸುವ ಸಂದರ್ಭದಲ್ಲಿ ಮೈಸೂರಿನ ದೊಡ್ಡಪೇಟೆಯ ಪೋಲೀಸ್ ಠಾಣೆಗೆ ವಿದೇಶಿ ಪ್ರಜೆಯ ಹೆಸರನ್ನು ಇಟ್ಟಿದ್ದರು. ಆ ಹೆಸರೇ "ಹ್ಯಾಮಿಲ್ಟನ್ ಬಿಲ್ಡಿಂಗ್ " ಎಂದೂ, ಇದನ್ನು ಯಶೋಧರಮ್ಮ ದಾಸಪ್ಪ, ಟಿ.ಸುನಂದಮ್ಮ ವಿರೋಧಿಸಿದ್ದು ವಿಶೇಷವಾಗಿತ್ತು.

ಚಳವಳಿ ಕುರಿತಂತೆ ಕರಪತ್ರಗಳ ಹಂಚುವಿಕೆ, ಬುಲೆಟಿನ್ ಹಂಚುವಿಕೆ ಮಾಡಿದರೆ ಶಿಕ್ಷೆಯಾಗುವುದೆಂದು ಗೊತ್ತಿದ್ದರೂ ಮಹಿಳೆಯರು ಹೆದರದೆ ಇಂಥ ಕಾರ್ಯಗಳಲ್ಲಿ ತೊಡಗಿದ್ದರು. ಬಿ.ಕಾಮಾಕ್ಷಮ್ಮ ಎಂಬಾಕೆ ಹಸ್ತ ಪತ್ರಿಕೆಗಳನ್ನು ಮನೆ ಮನೆಗೂ ಹೋಗಿ ಹಂಚಿದರೆ, ಶಾಂತಬಾಯಿ ಕರಮಕರ ಬುಲೆಟಿನ್ ಹಂಚಿ ಬಂಧಿತರಾದರು. ಸತ್ಯಾಗ್ರಹದ ನಿಧಿ ಸಂಗ್ರಹಿಸಲು ಆನಂದಬಾಯಿ, ಶಾಂತಾಬಾಯಿ, ಶಾರದಾಂಬಾ ಟಿ.ಲಕ್ಷ್ಮಮ್ಮ ಸಹ ಹೋಗುತ್ತಿದ್ದರು.

೧೯೪೨ರ ಚಲೇಜಾವ್ ಚಳವಳಿಯಲ್ಲಿ ಈ ಭಾಗದ ವಿದ್ಯಾರ್ಥಿನಿಯರು, ಮಹಿಳೆಯರು ಭಾಗವಹಿಸಿದ್ದರು. ಪದ್ಮರಾಮ ದಾಸ್ ಎಂಬಾಕೆ ತೀರ್ಥಹಳ್ಳಿ ತಾಲೂಕು ಕಚೇರಿ ಮುಂದೆ ಪಿಕೆಟಿಂಗ್ ಮಾಡಿ ಬಂಧಿತಳಾದರೆ, ರಾಮಗಿರಿ ಗ್ರಾಮದ ಗಂಗಮ್ಮ ಕೈ ಬಾಂಬು, ಟೈಂಬಾಂಬು, ಬಂದೂಕುಗಳನ್ನು ಗೌಪ್ಯವಾಗಿ ಸಂಗ್ರಹಿಸಿದ್ದಳು. ಈಕೆ ಸೇತುವೆ ಒಡೆಯುವ, ಪೋಸ್ಟ್ ಬಾಕ್ಸ್ ಸುಡುವ, ತಂತಿ ಕತ್ತರಿಸುವ ಕಾರ್ಯಗಳಲ್ಲಿ ನಿರತಳಾಗಿ ಬಂಧಿತಳಾದಳು. ಇದೇ ಚಳವಳಿಯಲ್ಲಿ ಭದ್ರಾವತಿಯಿಂದ ಲಕ್ಷ್ಮಮ್ಮ, ಗೌರಮ್ಮ ಸ್ಥಾನಬದ್ಧತೆಯ ಕಾನೂನಿನ ಪ್ರಕಾರ ಬಂಧಿತರಾದರು.

ವಿದ್ಯಾರ್ಥಿನಿಯರಾದ ಕಾತ್ಯಾಯಿನಿ, ಪೊನ್ನಮ್ಮ, ಕುಂತಳಾ, ಮೋಹನಾ, ಜಯ, ಜಿ.ವೆಂಕಟಲಕ್ಷ್ಮಿ, ಅಂಬು, ರುಕ್ಮಿಣಿ, ಪದ್ಮ, ಆರ್.ಕಮಲ, ವಸಂತಿ, ಮಂಗಳ, ಹಂಸಾಯಾನೆ, ಶಕುಂತಲಾಯಾನೆ, ಮೈತ್ರೇಯಿ, ವೈದೇಹಿ, ರಮಾಮಣಿ ಪ್ರಮುಖ ಚಳವಳಿಕಾರರು. ಸರಕಾರ ೧೪೪ನೇ ಸೆಕ್ಷನ್ ಜಾರಿಗೆ ತಂದು, ಬೆಂಗಳೂರು, ಮೈಸೂರುಗಳಲ್ಲಿ ಆಗಸ್ಟ್ ಹನ್ನೆರಡರಿಂದ ಹದಿನೇಳರವರೆಗೆ ಶಾಲಾ-ಕಾಲೇಜುಗಳಿಗೆ ರಜೆ ಘೋಷಿಸಿತು. ೧೯೪೨ರ ಸೆಪ್ಟಂಬರ್ ಒಂದರಂದು ಹೆಣ್ಣುಮಕ್ಕಳ ಪ್ರೌಢಶಾಲೆಯ ಬಳಿ ಲಾಠಿಚಾರ್ಜ್ ನಡೆಯಿತು. ಅಕ್ಟೋಬರ್‌ನಲ್ಲಿ ಸ್ತ್ರೀಯರ ಮೆರವಣಿಗೆಯೊಂದನ್ನು ಪೋಲೀಸರು ತಡೆದು, ಒಂಬತ್ತು ವಿದ್ಯಾರ್ಥಿನಿಯರನ್ನು ದಸ್ತಗಿರಿ ಮಾಡಿದರು. ಇವನ್ನು ಕಂಡ ಮಹಾರಾಣಿ ಕಾಲೇಜಿನ ಇಂಗ್ಲೀಷ್ ಪ್ರಾಧ್ಯಾಪಕಿ ಶ್ರೀಮತಿ ಕೇಸರಿ ಕೇಶವನ್ ತನ್ನ ಹುದ್ದೆಗೆ ರಾಜೀನಾಮೆ ಕೊಟ್ಟಿದ್ದು ವಿಶೇಷ ವರದಿ ಆಗಿತ್ತು.

ಚಳವಳಿ ನಿರತ ಸತ್ಯಾಗ್ರಹಿಗಳನ್ನು ದಸ್ತಗಿರಿ ಮಾಡುತ್ತಿರುವುದನ್ನು ಕಂಡು ಕಾರ್ಮಿಕರು ಅವನ್ನು ವಿರೋಧಿಸಲು ಮುಷ್ಕರ ಕೈಗೊಂಡರು. ತಮ್ಮ ಮುಷ್ಕರಕ್ಕೆ ನಾಯಕಿಯಾಗಿ ಭಾಗೀರತಮ್ಮನನ್ನು ನೇಮಿಸಿಕೊಂಡರು. ಭಾಗೀರತಮ್ಮ ಬಿನ್ನಿಮಿಲ್ ಆವರಣದಲ್ಲಿ ಸಭೆ ಕರೆದು, ಸಭೆಯ ಅಧ್ಯಕ್ಷರನ್ನಾಗಿ ತನ್ನ ಗಂಡನಾದ ಚಂಗಲಾರಾಧ್ಯರನ್ನು ನೇಮಿಸಿದ್ದಳು. ಸಭೆಯು ನಡೆಯದಂತೆ ಮಾಡಲು ಪೋಲೀಸರು ಸುತ್ತ ನಿಂತಿದ್ದರು. ಆದರೆ ಭಾಗೀರತಮ್ಮ ಭಾಷಣ ಮಾಡುವುದನ್ನು ನಿಲ್ಲಿಸಲಿಲ್ಲ. ಮಾರನೆ ದಿನದಂದು ಲಾಲ್‌ಭಾಗ್‌ನಲ್ಲಿ ಸಭೆ ಮಾಡಲು ನಿರ್ಧರಿಸಿದ್ದರು. ಆದರೆ ಲಾಲ್‌ಭಾಗ್ ಸಭೆಯಲ್ಲಿ ಪೋಲೀಸರು ಭಾಗೀರತಮ್ಮನನ್ನು, ಆಕೆಯ ಗಂಡನನ್ನು ಬಂಧಿಸಿಯೇ ಬಿಟ್ಟರು. ಮೈಸೂರಿನ ಮಿಲ್‌ಗಳೆಲ್ಲಾ ಮುಚ್ಚಿದವು. ನಂತರ ಬೆಂಗಳೂರಿನ ಮೂರು ಬಟ್ಟೆ ಗಿರಣಿಗಳು ಮುಷ್ಕರ ಆರಂಭಿಸಿದವು. ಇಂಥ ಮುಷ್ಕರಗಳು ೧೯೪೨ರ ಚಳವಳಿಗೆ ಹೊಸ ತಿರುವನ್ನು ಕೊಟ್ಟಿದ್ದವು.

ಬಸವನಗುಡಿಯಿಂದ ವಿದ್ಯಾರ್ಥಿನಿಯರಾದ ಆರ್.ಕೋಮಲ, ಮಂಗಳ, ಮೋಹನ, ಜಯ, ಅಂಬು, ಜಿ.ವೆಂಕಟಲಕ್ಷ್ಮಿ, ವಸಂತ, ಶಾಂತ, ಹಂಸಾಯಾನೆ, ಶಕುಂತಳಾಯಾನೆ, ಇಂದಿರಾ, ಕ್ಷಮಾ, ರಾಜಲಕ್ಷ್ಮಿ, ಪದ್ಮಾ, ಗಿರಿಜಾ, ಮಧುರ, ಸರಸ್ವತಿ ಮೊದಲಾದವರು ಪ್ರತಿದಿನ ಒಂದೊಂದು ಕಡೆ ಚಳವಳಿ ಮಾಡುತ್ತಿದ್ದರು. ಹೀಗೆ ಚಳವಳಿಗೆ ಹೋದ ವಿದ್ಯಾರ್ಥಿನಿಯರು ಬಂಧಿತರಾಗಿ ಅಂತಿಮವಾಗಿ ಪೊನ್ನಮ್ಮ, ಕಮಲ, ಅಂಬು, ಕುಂತಳಾ, ವೆಂಕಟಲಕ್ಷ್ಮಿ, ಜಯ, ಮಂಜುಳ, ತುಳಸಿ ಮಾತ್ರ ಉಳಿಯಬೇಕಾಯಿತು. ಪೊನ್ನಮ್ಮ ಇತರ ವಿದ್ಯಾರ್ಥಿನಿಯರು ತುಮಕೂರು ಶಾಲಾ-ಕಾಲೇಜುಗಳಿಗೆ ಹೋಗಿ ವಿದ್ಯಾರ್ಥಿನಿಯರನ್ನು ಚಳವಳಿಗೆ ಸೇರುವಂತೆ ಹೇಳುತ್ತಿದ್ದರು. ಮೈಸೂರಿನ ಮಹಾರಾಣಿ ಕಾಲೇಜಿನಲ್ಲಿ ಪಿಕೆಟಿಂಗ್ ಮಾಡಿ ಬಂಧನಕ್ಕೆ ಒಳಗಾದರು. ಕುಂತಳಾ ಕಾರ್ಮಿಕರ ಮನೆಗಳಿಗೆ ಹೋಗಿ ಅವರ ಸಂಸಾರಕ್ಕೆ ಬೇಕಾದ ದವಸ-ದಾನ್ಯ, ಕೊಟ್ಟು ಅವರ ಹೆಂಡತಿಯರಿಗೆ ನೂಲುವುದನ್ನು ಕಲಿಸಿದಳು. ಅಲ್ಲದೆ ಆರೋಗ್ಯ ನೈರ್ಮಲ್ಯ, ಅಕ್ಷರಜ್ಞಾನ ಇತ್ಯಾದಿಗಳನ್ನು ವಿವರಿಸಿದ್ದು ಉಂಟು. ಶಾಲಾ-ಕಾಲೇಜುಗಳು ಆರಂಭವಾದ ಮೇಲೆ ಕುಂತಳಾ ಕಾಲೇಜಿನಲ್ಲಿ `ವಿದ್ಯಾರ್ಥಿ ಕಾಂಗ್ರೆಸ್` ಸ್ಥಾಪಿಸಿ, ಅದರ ಕಾರ್ಯದರ್ಶಿಯಾದಳು.

೧೯೪೨ರ ಚಳವಳಿಯಲ್ಲಿ 'ಈಸೂರು` ಮೊಟ್ಟ ಮೊದಲು ಸ್ವಾತಂತ್ರ್ಯ ಪಡೆದ ಗ್ರಾಮ ಎನ್ನಲಾಗಿದೆ. ಈ ಚಳವಳಿಯಲ್ಲಿ ಕೃಷ್ಣಬಾಯಿ ಪಣಿಬೆಕರಾ ಕಮಾಲದೇವಿ ಚಟ್ಟೋಪಾಧ್ಯಾಯ, ಸರೋಜಿನಿನಾಯ್ಡು ಮೊದಲಾದವರು ಇದ್ದರು. ಈ ಚಳವಳಿಯಲ್ಲಿ ತೊಡಗಿದ ಹದಿನಾಲ್ಕು ಮಂದಿಗೆ ಜೀವಾವಧಿ ಶಿಕ್ಷೆಯಾಯಿತು. ಅವರುಗಳಲ್ಲಿ ಪಾರ್ವತಮ್ಮ, ಹಾಲಮ್ಮ, ಸಿದ್ಧಮ್ಮರು ಪ್ರಮುಖರಾಗಿದ್ದರು. ಅಂತಿಮವಾಗಿ ಹಲವು ಬಗೆಯ ಚಳವಳಿ ಕಂಡ ಮೈಸೂರು ಸಂಸ್ಥಾನ, ವಸಾಹತುಶಾಹಿ ಪ್ರಭುತ್ವದಿಂದ ಮುಕ್ತವಾಯಿತು.

ವಸಾಹತುಶಾಹಿ ಆಳ್ವಿಕೆಯಿಂದ ಬಿಡುಗಡೆ ಪಡೆದ ಮೈಸೂರು ಸಂಸ್ಥಾನ, ಭಾರತದ ಒಕ್ಕೂಟ ಸೇರಿಕೊಂಡಿತು. ಆದರೆ ಸಂಸ್ಥಾನದಲ್ಲಿ ಪ್ರಜಾಪ್ರಭುತ್ವ ಮಾದರಿಯಲ್ಲಿ ಸರಕಾರಕ್ಕೆ ಅವಕಾಶ ನೀಡಿರಲಿಲ್ಲ. ಆದ್ದರಿಂದ ಜವಾಬ್ದಾರಿ ಸರ್ಕಾರದ ಸ್ಥಾಪನೆಗಾಗಿ ಮೈಸೂರು ಕಾಂಗ್ರೆಸ್ ಕಾರ್ಯಕಾರಿ ಸಮಿತಿಯು ೧೯೪೭ರ ಆಗಸ್ಟ್ ಇಪ್ಪತ್ತೊಂದರಂದು ಸಭೆ ಸೇರಿತು. ಮೈಸೂರು ಸಂಸ್ಥಾನದ ವಿರುದ್ಧ ಚಳವಳಿ ಆರಂಭಿಸಲು ನಿರ್ಣಯಿಸಿ, 'ಮೈಸೂರು ಚಲೋ' ಚಳವಳಿ ಮಾಡಿದರು. ಈ ಚಳವಳಿಯು ನಾಲ್ಕು ಬೇಡಿಕೆಗಳನ್ನು ಕೇಳಿಕೊಂಡಿತು.

ಅವುಗಳೆಂದರೆ -

೧. ಜವಾಬ್ದಾರಿ ಸರಕಾರದ ರಚನೆ

೨. ಪ್ರಜಾಪ್ರತಿನಿಧಿಗಳಿಂದ ಕೂಡಿದ ರಾಜ್ಯಾಂಗ ರಚನೆ

೩. ರಾಜ್ಯಾಂಗ ರಚನೆಯಾಗುವ ತನಕ ತಾತ್ಕಾಲಿಕ ಸರಕಾರ ಏರ್ಪಡಿಸುವುದು

೪. ರಾಜಕೀಯ ಖೈದಿಗಳ ಬಿಡುಗಡೆ

ಈ ಬೇಡಿಕೆಗಳಿಗಾಗಿ ಚಳವಳಿ ಆರಂಭವಾಗಿ ಇತರೆ ಜಿಲ್ಲೆಗಳಿಂದಲೂ ಸತ್ಯಾಗ್ರಹಿಗಳು ಮೈಸೂರಿಗೆ ಬರಲಾರಂಭಿಸಿದರು. ಬೆಂಗಳೂರಿನಿಂದ ಮೈಸೂರಿಗೆ ಜಾಥಾ ಶುರುವಾಯಿತು. ಸತ್ಯಾಗ್ರಹಿಗಳು ತಂಡ-ತಂಡವಾಗಿ ಬಂದು ಜಾಥದಲ್ಲಿ ಸೇರಿಕೊಂಡರು. ಹೀಗೆ ಬಂದವರಲ್ಲಿ ಶಿವಮೊಗ್ಗದ ಎನ್.ಎಸ್.ಗೌರಮ್ಮ, ಟಿ.ರತ್ನಮ್ಮ, ಎಸ್.ಪೊನ್ನಮ್ಮ, ಪದ್ಮಾವತಿ, ಕೊಲ್ಲೂರಯ್ಯ, ಅಂಬಮ್ಮ, ಸುನಂದ, ಕುಸುಮ, ಕೆ.ಜಿ.ರಂಗೂಬಾಯಿ, ಆರ್.ಎನ್.ಇಂದಿರಾ ಇವರೆಲ್ಲಾ ಕಾಂಗ್ರೆಸ್ ಧ್ವಜ ಹಾರಿಸಲು ಬಂದಾಗ ಬಂಧಿತರಾದರು. ಹೀಗೆ ಬಂಧಿತರಾದವರ ಮಾಹಿತಿಯನ್ನು ಪತ್ರಿಕೆಗಳು ತಿಳಿಸುತ್ತಾ "ಮೈಸೂರಿನಲ್ಲಿ ಇನ್ನಷ್ಟು ಸೆರೆಮನೆಗಳು ಅವಶ್ಯವಾಗಿವೆ" ಎಂದಿದ್ದವು. ಈ ಸತ್ಯಾಗ್ರಹ ವ್ಯಾಪಕವೂ, ಉಗ್ರವಾಗಿಯೂ ನಡೆಯಿತು. ಆಗ ಮೈಸೂರು ಮಹಾರಾಜರು ಸೆಪ್ಟಂಬರ್ ೨೪ರಂದು ಘೋಷಣೆ ಹೊರಡಿಸಿ, ಮೈಸೂರು ಸಂಸ್ಥಾನವು ಜವಾಬ್ದಾರಿ ಸರಕಾರವನ್ನು ಪಡೆಯುವುದು ಎಂದು ಹೇಳಿಕೆಯಿತ್ತರು. ಈ ಚಳವಳಿಗೆ ಶ್ರೀಮತಿ ರತ್ನಮ್ಮ ಮಾಧವರಾವ್ ಆರು ತಿಂಗಳ ಕೂಸಿನೊಂದಿಗೆ ಚಳವಳಿಗೆ ಬಂದು, ರಾಮಣ್ಣ ಶ್ರೇಷ್ಠಿ ಪಾರ್ಕಿನಿಂದ ಗಾಂಧಿ ಬಜಾರ್ ಮೂಲಕ ತಾಲೂಕು ಕಚೇರಿಯ ಮೇಲೆ ಕಾಂಗ್ರೆಸ್ ಧ್ವಜ ಹಾರಿಸಿ ಬಂಧಿತರಾದರು. ತೀರ್ಥಹಳ್ಳಿ ತಾಲೂಕಿನಿಂದ ಸಾವಿತ್ರಮ್ಮನ ನೇತೃತ್ವದಲ್ಲಿ ಜಯಮ್ಮ, ಪದ್ಮಾರಾಮದಾಸ್, ಲಕ್ಷಮ್ಮ, ವನಮಾಲಾ ಮೊದಲಾದ ಮಹಿಳೆಯರು ತಾಲೂಕು ಕಚೇರಿಯಲ್ಲಿ ಪಿಕೆಟಿಂಗ್ ಮಾಡಿ ಬಂಧಿತರಾಗಿ ಬೆಂಗಳೂರು ಸೆಂಟ್ರಲ್ ಜೈಲಿನಲ್ಲಿದ್ದರು. ಇವರಲ್ಲದೆ ಹೆಚ್.ಪದ್ಮಾವತಿಬಾಯಿ, ರಂಗೂಬಾಯಿ, ಟಿ.ಎಸ್.ವಿಶಾಲಾಕ್ಷಿ, ಚಂದ್ರಿಕಾ ಗುತ್ತಲ, ನಿಂಗಮ್ಮ ಹಾರ್ನಹಳ್ಳಿ, ಚೆನ್ನಗಿರಿ ತಾಲೂಕಿನಿಂದ ಶಾರದಮ್ಮ, ಕಮಲಮ್ಮ, ಈರಮ್ಮ, ಜಯಲಕ್ಷ್ಮಿ, ಸುಭದ್ರ, ಹಾಲಮ್ಮ, ಹೊನ್ನಳ್ಳಿ ತಾಲೂಕಿನಿಂದ ರತ್ನಮ್ಮ, ಶಾಂತಮ್ಮ, ಭದ್ರಾವತಿ ತಾಲೂಕಿನಿಂದ ಕೆ.ಪದ್ಮಾವತಿ, ತೀರ್ಥಹಳ್ಳಿ ತಾಲೂಕಿನಿಂದ ವರದಬಾಯಿ, ಸುನಂದಮ್ಮ, ಕೆ.ಸುಶೀಲಮ್ಮ, ಶಕುಂತಲಾ, ಲಕ್ಷ್ಮಿದೇವಿ, ಎಸ್.ವಿ.ಮೀನಾಕ್ಷಮ್ಮ, ಲೀಲಾವತಿ, ನಿಂಗಮ್ಮ, ಲಕ್ಷ್ಮೀಬಾಯಿ, ಕುಸುಮಾ, ಕುಸುಮಲತ, ಇಂದಿರಾಬಾಯಿ, ಚಂಪಾವತಿ, ಅನುಸೂಯಬಾಯಿ, ಅಮೃತಮ್ಮ ಮೊದಲಾದವರು ಇದ್ದರು.

೧೯೪೭ರ ಚಳವಳಿಗೆ ಕುಂತಳಾ ವಿದ್ಯಾರ್ಥಿಗಳ ದಳವನ್ನು ಕಟ್ಟಿದ್ದರು. ತುಮಕೂರಿನ ಪಿ.ಸುಶೀಲಮ್ಮ ಕೋರ್ಟು ಪಿಕೆಟಿಂಗ್‌ನಲ್ಲಿ ಐದು ತಿಂಗಳ ಕೂಸಿನೊಂದಿಗೆ ಭಾಗವಹಿಸಿ ಬಂಧಿತಳಾಗಿದ್ದಳು. ತಿಪಟೂರಿನಲ್ಲಿ ವಿಮಲಾಬಾಯಿ ನೇತೃತ್ವದಲ್ಲಿ ಮೂವತ್ತು ಜನರ ಗುಂಪು ಇತ್ತು. ಆ ಗುಂಪು ವಿಮಲಾಬಾಯಿಯನ್ನು 'ರಾಣಿಲಕ್ಷ್ಮಿ' ಎನ್ನುತ್ತಿತ್ತು. ಹರಿಹರದಿಂದ ವರಲಕ್ಷ್ಮಿ ಎಂಬಾಕೆ ಈ ಚಳವಳಿಗೆ ಭಾಗವಹಿಸಿದ್ದಳು. ೧೯೪೭ರಲ್ಲಿ ಹೊಸದುರ್ಗ ತಾಲೂಕು ಕಚೇರಿ ಮುಂದೆ ಪಿಕೆಟಿಂಗ್ ಮಾಡುವಾಗ ಸಣ್ಣಮ್ಮ ಪೋಲೀಸರ ಗುಂಡಿಗೆ ಬಲಿಯಾಗಿ ಗಂಗಮ್ಮ ಗಾಯಗೊಂಡಳು. ಹೊಸದುರ್ಗದ ಸಂತೆಯ ದಿವಸದಂದು ಮಂಗಮ್ಮ ತಾಲೂಕು ಕಚೇರಿ ಮುಂದೆ

ಧ್ವಜ ಹಾರಿಸಿದಳು. ಇವರೆಲ್ಲರ ಪ್ರಯತ್ನದಿಂದಾಗಿ ಮೈಸೂರು ಜವಾಬ್ದಾರಿ ಸರಕಾರವನ್ನು ಪಡೆಯಿತು.

### ೪. ಹೈದರಾಬಾದ್ ಸಂಸ್ಥಾನದಲ್ಲಿನ ಮಹಿಳೆಯರ ವಿರೋಧ

ಹೈದರಾಬಾದ್ ಸಂಸ್ಥಾನ ಬೀದರ್, ರಾಯಚೂರು, ಗುಲ್ಬರ್ಗಾ ಜಿಲ್ಲೆಗಳನ್ನು ಒಳಗೊಂಡಿತ್ತು. ಈ ಸಂಸ್ಥಾನದ ಮಹಿಳೆಯರ ಸ್ಥಿತಿ ಮದ್ರಾಸ್, ಮುಂಬಯಿ, ಮೈಸೂರುಗಳಿಗಿಂತ ಭಿನ್ನವಾಗಿತ್ತು. ಈ ಸಂಸ್ಥಾನದ ಮಹಿಳೆಯರು ವಸಾಹತುಶಾಹಿ ವಿರುದ್ಧ ಅಲ್ಲದೆ, ನಿಜಾಂ, ರಜಾಕಾರರ ವಿರುದ್ಧವೂ ಹೋರಾಡಬೇಕಾದ ಸ್ಥಿತಿಯಿತ್ತು. ಅಲ್ಲದೆ ಈ ಸಂಸ್ಥಾನದಲ್ಲಿ ಮರಾಠಿ, ತೆಲುಗು, ಉರ್ದು, ಪರ್ಷಿಯನ್ ಭಾಷೆಗಳು ಬಳಕೆಯಲ್ಲಿ ಬಂದು, ಕನ್ನಡ ಭಾಷೆಗೆ ಸ್ಥಾನವನ್ನೇ ಕೊಟ್ಟಿರಲಿಲ್ಲ. ಮನೆಯಲ್ಲಿ ಇಲ್ಲವೆ ಮನೆಯಾಚೆಗೆ ತಿಳಿದೊ ತಿಳಿಯದೆಯೋ ರಾಷ್ಟ್ರಗೀತೆ ಹಾಡುವ 'ಜೈಹಿಂದ್' ಎಂದು ಹೇಳದಂತೆ ನಿಜಾಂ ಸರಕಾರ ಆಜ್ಞೆ ಹೊರಡಿಸಿತ್ತು. ಸಂಸ್ಥಾನದ ಎಲ್ಲೆಡೆ ಉರ್ದುಭಾಷೆ ಹೆಚ್ಚಿಗೆ ಬಳಕೆಯಲ್ಲಿತ್ತು. ಮಹಿಳೆಯರು ಪರದೆ ಹಾಕಿಕೊಂಡು ಮನೆಯಾಚೆ ಬರಬೇಕಾದ ಸಂದರ್ಭಗಳಿದ್ದವು. ಹೀಗಾಗಿ ಈ ಭಾಗದ ಮಹಿಳೆಯರು ಹೆಚ್ಚಿನ ಮಟ್ಟಿಗೆ ಹಿಂದುಳಿಯಲು ಕಾರಣವಾಯಿತು. ಹೆಣ್ಣು ಸ್ವತಂತ್ರವಾಗಿ ಉಸಿರಾಡಲು ಅವಕಾಶವಿರಲಿಲ್ಲ. ಇಂಥ ಸಂದರ್ಭದಲ್ಲಿ ಮಹಿಳೆಯರು ನೇರವಾಗಿ ಚಳವಳಿಯಲ್ಲಿ ಭಾಗವಹಿಸುವುದು ಕನಸೇ ಆಗಿತ್ತು. ಆದರೂ ಪರೋಕ್ಷವಾಗಿ ಪ್ರಾಣ-ಮಾನದ ಹಂಗು ತೊರೆದು ಹೋರಾಡಿರುವ ಉದಾಹರಣೆಗಳು ಈ ಭಾಗದಲ್ಲಿದೆ.

ಇಡೀ ರಾಷ್ಟ್ರವೇ ಸ್ವಾತಂತ್ರ್ಯ ಚಳವಳಿಯಲ್ಲಿ ತೊಡಗಿದಾಗ ಹೈದರಾಬಾದ್ ಸಂಸ್ಥಾನವು ಮಾತ್ರ ಯಾವುದೇ ಚಳವಳಿಗೆ ಅವಕಾಶ ಕೊಡದೆ, ಸ್ವಾತಂತ್ರ್ಯ ಚಳವಳಿ ಬಗ್ಗೆ ಯಾವ ವಿಷಯವು ಗೊತ್ತಾಗದಂತೆ ವ್ಯವಸ್ಥೆ ಮಾಡಿತ್ತು. ಆದರೆ ಬ್ರಹ್ಮಸಮಾಜ ಆರ್ಯ ಸಮಾಜಗಳು ಸ್ತ್ರೀ ಸುಧಾರಣೆ ಮತ್ತು ರಾಷ್ಟ್ರೀಯ ಚಳವಳಿ ಕುರಿತಂತೆ ಕಾರ್ಯಕ್ರಮಗಳನ್ನು ಹಮ್ಮಿಕೊಂಡಿದ್ದವು. ಆದರೆ ನಿಜಾಂ ಸರಕಾರ ಇಂಥ ಸಾಮಾಜಿಕ, ಆರ್ಥಿಕ, ರಾಜಕೀಯ, ಧಾರ್ಮಿಕ ಸಂಘಟನೆ ಮತ್ತು ಚಟುವಟಿಕೆಗಳ ಮೇಲೆ ನಿಷೇಧ ಹೇರಿತ್ತು. ಇದರಿಂದಾಗಿ ಸಾರ್ವಜನಿಕ ಸಭೆ-ಸಮಾರಂಭಗಳು ಅಷ್ಟಾಗಿ ನಡೆಯುತ್ತಿರಲಿಲ್ಲ. ರಾಷ್ಟ್ರನಾಯಕಿ-ನಾಯಕರು ಸಂಸ್ಥಾನವನ್ನು ಪ್ರವೇಶಿಸಲು ನಿಜಾಂ ಸರಕಾರದ ಅನುಮತಿ ಪಡೆಯಬೇಕಿತ್ತು. ಇಂಥ ಸ್ಥಿತಿಯಲ್ಲಿಯೂ ೧೯೩೨ರಲ್ಲಿ ಹೈದ್ರಾಬಾದ್ ಸಂಸ್ಥಾನದ ರಾಜಕೀಯ ಸಮಾವೇಶ ಕಾಕಿನಾಡದಲ್ಲಿ ಜರುಗಿತು. ಈ ಸಮಾವೇಶದ ಅಧ್ಯಕ್ಷೆಯಾಗಿ ಸರೋಜಿನಿನಾಯ್ಡು ಅವರು ಆಯ್ಕೆಯಾಗಿದ್ದರು. ಸರೋಜಿನಿಯವರ ಭಾಷಣದಿಂದ ಪ್ರಭಾವಿತರಾದ ನಾಡ ಪ್ರೇಮಿಗಳು ಮನೆಯಲ್ಲಿರುವ ಹೆಣ್ಣುಮಕ್ಕಳಿಗೂ ಮಾತನಾಡಲು ಅವಕಾಶವಿರಬೇಕು ಎಂದರು. ಈ ಸಮಾವೇಶ ಮಹಿಳೆಯರು ತಮ್ಮ ಕುಟುಂಬಗಳಿಂದ ಆಚೆ ಬಂದು ಚಿಂತಿಸಲು ಅವಕಾಶ ನೀಡಿತು.

ಹೈದರಾಬಾದ್ ಸಂಸ್ಥಾನದವರು ರಜಾಕಾರರ ವಿರುದ್ಧ, ನಿಜಾಂ ಸರಕಾರದ ಮತ್ತು ಬ್ರಿಟಿಷ್ ಸರಕಾರದ ವಿರುದ್ಧ ಹೋರಾಡಿ ಸೆರೆಮನೆ ಕಂಡರು. ಆಗ ಗೃಹಿಣಿಯರೇ ತಮ್ಮ ಕುಟುಂಬದ ಹೊಣೆ ಹೊತ್ತು, ಹೊಲದಲ್ಲಿ ದುಡಿಯುವಂತಾಯಿತು. ಈ ಭಾಗದ ಮಹಿಳೆಯರು ಅತ್ಯಾಚಾರಕ್ಕೆ ಒಳಗಾಗಿದ್ದಷ್ಟೇ ಅಲ್ಲದೆ ಆಸ್ತಿ-ಪಾಸ್ತಿಗಳನ್ನು ಸಹ ಕಳೆದುಕೊಂಡರು. ಭೂಗತರಾಗಿ ಇದ್ದ ಗಂಡಸರಿಗೆಲ್ಲಾ ರಕ್ಷಣೆ ನೀಡಿದ್ದಾರೆ. ರೈತನ ಹೆಂಡತಿಯೊಬ್ಬಳು ಭೂಗತರಾಗಿದ್ದ ರಾಜ ಪುರೋಹಿತರಿಗೆ ತನ್ನ ಮಗ್ಗುಲಲ್ಲಿಯೇ ಮಲಗಿಸಿಕೊಂಡು ರಕ್ಷಣೆ ಕೊಟ್ಟ

ಉದಾಹರಣೆಯೂ ಇದೆ. ಪುರೋಹಿತರು ಕಾಯಿಲೆ ಬಂದು ಮಲಗಿದರು. ಆಗ ಅವರ ಹೆಂಡತಿ, ಅಜ್ಜಿ ಅವರ ಮಲ ಮೂತ್ರಗಳನ್ನು ತೆಗೆದುಹಾಕಿ ರಕ್ಷಿಸಿದ್ದಾರೆ. ಇಂಥ ಪರೋಕ್ಷ ಕಾರ್ಯಗಳನ್ನು ಸ್ತ್ರೀವಾದಿ ನೆಲೆಯಿಂದ ಪರಿಶೀಲಿಸಬೇಕಿದೆ.

ಗಜೇಂದ್ರಗಡದ ಸುಬ್ಬಮ್ಮ, ಕಮಲಮ್ಮ ಎಂಬುವರು ಗುಪ್ತಚಾರಿಣಿಯರಾಗಿ ರಜಾಕಾರರನ್ನು ಕುರಿತಂತೆ ಸಂಪೂರ್ಣ ಮಾಹಿತಿಯನ್ನು ರಾಜ ಪುರೋಹಿತರಿಗೆ ತಿಳಿಸುತ್ತಿದ್ದರು. ಇದನ್ನು ತಿಳಿದ ಸತ್ಯಾಗ್ರಹಿಗಳು ರಜಾಕಾರರ ವಿರುದ್ಧ ನಿಜಾಂ ಸರಕಾರದ ವಿರುದ್ಧ ಪ್ರತಿಭಟನೆ-ದಾಳಿಗಳನ್ನು ಕೈಗೊಂಡರು. ಸತ್ಯಾಗ್ರಹಿಗಳು ಚಳವಳಿ ಮಾಡುವಾಗ ಅವರಿಗೆ ಶುಭವಾಗುವಂತೆ ಮಹಿಳೆಯರು ಬಯಸಿ ಅವರಿಗೆ ಆರತಿ ಮಾಡುತ್ತಿದ್ದರು. ಕಮಲಾಬಾಯಿ ದೇಸಾಯಿ ಎಂಬುವವಳು ತನ್ನ ಗೆಳತಿಯರೊಂದಿಗೆ ಬಂಡಿ ಮಾಡಿಕೊಂಡು ಬಂದು ಸತ್ಯಾಗ್ರಹಿಗಳಿಗೆ ಸಿಹಿಕೊಟ್ಟು ಆರತಿ ಮಾಡಿ ಹಾಗೂ ಹಣೆಗೆ ತಿಲಕವಿಟ್ಟ ಉದಾಹರಣೆಗಳನ್ನು ನೋಡಬಹುದು.

ಬೆಟಗೇರಿಯ ಶಾಮವ್ವ ಮತ್ತು ಆಕೆಯ ಮಗಳಾದ ಲಕ್ಷ್ಮವ್ವ ಪಾತ್ರದ ಜೋಗಮ್ಮರಾಗಿ ಬೆಟಗೇರಿ, ಅಳವಂಡಿ ಗ್ರಾಮದ ರಜಾಕಾರರ ಕ್ಯಾಂಪಿನ ಚಟುವಟಿಕೆಗಳ ವಿಷಯವನ್ನು ಸಂಗ್ರಹಿಸಿ ಮುಂಡರಗಿ ಶಿಬಿರಕ್ಕೆ ಕಳಿಸುತ್ತಿದ್ದರು. ಈ ವಿಷಯ ತಿಳಿದ ರಜಾಕಾರರು ಶಾಮವ್ವ, ಲಕ್ಷ್ಮವ್ವರಿಗೆ ಚಿತ್ರಹಿಂಸೆ ಕೊಟ್ಟು ಕೊಂದುಹಾಕಿದರು. ಇವರಲ್ಲದೆ ಕೊಪ್ಪಳ ತಾಲೂಕಿನ ನರಸವ್ವ, ಸುಮಂಗಳಮ್ಮ, ಶಾಂತಾಬಾಯಿ, ರುಕ್ಮಿಣಿಬಾಯಿ, ಲಕ್ಷ್ಮಿಬಾಯಿ, ಬಸಮ್ಮನವರೂ, ಗಂಗಾವತಿ ತಾಲೂಕಿನಿಂದ ಸರಳಾಬಾಯಿ, ಸುನೀತಾಬಾಯಿ, ಶಾಂತಮ್ಮ ದೇಸಾಯಿ, ಕುಷ್ಟಗಿ ತಾಲೂಕಿನಿಂದ ಲಕ್ಷ್ಮವ್ವ, ನಿಂಗಮ್ಮ, ಗಂಗವ್ವ, ಮುದಕವ್ವ, ಜಾಲಮ್ಮ, ಸುಮಿತ್ರಾಬಾಯಿ, ಸಂಗವ್ವ, ಅಂದವ್ವ, ಯಲವ್ವ, ರುಕಮವ್ವ, ರಾಧಾಬಾಯಿ, ಸೀತಾಬಾಯಿ, ಭೀಮವ್ವ, ತಿಮ್ಮವ್ವ, ಫಕೀರವ್ವ, ರಂಗವ್ವ, ಮುನಿಯಮ್ಮ, ಅವ್ವಕ್ಕ, ಪಾರ್ವತೆವ್ವ, ನಾಗವ್ವ, ಮುದಕವ್ವ, ಯಲ್ಲವ್ವ, ಬಸವ್ವ, ತಿಮ್ಮವ್ವ, ಈರವ್ವ, ಅಕ್ಕಮ್ಮ, ಸೀತಮ್ಮ, ಶಂಕ್ರಮ್ಮ ಮೊದಲಾದವರು ದೇಶಭಕ್ತಿಯನ್ನು ಮೆರೆದರು.

೧೯೪೭ರಲ್ಲಿ ಇಡೀ ದೇಶ ಸ್ವಾತಂತ್ರ್ಯ ದೊರೆತ ಸಂತೋಷದಲ್ಲಿದ್ದರೂ ನಿಜಾಮನ ಹಿಡಿತದಿಂದ ಹೈದ್ರಾಬಾದ್ ಸಂಸ್ಥಾನ ಮಾತ್ರ ಬಿಡುಗಡೆ ಪಡೆದಿರಲಿಲ್ಲ. ನಿಜಾಮ ಎಷ್ಟೇ ಜನರನ್ನು ಹತ್ತಿಕ್ಕಿದರೂ ಸ್ವಾತಂತ್ರ್ಯದ ಕಿಚ್ಚು ಜನರನ್ನು ತಡೆಯಲಿಲ್ಲ. ಮಾಲಗತ್ತಿಯ ಸೀತವ್ವ ತ್ರಿವರ್ಣ ಧ್ವಜವನ್ನು ಹಾರಿಸಲು ಮುಂದೆ ಬಂದು ಒಂದು ಕೈಯಲ್ಲಿ ಧ್ವಜ, ಇನ್ನೊಂದು ಕೈಯಲ್ಲಿ ಕುಡುಗೋಲು ಹಿಡಿದು, ಧ್ವಜ ಹಾರಿಸಿದ್ದಳು. ಸೀತವ್ವ ಬಾಂದಿನಾಳ ಕತ್ರಿಯು ಸಾರಾಯಿ ವಿರುದ್ಧ ಹೋರಾಡಿದಳು. ಕನ್ನಡಿಗರಲ್ಲಿ ಕನ್ನಡದ ಅಭಿಮಾನ ಉಂಟುಮಾಡಲು ಕನ್ನಡಿಗರು ನಿದ್ರಾದೇವಿಯಿಂದ ಕೂಡಿರುವರು ಎಂದು ಎಚ್ಚರಿಸಿದ್ದಳು. ಶ್ರೀಮತಿ ಸುಭದ್ರಮ್ಮ, ರಾಧಾಬಾಯಿ ಎಂಬುವವರು ೧೯೪೭-೪೮ರ ಚಳವಳಿಯಲ್ಲಿ ಭಾಗವಹಿಸಿದ್ದರು. ಸುಭದ್ರಮ್ಮ ಗಜೇಂದ್ರಗಡ ಕ್ಯಾಂಪ್, ಯಲಬುರ್ಗಾ, ಕುಷ್ಟಗಿ ತಾಲೂಕುಗಳಲ್ಲಿ ಸಂಚರಿಸಿ ರಜಾಕಾರರ ಸುದ್ದಿಗಳನ್ನು ತಿಳಿಸಿದರೆ, ರಾಧಾಬಾಯಿ ಶಿರುಗುಪ್ಪ, ಮುದೇನೂರು ಕಾರ್ಯಾಚರಣೆಯಲ್ಲಿ ಭಾಗವಹಿಸಿ ಮಿಲ್ಟ್ರಿ ದಾಳಿಯಲ್ಲಿಯೂ ಇದ್ದಳು. ಹೈದರಾಬಾದಿನ ಸಂಸ್ಥಾನದಲ್ಲಿ ಚಳವಳಿ ಚಾಲ್ತಿಯಲ್ಲಿದ್ದಾಗ ಹಿಂದೂ-ಮುಸ್ಲಿಂ ರಜಾಕಾರರ ನಡುವೆ ಕಾದಾಟಗಳು ನಡೆದು ಮುಸ್ಲಿಂ ಮಹಿಳೆಯರ ಮೇಲೂ ಅತ್ಯಾಚಾರಗಳನ್ನು ಎಸಗಿದ ಉಲ್ಲೇಖಗಳಿವೆ. ಅಂಥ ಸಂದರ್ಭದಲ್ಲಿ ಮುಸ್ಲಿಂ ಮಹಿಳೆಯರು ಹಿಂದೂ ಸ್ತ್ರೀಯರನ್ನು ಪರದೆ ಧರಿಸಿ

ರಕ್ಷಿಸಿದ್ದರೆ, ಹಿಂದೂ ಮಹಿಳೆಯರು ಮುಸ್ಲಿಂ ಸ್ತ್ರೀಯರನ್ನು ಹಣೆಗೆ ಕುಂಕುಮ ಹಚ್ಚಿ ರಕ್ಷಿಸಿದ ಭಾವೈಕ್ಯತೆಯ, ಮಾನವೀಯತೆಯ ಉದಾಹರಣೆಗಳನ್ನು ನೋಡಬಹುದು. ಇಂಥ ಹಲವು ಉಲ್ಲೇಖ-ದಾಖಲೆಗಳು ದೊರೆಯುತ್ತವೆ. ಇಲ್ಲಿ ಹೆಣ್ಣಿಗೆ ಹೆಣ್ಣೇ ಶತ್ರು ಎಂಬ ಪುರುಷ ಸಮಾಜದ ಹೇಳಿಕೆಯನ್ನು ಅಲ್ಲಗಳೆಯಬೇಕಾಗಿದೆ. ಸ್ತ್ರೀವಾದಿ ನೆಲೆಯಿಂದ ಹೈದ್ರಾಬಾದ್ ಸಂಸ್ಥಾನದ ಮಹಿಳೆಯರ ಅಧ್ಯಯನ ಸಾಕಷ್ಟು ಆಗಿಲ್ಲ. ಇಂದಿಗೂ ಈ ಭಾಗದ ಮಹಿಳೆಯರು ಹೆಚ್ಚು ಸಂಪ್ರದಾಯವಾಗಿಯೇ ಇದ್ದಾರೆ. ಕೆಲವರು ಬ್ರಹ್ಮ, ಆರ್ಯ ಸಮಾಜದ ಪ್ರಭಾವಕ್ಕೆ ಒಳಗಾಗಿ ವಿಧವಾ ವಿವಾಹ ಮೊದಲಾದ ಸುಧಾರಣೆಗಳನ್ನು ಸ್ವಾಗತಿಸಿದ್ದಾರೆ. ಇಲ್ಲಿನ ಹಲವು ಆಚರಣೆಗಳು ಮುಸ್ಲಿಮರ ಆಚರಣೆಗಳಿಂದ ಪ್ರಭಾವಿತವಾಗಿವೆ. ಇಂದಿಗೂ ಕನ್ನಡ ಭಾಷೆಯನ್ನು ಇತರೆ ಕನ್ನಡ ಪ್ರದೇಶಗಳಂತೆ ಸ್ವಚ್ಛವಾಗಿ ಮಾತನಾಡಲು ಈ ಭಾಗದವರಿಗೆ ಸಾಧ್ಯವಾಗುತ್ತಿಲ್ಲ. ಈ ಭಾಗದವರಲ್ಲೂ ಉರ್ದು ಮಿಶ್ರಿತ ಪದ ಪ್ರಯೋಗಗಳು ಕನ್ನಡದಲ್ಲಿ ಲೀನವಾಗಿವೆ. ಇಂಥ ಸಾಂಸ್ಕೃತಿಕ ಮಹತ್ತ್ವವನ್ನು ಅರಿಯುವ ಅಧ್ಯಯನದ ಅವಶ್ಯಕತೆಗಳು ಹೈದ್ರಾಬಾದ್ ಸಂಸ್ಥಾನದ ಭಾಗಕ್ಕಿದೆ.

## ೫. ಕೊಡಗಿನ ಮಹಿಳೆಯರ ಪ್ರತಿಕ್ರಿಯೆ

ಕ್ರಿ.ಶ. ೧೮೩೪ರಲ್ಲಿ ಕೊಡಗು ಬ್ರಿಟಿಷರ ಅಧೀನವಾಯಿತು. ಪಾನನಿರೋಧ, ವಿದೇಶಿ ಬಟ್ಟೆಗಳ ಬಹಿಷ್ಕಾರ, ಪಿಕೆಟಿಂಗ್‌ಗಳಲ್ಲಿ ವಿರಾಜಪೇಟೆ, ಮಡಿಕೇರಿಯ ಮಹಿಳೆಯರು ಭಾಗವಹಿಸಿದ್ದರು. ಸತ್ಯಾಗ್ರಹದಲ್ಲಿ ಕೋಶಾಧಿಕಾರಿಯಾಗಿ 'ಅಕ್ಕವೆ' ಎಂಬುವವರು ಕಾರ್ಯ ನಿರ್ವಹಿಸಿದ್ದಳು. ಪಂದ್ಯಂಡ ಸೀತಮ್ಮ, ಬಲ್ಯಾಂಟಂಡ ಮುದ್ದವ್ವ ಎಂಬ ಇಬ್ಬರು ಮಹಿಳೆಯರು ಕೂಡಾ ಚಳವಳಿಯಲ್ಲಿ ನಿರತವಾಗಿದ್ದರು. ಗಾಂಧಿ ಅವರು ಸ್ವಾತಂತ್ರ್ಯ ಚಳವಳಿ ಕುರಿತಂತೆ ಪ್ರಸಾರ ಮಾಡಲು ದೇಶದ ವಿವಿಧ ಭಾಗಗಳಿಗೂ ಭೇಟಿ ಕೊಡುತ್ತಿದ್ದರು. ಅಂಥ ಪ್ರವಾಸದಲ್ಲಿ ಕೊಡಗಿಗೂ ಭೇಟಿ ನೀಡಿದ್ದರು. ಆಗ ಖ್ಯಾತ ಕತೆಗಾರ್ತಿ ಗೌರಮ್ಮ ಸಹ ಸತ್ಯಾಗ್ರಹ ನಿಧಿಗೆ ತನ್ನ ಆಭರಣಗಳನ್ನು ನೀಡಿದ್ದಳು. ಸ್ತ್ರೀವಾದಿ ದೃಷ್ಟಿಯಿಂದ ಕೊಡಗಿನ ಮಹಿಳೆಯರು ಸ್ವಾತಂತ್ರ್ಯ ಚಳವಳಿಗೆ ಕೊಟ್ಟ ಸಹಕಾರ, ವಸಾಹತುಶಾಹಿ ಆಳ್ವಿಕೆ ವಿರುದ್ಧ ತೋರಿದ ಪ್ರತಿಭಟನೆ, ಪ್ರತಿಕ್ರಿಯೆಗಳನ್ನು ಅಧ್ಯಯನ ಮಾಡುವ ಸಾಧ್ಯತೆಗಳು ವಿಪುಲವಾಗಿವೆ.

ಈ ಮೇಲಿನ ಐದು ಘಟಕಗಳು ವಸಾಹತುಶಾಹಿ ಆಳ್ವಿಕೆ ವಿರುದ್ಧ ಚಳವಳಿ, ಸತ್ಯಾಗ್ರಹ ಇತ್ಯಾದಿಗಳ ಮುಖೇನ ಸ್ವಾತಂತ್ರ್ಯವನ್ನು ಪಡೆದವು. ಆದರೆ ಈ ಭಾಗಗಳು ಹರಿದು ಹಂಚಿಹೋಗಿದ್ದವು. ಅವುಗಳನ್ನು ಒಂದುಗೂಡಿಸುವುದು ಜರೂರು ಆಗಿತ್ತು. ಈ ದಿಸೆಯಲ್ಲಿ ನಡೆದ ಚಳವಳಿಯೇ ಕರ್ನಾಟಕದ ಏಕೀಕರಣ ಚಳವಳಿ.

## ೫.೩ ಏಕೀಕರಣ ಚಳವಳಿ ಮತ್ತು ಮಹಿಳಾ ಪ್ರತಿಕ್ರಿಯೆ

ರಾಷ್ಟ್ರದ ಸ್ವಾತಂತ್ರ್ಯ ಚಳವಳಿಯ ಕಾಲಘಟ್ಟದಲ್ಲಿಯೇ ಏಕೀಕರಣ ಚಳವಳಿಯೂ ಹುಟ್ಟಿತ್ತು. ಇವರ ಜೊತೆಗೆ ಮಹಿಳಾ ಚಳವಳಿಗಳು ಅಸ್ತಿತ್ವಕ್ಕೆ ಬಂದಿದ್ದವು. ಕನ್ನಡದ ಭೂಪ್ರದೇಶಗಳು ಐದು ಘಟಕಗಳಲ್ಲಿ ಹಂಚಿಹೋಗಿದ್ದವು. ಮತ್ತೆ ಈ ಐದು ಘಟಕಗಳ ಏಕೀಕರಣಕ್ಕೆ ಹಲವಾರು ಅಂಶಗಳು ಕಾರಣವಾಗಿದ್ದವು.

ಅವುಗಳಲ್ಲಿ ಮಹಿಳಾ ಸಾಹಿತ್ಯ ಸಮ್ಮೇಳನಗಳು, ಮಹಿಳಾ ಕವಿಗೋಷ್ಠಿಗಳು, ಮಹಿಳಾ ಸಮಾಜಗಳು, ಲೇಖಕಿಯರು, ಇತರೆ ಮಹಿಳೆಯರು ಪ್ರಧಾನರಾಗಿದ್ದಾರೆ. ಆದರೆ ಏಕೀಕರಣದ ಪರಿಕಲ್ಪನೆ ಬಂದ ತಕ್ಷಣ ನಮಗೆ ವ್ಯಕ್ತವಾಗುವುದು ಆಯೋಗಗಳು, ಸಭೆ, ಸಮಾರಂಭಗಳು. ಆದರೆ ಮಹಿಳೆಯರನ್ನು ಮತ್ತೆ ಈ ನೆಲೆಯಲ್ಲಿ ದಾಖಲಿಸಿಲ್ಲ. ಇದನ್ನು ಸ್ತ್ರೀವಾದವು ಪ್ರಶ್ನಿಸಿ ಮಹಿಳಾ ಸಾಹಿತಿಗಳ ಹಾಗೂ ಅವರ ಸೃಷ್ಟಿಶೀಲತೆಯನ್ನು ದಾಖಲಿಸಲು ಹೊರಟಿದೆ. ಮಹಿಳಾ ಸಾಹಿತ್ಯ ಸಮ್ಮೇಳನಗಳು ಜರುಗಿ ಅವುಗಳು ಸ್ವಾತಂತ್ರ್ಯ ಚಳವಳಿ, ನಾಡಿನ ಏಕೀಕರಣ ಕುರಿತು ಚಿಂತಿಸಿದ್ದನ್ನು ಅಭ್ಯಾಸ ಮಾಡಬೇಕಾಗಿದೆ. ೧೯೩೮ರಲ್ಲಿ ಅನ್ನಪೂರ್ಣಬಾಯಿ ದೇಶಮುಖ್ ಎಂಬಾಕೆ ಮುಂಬಯಿ ಶಾಸನ ಸಭೆಯಲ್ಲಿ ಕರ್ನಾಟಕದ ಏಕೀಕರಣದ ಬಗ್ಗೆ ಗೊತ್ತುವಳಿಯನ್ನು ಬೆಂಬಲಿಸಿದ್ದಳು. ಮುಂಬಯಿ ಕರ್ನಾಟಕದ ಗಡಿ ಭಾಗಗಳಲ್ಲಿ ಮಹಾರಾಷ್ಟ್ರೀಯರು ಆತಂಕದ ವಾತಾವರಣ ಮೂಡಿಸುತ್ತಿದ್ದರು. ಅಂಥ ಸಂದರ್ಭದಲ್ಲಿ ಜಯದೇವಿ ತಾಯಿ ಲಿಗಾಡೆ ಸೊಲ್ಲಾಪುರ, ಅಕ್ಕಲಕೋಟೆ ಭಾಗಗಳಲ್ಲಿ ಪ್ರವಾಸ ಮಾಡುವುದರ ಮೂಲಕ ಕನ್ನಡಿಗರ ಹಕ್ಕುಬಾದ್ಯತೆಗಳನ್ನು ಕಾಪಾಡಿಕೊಳ್ಳಲು ಎಚ್ಚರಿಸಿದ್ದೂ ಇದೆ. ರಾಜ್ಯಗಳ ಪುನರ್ ವಿಂಗಡನಾ ಆಯೋಗವು ಸಹ ನಾಡಿನಾದ್ಯಂತ ಪ್ರವಾಸಮಾಡಿ, ಏಕೀಕರಣದ ಬಗ್ಗೆ ಮಾಹಿತಿ, ಜನಾಭಿಪ್ರಾಯಗಳನ್ನು ಸಂಗ್ರಹಿಸುತ್ತಿತ್ತು. ಅಂಥ ಪ್ರವಾಸದಲ್ಲಿ ಆಯೋಗವು ಹುಬ್ಬಳ್ಳಿಗೂ ಬಂದಿತು. ಹುಬ್ಬಳ್ಳಿಯ ಮಹಿಳಾ ಪ್ರತಿನಿಧಿಗಳು ಏಕೀಕರಣವನ್ನು ಬೆಂಬಲಿಸಿ ಮನವಿಯೊಂದನ್ನು ಸಲ್ಲಿಸಿದ್ದರು. ೧೯೫೪ರ ಜೂನ್ ಇಪ್ಪತ್ತಕ್ಕೆ ಧಾರವಾಡಕ್ಕೆ ಆಯೋಗ ಭೇಟಿಯಿತ್ತಾಗ 'ವನಿತಾಸೇವಾ ಸಮಾಜ'ವು ಮನವಿ ಸಲ್ಲಿಸಿತ್ತು.

ರಾಜ್ಯ ಪುನರ್‌ವಿಂಗಡನಾ ಆಯೋಗವು ಕರ್ನಾಟಕದ ಏಕೀಕರಣಕ್ಕೆ ಬಳ್ಳಾರಿ ಜಿಲ್ಲೆಯನ್ನು ಹೊರತುಪಡಿಸಿತ್ತು. ಇದನ್ನು ಅನೇಕ ಮಹಿಳೆಯರು ಪ್ರತಿಭಟಿಸಿದರು. ೧೯೫೫ರ ಅಕ್ಟೋಬರ್ ಐದರಂದು ಭಾರತದ ರಾಷ್ಟ್ರೀಯ ಕಾಂಗ್ರೆಸಿನ ಅಧ್ಯಕ್ಷರಾಗಿದ್ದ ಡೇಬರ್ ಬಂದಿದ್ದರು. ಆಗ ಬಳ್ಳಾರಿಯ ನಲವತ್ತು ಮಹಿಳೆಯರು ಚಿತ್ರದುರ್ಗದಲ್ಲಿ ಡೇಬರ್ ಅವರನ್ನು ಭೇಟಿ ಮಾಡಿ ತಮ್ಮ ಮಾತುಗಳಲ್ಲಿ ಅಸಹನೀಯತೆಯನ್ನು ವ್ಯಕ್ತಪಡಿಸಿದರು. ಮನವಿಗಳನ್ನು ನೀಡಿದರು. ವಯಸ್ಸಾದ ಮಹಿಳೆಯೊಬ್ಬಳು ಬಂದು `ತಾನು ಸಾಯುವ ಸ್ಥಿತಿಯಲ್ಲಿ ಇದ್ದೇನೆ, ತನಗೆ ಬಳ್ಳಾರಿ ಜಿಲ್ಲೆ ಕರ್ನಾಟಕದಲ್ಲಿ ಸೇರುವುದನ್ನು ನೋಡಬೇಕು ಎಂಬ ಇಂಗಿತವನ್ನು ವ್ಯಕ್ತಪಡಿಸಿದ್ದೂ ಇದೆ.` ಬಳ್ಳಾರಿಯ ಅಲ್ಲಂ ಸುಮಂಗಳಮ್ಮ, ಇನ್ನೊಬ್ಬ ಮಹಿಳೆಯಾದ ತೊಗರಿ ಸರ್ವ ಮಂಗಳಮ್ಮ ಸಹ ಬಳ್ಳಾರಿಯನ್ನು ಸೇರಿಸದೆ ಇದ್ದುದಕ್ಕೆ ತಮ್ಮ ಅಸಮಾಧಾನವನ್ನು ವ್ಯಕ್ತಪಡಿಸಿದರು.

೧೯೪೪ರ ಸಾಹಿತ್ಯ ಸಮ್ಮೇಳನದಲ್ಲಿಯೂ ಕನ್ನಡ ಭಾಷೆಯನ್ನು ಬೆಳೆಸಬೇಕು, "ಭಾಷೆ ಎನ್ನುವುದು ಜನರ ಉಸಿರು. ಉಸಿರನ್ನು ಹತ್ತಿಕ್ಕಿದರೆ ಸಾವು ನಿಶ್ಚಿತವಾಗಿದೆ. ಅಂತೆಯೇ ಕನ್ನಡ ಭಾಷೆಯನ್ನು ಹತ್ತಿಕ್ಕಿದರೆ ಅದನ್ನು ನಾಶ ಮಾಡಿದಂತಾಗುವುದು" ಎಂದು ತಿಳಿಸಲಾಯಿತು. ಅಲ್ಲದೆ ಮಹಿಳಾ ಶಿಕ್ಷಣಕ್ಕೆ ಪ್ರೋತ್ಸಾಹ ನೀಡಬೇಕೆಂಬ ನಿರ್ಣಯಗಳನ್ನು - ಸಮ್ಮೇಳನವು ಪಾಸು ಮಾಡಿತು. ಕರ್ನಾಟಕದ ಏಕೀಕರಣದ ಬಗ್ಗೆ ಚರ್ಚಿಸುತ್ತ

"ಕರ್ನಾಟಕದ ಏಕೀಕರಣದ ಸಮಸ್ಯೆ ನಮ್ಮ ಪ್ರಾಂತ ನಿರ್ಮಾಣವೇ ಆಗಿರುವುದು. ನಾಡಿನ ಸರ್ವತೋಮುಖ ಅಭಿವೃದ್ಧಿಗೆ ಈ ಪ್ರಾಂತ ನಿರ್ಮಾಣವೇ ಮೂಲಾಧಾರ. ಆದುದರಿಂದ ಕನ್ನಡಿಗರ ಜೀವಾಳದ ಪ್ರಶ್ನೆಯಿದು. ಏಕೀಕರಣದ ಕೂಗು ನಾಡಿನ ತುಂಬಾ ಕೇಳಬೇಕು ನಾಡಿನ

ಅನೇಕ ಮುಖಗಳಿಂದ ಹೊರಡಬೇಕು, ಜೊತೆಗೆ ಎಲ್ಲ ಪಕ್ಷಗಳಿಗೆ ಇದೊಂದು ಸರ್ವ ಸಾಧಾರಣವಾದ ವಿಷಯವಾಗಬೇಕು. ಅಂದರೆ ಮಾತ್ರ ಸರಕಾರ ಇದನ್ನು ಕಾರ್ಯರೂಪಕ್ಕೆ ತರುವುದು'' [೧೯]

ಎಂದು ಹೇಳಿದರು. ಇದೇ ಸಮ್ಮೇಳನದಲ್ಲಿ ಮಹಿಳೆಯರ ಸಮಸ್ಯೆಗಳಾದ ವರದಕ್ಷಿಣೆ, ಬಹುಪತ್ನಿತ್ವ, ಗಂಡುಮಕ್ಕಳನ್ನು ದತ್ತಕ್ಕೆ ತೆಗೆದುಕೊಳ್ಳುವ ವಿಷಯಗಳ ಬಗ್ಗೆ ಚರ್ಚಿಸಲಾಗಿದ್ದು, ಹೆಣ್ಣುಮಕ್ಕಳಿರುವವರು ಬೇರೆಯವರ ಗಂಡುಮಕ್ಕಳನ್ನು ದತ್ತಕ್ಕೆ ತೆಗೆದುಕೊಂಡರೆ, ಹೆಣ್ಣುಮಕ್ಕಳನ್ನು ನಿರ್ಲಕ್ಷಿಸಿದಂತಾಗುವುದು. ಅದಕ್ಕಾಗಿ ಯಾರು ಗಂಡುಮಕ್ಕಳನ್ನು ದತ್ತಕ್ಕೆ ಪಡೆಯಬಾರದು ಎನ್ನಲಾಗಿತ್ತು. ರೇಣುಕ ರೈ ಎಂಬಾಕೆಯು 'ಸ್ತ್ರೀ ಧನ'ದ ಬಗ್ಗೆ ಲೇಖನ ಬರೆದಿದ್ದಳು. ಒಟ್ಟಾರೆಯಾಗಿ ೧೯೪೪ರ ಮಹಿಳಾ ಕವಿಗೋಷ್ಠಿ ಹಲವು ವಿಷಯಗಳನ್ನು ಚರ್ಚಿಸಿತು. ಜೊತೆಗೆ ಏಕಕಾಲಕ್ಕೆ ನಾಡು ನುಡಿಯನ್ನು, ಸ್ತ್ರೀಯರ ಒಗ್ಗಟ್ಟಿಗೆ ಸ್ವಾತಂತ್ರ್ಯಕ್ಕೆ ಪ್ರೇರಣೆ ನೀಡಿತು. ಇದನ್ನು ತ್ರಿವೇಣಿ ಸಂಗಮ ಎಂದು ಕರೆಯಲಾಗಿತ್ತು. ೨೯ನೆಯ ಕನ್ನಡ ಸಾಹಿತ್ಯ ಸಮ್ಮೇಳನದ ಅಂಗವಾಗಿ ಮಹಿಳಾಗೋಷ್ಠಿಯ ಅಧ್ಯಕ್ಷತೆಯನ್ನು ಶ್ರೀಮತಿ ತೋಗರಿ ಸರ್ವಮಂಗಳಾಂಬಾ ವೀರಮಲ್ಲಪ್ಪ ಅವರು ವಹಿಸಿದ್ದರು. ಮಹಿಳೆಯರು ನಾಡು ನುಡಿಯ ರಕ್ಷಣೆಯನ್ನು ಹೇಗೆ ಮಾಡಬೇಕೆಂದು ತಿಳಿಸುತ್ತ "ಮಹಿಳೆ ಇಂದು ನಾಡು-ನುಡಿಗೆ, ಏಳಿಗೆಗೆ ಹೆಣಗಬೇಕಾಗಿದೆ. ನಿದ್ರೆಗಣ್ಣಿನ ಅಕ್ಕತಂಗಿಯರನ್ನು ಬಡಿದೆಬ್ಬಿಸಿ ಹದ್ದಿನ ಕಣ್ಣಿನಿಂದ ನಾಡು-ನುಡಿಗಳ ಕಡೆಗೆ ನೋಡುವಂತೆ ಮಾಡಬೇಕಾಗಿದೆ. ಮಹಿಳೆಯರಲ್ಲಿ ನಾಡು-ನುಡಿಯ ಅಭಿಮಾನ ಎಚ್ಚೆತ್ತು ಕನ್ನಡತಿಯರು ದಕ್ಷತೆಯಿಂದ ಪ್ರಾರಂಭಿಸಬೇಕು. ಅಂದಾಗಲೇ ನಾಡು ನಲಿಯುವುದು, ನುಡಿ ಅರಳುವುದು''[೨೦] ಎನ್ನಲಾಗಿತ್ತು. ಮಹಿಳಾ ಗೋಷ್ಠಿಯ ಅಧ್ಯಕ್ಷೆಯಾದ ಶ್ರೀಮತಿ ಪಾವಂಜೆ ಮಂದಾಕಿನಿ ಬಾಯಿ ಅವರು ಭಾಷಣ ಮಾಡಿದರು. ತಮ್ಮ ಭಾಷಣದಲ್ಲಿ ಮದರಾಸಿನ ಕನ್ನಡ ಸ್ಥಿತಿಗತಿಯನ್ನು ತಿಳಿಸಿದ್ದು ಅಲ್ಲದೆ ಕನ್ನಡದ ಚಟುವಟಿಕೆಗಳನ್ನು ಆರಂಭಿಸುವಂತೆ ಹೇಳಿದರು. ಮಹಿಳೆಯರು ಶಿಕ್ಷಣವನ್ನು ಪಡೆದು ಆಂತರಿಕ ಸೌಂದರ್ಯ ಜ್ಞಾನವನ್ನು ಬೆಳೆಸಿಕೊಳ್ಳಬೇಕು ಆಗಲೇ ಬಾಹ್ಯ ಸೌಂದರ್ಯವು ಸಹ ಹೆಚ್ಚುವುದು ಎಂದಿದ್ದರು.

ಮೂವತ್ತಮೂರನೆಯ ಮಹಿಳಾ ಸಮ್ಮೇಳನದ ಸ್ವಾಗತ ಅಧ್ಯಕ್ಷಿಣಿಯಾಗಿ ಶ್ರೀಮತಿ ಜಯದೇವಿತಾಯಿ ಲಿಗಾಡೆ ಅವರು ಆಗಮಿಸಿದ್ದರು. ಕನ್ನಡದ ನುಡಿಗೆ ಸಿಗದ ಮಾನ್ಯತೆಗೆ ಕನ್ನಡಿಗರ ಔದರ್ಯ ಮತ್ತು ಪರರ ಆಕ್ರಮಣವೇ ಕಾರಣವೆಂದು ತಿಳಿಸಿದರು. ಮಹಿಳಾಗೋಷ್ಠಿಯ ಅಧ್ಯಕ್ಷಿಣಿಯಾಗಿ ವಿಮಲಾಬಾಯಿ ಮೇಲುಕೋಟೆ ವಹಿಸಿದ್ದರು. ತಮ್ಮ ಭಾಷಣದಲ್ಲಿ "ಕನ್ನಡನಾಡು ಶೀಘ್ರದಲ್ಲೇ ಉದಯಿಸಲಿ ಈ ನಾಡಿನ ಜನತೆಯ ಸಂಸ್ಕೃತಿಯು ಎಲ್ಲೆಡೆ ವ್ಯಾಪಿಸಲಿ'' ಎಂದು ಆಶಿಸಿದ್ದರು.

೧೯೪೭ರ ಸಮ್ಮೇಳನದ ಮಹಿಳಾಗೋಷ್ಠಿಯ ಸ್ವಾಗತ ಅಧ್ಯಕ್ಷಿಣಿಯಾದ ಟಿ.ಎಚ್.ಎಂ. ಸರ್ವಮಂಗಳಮ್ಮನವರು ಸಹ ಭಾಷಣದಲ್ಲಿ ಮಹಿಳೆಯನ್ನು ಕುರಿತಂತೆ "ಜಗತ್ತಿನ ಇತಿಹಾಸವಲ್ಲಿ ಎಲ್ಲ ವಿಧದ ದಾಸ್ಯಗಳಲ್ಲಿ ಹೆಂಗಸರು ಅನುಭವಿಸುತ್ತಿರುವ ದಾಸ್ಯವು ಬಹು ಕ್ರೂರವಾದುದು''[೨೧] ಎಂದು ಹೇಳಿದರು. ಕರ್ನಾಟಕ ಏಕೀಕರಣದ ಪ್ರಶ್ನೆಯು ಪ್ರಶ್ನೆಯಾಗಿಯೇ ಉಳಿದಿದ್ದು, ಇದಕ್ಕೆ ಪುರುಷರ ಚಂಚಲ ಸ್ವಭಾವವೇ ಕಾರಣವಾಗಿರುವುದು ಎಂದು ಹೇಳಿದರು. ಅಲ್ಲದೆ ಪುರುಷರನ್ನು ಜರಿಯುವುದು ತಮ್ಮ ಉದ್ದೇಶವಲ್ಲ ನಾಡಿನ ನುಡಿಯ ದುಸ್ಥಿತಿಯನ್ನು ಕಂಡು ನೋವಿನಿಂದ ಹೇಳಿದೆ ಎಂದರು.

ಶಾಂತಾದೇವಿ ಮಾಳವಾಡ ಅವರು ಧಾರವಾಡದ ಅಖಿಲ ಭಾರತ ಮಹಿಳಾ ಪರಿಷತ್ತಿನ ಶಾಖೆಯ ಸದಸ್ಯೆಯಾಗಿ ಕನ್ನಡ ಪರ ಹೋರಾಡಲು ಮಹಿಳೆಯರನ್ನು ಸಂಘಟಿಸಿದರು. ಅಲ್ಲಂ ಸುಮಂಗಳಮ್ಮ ಸಹ ಏಕೀಕರಣಕ್ಕೆ ದುಡಿದಿರುವರು. ಹೀಗೆ ಏಕೀಕರಣಕ್ಕೆ ಸಾಹಿತ್ಯ ಸಮ್ಮೇಳನಗಳು, ಅನೇಕ ಮಹಿಳೆಯರು ಶ್ರಮಿಸಿದ್ದಾರೆ. ಸ್ತ್ರೀವಾದಿ ಅಧ್ಯಯನದ ನೆಲೆಗಳಿಂದ ಏಕೀಕರಣದ ಚಳವಳಿಯಲ್ಲಿ ಮಹಿಳೆಯರ ಪಾತ್ರವನ್ನು ಕುರಿತಂತೆ ಅಧ್ಯಯನ ವಸ್ತುಗಳನ್ನು ಆಯ್ಕೆ ಮಾಡಿಕೊಂಡು ಪರಿಶೀಲಿಸಬಹುದು.

## ೫.೪ ಉಪಸಂಹಾರ

ಕನ್ನಡ ಮಹಿಳೆಯರು ಕುಟುಂಬದ ಆಚೆ ಬಂದು ಚಳವಳಿ, ಸತ್ಯಾಗ್ರಹದಲ್ಲಿ ತೊಡಗಿದ್ದೇ ಸ್ವಾತಂತ್ರ್ಯ ಚಳವಳಿಯಲ್ಲಿ. ಎಂದಿಗೂ ನೆರೆ ಮನೆಯ ಕಟ್ಟೆಯನ್ನು ಏರದ ಮಹಿಳೆಯರು ಚಳವಳಿ, ಸತ್ಯಾಗ್ರಹದ ಸಂದರ್ಭಗಳಲ್ಲಿ ಬೀದಿಗೆ ನಿಂತರು. ಬೇರೆಯವರ ಮನೆಯ ಅಂಗಳದಲ್ಲಿ ಉಪವಾಸ ಸತ್ಯಾಗ್ರಹ ಕೈಗೊಂಡರು. ಚಳವಳಿಗೆ ಸೇರಿಕೊಂಡ ಅಣ್ಣ-ತಮ್ಮಂದಿರನ್ನು, ತಂದೆ-ತಾಯಂದಿರನ್ನು ಕಳೆದುಕೊಂಡು ಅನಾಥರಾದರು. ಭೂಗತರಾದವರಿಗೆ ರಕ್ಷಣೆ ನೀಡಿ, ಪೋಲೀಸರಿಂದ ಹಿಂಸೆ, ಅಶ್ಲೀಲ ಬೈಗಳು, ಅವಮಾನ, ಅಪಮಾನಗಳನ್ನು ಉಂಡರು. ಸ್ವಾತಂತ್ರ್ಯ ಚಳವಳಿಯ ಆರಂಭದಿಂದ ಕರ್ನಾಟಕದ ಏಕೀಕರಣದವರೆಗೂ ಮಹಿಳೆಯರು ಪ್ರತ್ಯಕ್ಷವಾಗಿ, ಪರೋಕ್ಷವಾಗಿ ಭಾಗವಹಿಸಿ ಕನ್ನಡತಿಯರು ಅಬಲೆಯರಲ್ಲ ಎಂದು ಜಗತ್ತಿಗೆ ತೋರಿಸಿದ್ದಾರೆ.

### ಅಡಿಟಿಪ್ಪಣಿಗಳು

೧. ಡಾಗ್‌ಮರ ಏಂಜಲ್ಸ್ ಮತ್ತು ಶುಲಾಮಾರ್ಕ್ಸ್ (ಸಂ). ಸುದೀಪ್ತಾ ಕವಿರಾಜ್ "On the construction of colonial power: Structure discourse, Hegemony," **Contesting colonial hegemony**, ಪು. ೩೧
೨. ಜೇಮ್ಸ್‌ಮಿಲ್, **The History of British India**, Vo-೨, ಪು. ೩೦೯-೧೦
೩. ಸರ್ ಹರ್ಬರ್ಟ್ ಹೋಪ್ ರಿಸ್ಲೇ, **The People of India**, ಪು. ೧೭೧
೪. Gevaldine Forbes, ೧೯೯೬, P. ೧೨
೫. ಸ್ಯೆಯದ್ ನೂರುಲ್ ಮತ್ತು ಜೆ.ಪಿ.ನಾಯಕ, **HEI, DEP**, ಪು. ೨೧, ಮೆರಿಡಿತ್ ಬೊರ್ತ್ ವಿಕ್, **The Changing Role of Women**, ಪು. ೬೦-೬೧
೬. ಮಹೇಶ ಚಂದ್ರದೇವ್, "A Sketch of the conditions of the Hindoo Women," **Awakening in the Early Ninteenth century**, Goutam Chattopadhyay, ಪು. ೮೯-೧೦೫
೭. ಲತಾಮಣಿ "Contentius traditions : The debate on sati in colonial India" **Recasting Women; Essays in colonial History** (ಸಂ) ಕುಂಕುಂ ಸಂಗಾರಿ ಮತ್ತು ಸುದೇಶ ವೈದ್, ಪು. ೧೧೭-೧೮
೮. ಮಂಗಳವೀಡು, ಶ್ರೀನಿವಾಸರಾವ್ ಮತ್ತು ಸಂಗಮ ನಾರಾಯಣ, **ಕರ್ನಾಟಕ ಏಕೀಕರಣ**, ಪು. ೪
೯. ಗೋವಿಂದರಾಜು ಸಿ.ಆರ್, **ಕರ್ನಾಟಕದ ಏಕೀಕರಣ ಚಳವಳಿ ಮತ್ತು ಕನ್ನಡ ಸಾಹಿತ್ಯ**, ಪು. ೨೧
೧೦. **ಪ್ರಜಾವಾಣಿ ಪತ್ರಿಕೆ**, ೧೯೯೯, ಫೆಬ್ರವರಿ ೨, ಪು. ೮
೧೧. ಕ್ಯಾತನಹಳ್ಳಿ ರಾಮಣ್ಣ (ಸಂ), **ಫ್ಲೀಟರು ಸಂಗ್ರಹಿಸಿದ ಐದು ಐತಿಹಾಸಿಕ ಲಾವಣಿಗಳು**, ಪು. ೧೪
೧೨. ಗೋವಿಂದರಾಜು ಸಿ.ಆರ್, ಮೇಲಿನದೆ, ಪು. ೧೪
೧೩. ಶ್ರೀಮತಿ ಎಚ್.ಎಸ್, **ಕನ್ನಡ ಮಹಿಳೆ ಮತ್ತು ಸ್ವಾತಂತ್ರ್ಯ ಹೋರಾಟ**, ಪು. ೧೨೩
೧೪. ಅದೇ, ಪು. ೧೨೪
೧೫. ಅದೇ, ಪು. ೧೨೫
೧೬. ಸರೋಜಿನಿ ಚವಲಾರ, **ಬೆಳಗಾವಿ ಜಿಲ್ಲೆಯ ಸ್ವಾತಂತ್ರ್ಯ ಹೋರಾಟಗಾರರು**, ಪು. ೪೨
೧೭. ಸೂರ್ಯನಾಥ್ ಕಾಮತ್, **ಸ್ವಾತಂತ್ರ್ಯ ಸಂಗ್ರಾಮದ ಸ್ಮೃತಿಗಳು**, ಪು. ೧೨೩
೧೮. ಕೊಟಗಿ ಸಿದ್ಧಲಿಂಗಪ್ಪ, **ಹೋರಾಟದ ನೆನಪು, ಸ್ಮರಣ ಸಂಚಿಕೆ**, ಪು. ೩೧-೩೨
೧೯. **ಕನ್ನಡ ಸಾಹಿತ್ಯ ಪರಿಷತ್ಪತ್ರಿಕೆ**, ಸಂಪುಟ-೨೯. ಪು. ೫೩, ೧೯೪೪
೨೦. ಅದೇ, ಪು. ೧೯. ೧೯೪೬
೨೧. ಅದೇ, ಪು. ೬೨

ಅಧ್ಯಾಯ - ೬

# ಸಮಕಾಲೀನ ಸಂದರ್ಭ ಮತ್ತು ಮಹಿಳೆ

೬.೧ ಮಹಿಳಾ ಸಂಘಟನೆಗಳು

೬.೨ ಮಹಿಳಾ ಹೋರಾಟಗಳು

೬.೩ ಮಹಿಳಾ ಸವಾಲುಗಳು

ಅಧ್ಯಾಯ - ೬

# ಸಮಕಾಲೀನ ಸಂದರ್ಭ ಮತ್ತು ಮಹಿಳೆ

ಸಮಕಾಲೀನ ಸಂದರ್ಭ ಮತ್ತು ಮಹಿಳೆ ಎನ್ನುವ ಈ ಅಧ್ಯಾಯದಲ್ಲಿ ಮಹಿಳಾ ಸಂಘಟನೆ-ಹೋರಾಟ-ಸವಾಲುಗಳನ್ನು ಕುರಿತಂತೆ ಚರ್ಚಿಸಲಾಗಿದೆ. ಈಗಾಗಲೇ ಹಲವಾರು ಬೇಡಿಕೆ-ಉದ್ದೇಶಗಳಿಗಾಗಿ ವಿಭಿನ್ನ ಸಂಘಟನೆಗಳಿವೆ. ಅಂತೆಯೇ ಮಹಿಳಾಪರ ಧ್ವನಿಗೆ ಚಿಂತಿಸುವ ಮತ್ತು ಕಾರ್ಯ ಕೈಗೊಳ್ಳುವ ಉದ್ದೇಶಕ್ಕಾಗಿ ಮಹಿಳಾ ಸಂಘಟನೆಗಳು ಅಸ್ತಿತ್ವಕ್ಕೆ ಬಂದಿವೆ. ಇಂಥ ಸಂಘಟನೆಗಳು ಯಾವುವು, ಅವುಗಳು ಮಹಿಳೆಯರನ್ನು ಹೇಗೆ ಸಂಘಟಿಸುವವು ಎನ್ನುವುದನ್ನು ಪರಿಶೀಲಿಸಬೇಕಿದೆ. ಜೊತೆಗೆ ಮಹಿಳೆಯರ ಸಂಘಟನೆಯಲ್ಲಿ ಸರಕಾರದ ಪಾತ್ರವೇನು? ಎಂಬ ಪ್ರಶ್ನೆಗಳಿಗೆ ಉತ್ತರಗಳನ್ನು ಕಂಡುಕೊಳ್ಳಲು ಪ್ರಯತ್ನಿಸಲಾಗಿದೆ. ಸಮಕಾಲೀನ ಸಂದರ್ಭದಲ್ಲಿ ಮಹಿಳಾ ಸಂಘಟನೆಗಳು ಅಸಂಖ್ಯವಾಗಿವೆ. ಅಲ್ಲದೆ ಹಲವಾರು ಉದ್ದೇಶಗಳನ್ನು ಹೊಂದಿರುತ್ತವೆ. ಕೆಲವು ಸಂಘಟನೆಗಳು ಮಹಿಳೆಯರ ವಿರುದ್ಧದ ಕಾನೂನು, ಸರಕಾರದ ನೀತಿ, ಸಂಪ್ರದಾಯ, ಆಚಾರ-ವಿಚಾರಗಳಿಗಾಗಿ ಹೋರಾಟ ಮಾಡುತ್ತಿವೆ. ಮತ್ತೆ ಕೆಲವು ಮಹಿಳೆಯರಿಗೆ ಆಶ್ರಯ ನೀಡುವ, ಅವರಿಗೆ ಕಾನೂನು, ಆರೋಗ್ಯ, ಪರಿಸರ ನೈರ್ಮಲ್ಯೀಕರಣದ ಬಗ್ಗೆ ತಿಳಿಸುತ್ತಿವೆ. ಅಲ್ಲದೆ ಮಹಿಳೆಯರ ಕೌಟುಂಬಿಕ ಕ್ರೌರ್ಯ-ಹಿಂಸೆಗಳಿಗೆ ಪರಿಹಾರವನ್ನು ನೀಡುತ್ತಿವೆ. ಮತ್ತೆ ಕೆಲವು ಉದ್ಯಮಶೀಲತೆ ಮೊದಲಾದ ತರಬೇತಿಗಳನ್ನು ನೀಡಿ, ಮಹಿಳೆಯನ್ನು ಆರ್ಥಿಕವಾಗಿ ಸದೃಢರನ್ನಾಗಿಸಿವೆ. ಇನ್ನೂ ಹಲವಾರು ಕಾರ್ಯಗಳನ್ನು ಮಾಡುತ್ತಿರುವ ಸಂಘಟನೆಗಳ ಕುರಿತಂತೆ ಚರ್ಚಿಸಲಾಗಿದೆ. ಅಲ್ಲದೆ ಈ ಸಂಘಟನೆಗಳು ಯಾವ ಬಗೆಯಲ್ಲಿ ಹೋರಾಟ ಮಾಡುತ್ತಿವೆ ಎಂಬುದನ್ನು ತಿಳಿಯಲು ಪ್ರಯತ್ನಿಸಲಾಗಿದೆ.

ಯಾವುದೇ ಕಾಲಘಟ್ಟಗಳು ಬಂದು ಹೋದರೂ, ಎಷ್ಟೇ ವೈಜ್ಞಾನಿಕವಾಗಿ ಪ್ರಗತಿ ಸಾಧಿಸಿದ್ದೇವೆ ಎಂದರೂ ಹಾಗೂ ಹತ್ತಾರು ಬದಲಾವಣೆಗಳಾದರೂ

ಮಹಿಳೆಯರ ಸವಾಲುಗಳು ಅನಂತವಾಗಿವೆ. ಈ ಸವಾಲುಗಳು ವಿಭಿನ್ನ ಸ್ತರದ ಮಹಿಳೆಯರಿಗೆ ವಿಭಿನ್ನವಾಗಿಯೇ ಕಾಣಿಸಿಕೊಂಡಿವೆ. ಆದರೆ ಅಧ್ಯಯನದ ಅನುಕೂಲಕ್ಕಾಗಿ ಒಟ್ಟಾರೆಯಾದ ಪ್ರಧಾನ ಸವಾಲುಗಳನ್ನು ಕುರಿತಂತೆ ಇಲ್ಲಿ ಗಮನಹರಿಸಲಾಗಿದೆ.

## ೬.೧. ಮಹಿಳಾ ಸಂಘಟನೆಗಳು

ಸಮಾಜದ ವಿಭಿನ್ನ ಸ್ತರಗಳಲ್ಲಿ ಹಂಚಿಹೋದ ಮಹಿಳೆಯರಿಗೆ ಅವರ ಸ್ಥಾನಮಾನಗಳನ್ನು ತಿಳಿಹೇಳುವ ಮತ್ತು ಹಕ್ಕುಬಾಧ್ಯತೆಗಳನ್ನು ಹೊಂದಲು ಇರುವ ಅವಕಾಶಗಳ ಬಗ್ಗೆ ಜಾಗೃತಿ ಮೂಡಿಸುವ ಅವಶ್ಯಕತೆ ಇದೆ. ಇಂಥ ಜಾಗೃತಿಯನ್ನು ಮೂಡಿಸುವುದಕ್ಕಾಗಿಯೆ ಮಹಿಳಾ ಸಂಘಟನೆಗಳು ಹುಟ್ಟಿಕೊಂಡದ್ದು. ೧೯೭೫ ರಿಂದ ೧೯೮೫ರ ಕಾಲಘಟ್ಟದಲ್ಲಿ ಹಲವಾರು ಮಹಿಳಾ ಸಂಘಗಳು, ಸಾಮೂಹಿಕ ಮಹಿಳಾ ಸಂಘಟನೆಗಳು ಅಸ್ತಿತ್ವಕ್ಕೆ ಬಂದವು. ಹೀಗೆ ಅಸ್ತಿತ್ವಕ್ಕೆ ಬಂದ ಸಂಘಟನೆಗಳು ವಿಭಿನ್ನ ಕಾರ್ಯಕ್ರಮಗಳನ್ನು ಹಮ್ಮಿಕೊಂಡು ಮುನ್ನಡೆಯತೊಡಗಿವೆ. ಅವುಗಳಲ್ಲಿ ಕೆಲವು ಚಳವಳಿಗಳು ಪ್ರಚಾರದ ಮೂಲಕ ಜಾಗೃತಿ ತರಲು ಬಯಸುವ ಸ್ವಾಯತ್ತ ಮಹಿಳಾ ಸಂಘಟನೆಗಳು ಸಹ ಆಗಿವೆ. ಇವು ಲೈಂಗಿಕ ಅತ್ಯಾಚಾರ, ಭೂ ಮಾಲೀಕರ ದೌರ್ಜನ್ಯ, ಕುಡಿತ, ಮಾಟಮದ್ದು, ವರದಕ್ಷಿಣೆ, ವಧುದಹನ, ಭ್ರೂಣಹತ್ಯೆ ಮೊದಲಾದವುಗಳ ವಿರುದ್ಧ ಚಳವಳಿಗಳನ್ನು ಹಮ್ಮಿಕೊಳ್ಳುತ್ತಿವೆ. ಮತ್ತೆ ಕೆಲವು ಮಹಿಳೆಯರಿಗೆ ಸೇವೆಗಳನ್ನು, ಆಶ್ರಯ ತಾಣಗಳನ್ನು ರೂಪಿಸುವ ಸಂಘಟನೆಗಳೂ ಹೌದು. ಇವುಗಳಲ್ಲದೆ ವೃತ್ತಿಪರ ಮಹಿಳಾ ಸಂಘಟನೆಗಳನ್ನು ನೋಡಲು ಸಾಧ್ಯ ಇದೆ. ಉದಾಹರಣೆಗೆ ವೈದ್ಯರು, ನ್ಯಾಯವಾದಿಗಳು, ಲೇಖಕಿಯರು, ಕಲಾವಿದರು, ಪತ್ರಕರ್ತೆಯರು ಮೊದಲಾದವರು. ರಾಜಕೀಯ ಪಕ್ಷಗಳ ಮಹಿಳಾ ಶಾಖೆಗಳನ್ನು ಬಿಡಲಾಗುವುದಿಲ್ಲ. ಜೊತೆಗೆ ಮಹಿಳೆಗೆ ಸಂಬಂಧಪಟ್ಟ ಸಂಶೋಧನಾ ಕಾರ್ಯದಲ್ಲಿ ನಿರತವಾದ ಸಂಘಟನೆಗಳಿವೆ. ಮತ್ತೆ ಕೆಲವು ದೇವದಾಸಿ ಪದ್ಧತಿ ನಿರ್ಮೂಲನೆಯಲ್ಲಿ ತೊಡಗಿದ್ದರೆ ಮತ್ತೆ ಕೆಲವು ನಿರ್ಗತಿಕರಿಗೆ, ವಿಧವೆಯರಿಗೆ, ವಿಚ್ಛೇದನಗೊಂಡವರಿಗೆ ಆಶ್ರಯ, ತರಬೇತಿಗಳನ್ನು ನೀಡುತ್ತಿವೆ. ಮಹಿಳೆಯರಿಗೆ ಉದ್ಯಮಶೀಲತೆಯ ಬಗ್ಗೆ ತರಬೇತಿ, ಆರ್ಥಿಕ ನೆರವುಗಳನ್ನು ಹೊಂದಲು ಮಾರ್ಗದರ್ಶನ ನೀಡುವ ಸಂಘಟನೆಗಳನ್ನು ಸಹ ಕಾಣಬಹುದು.

ಸ್ವಾತಂತ್ರ್ಯ ಹೋರಾಟದ ಸಂದರ್ಭದಲ್ಲಿ ಅನೇಕ ಮಹಿಳಾ ಸಂಘಟನೆಗಳು ಹುಟ್ಟಿಕೊಂಡಿದ್ದವು. ಇವುಗಳು ತಮ್ಮ ಶಾಖೆಗಳನ್ನು ಬೇರೆ ಬೇರೆ ರಾಜ್ಯಗಳಲ್ಲಿ ಸ್ಥಾಪಿಸಲು ಮುಂದಾದವು. ಅಂತೆಯೇ ೧೯೭೫ರಲ್ಲಿ 'ನ್ಯಾಷನಲ್ ಫೆಡರೇಷನ್ ಆಫ್ ಇಂಡಿಯನ್ ವಿಮೆನ್'ನ ಕರ್ನಾಟಕ ರಾಜ್ಯ ಶಾಖೆ ಸಮ್ಮೇಳನವೊಂದನ್ನು ಜರುಗಿಸುವ ಮುಖೇನ ಸ್ಥಾಪಿಸಲ್ಪಟ್ಟಿತ್ತು. ಹೀಗೆ ಸ್ಥಾಪನೆಗೊಂಡ ಸಂಘಟನೆಯು 'ಕರ್ನಾಟಕ ರಾಜ್ಯ ಮಹಿಳಾ ಸಂಘ' ಎಂಬ ಹೆಸರಿನಿಂದ ಗುರುತಿಸಿಕೊಂಡಿತ್ತು. ಇದರ ಸ್ಥಾಪನೆಯ ಕೀರ್ತಿ ದಿವಂಗತ ಅನುಪಮ ನಿರಂಜನರಿಗೆ ಸಲ್ಲುತ್ತದೆ. ೧೯೭೩ರಲ್ಲಿ ಮೈಸೂರಿನಲ್ಲಿ 'ಸಮತಾ ವೇದಿಕೆ' ಎಂಬ ಸಂಘಟನೆ ಸ್ಥಾಪನೆಯಾಯಿತು. ಇದು ಮಹಿಳಾ ಹಕ್ಕುಗಳ ವೇದಿಕೆಯಾಗಿ ಮಧ್ಯಮವರ್ಗದ ಸುಶಿಕ್ಷಿತ ಮಹಿಳೆಯರ ಸಂಘಟನೆಯಾಗಿ ಕಾರ್ಯನಿರ್ವಹಿಸಿತ್ತು. ಜೊತೆಗೆ ವರದಕ್ಷಿಣೆ, ಅತ್ಯಾಚಾರ, ಬಹುಪತ್ನಿತ್ವ, ವೇಶ್ಯಾವಾಟಿಕೆಯಿಂದ ಮಹಿಳೆಯರ ಬಿಡುಗಡೆ ಮೊದಲಾದ ಹತ್ತು ಹಲವು ಸಮಸ್ಯೆಗಳಿಗೆ ಪ್ರತಿಕ್ರಿಯಿಸುವ ಜವಾಬ್ದಾರಿಯನ್ನು ಕೈಗೊಂಡಿತು. ಈ

ಸಮಸ್ಯೆಗಳತ್ತ ಜನರಿಗೆ ಜಾಗೃತಿ ಮೂಡಿಸಲು 'ಸಮತಾ ವಾರ್ತಾಪತ್ರ' ಎಂಬ ಪತ್ರಿಕೆಯನ್ನೂ ಹೊರಡಿಸಿತ್ತು. ಆದರೆ ಈ ಪತ್ರಿಕೆಯ ಐದಾರು ಸಂಚಿಕೆಗಳು ಅನಿಯತಕಾಲಿಕವಾಗಿ ಪ್ರಕಟವಾದವು. ನಂತರದ ದಿನಗಳಲ್ಲಿ ಪತ್ರಿಕೆ ಪ್ರಕಟವಾಗಲಿಲ್ಲ.

೧೯೭೯ರಲ್ಲಿ ಸಿ.ಪಿ.ಟಿ.ಯು ಕಾರ್ಮಿಕ ಸಂಘಟನೆಯಲ್ಲಿ ಮಹಿಳಾ ಶಾಖೆಯಾಗಿ 'ದುಡಿಯುವ ಮಹಿಳೆಯರ ಸಮನ್ವಯ ಸಮಿತಿ'ಯು ಸ್ಥಾಪನೆ ಆಯಿತು. ಇದು ಬೀಡಿ ಕಾರ್ಮಿಕರು, ಗಾರ್ಮೆಂಟ್, ಬ್ಯಾಂಕ್, ಕಛೇರಿಗಳು, ಅಂಗನವಾಡಿ ಮಹಿಳೆಯರನ್ನು ಸಂಘಟಿಸಿದೆ. ೧೯೮೧ರಲ್ಲಿ ಬೆಂಗಳೂರಿನಲ್ಲಿ 'ಪ್ರಜಾಸತ್ತಾತ್ಮಕ ಮಹಿಳಾ ಸಂಘಟನೆ'ಯ ಪ್ರಥಮ ರಾಜ್ಯ ಸಮ್ಮೇಳನ ಜರುಗಿತು. ನಂತರದ ದಿನಗಳಲ್ಲಿ ಈ ಸಂಘಟನೆ 'ಜನವಾದಿ ಮಹಿಳಾ ಸಂಘಟನೆ' ಎಂದು ಗುರುತಿಸಿಕೊಂಡಿದೆ.

೧೯೮೫ರ ಅಂತರರಾಷ್ಟ್ರೀಯ ಮಹಿಳಾ ದಿನಾಚರಣೆಯಂದು ಬೆಂಗಳೂರಿನಲ್ಲಿ 'ಜಾಗೃತ ಮಹಿಳಾ ಅಧ್ಯಯನ ಕೇಂದ್ರ' ಹುಟ್ಟಿಕೊಂಡಿತು. ಈ ಸಂಘಟನೆಯಿಂದ 'ಸಂಗಾತಿ' ಎಂಬ ಮಹಿಳಾ ಪತ್ರಿಕೆಯು ಪ್ರಕಟವಾಗಿದ್ದು, ಸ್ವಲ್ಪ ದಿನಗಳ ನಂತರ 'ಸಂಗಾತಿ' ಎಂಬ ಹೆಸರನ್ನು ಬದಲಾಯಿಸಿಕೊಂಡು 'ಅಚಲ' ಎನ್ನುವ ಹೆಸರಿನಲ್ಲಿ ಇಂದಿಗೂ ಪ್ರಕಟವಾಗುತ್ತಿದೆ. ಇದು ನಗರದ ಮಧ್ಯಮ ವರ್ಗದ ದುಡಿಯುವ ಮಹಿಳೆಯರ ಸಂಘಟನೆಯಾಗಿ ಸಾಮಾಜಿಕ ಅನ್ಯಾಯದ ವಿರುದ್ಧ ಪ್ರತಿಭಟನೆ, ಮೆರವಣಿಗೆ, ಸತ್ಯಾಗ್ರಹ ಮೊದಲಾದವುಗಳನ್ನು ಹಮ್ಮಿಕೊಳ್ಳುತ್ತಿದೆ. ಅಲ್ಲದೆ ಇದು ನೊಂದ ಮಹಿಳೆಯರಿಗೆ ಕಾನೂನಿನ ಸಹಾಯ, ಕೌನ್ಸಿಲಿಂಗ್‌ಗಳ ಮೂಲಕ ನೈತಿಕ ಬೆಂಬಲವನ್ನು ಹೆಚ್ಚಿಸುತ್ತಿರುವುದು ಗಮನಾರ್ಹ. ವಿಚಾರ ಸಂಕಿರಣ, ಜಾಗೃತಿ ಶಿಬಿರ, ಸಾಕ್ಷರತಾ ಆಂದೋಲನಗಳೊಂದಿಗೆ ಸಂಬಂಧ, ಸಾಹಿತ್ಯಕ-ಸಾಂಸ್ಕೃತಿಕ ಚಟುವಟಿಕೆಗಳನ್ನು ಹಮ್ಮಿಕೊಳ್ಳುವುದು, ಸ್ತ್ರೀವಾದಿ ಸಾಹಿತ್ಯದ ಪ್ರಕಟಣೆಗಳನ್ನು ಪ್ರಕಟಿಸಿರುವುದು ಮೊದಲಾದ ಚಟುವಟಿಕೆಗಳಲ್ಲಿ ನಿರತವಾಗಿದೆ.

ತೊಂಬತ್ತರ ದಶಕದಲ್ಲಿ 'ಮಹಿಳಾ ಸಾಂಸ್ಕೃತಿಕ ಸಂಘಟನೆ'ಯು ಮಧ್ಯಮವರ್ಗದ ಮಹಿಳೆಯರನ್ನು, ವಿದ್ಯಾರ್ಥಿನಿಯರನ್ನು ಸಂಘಟಿಸುವಲ್ಲಿ ನಿರತವಾಗಿದೆ. ಈ ಸಂಘಟನೆಯು 'ಸ್ತ್ರೀ ಮುಕ್ತಿ' ಎಂಬ ತ್ರೈಮಾಸಿಕ ಪತ್ರಿಕೆಯನ್ನು ಹೊರಡಿಸಿತ್ತು. 'ಶಾಶ್ವತಿ' ಎಂಬ ಸಂಘಸಂಸ್ಥೆಯು ಮಹಿಳೆಯರ ಜೀವನದ ಸಮಗ್ರ ಮುಖಗಳನ್ನು ಪರಿಚಯಿಸುವ ಪುರಾತನ ಕಾಲದ ವಸ್ತುಗಳ ಶೇಖರಣೆ ಮಾಡುತ್ತದೆ. 'ಸಮನ್ವಯ' ಎನ್ನುವ ಸಂಸ್ಥೆ ಬೆಂಗಳೂರಿನ ವಿವಿಧ ಮಹಿಳಾ ಸಂಘಟನೆಗಳ ಒಕ್ಕೂಟವಾಗಿದೆ.

ಮಹಿಳೆಯರಿಗೆ ಆಶ್ರಯ ನೀಡಿ ಅವರ ನೆರವಿಗಾಗಿ ಹಲವು ಸಂಸ್ಥೆಗಳು ಶ್ರಮಿಸುತ್ತಿವೆ. ಅವುಗಳೆಂದರೆ 'ಹಿಂದೂಸೇವಾ ಪ್ರತಿಷ್ಠಾನ, 'ಅಜಿತ ಶ್ರೀ ಅಬಲಾಶ್ರಮ', 'ಅಭಯಾಶ್ರಮ', 'ಸುಮಂಗಲಿ ಸೇವಾಶ್ರಮ', 'ಕರುಣ ಮದರ್ ಥೆರೇಸಾ ಹೋಂ ವೆಲ್‌ಫೇರ್ ಸೊಸೈಟಿ', 'ಜನೋದಯ', 'ಸಿಂಗಲ್ ವಿಮೆನ್ಸ್ ಸೆಲ್ಫ್ ಸಪೋರ್ಟ್ ಗ್ರೂಪ್' ಮೊದಲಾದವು. ಈ ಎಲ್ಲ ಸಂಘಟನೆಗಳು ತಮ್ಮದೇ ವಲಯದಲ್ಲಿ ಹಲವಾರು ಮಹಿಳಾಪರ ಕಾರ್ಯಗಳನ್ನು ನಿರ್ವಹಿಸುತ್ತಿವೆ. ಈ ಸಂಘಟನೆಗಳನ್ನು ಸ್ತ್ರೀವಾದಿ ಚಿಂತನಾ ಕೇಂದ್ರದಲ್ಲಿಟ್ಟುಕೊಂಡು ಅಧ್ಯಯನ ಮಾಡುವ ಅಗತ್ಯವಿದೆ.

ದಾವಣಗೆರೆಯ 'ವನಿತಾ ಸಮಾಜ' ಸಹ ಮಹಿಳೆಯರ ಮತ್ತು ಮಕ್ಕಳ ಅಭಿವೃದ್ಧಿಗಾಗಿ ಶ್ರಮಿಸುತ್ತಿದ್ದು, ಹಲವಾರು ಶಾಖೆಗಳನ್ನು ಹೊಂದಿದೆ. ಇದು ರಾಜ್ಯಮಟ್ಟದ ಹೆಸರಾಂತ ಮಹಿಳಾ ಸಂಘಟನೆಯಾಗಿದೆ. ಇದು ಆರ್ಥಿಕವಾಗಿ ಹಿಂದುಳಿದ ಬಡ ಹಾಗೂ ಮಧ್ಯಮ ವರ್ಗದ ಮಹಿಳೆಯರ ಮತ್ತು ಅವರ ಕುಟುಂಬಗಳ ಶ್ರೇಯೋಭಿವೃದ್ಧಿಗೆ ಕೇವಲ ತುಟಿಯಂಚಿನ ಅನುಕಂಪ ಸಾಲದು ಎಂದು ಮನವರಿಕೆ ಮಾಡಿಕೊಡುತ್ತದೆ. ಸಮಾಜದ ಹಲವಾರು ಒತ್ತಡ ತುಳಿತಗಳಿಗೆ ಸಿಲುಕಿರುವ ಮಹಿಳೆಯರಿಗೆ ಆಶ್ರಯವಾಗಲು ಕಲಿಕೆ ಮತ್ತು ಗಳಿಕೆ ಎರಡಕ್ಕೂ ಮಹತ್ತ್ವ ನೀಡುತ್ತಿದೆ. ಮಹಿಳೆಯರು ಆರ್ಥಿಕವಾಗಿ ಸದೃಢರಾಗುವಂತೆ ಮಾಡಲು ವನಿತಾ ಸುಧಾರಣಾ ಮತ್ತು ವನಿತಾ ಉದ್ಯೋಗ ಕೇಂದ್ರಗಳನ್ನು ಸ್ಥಾಪಿಸಿದ್ದು, ಮಹಿಳೆಯರನ್ನು ಸ್ವಾವಲಂಬಿಗಳಾಗುವಂತೆ ಮಾಡುತ್ತಿದೆ. ಶಿಶುಪಾಲನಾ ಕೇಂದ್ರ, ಮಕ್ಕಳ ಅನಾಥಾಲಯಗಳನ್ನು ಸಹ ತೆರೆಯಲಾಗಿದೆ. ದಾವಣಗೆರೆಯ ಜಿಲ್ಲಾ ಶಿಶುಕಲ್ಯಾಣ ಮಂಡಳಿ ಮತ್ತು ಅಂಗನವಾಡಿ ಕಾರ್ಯಕರ್ತೆಯರ ತರಬೇತಿ ಕೇಂದ್ರ, ಗ್ರಾಮಾಂತರ ಬಾಲವಿಕಾಸ ತರಬೇತಿ ಕೇಂದ್ರ, ಉದ್ಯೋಗಸ್ಥ ಮಹಿಳೆಯರಿಗೆ 'ಸ್ನೇಹಾಲಯ ಹಾಸ್ಟೆಲ್'ನ್ನು ಸ್ಥಾಪಿಸಿ, ಅತಿ ಕಡಿಮೆ ಶುಲ್ಕದಲ್ಲಿ ಮಹಿಳೆಯರಿಗೆ ಕಂಪ್ಯೂಟರ್ ತರಬೇತಿಯನ್ನು ನೀಡುತ್ತಿದೆ. ಮಹಿಳೆಯರ ಅಭಿವೃದ್ಧಿಗಾಗಿ ಹತ್ತು ಹಲವಾರು ಯೋಜನೆಗಳನ್ನು ಹಮ್ಮಿಕೊಂಡಿರುವುದನ್ನು ಗಮನಿಸಬಹುದು. ಇತ್ತೀಚಿಗೆ ಕಿತ್ತೂರುರಾಣಿ ಚೆನ್ನಮ್ಮನ ಪ್ರಶಸ್ತಿಯನ್ನು ಸ್ವೀಕರಿಸಿದ್ದು[9] ಈ ಸಂಸ್ಥೆ ತನ್ನ ಕಾರ್ಯದಕ್ಷತೆಗೆ ಸಾಕ್ಷಿಯಾಗಿ ನೆಲೆನಿಂತಿದೆ.

೧೯೯೧ರಲ್ಲಿ ಕೊಪ್ಪಳದಲ್ಲಿ ಸ್ಥಾಪನೆಯಾದ 'ಸಂಪರ್ಕ' ಎನ್ನುವ ಸಂಘಟನೆಯು ಮಹಿಳೆಯರನ್ನು ಸ್ವಾವಲಂಬಿಗಳನ್ನಾಗಿ ಮಾಡುವುದರ ಮುಖೇನ ಸಮಾಜದಲ್ಲಿ ದಿಟ್ಟವಾಗಿ ಬಾಳುವಂತೆ ತರಬೇತಿ ನೀಡಿ, ಮಹಿಳೆಯರಿಗೆ ವ್ಯಾಪಾರ, ಹೈನುಗಾರಿಕೆ ಮೊದಲಾದವುಗಳ ಬಗ್ಗೆಯೂ ತರಬೇತಿ ನೀಡುತ್ತಿದೆ. ಅಲ್ಲದೆ ದೇವದಾಸಿ ಪದ್ಧತಿಯ ನಿರ್ಮೂಲನೆಗಾಗಿಯೂ[2] ಹಲವು ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳುತ್ತಿದೆ.

ಭಾರತೀಯ ಗ್ರಾಮೀಣ ಮಹಿಳಾ ಸಂಘ, ಬೆಂಗಳೂರಿನ ವಿಭೂತಿಪುರದಲ್ಲಿದ್ದು ಇದು ಅಖಿಲಭಾರತ ಸಂಘಟನೆಯೂ ಆಗಿರುತ್ತದೆ. ಇದು ೧೯೬೨ರಲ್ಲಿ ಯಶೋಧರಮ್ಮ ದಾಸಪ್ಪನವರಿಂದ ಸ್ಥಾಪನೆಯಾಯಿತು. ಈ ಸಂಘಟನೆಯ ಶಾಖೆಗಳನ್ನು ವಿಜಾಪುರ, ಮಂಡ್ಯ, ಧಾರವಾಡ, ತುಮಕೂರು, ಚಿತ್ರದುರ್ಗಗಳಲ್ಲೂ ಕಾಣಬಹುದು. ಈ ಸಂಘಟನೆಯ ಪ್ರಧಾನ ಉದ್ದೇಶ ಗ್ರಾಮೀಣ ಮಹಿಳೆಯರಿಗಾಗಿ ಕಾರ್ಯ ನಿರ್ವಹಿಸುವ ಸಂಘಟನೆಗಳನ್ನು ಒಗ್ಗೂಡಿಸಿ ಗ್ರಾಮೀಣ ಮಹಿಳೆಯರ ಆರೋಗ್ಯ, ಸಾಮಾಜಿಕ, ರಾಜಕೀಯ, ಶೈಕ್ಷಣಿಕ, ಬದಲಾವಣೆಗಳನ್ನು ಸಮುದಾಯದ ವಿಕಾಸದ ಮೂಲಕ ಮಾಡಲು ಮಾರ್ಗದರ್ಶಕ ಯೋಜನೆಗಳನ್ನು ರೂಪಿಸುವುದು. ೧೯೪೭ರಲ್ಲಿ ಮೈಸೂರಿನಲ್ಲಿ 'ಕಸ್ತೂರ ಬಾ' ನಿಲಯ ಎಂಬ ಅಂಧರ ಶಾಖೆಯನ್ನು ತೆರೆಯಲಾಗಿದೆ. ೧೯೭೨ ರಿಂದ ಎಂಟು ಬಾಲವಾಡಿ ಕೇಂದ್ರಗಳನ್ನು ಹಾಗೂ ಅನಾಥ ಮಕ್ಕಳಿಗೆ, ಕಾಯಿಲೆ ಬಿದ್ದ ತಾಯಂದಿರ ಮಕ್ಕಳಿಗೆ ಶಿಶುವಿಹಾರಗಳನ್ನು ನಡೆಸಲಾಗುತ್ತಿದೆ.

೧೯೮೫ರಲ್ಲಿ 'ವಿಮೋಚನಾ ಸಂಸ್ಥೆ' ಅಥಣಿಯಲ್ಲಿ ಹುಟ್ಟಿಕೊಂಡಿತು. ಇದು ದೇವದಾಸಿಯರನ್ನು ಅವರ ವೃತ್ತಿಯಿಂದ ಮುಕ್ತರನ್ನಾಗಿ ಮಾಡಿ, ಅವರಿಗೆ ಕಂಬಳಿ, ಹಗ್ಗ ನೇಯ್ಗೆ, ಚಪ್ಪಲಿ, ಹೈನುಗಾರಿಕೆ ಮೊದಲಾದ ಕರಕುಶಲ ವಸ್ತು ತಯಾರಿಕೆಯಲ್ಲಿ ತರಬೇತಿ ನೀಡುತ್ತಿದೆ. ಜೊತೆಗೆ ಅವರು ಉತ್ಪಾದಿಸಿದ ವಸ್ತುಗಳನ್ನು ಮಾರುಕಟ್ಟೆಗೆ ಕಳುಹಿಸಿ, ಆರ್ಥಿಕವಾಗಿ ಸಬಲರನ್ನಾಗಿ ಮಾಡುತ್ತಿದೆ. ದೇವದಾಸಿಯರ ಮಕ್ಕಳಿಗಾಗಿ ಶಾಲೆಗಳನ್ನು

ಸಹ ತೆರೆದಿದೆ. ಆರ್ಥಿಕವಾಗಿ, ಸಾಮಾಜಿಕವಾಗಿ ಶೋಷಿತರಾದ ಮಕ್ಕಳನ್ನು ದತ್ತಕ್ಕೆ ತೆಗೆದುಕೊಳ್ಳುತ್ತವೆ. ಅಲ್ಲದೆ ವಸತಿ ಶಾಲೆಗಳನ್ನು ಸ್ಥಾಪಿಸಿದೆ. ೧೩ ಮಹಿಳಾ ಮಂಡಲಗಳನ್ನು ಸ್ಥಾಪಿಸಿ, ಏಡ್ಸ್ ಕಾಯಿಲೆ ಬಗ್ಗೆ ಜಾಗೃತಿ ಮೂಡಿಸುತ್ತಿದೆ.

ಮಹಿಳೆಯರ ಆರ್ಥಿಕ ಪ್ರಗತಿ, ಸ್ವಾವಲಂಬನೆ, ಗ್ರಾಮೀಣ ಕೈಗಾರಿಕೆಗೆ ಪ್ರೋತ್ಸಾಹ ಇವೇ ಮೊದಲಾದ ಉದ್ದೇಶಗಳೊಂದಿಗೆ ಹುಬ್ಬಳ್ಳಿಯ ಬಳಿ ಇರುವ ಅದರಗುಂಚಿ ಗ್ರಾಮದಲ್ಲಿ ೧೯೯೪ರಂದು ಸೊಸೈಟಿ ಆರಂಭವಾಗಿ ಅದು 'ಮಹಿಳಾ ಸಹಕಾರಿ ಆರ್ಥಿಕ ಸಂಸ್ಥೆ' ಎಂಬ ಹೆಗ್ಗಳಿಕೆಗೆ ಪಾತ್ರವಾಗಿದೆ. ಉತ್ತಮ ಮಹಿಳಾ ಪತ್ತಿನ ಸಂಘವೆಂದು ಹೆಸರು ಪಡೆದಿದೆ. ಬೆಂಗಳೂರಿನಲ್ಲಿರುವ 'ಅವೇಕ್' ಸಂಸ್ಥೆ ರಾಜ್ಯದ ಎಲ್ಲ ಜಿಲ್ಲೆಗಳ ಮತ್ತು ಗ್ರಾಮೀಣ ಮಹಿಳೆಯರ ಆರ್ಥಿಕ ಸ್ವಾವಲಂಬನೆಗಾಗಿ ಉದ್ಯಮಗಳ ತರಬೇತಿ ನೀಡುತ್ತಿದ್ದು, ಮಹಿಳೆಯರು ತಯಾರಿಸಿದ ವಸ್ತುಗಳಿಗೆ ಮಾರುಕಟ್ಟೆಯ ಸೌಲಭ್ಯವನ್ನು ಕಲ್ಪಿಸುತ್ತಿದೆ. ಆಗಾಗ ಬೇರೆ ಬೇರೆ ಜಿಲ್ಲೆಯ ಊರುಗಳಲ್ಲಿ 'ವಸ್ತು ಪ್ರದರ್ಶನ' ಏರ್ಪಡಿಸುವುದು ಇದರ ವಿಶೇಷಗಳಲ್ಲಿ ಒಂದು. ಹೆಚ್ಚಿನ ಸಂಖ್ಯೆಯಲ್ಲಿ ಮಹಿಳೆಯರು ಇದರ ಸಹಾಯದಿಂದ 'ಉದ್ಯಮಿ'ಗಳಾಗಿದ್ದು, ಆರ್ಥಿಕವಾಗಿ ಸದೃಢರಾಗಿದ್ದಾರೆ. ಈ ಸಂಸ್ಥೆ 'ಉದ್ಯಮಶೀಲತೆ'ಯನ್ನು ತರಬೇತಿ ನೀಡುವ ಮೂಲಕ ಮಹಿಳೆಯರ ಅಭಿವೃದ್ಧಿಗೆ ಹಾಗೂ ಸಂಘಟನೆಗೆ ಶ್ರಮಿಸುತ್ತಿದೆ.

ಎಪ್ಪತ್ತರ ದಶಕದಲ್ಲಿ ಸರಕಾರ ಅಥವಾ ಅರೆ ಸರ್ಕಾರಿ ಸಂಸ್ಥೆಗಳ ಆಚೆ ಸಾಮಾಜಿಕ ಸೇವೆಗಾಗಿ ಅಸ್ತಿತ್ವಕ್ಕೆ ಬಂದ ಸಂಘಟನೆಗಳೇ ಎನ್.ಜಿ.ಓ.ಗಳಾಗಿರುತ್ತವೆ. ಈ ಸಂಘಟನೆಗಳು ಗ್ರಾಮೀಣ ಪ್ರದೇಶದಲ್ಲಿ ಶಿಕ್ಷಣ, ಆರೋಗ್ಯ, ಏಡ್ಸ್ ಕಾಯಿಲೆ, ಕುಡಿಯುವ ನೀರಿನ ಸರಬರಾಜು, ಪರಿಸರ, ಜನಸಂಖ್ಯೆ, ಏಡ್ಸ್ ಕಾಯಿಲೆ, ಮಹಿಳೆಯರ ಸುಧಾರಣೆ ಮೊದಲಾದವುಗಳನ್ನು ಕುರಿತಂತೆ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳುತ್ತಿವೆ. ಅಲ್ಲದೆ ಬಡವರ, ದುರ್ಬಲರ, ಅಲಕ್ಷಿತ ಮಹಿಳೆಯರ, ವಂಚಿತರ, ಬುಡಕಟ್ಟು ಜನವರ್ಗಗಳ ಬದುಕನ್ನು ಉತ್ತಮಪಡಿಸಲು ಶ್ರಮಿಸುತ್ತವೆ. ಗ್ರಾಮೀಣ ಮಹಿಳೆಯರನ್ನು ಸಂಘಟಿಸುವ ಅವರ ಬಡತನಕ್ಕೆ ಕಾರಣಗಳನ್ನು ಹೇಳುವ ಮೂಲಕ ಅರಿವು ಮೂಡಿಸಿ ಜಾಗೃತಗೊಳಿಸುತ್ತವೆ. ಜೊತೆಗೆ ಲಿಂಗತಾರತಮ್ಯ ಹೇಗೆ, ಎಲ್ಲಿ, ಏಕೆ ಉಂಟಾಗುತ್ತಿದೆ ಎಂಬ ಅರಿವು ಮೂಡಿಸಿವೆ. ಈ ಎನ್.ಜಿ.ಓ.ಗಳ ಭಾಗವಾಗಿ ಹಲವಾರು ಸಂಘಟನೆಗಳು ಹುಟ್ಟಿಕೊಂಡವು. ಅಂಥ ಸಂಘಟನೆಗಳೆಂದರೆ ಬೆಂಗಳೂರಿನ 'ಸೆಂಟರ್ ಫಾರ್ ಇನ್‌ಫಾರ್ಮಲ್ ಎಜುಕೇಷನ್ ಅಂಡ್ ಡೆವಲಪ್‌ಮೆಂಟ್ ಸ್ಟಡೀಸ್' (ಸಿ.ಪಿ.ಇ.ಡಿ.ಎಸ್) ಅಸ್ತಿತ್ವಕ್ಕೆ ಬಂದಿತು. ಇದರ ಮಹಿಳಾ ಶಾಖೆಯಾಗಿ 'ವಿಮೋಚನಾ' ಮಹಿಳಾ ಹಕ್ಕುಗಳ ವೇದಿಕೆ ಸ್ಥಾಪನೆ ಆಯಿತು. ಈ ಸಂಸ್ಥೆ ೧೯೮೦ರಲ್ಲಿ 'ವಿಮೋಚನಾ ವಾರ್ತಾ ಪತ್ರ' ಎಂಬ ಮಾಸಿಕ ಪತ್ರಿಕೆಯನ್ನು ಬಿಡುಗಡೆ ಮಾಡಿತು. ಆರು ವರ್ಷಗಳ ನಂತರ ಈ ಪತ್ರಿಕೆ ನಿಂತು ಹೋಗಿ, ನಂತರದ ದಿನಗಳಲ್ಲಿ ಇಂಗ್ಲೀಷಿನ 'ಸಂಘರ್ಷ' ಎಂಬ ಪತ್ರಿಕೆಯನ್ನು ಪ್ರಕಟಿಸಿತು. ವಿಮೋಚನಾ ಸಂಘಟನೆಯ 'ವಾರ್ತಾಪತ್ರ' ನಿಂತಿದ್ದನ್ನು ಕಂಡು ಈ ಸಂಘಟನೆಯ ಮಹಿಳೆಯರು ೧೯೮೭ರಲ್ಲಿ ಮತ್ತೊಂದು ಮಾಸಿಕ ಪತ್ರಿಕೆಯನ್ನು ಪ್ರಕಟಿಸಿದರು. ಆರಂಭದಲ್ಲಿ ಈ ಪತ್ರಿಕೆ 'ಮಾನವಿ' ಎಂದೂ, ನಂತರದ ದಿನಗಳಲ್ಲಿ 'ಮಾನಸ' ಎಂದು ಇಂದಿಗೂ ಪ್ರಕಟವಾಗುತ್ತಿದೆ. ಇದು ಸ್ವಾಯತ್ತ ಮಹಿಳಾ ಸಂಘಟನೆಗಳಡಿಯಲ್ಲಿ ಮಹಿಳೆಯರನ್ನು ಸಂಘಟಿಸುವ ಕೆಲಸವನ್ನು ಮಾಡುತ್ತಿದೆ. ಬೆಂಗಳೂರಿನಲ್ಲಿ 'ಸರ್ಚ್' ಎಂಬ ಇನ್ನೊಂದು ಸಂಘಟನೆಯು ಮಹಿಳೆಯರನ್ನು ಸಂಘಟಿಸುವ ಉದ್ದೇಶದೊಂದಿಗೆ ಅಸ್ತಿತ್ವಕ್ಕೆ ಬಂದಿದೆ.

೧೯೯೦ರಲ್ಲಿ ಹುಬ್ಬಳ್ಳಿಯ 'ಅಗಡಿ' ಗ್ರಾಮದಲ್ಲಿ 'ಚಿನ್‌ಯಾರ್ಡ್ ಸಂಸ್ಥೆ' ಸ್ಥಾಪನೆಯಾಗಿದ್ದು ಅಸಂಘಟಿತ ಗ್ರಾಮೀಣ ಮಹಿಳಾ ಕರಕುಶಲ ಕಲೆಗಾರರನ್ನು ಸಂಘಟಿಸಿ, ಅವರಿಗೆ ಉದ್ಯೋಗ ನೀಡಿ ಆರ್ಥಿಕವಾಗಿ ಉತ್ತಮರಾಗಲು ನೆರವು ನೀಡುತ್ತಿದೆ. ಲಂಬಾಣಿಗರಲ್ಲಿನ ಕಸೂತಿಗೆ ದೇಶ-ವಿದೇಶಗಳಲ್ಲಿ ಅಪಾರ ಬೇಡಿಕೆ ಇದ್ದುದ್ದನ್ನು ಗಮನಿಸಿ, ಲಂಬಾಣಿಯರನ್ನು ಕಸೂತಿ ಚಟುವಟಿಕೆಗಳಲ್ಲಿ ತೊಡಗಿಸಿ ಆರ್ಥಿಕವಾಗಿ ಸದೃಢರನ್ನಾಗಿ ಮಾಡುತ್ತಿದೆ.

ಬಳ್ಳಾರಿ ಜಿಲ್ಲೆಯ ಸಂಡೂರಿನಲ್ಲಿಯೂ ಲಂಬಾಣಿ ಮಹಿಳೆಯರ ಕರಕುಶಲ ಕೇಂದ್ರ ಚಾಲನೆಯಲ್ಲಿದೆ. ಇದು ಸಹ ಲಂಬಾಣಿಯರನ್ನು ಉದ್ಯೋಗಿಗಳನ್ನಾಗಿಸಿ ಅವರಿಗೆ ಆರ್ಥಿಕ ಸಹಾಯ ಹಸ್ತ ನೀಡಿದೆ. ಎನ್.ಜಿ.ಓ.ಗಳು ಗ್ರಾಮೀಣ ಮಹಿಳೆಯರ ಸಂಘಟನೆಯಲ್ಲಿ ತೊಡಗಿ, ಅವರಿಗೆ ಆರ್ಥಿಕ, ಸಾಮಾಜಿಕ, ರಾಜಕೀಯ, ಆರೋಗ್ಯಕ್ಕೆ ಸಂಬಂಧಪಟ್ಟ ವಿಷಯಗಳಲ್ಲಿ ಮಾಹಿತಿ ನೀಡುತ್ತಾ, ಮಹಿಳೆಯರನ್ನು ಆದಾಯ-ಉತ್ಪನ್ನ ಕಾರ್ಯಗಳಲ್ಲಿ ತೊಡಗಿಸಿರುತ್ತವೆ. ಸಾಮಾಜಿಕವಾಗಿ ಕುಟುಂಬದಲ್ಲಿ 'ಹೆಣ್ಣು' ಏಕೆ ತಾರತಮ್ಯಕ್ಕೆ ಒಳಗಾಗಿದ್ದಾಳೆ ಎಂದು ತಿಳಿಸುವುದರ ಜೊತೆಗೆ ಲಿಂಗ ತಾರತಮ್ಯವನ್ನು ವಿರೋಧಿಸುವಂತೆ, ಆಚರಿಸದಂತೆ ತಿಳುವಳಿಕೆ ಮೂಡಿಸಿದೆ. ಇವು ಗ್ರಾಮ, ತಾಲೂಕು ಪಂಚಾಯತಿ, ಮಹಿಳೆಯರ ಕರ್ತವ್ಯ, ಹಕ್ಕುಗಳ ಬಗ್ಗೆ ತಿಳಿಸಲು 'ಸಾಮರ್ಥ್ಯ ತರಬೇತಿ ಶಿಬಿರ' ಗಳನ್ನು ನಡೆಸುತ್ತಿವೆ. ಆರೋಗ್ಯ, ಪರಿಸರ ರಕ್ಷಣೆ ಕುರಿತಂತೆಯೂ ಮತ್ತು ಮೂಢನಂಬಿಕೆಗಳಿಗೆ ಬಲಿಯಾಗದಂತೆಯೂ ತಿಳುವಳಿಕೆ ಮೂಡಿಸಲು ಬೀದಿನಾಟಕ, ಹಾಡುಗಳನ್ನು ಹೇಳುವ, ಚಿತ್ರಗಳನ್ನು ತೋರಿಸುವ ಭಿತ್ತಿಪತ್ರ-ಬರೆಹಗಳ ಮುಖೇನ ಜಾಗೃತಿ ತರುತ್ತಿವೆ. ಆಗಾಗ ಆರೋಗ್ಯ ಶಿಬಿರಗಳನ್ನು ನಡೆಸಿ ತಾಯಂದಿರ ಮತ್ತು ಮಕ್ಕಳ ಆರೋಗ್ಯ, ಪೌಷ್ಠಿಕ ಆಹಾರಗಳ ಸೇವನೆ ಮೊದಲಾದವುಗಳ ಬಗ್ಗೆ ವಿಚಾರ ಸಂಕಿರಣಗಳನ್ನೂ ಏರ್ಪಡಿಸಿವೆ. ಮಹಿಳೆಯರನ್ನು ಸಂಘಟಿಸಲು ಸ್ವ-ಸಹಾಯಕ ಸಂಘಗಳನ್ನು ರಚಿಸುತ್ತಿವೆ. ಈ ಸಂಘಗಳು ತಾಲೂಕು, ಜಿಲ್ಲಾ ಒಕ್ಕೂಟ ರಚಿಸಲು ಮುಂದಾಗಿವೆ. ಇಂದು ಅಸಂಖ್ಯಾತ ಎನ್.ಜಿ.ಓ.ಗಳು ಮಹಿಳೆಯರ ಸಂಘಟನೆಯಲ್ಲಿ ತೊಡಗಿವೆ. ಉದಾಹರಣೆಗೆ ಮೈರಾಡ, ರುಡ್‌ಸೆಟ್ ಮೊದಲಾದ ಸಂಸ್ಥೆಗಳು ಬೇರೆ ಬೇರೆ ಜಿಲ್ಲೆಗಳಲ್ಲಿ ತಮ್ಮ ಶಾಖೆಗಳನ್ನು ತೆರೆದು ಮಹಿಳೆಯರನ್ನು ಸಂಘಟಿಸುವತ್ತ ಅವರಿಗೆ ಆದಾಯ ಉತ್ಪನ್ನ ಚಟುವಟಿಕೆಗಳಲ್ಲಿ ತೊಡಗುವಂತೆ ಮಾಡಿವೆ. ಇವುಗಳಲ್ಲದೆ ಲಾರ್ಡ್, ಗ್ರೀನ್, ಗ್ರಾಮ, ಬದುಕು, ಮಹಿಳಾ ಸಮಾಖ್ಯ, ಸ್ನೇಹ, ಜಾಟ್ ರೀಚ್, ರೀಚ್, ಪ್ರಜ್ಞಾ ಮೊದಲಾದ ಎನ್.ಜಿ.ಓ. ಸಂಸ್ಥೆಗಳಿವೆ.

ಈ ಸಂಘಟನೆಗಳಷ್ಟೇ ಅಲ್ಲದೆ ಹಲವಾರು ಲೇಖಕಿಯರು ಸಹ ತಮ್ಮದೇ ಆದ ಸಂಘಟನೆಗಳನ್ನು ರೂಪಿಸಿಕೊಂಡು ಅವುಗಳ ಮೂಲಕ ಸಂಘಟನೆ, ಜಾಗೃತಿ, ವಿಚಾರ ಸಂಕಿರಣಗಳನ್ನು ನಡೆಸುತ್ತಿದ್ದಾರೆ. ಉದಾಹರಣೆಗೆ 'ಕರ್ನಾಟಕ ಲೇಖಕಿಯರ ಸಂಘ' (ಬೆಂಗಳೂರು), 'ಉತ್ತರ ಕರ್ನಾಟಕದ ಲೇಖಕಿಯರ ಸಂಘ' (ಧಾರವಾಡ), 'ಕರಾವಳಿ ಲೇಖಕಿಯರ ಸಂಘ' ಹಾಗೂ 'ಓದುಗರ ಸಂಘ'ಗಳೂ (ಮಂಗಳೂರು) ಅಸ್ತಿತ್ವದಲ್ಲಿರುತ್ತವೆ.

ಸರಕಾರವು ಸಹ ಮಹಿಳೆಯರ ಅಭಿವೃದ್ಧಿಗೆ, ಸಂಘಟನೆಗೆಂದು ಹಲವು ಬಗೆಯ ಯೋಜನೆಗಳನ್ನು ಹಮ್ಮಿಕೊಂಡಿದೆ. ಅಂಥ ಯೋಜನೆಗಳಲ್ಲಿ ೧೯೫೬ರಲ್ಲಿ ಅನೈತಿಕ ವ್ಯವಹಾರಗಳ ಪ್ರತಿಬಂಧಕ ಕಾಯ್ದೆಯನ್ವಯ

ಬಂದಿಸಲ್ಪಟ್ಟ ಮಹಿಳೆ (ಹುಡುಗಿ) ಯರನ್ನು ತರಬೇತಿಗೊಳಿಸಲು, ಪುನರ್ ವಸತಿ ಕಲ್ಪಿಸುವ ಉದ್ದೇಶಕ್ಕಾಗಿ ಕೇಂದ್ರ ಸ್ವೀಕರಣಾ ಕೇಂದ್ರಗಳು, ರಾಜ್ಯ ಮಹಿಳಾ ಗೃಹಗಳ ಸ್ಥಾಪನೆ ಆಗಿವೆ. ಬೆಂಗಳೂರು, ಬೆಳಗಾವಿ, ವಿಜಾಪುರ, ಬೀದರ, ಕಾರವಾರ, ಕೆ.ಜಿ.ಎಫ್. ಮಂಗಳೂರು, ಮಂಡ್ಯ, ರಾಯಚೂರು, ಶಿವಮೊಗ್ಗ, ತುಮಕೂರು ಮೊದಲಾದ ಊರುಗಳಲ್ಲಿ 'ಕೇಂದ್ರ ಸ್ವೀಕರಣಾ ಕೇಂದ್ರ'ಗಳಿವೆ. ಹಾಗೂ ಬೆಂಗಳೂರು, ಮೈಸೂರು, ಬಳ್ಳಾರಿ, ದಾವಣಗೆರೆ, ಕಲ್ಬುರ್ಗಿ, ಹುಬ್ಬಳ್ಳಿ, ಉಡುಪಿ ಮೊದಲಾದ ಊರುಗಳಲ್ಲಿ ರಾಜ್ಯ ಮಹಿಳಾ ಗೃಹಗಳಿವೆ. ಈ ಕೇಂದ್ರಗಳು ಮಹಿಳೆಯರಿಗೆ ಸ್ವಯಂ ಉದ್ಯೋಗ ತರಬೇತಿ, ಹೊಲಿಗೆ ತರಬೇತಿ ನೀಡಿ, ಆದಾಯಗಳಿಸುವ ಕಾರ್ಯ ಚಟುವಟಿಕೆಗಳಲ್ಲಿ ತೊಡಗಲು ಮಾರ್ಗದರ್ಶನ, ಸಲಹೆ ನೀಡುತ್ತಿವೆ. ವಿಧವೆಯರಿಗೆ ಮರುವಿವಾಹಗಳನ್ನು ಏರ್ಪಡಿಸುತ್ತಿರುವುದು ಗ್ರಾಮಗಳಲ್ಲಿ ಮಹಿಳಾ ಮಂಡಳಿಗಳನ್ನು ರಚಿಸಿ, ಎಲ್ಲಾ ಗ್ರಾಮಗಳ ಮಹಿಳಾ ಮಂಡಳಿಗಳ ತಾಲೂಕು ಫೆಡರೇಶನ್‌ಗಳನ್ನು ಸ್ಥಾಪಿಸಲು ಬಯಸಿ, ಉತ್ತಮ ಮಹಿಳಾ ಮಂಡಳಿಗೆ ಪ್ರೋತ್ಸಾಹಿಸಿ ಪ್ರಶಸ್ತಿಗಳನ್ನು ನೀಡಲಾಗುತ್ತದೆ. ಉದ್ಯೋಗಸ್ಥ ಮಹಿಳೆಯರಿಗೆ ಎಂದು ಮಹಿಳೆಯರ ವಸತಿ ಗೃಹಗಳನ್ನು ಸ್ಥಾಪಿಸಿದ್ದೂ ವಿದ್ಯಾರ್ಥಿನಿಯರಿಗೆ ಹಾಸ್ಟೆಲ್ ಸೌಲಭ್ಯಗಳನ್ನು ಕಲ್ಪಿಸಿರುವುದನ್ನು ಗಮನಿಸಬಹುದು. ಮಹಿಳೆ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆಯನ್ನು ಜಾರಿಗೆ ತಂದು ಈ ಇಲಾಖೆಯ ಮುಖೇನ ಮಹಿಳೆಯರ ಸಂಘಟನೆ,' ಅಭಿವೃದ್ಧಿಗೆ ಶ್ರಮಿಸುತ್ತಿದೆ. ಅಲ್ಲದೇ 'ಮಹಿಳಾ ಅಭಿವೃದ್ಧಿ ನಿಗಮ' ಸಹ ಅಸ್ತಿತ್ವದಲ್ಲಿದೆ. ಇವುಗಳು ಸಹ ಮಹಿಳಾ ಸಂಘಟನೆ, ಅಭಿವೃದ್ಧಿಗೆಂದು ಬಹು ಬಗೆಯ ಯೋಜನೆಗಳನ್ನು ರೂಪಿಸುತ್ತಿವೆ. ಇತ್ತೀಚಿಗೆ 'ಮಹಿಳಾ ಸಬಲೀಕರಣದ ವರ್ಷ' ಎಂದು ಸರಕಾರ ಘೋಷಿಸಿದ್ದರಿಂದ ಮಹಿಳೆಯರನ್ನು ಆರ್ಥಿಕ, ಸಾಮಾಜಿಕ, ರಾಜಕೀಯವಾಗಿ ಹೆಚ್ಚು ಸಬಲರನ್ನಾಗಿ ಮಾಡಲು ಮತ್ತು ಅವರನ್ನು ಸಂಘಟಿಸಲು ಮುಂದಾಗಿವೆ. ಅಂತೆಯೇ ಮಹಿಳಾ ಅಭಿವೃದ್ಧಿ ನಿಗಮವು 'ಸ್ವಶಕ್ತಿ' ಯೋಜನೆಯನ್ನು ರಾಜ್ಯದ ಬೇರೆ ಬೇರೆ ಜಿಲ್ಲೆಗಳಲ್ಲಿ ಜಾರಿಗೆ ತಂದಿದೆ. ಇದು ಸಹ ಗ್ರಾಮೀಣ ಭಾಗದ ದುರ್ಬಲ ಮಹಿಳೆಯರನ್ನು, ವಿಧವೆಯರನ್ನು, ವಿಚ್ಛೇದನಗೊಂಡವರನ್ನು ಸಂಘಟಿಸಲು ಹೊರಟಿದೆ. ಇದರಂತೆ, ಮಹಿಳೆ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆಯು 'ಸ್ತ್ರೀಶಕ್ತಿ' ಯೋಜನೆಯನ್ನು ಜಾರಿಗೆ ತಂದಿದೆ. ಈ ಸ್ತ್ರೀಶಕ್ತಿ ಯೋಜನೆಯು 'ಸ್ವಶಕ್ತಿ' ಯೋಜನೆಯಂತೆ ಮಹಿಳಾ ಸಂಘಟನೆಯಾಗಿ ರೂಪಗೊಂಡಿದೆ. ಪ್ರಸ್ತುತವಾಗಿ 'ಸ್ತ್ರೀಶಕ್ತಿ' ಮತ್ತು 'ಸ್ವಶಕ್ತಿ' ಯೋಜನೆಗಳು ಕೂಡ ಮಹಿಳೆಯರನ್ನು ಸಂಘಟಿಸುವ ಕಾರ್ಯ ಮಾಡುತ್ತಿವೆ. ಈ ಯೋಜನೆಗಳಲ್ಲೂ ಸಹ ಎನ್.ಜಿ.ಓ.ಗಳು ಪ್ರವೇಶಿಸಿವೆ.

ಇದುವರೆಗೂ ಮಹಿಳಾ ಸಂಘಟನೆಗಾಗಿ ಸಂಘ-ಸಂಸ್ಥೆಗಳು ಶ್ರಮಿಸುತ್ತಿದ್ದವು. ಆದರೆ ಇತ್ತೀಚೆಗೆ ಬೆಂಗಳೂರಿನಲ್ಲಿ 'ಸ್ಪಿಮ್ ನೃತ್ಯ ತಂಡ'ದ ಮಧು ನಟರಾಜ್ ಹೇರಿ ಎಂಬಾಕೆಯು ಹೆಂಗಸರ ಹಕ್ಕಿನ ಸಂಘಟನೆಗಾಗಿ 'ಪೋರಿಯಾ' ಎನ್ನುವ ನೃತ್ಯರೂಪಕದ ಮುಖೇನ ಮಹಿಳೆಯರನ್ನು ಸಂಘಟಿಸಲು ಪ್ರಯತ್ನಿಸಿದ್ದಳು. ಪ್ರತಿಭಾ ನಂದಕುಮಾರರ "ನಾವು ಹುಡುಗಿಯರೆ ಹೀಗೆ" ಎಂಬ ಕವನವನ್ನೂ ನೃತ್ಯದ ಮೂಲಕ ಅಭಿವ್ಯಕ್ತಿಸಲಾಗಿದೆ.

ವಿಶ್ವದ ಮಹಿಳಾ ಸಂಘಗಳು, ಸಂಘಟನೆಗಳು ಸ್ತ್ರೀಪರ ಮಾನವೀಯ ಕಾಳಜಿಗಳನ್ನು ಉಳ್ಳವರು, ತಮ್ಮಂತೆ ಆಲೋಚಿಸುವ, ಕೆಲಸ ಮಾಡುವ ಸಂಘಗಳೊಡನೆ ಶೀಘ್ರವಾಗಿ ಹಾಗೂ ಕಡಿಮೆ ಖರ್ಚಿನಲ್ಲಿ

ಸಂಪರ್ಕ ಬೆಳೆಸಿಕೊಂಡು ಮಾಹಿತಿ ಹಂಚಿಕೊಳ್ಳಲು ಮತ್ತು ಪರಸ್ಪರ ಸಹಕಾರ ಬೆಂಬಲಗಳನ್ನು ಪಡೆಯಲು, ನೀಡಲು ಅಂತರ್‌ಜಾಲವನ್ನು ಉಪಯೋಗಿಸಿಕೊಳ್ಳುತ್ತಿವೆ. ಇಂಥ ಬೆಳವಣಿಗೆಯೂ ನಮ್ಮ ದೇಶ, ರಾಜ್ಯದಲ್ಲಿ ತುರ್ತಾಗಿ ಆಗಬೇಕಾಗಿದೆ. ಅಂತರ್‌ಜಾಲವನ್ನು ಬಳಸಿಕೊಳ್ಳುವುದರಿಂದ ಸ್ತ್ರೀ ಸ್ವಾತಂತ್ರ್ಯ, ಸಮಾನತೆಗಳ ವಿರುದ್ಧ ಕೆಲಸ ಮಾಡುತ್ತಿರುವ ಶಕ್ತಿಗಳನ್ನು ಎದುರಿಸಲು ಸಹಾಯಕವಾಗುತ್ತದೆ. ಸೈಬರ್ ಜಗತ್ತಿನಲ್ಲಿ ಮಹಿಳಾ ಸಂಘಟನೆಗಳು ಈಗಾಗಲೇ ಅಂತರಜಾಲದಲ್ಲಿ ವೆಬ್ ಸೈಟ್‌ಗಳನ್ನು ತೆರೆದು, ತಮ್ಮ ಸಂಘ-ಸಂಘಟನೆಗಳ ಇತಿಹಾಸ, ಕಾರ್ಯವ್ಯಾಪ್ತಿ ಚಟುವಟಿಕೆಗಳನ್ನು ಎಲ್ಲರ ಉಪಯೋಗಕ್ಕಾಗಿ ತೆರೆದಿಟ್ಟಿರುವುದು ನಿಜಕ್ಕೂ ಒಂದು ಸ್ವಾಗತಾರ್ಹ ಬೆಳವಣಿಗೆ ಆಗಿರುತ್ತದೆ.

## ೬.೨. ಮಹಿಳಾ ಹೋರಾಟಗಳು

ಮಹಿಳಾ ಹೋರಾಟಗಳಿಗೆ ಪ್ರಧಾನ ಕಾರಣ ಮಹಿಳೆಯರ ಮೇಲಿನ ಶೋಷಣೆ, ದಬ್ಬಾಳಿಕೆಗಳೇ ಆಗಿರುತ್ತವೆ. ಇವುಗಳು ಕುಟುಂಬದೊಳಗೂ ಇರಬಹುದು ಇಲ್ಲವೆ ಕುಟುಂಬದಾಚೆಯೂ ಇದ್ದು, ಯಾವುದೇ ರೂಪದಲ್ಲಿಯೂ ವ್ಯಕ್ತವಾಗಬಹುದು. ಅಂಥವುಗಳನ್ನು ಮಹಿಳಾ ಸಂಘಟನೆಗಳು ಗುರುತಿಸುತ್ತವೆ. ಅವುಗಳ ವಿರುದ್ಧ ಹೋರಾಡಲು ಮುಂದಾಗುತ್ತವೆ. ಸ್ವಾತಂತ್ರ್ಯ ಪೂರ್ವದಲ್ಲಿ ಮಹಿಳೆಯರು ವಸಾಹತುಶಾಹಿ ಆಳ್ವಿಕೆ ವಿರುದ್ಧ ಮತ್ತು ಪುರುಷ ಪ್ರಧಾನ ಸಮಾಜದ ವಿರುದ್ಧ ಹೋರಾಡಿದ್ದರು. ಆದರೆ "೧೯೭೦ರ ಆರಂಭದಲ್ಲಿ ಗ್ರಾಮೀಣ ಮತ್ತು ಶ್ರಮಿಕ ವರ್ಗದ ಮಹಿಳೆಯರಿಗೆ ಮೊದಲ ಸಲ ಮುಂದಾಳತ್ವದ ತರಬೇತಿ ದೊರೆಯುವ ಅವಕಾಶವಿತ್ತು. ಸಮಕಾಲೀನ ಮಹಿಳಾ ಹೋರಾಟಗಳಿಗೆ ಮೊದಲ ಚಾಲನೆಯೂ ಇಲ್ಲಿಂದಲೇ ಆರಂಭವಾಯಿತು." ವಿಶ್ವಸಂಸ್ಥೆಯು ಅಂತಾರಾಷ್ಟ್ರೀಯ 'ಮಹಿಳಾ ವರ್ಷ', 'ಮಹಿಳಾ ದಶಕ'ಗಳನ್ನು ಪ್ರಕಟಿಸಿತು. ಗುಹಾ ಸಮಿತಿಯು ನೇಮಕವಾಗಿ "ಸಮಿತಿಯು ತನ್ನ ವರದಿಯನ್ನು ನೀಡಿತು. ಇದು ಮಹಿಳಾ ಸಮುದಾಯವನ್ನು ಒಟ್ಟಾರೆಯಾಗಿ ಕಂಡುಕೊಳ್ಳಲು ನೆರವಾಯಿತು. ದಮನ, ಶೋಷಣೆ, ಲೈಂಗಿಕ ಕಿರುಕುಳ, ಹಿಂಸೆ, ಕ್ರೌರ್ಯಗಳ ನಿವಾರಣೆಗಾಗಿ ಏನು ಮಾಡಬಹುದು ಎಂದು ಆಲೋಚಿಸುವ ಪ್ರಯತ್ನಗಳಿಗೂ ಅವಕಾಶ ದೊರಕಿತು.

ಕರ್ನಾಟಕದ ಮಹಿಳಾ ಹೋರಾಟಗಳು ಇನ್ನೂ ಬಲವಾದ ಸಾಮಾಜಿಕ, ರಾಜಕೀಯ, ಸಾಂಸ್ಕೃತಿಕ ದನಿಯಾಗಿಲ್ಲ. ಅದಕ್ಕಾಗಿ 'ಸಮತಾವೇದಿಕೆ' ಮೈಸೂರಿನಲ್ಲಿ ಸಮಾವೇಶವನ್ನು ಜರುಗಿಸಿತು. ಈ ಸಮಾವೇಶದಲ್ಲಿ ವಿವಿಧ ಮಹಿಳಾ ಸಂಘಟನೆಗಳ ಪರಿಚಯ, ಅನುಭವ, ಹಂಚಿಕೆ, ರಾಜ್ಯಮಟ್ಟದ ಸಮಿತಿ ರಚನೆ, ಮುಂದಿನ ಹೋರಾಟದ ರೂಪರೇಷಗಳ ರಚನೆ ಕುರಿತಂತೆ ಚರ್ಚೆ ಮೊದಲಾದವು ಆದವು. ಮೀಸಲಾತಿ, ಖಾಸಗೀಕರಣ, ಪರಿಸರ ಪ್ರಶ್ನೆ, ಮಹಿಳೆಯರ ಶೈಕ್ಷಣಿಕ, ಔದ್ಯೋಗಿಕ ಅವಕಾಶಗಳು ಮೊದಲಾದವುಗಳ ಬಗೆಗೆ ಗೋಷ್ಠಿಗಳನ್ನು ಹಮ್ಮಿಕೊಂಡಿತು. ಈ ಸಮಾವೇಶವನ್ನು ಏರ್ಪಡಿಸಿದ ಸಮತಾವೇದಿಕೆಯು ತನ್ನದೆ ಆದ ಹೇಳಿಕೆಯನ್ನು ಸಂಘಟನೆಗಳಿಗೂ ತಿಳಿಸುತ್ತ "ಮಹಿಳಾ ವಿಮೋಚನೆಗಾಗಿ ಹೋರಾಟ ಮಾಡುವ ನಾವುಗಳು ಎಲ್ಲ ಒಂದೇ ಸೈದ್ಧಾಂತಿಕ ಹಿನ್ನೆಲೆಯನ್ನು ಹೊಂದಿಲ್ಲದಿರಬಹುದು, ನಮ್ಮ ಚಟುವಟಿಕೆಗಳಲ್ಲಿ ಭಿನ್ನತೆಗಳು ಇರಬಹುದು ಆದರೆ ನಮ್ಮೆಲ್ಲರಿಗೂ ಒಂದೇ ಬಗೆಯ ಸಮಸ್ಯೆಗಳಿವೆ, ಆತಂಕಗಳಿವೆ, ಇಕ್ಕಟ್ಟುಗಳಿವೆ, ನೋವು-

ನಲಿವುಗಳಿವೆ. ಅಂತೆಯೇ ನಾವೆಲ್ಲ ಇವುಗಳಿಂದ ಒಂದೆಡೆ ಒಟ್ಟಾರೆಯಾಗಿ ಸೇರುವ ತುರ್ತು ಇದೆ. ಅವನ್ನು ಮನಗಂಡು ಸಂಘಟನೆಗಳು ಸಂಪೂರ್ಣ ಸಹಕಾರದೊಂದಿಗೆ ಸಮಾವೇಶದಲ್ಲಿ ಭಾಗವಹಿಸುತ್ತೀರಿ ಎಂದು ಆಶಿಸುತ್ತೇವೆ"" ಎಂದು ಹೇಳಿತ್ತು. ರಾಷ್ಟ್ರೀಯ ಮಟ್ಟದಲ್ಲಿ ಪ್ರತಿ ಎರಡು ವರ್ಷಗಳಿಗೊಮ್ಮೆ ಮಹಿಳಾ ಹೋರಾಟಗಳ ಸಮಾವೇಶ ನಡೆದು, ಪ್ರತಿ ಸಲದ ಸಮಾವೇಶವೂ ನಿರ್ದಿಷ್ಟ ವಸ್ತುವಿಷಯವನ್ನು ಹೊಂದಿರುತ್ತದೆ. ಸಮಾವೇಶಕ್ಕೆ ಬಂದ ವಿವಿಧ ಸ್ತರದ ಮಹಿಳಾ ಪ್ರತಿನಿಧಿಗಳಿಂದ ಚರ್ಚೆಗಳು ನಡೆದು ಹೋರಾಟಗಳನ್ನು ಮತ್ತಷ್ಟು ವ್ಯಾಪಕವಾಗಿಸಲು ಏನು ಮಾಡಬೇಕು ಎಂಬ ವಿಷಯಗಳನ್ನು ಪರಸ್ಪರ ಅನುಭವ, ತಿಳುವಳಿಕೆಗಳನ್ನು ವಿನಿಮಯ ಮಾಡಿಕೊಳ್ಳಲಾಗುತ್ತದೆ.

ಮಹಿಳಾ ಹೋರಾಟಗಳು ರಾಜಕೀಯ, ಧಾರ್ಮಿಕ, ಮತ್ತಿತರ ಕ್ಷೇತ್ರಗಳಲ್ಲಿ ಅಧಿಕಾರಾರೂಢರ ನಿರಂಕುಶತೆ, ಸ್ವೇಚ್ಛಾಚಾರ, ದೌರ್ಜನ್ಯಗಳ ವಿರುದ್ಧವಾಗಿ, ಸರಕಾರದ ಆರ್ಥಿಕ ನೀತಿಯ ಬಗ್ಗೆ, ಬೆಲೆ ಏರಿಕೆ, ಸೌಂದರ್ಯ ಸ್ಪರ್ಧೆ, ಅಶ್ಲೀಲ ಚಲನಚಿತ್ರ, ವಧುದಹನ, ಕೌಟುಂಬಿಕ ಕ್ರೌರ್ಯ, ಹಿಂಸೆ, ವರದಕ್ಷಿಣೆ, ಅತ್ಯಾಚಾರ, ಲಿಂಗ ತಾರತಮ್ಯ ಮೊದಲಾವುಗಳ ಬಗೆಗೂ ಗಮನಹರಿಸಿವೆ. ಹೋರಾಟದ ಮುಂದಾಳಾದ ಮಹಿಳೆಯನ್ನು ಪ್ರೋತ್ಸಾಹಿಸಲು "ಮಹಿಳೆಯರು ಮೌನ ಮುರಿಯಬೇಕೆಂದೂ ಆಗಲೇ ಅವರು ಒಂದು ಹೆಜ್ಜೆ ಮುಂದೆ ನಡೆಯುವರು" ಎಂದಿವೆ. ವಿವಿಧ ಬಗೆಯ ನೋವು-ಸಂಕಟ-ಯಾತನೆಗಳು ಹೊರ ಬರಲು ಸಾಧ್ಯವಾಗುತ್ತದೆ. ಇದರಿಂದ ಇದುವರೆಗೂ ಮಹಿಳೆಯರು ಸಾಮಾಜೀಕರಣಗೊಂಡ ಪಾತ್ರ, ಗುಣಗಳಿಂದಾಚೆಗೆ ಬರಬಹುದು. ಮಹಿಳೆಯರ ಮೇಲೆ ದೌರ್ಜನ್ಯವೆಸಗುವ ಕುಟುಂಬ, ಸರಕಾರ ಮೊದಲಾದವರನ್ನು ಬಿಡದೆ ತರಾಟೆಗೆ ತೆಗೆದುಕೊಳ್ಳಬಹುದು.

ಸಮಕಾಲೀನ ಮಹಿಳಾ ಹೋರಾಟಗಳಲ್ಲಿ ಪ್ರಧಾನವಾಗಿ ಕಾಣಿಸಿಕೊಂಡ ಮಹಿಳಾ ವಿಷಯವೆಂದರೆ ಅತ್ಯಾಚಾರವೇ. ೧೯೭೯ರಲ್ಲಿ ಹುಣಿಸೇಕೋಟೆಯ ಅನುಸೂಯಮ್ಮನ ಮೇಲೆ ಅತ್ಯಾಚಾರ ನಡೆಯಿತು. ಇದನ್ನು ಬೆಂಗಳೂರಿನ ಮಹಿಳಾ ಸಂಘಟನೆಗಳು ಖಂಡಿಸಿ ಪ್ರತಿಭಟಿಸಿದ್ದವು. ೧೯೮೦ರಲ್ಲಿನ ಕಾಂಗ್ರೆಸ್ ಸರಕಾರದ ಮಂತ್ರಿಯಾಗಿದ್ದ ಇಬ್ರಾಹಿಂ ಎಂಬುವವರು 'ಪದ್ದಕ್ಕ' ಎಂಬ ಮಹಿಳೆಯ ಅತ್ಯಾಚಾರದಲ್ಲಿ ಭಾಗಿಯಾಗಿದ್ದನ್ನು ಮಹಿಳಾ ಸಂಘಟನೆಗಳು ಗುರುತಿಸಿದ್ದವು. ಬೆಂಗಳೂರಿನ ಎಲ್ಲಾ ರಾಜಕೀಯ ಪಕ್ಷಗಳ ಮಹಿಳಾ ಶಾಖೆಗಳು ಅತ್ಯಾಚಾರವನ್ನು ಖಂಡಿಸಿ ಮೆರವಣಿಗೆ ಮಾಡಿದ್ದವು.

೧೯೮೫ರಲ್ಲಿ ಕೊಪ್ಪಳದ ಕುದುರೆಮೋತಿ ಗ್ರಾಮದ ಮಹಾಂತಸ್ವಾಮಿಯು ತನ್ನ ಶಿಷ್ಯರೊಂದಿಗೆ ಸೇರಿಕೊಂಡು ಪಾರ್ವತಮ್ಮನನ್ನು ಬೆತ್ತಲೆ ಮಾಡಿ ಮೆರವಣಿಗೆ ನಡೆಸಿದ. ಈ ಬೆತ್ತಲೆ ಮೆರವಣಿಗೆಯನ್ನು ತಡೆಯಲು ಬಂದ ಇನ್ನಿತರೆ ಮಹಿಳೆಯರ ಮೇಲೂ ಹಲ್ಲೆ ನಡೆಸಿದ್ದ. ಈ ಪ್ರಕರಣದ ವಿರುದ್ಧ ರಾಯಚೂರಿನ 'ಜನವಾದಿ ಮಹಿಳಾ ಸಂಘಟನೆ', ಇತರೆ ಮಹಿಳಾ ಸಂಘಟನೆಗಳು ಪ್ರತಿಭಟನೆ ಮಾಡಿದ್ದನ್ನು ಕಾಣಬಹುದು. ಅಲ್ಲದೆ ಬೆಂಗಳೂರಿನ 'ಜಾಗೃತಿ ಮಹಿಳಾ ಅಧ್ಯಯನ ಕೇಂದ್ರ'ವು ಇತರೆ ಪ್ರಗತಿಪರ ಸಂಘಟನೆಗಳೊಂದಿಗೆ ಸೇರಿಕೊಂಡು ಬೆತ್ತಲೆ ಪ್ರಕರಣದ ವಿರುದ್ಧ ಮೆರವಣಿಗೆ, ಪ್ರತಿಭಟನೆ ಮಾಡಿದವು. ೧೯೯೩ರಲ್ಲಿ ಕುಷ್ಟಗಿಯ ಅಂಗನವಾಡಿಯ ಕಾರ್ಯಕರ್ತೆಯೂ ಆದ ದಲಿತ ಮಹಿಳೆ ಶರಣಪ್ಪನ ಮೇಲೆ ಅತ್ಯಾಚಾರವಾಯಿತು. ಆದರೆ ಅತ್ಯಾಚಾರ ಎಸಗಿದವರ ಯಾವ ಸುಳಿವು ದೊರಕಲಿಲ್ಲ. ಈ ಪ್ರಕರಣವನ್ನು ಬೆಂಗಳೂರು ಮತ್ತು ರಾಜ್ಯದ ಇತರೆ ಭಾಗಗಳಲ್ಲಿನ ಮಹಿಳಾ ಸಂಘಟನೆಗಳು ವಿರೋಧಿಸಿವೆ.

ಮೈಸೂರಿನ ವಾಣಿವಿಲಾಸಪುರಂನಲ್ಲಿರುವ ಮಾತೃಮಂಡಳಿಯ ಶಾಲಾ ಬಾಲಕಿ ಸೌಭಾಗ್ಯಳ ಮೇಲೆ ಸಾಮೂಹಿಕ ಅತ್ಯಾಚಾರ ಜರುಗಿತ್ತು. ಇದನ್ನು 'ಸಮತಾ ವೇದಿಕೆ'ಯು ಪ್ರತಿಭಟಿಸಿ ಹಾಸ್ಟೆಲ್‌ನ ಸ್ಥಿತಿಗತಿಗಳನ್ನು ಉತ್ತಮಪಡಿಸಬೇಕೆಂಬ ಮನವಿಯನ್ನು ಜಿಲ್ಲಾಧಿಕಾರಿಯವರಿಗೆ ಸಲ್ಲಿಸಿ ಧರಣಿ ಮಾಡಿತ್ತು. ೧೯೯೦ರಲ್ಲಿ ಗಂಡನ ಹಣದಾಸೆಯ ಕಾರಣಕ್ಕೆ 'ರಫಿಯಾ ಬಾನು' ಬಲಿಯಾದಳು. ಸಮತಾವೇದಿಕೆ ಇದನ್ನು ಸಹ ವಿರೋಧಿಸಿ, ರಫಿಯಾಬಾನುಳ ಸಾವಿಗೆ ಕಾರಣನಾದ ಗಂಡನಿಗೆ ಶಿಕ್ಷೆಯನ್ನು ನೀಡುವಂತೆ ಪೋಲೀಸರಿಗೆ ಒತ್ತಾಯಿಸಿತು.

ಮಂಗಳೂರಿನ ಶ್ರದ್ಧಾನಂದ ಆಶ್ರಯದ ಮೇಲ್ವಿಚಾರಕ ದೇವವ್ರತ ಎಂಬಾತ ಅಧಿಕಾರಸ್ಥರ ಬೆಂಬಲದಿಂದ ಆಶ್ರಮದಲ್ಲಿದ್ದ ಹುಡುಗಿಯರನ್ನು ಲೈಂಗಿಕವಾಗಿ ಹಿಂಸೆ ಮಾಡಿ ಅವರನ್ನು ಮಾರಾಟ ಮಾಡತೊಡಗಿದ. ಇದನ್ನು ಖಂಡಿಸಿ ಸ್ಥಳೀಯರು ಪ್ರತಿಭಟನೆ, ಮೆರವಣಿಗೆಯನ್ನು ಮಾಡಿದರು. ಆಶ್ರಮದಲ್ಲಿದ್ದ ಹೆಣ್ಣುಮಕ್ಕಳಿಗೆ ರಕ್ಷಣೆ ನೀಡಿ ನೈತಿಕ ಬೆಂಬಲ ಕೋರಿದರು. ಈ ಪ್ರಕರಣವನ್ನು ಬೆಂಗಳೂರಿನ ಮಹಿಳಾ ಸಂಘಟನೆಗಳು ಸಹ ವಿರೋಧಿಸಿದವು ಹಾಗೂ ಮಹಿಳೆ ಮತ್ತು ಮಕ್ಕಳ ಕಲ್ಯಾಣ ಇಲಾಖೆಯ ನಿರ್ದೇಶಕರಿಗೆ ವರದಿ ನೀಡಿ ತಕ್ಷಣವೇ ಕ್ರಮ ಕೈಗೊಳ್ಳುವಂತೆ ಒತ್ತಡ ತಂದವು.

ಶಾಸನ ಸಭೆಗಳಲ್ಲಿ ಮಹಿಳೆಯರಿಗೆ ಶೇಕಡ ೩೩ ರಷ್ಟು ಮೀಸಲಾತಿ ಇರಬೇಕೆಂಬ ಮಸೂದೆ ಕುರಿತಂತೆ ಜಾಗೃತಿ ತರಲು ಮಹಿಳಾ ಸಂಘಟನೆಗಳು ಮುಂದೆ ಬಂದು, ಜಾಗೃತಿ ಮಹಿಳಾ ಅಧ್ಯಯನವು ಮೀಸಲಾತಿ ಬಗ್ಗೆ ನಾಟಕವನ್ನು ರಚಿಸಿತು. ಈ ನಾಟಕವನ್ನು ಬೆಂಗಳೂರಿನ ಬಡಾವಣೆಗಳ ಮಹಿಳಾ ಸಂಘಟನೆಗಳು ಪ್ರದರ್ಶಿಸಿ ಕ್ರಾಂತಿಕಾರಿ ಹಾಡುಗಳನ್ನು ಹಾಡುವುದರ ಮುಖೇನ ಮಹಿಳಾ ಮೀಸಲಾತಿಯ ಬಗ್ಗೆ ಜಾಗೃತಿ ಮೂಡಿಸಿವೆ.

೧೯೯೧ ರಿಂದ ಭಾರತ ಸರಕಾರವು ವಿಶ್ವಬ್ಯಾಂಕ್, ಅಂತರರಾಷ್ಟ್ರೀಯ ಹಣಕಾಸು ಸಂಸ್ಥೆ ಇತ್ಯಾದಿಗಳ ಒತ್ತಾಯಕ್ಕೆ ಮಣಿದು ಖಾಸಗೀಕರಣ, ಉದಾರೀಕರಣ, ಜಾಗತೀಕರಣದ ಬಗ್ಗೆ ಹೇಳುತ್ತಾ ದೇಶದ ಮಾರುಕಟ್ಟೆಯನ್ನು ವಿದೇಶಿ ಉದ್ಯಮಿಗಳಿಗೆ ಮುಕ್ತವಾಗಿಸಿತು. ಈ ಸಂದರ್ಭವನ್ನು ದುರುಪಯೋಗ ಮಾಡಿಕೊಂಡ ಹಲವು ವಿದೇಶಿ ಕಂಪನಿಗಳು, ದೇಶದ ಹಲವಾರು ಸರ್ಕಾರೇತರ ಸಂಸ್ಥೆಗಳ ಸಹಕಾರದಿಂದ ಭಾರತೀಯರ ಮೇಲೆ ಅಪಾಯಕಾರಿ ಔಷಧಗಳ ಪ್ರಯೋಗ ಮಾಡಿದವು. ಅಂಥವರಲ್ಲಿ 'ಕ್ವಿನ್ ಕ್ರೀನ್' ಎಂಬ ಒಂದು ಬಗೆಯ ಗರ್ಭ ನಿರೋಧಕ ಔಷಧವೂ ಒಂದು. ಈ ಪ್ರಕರಣದ ವಿರುದ್ಧ ಬೆಂಗಳೂರಿನಲ್ಲಿ ಕಾರ್ಯನಿರತ ಮಹಿಳಾ ಸಂಘಟನೆಗಳು ಒಂದಾಗಿ 'ಮಹಿಳಾ ಆರೋಗ್ಯ ರಕ್ಷಣಾ ಸಮಿತಿ' ಎಂಬ ಸಂಘಟನೆಯನ್ನು ಸ್ಥಾಪಿಸಿಕೊಂಡವು. ಹಾಗೂ ಮುಗ್ಧ ಜನರ ಮೇಲೆ ಪ್ರಯೋಗ ಮಾಡದಂತೆ ತಡೆಯಲು ಮುಂದಾದವು. ಕ್ವಿನ್ ಕ್ರೀನ್ ಕುರಿತಂತೆ ವಿಚಾರ ಸಂಕಿರಣದಲ್ಲಿ 'ಅಚಲ' ಪತ್ರಿಕೆಯ ಸಂಪಾದಕ ಬಳಗವು 'ಕ್ವಿನ್ ಕ್ರೀನ್' ಭಯಾನಕ ಗರ್ಭನಿರೋಧಕ ಎಂಬ ಹೊತ್ತಿಗೆಯನ್ನು ಬಿಡುಗಡೆ ಮಾಡಿತು. ಈ ಪ್ರಕರಣವನ್ನು ದೆಹಲಿಯ ಮಹಿಳಾ ಸಂಘಟನೆಗಳು ಉಚ್ಚ ನ್ಯಾಯಾಲಯದಲ್ಲಿ ಪ್ರಶ್ನಿಸಿ ಮೊಕದ್ದಮೆ ಹೂಡಿದವು. ಇತ್ತೀಚಿಗೆ ಭಾರತದ ಔಷಧ ನಿಯಂತ್ರಣಾಧಿಕಾರಿಗಳು ಉಚ್ಚ ನ್ಯಾಯಾಲಯದಲ್ಲಿ ಹೇಳಿಕೆಯನ್ನು ನೀಡಿ ಈ ಔಷಧಿಯನ್ನು ಯಾರೂ ಸಹ ಸಂತಾನ ನಿಯಂತ್ರಣಕ್ಕೆ ಬಳಸಬಾರದು ಎಂದೂ ಒಂದು ವೇಳೆ ಅದನ್ನು ಬಳಸಿದವರೆ, ಅವರ ವಿರುದ್ಧ ಕ್ರಮ ಕೈಗೊಳ್ಳಲಾಗುತ್ತದೆ ಎಂದು ಹೇಳಿದ್ದಾರೆ.

ಜನವಾದಿ ಮಹಿಳಾ ಸಂಘಟನೆ, ಜಾಗೃತಿ ಮಹಿಳಾ ಅಧ್ಯಯನ ಕೇಂದ್ರ, ಸಂಯುಕ್ತ ಮಹಿಳಾ ವೇದಿಕೆ, ದುಡಿಯುವ ಮಹಿಳೆಯರ ಸಮನ್ವಯ ಸಮಿತಿ, ಮಹಿಳಾ ದಕ್ಷತಾ ಸಮಿತಿ ಮೊದಲಾದವು ಚುನಾವಣೆಯಲ್ಲಿ ಮಹಿಳೆಯರ ಪಾತ್ರದ ಬಗ್ಗೆ ವ್ಯಾಪಕ ಪ್ರಚಾರದ ಕಾರ್ಯಕ್ರಮಗಳನ್ನು ಕೈಗೊಂಡವು. ರಾಜಕೀಯ ಪಕ್ಷಗಳ ಮುಖಂಡರನ್ನು ಆಹ್ವಾನಿಸಿ ಮಹಿಳಾಪರ ಕಾಳಜಿಗಳಿಗೆ ರಾಜಕೀಯ ಪಕ್ಷಗಳ ನಿಲುವನ್ನು ಕುರಿತಂತೆ ಮುಖಾಮುಖಿ ಕಾರ್ಯಕ್ರಮವನ್ನು ಕೈಗೊಂಡಿವೆ. ಅಲ್ಲದೆ ಸೌಂದರ್ಯ ಸ್ಪರ್ಧೆಯನ್ನು ಪ್ರಾಯೋಜಿಸುವ ಗೋದ್ರೆಜ್ ಕಂಪನಿಯ ವಿರುದ್ಧ ಪ್ರತಿಭಟಿಸಲು ಹೋಗಿ ಪೋಲೀಸರಿಂದ ಶಿಕ್ಷೆಗೆ ಒಳಗಾಗಿ ಬಂಧನಕ್ಕೆ ಒಳಗಾದರು. ಅಲ್ಲದೆ ವಿಶ್ವಸುಂದರಿ ಸ್ಪರ್ಧೆಯನ್ನು ವಿರೋಧಿಸಿ ಬೃಹತ್ ಮೆರವಣಿಗೆಯನ್ನು ಮಾಡಿದವು. ಈ ಸ್ಪರ್ಧೆಯನ್ನು ವಿರೋಧಿಸಿ ನೆರೆಯ ರಾಜ್ಯಗಳಾದ ಕೇರಳ, ತಮಿಳುನಾಡು, ಆಂಧ್ರಪ್ರದೇಶ ಮತ್ತು ಮಹಾರಾಷ್ಟ್ರದಿಂದ ನೂರಾರು ಮಹಿಳೆಯರು ಬೆಂಗಳೂರಿಗೆ ಬಂದಿದ್ದರು. ಬೆಂಗಳೂರಿನ ಬೀದಿಗಳಲ್ಲಿ ಮೆರವಣಿಗೆ ಮಾಡುತ್ತಾ ಪ್ರತಿಭಟಿಸುತ್ತ ಜನಸಾಮಾನ್ಯರಿಗೆ ಹೋರಾಟದ ಅಗತ್ಯವನ್ನು ತಿಳಿಸಿದರು. ಹೀಗೆ ಪ್ರತಿಭಟನೆಯ ಮೆರವಣಿಗೆಯಲ್ಲಿ ನಿರತವಾದ ಮಹಿಳಾ ಸಂಘಟನೆಗಳು ನಗರದ ಪ್ರತಿಬಂಧಕಾಜ್ಞೆಯನ್ನು ಮುರಿದಿದ್ದರಿಂದ ಬಂಧನಕ್ಕೂ ಒಳಗಾದರು.

ಅಖಿಲ ಭಾರತ ಎಂ.ಎಸ್.ಎಸ್. ಎಂಬ ಸಂಘಟನೆಯು ಮಹಿಳೆಯರನ್ನು ಕಾಡುತ್ತಿರುವ ವರದಕ್ಷಿಣೆ, ಅಶ್ಲೀಲತೆ, ಸ್ತ್ರೀ ಭ್ರೂಣಹತ್ಯೆ, ಕೋಮುವಾದದ ಬೆಳವಣಿಗೆಯಿಂದ ಮಹಿಳೆಯರ ಗೌರವ-ಘನತೆಗಳಿಗೆ ಕುಂದು ಬಂದಿದ್ದನ್ನು ಕಂಡುಕೊಂಡಿತು. ಅಲ್ಲದೆ ಬೆಲೆ ಏರಿಕೆಯು ಸಹ ಮಹಿಳೆಯರ ಶೋಷಣೆಗೆ ಕಾರಣವಾಗಿರುವುದನ್ನು ತಿಳಿದು ರಾಷ್ಟ್ರವ್ಯಾಪಿ ಹೋರಾಟಕ್ಕೆ ಕರೆ ನೀಡಿತ್ತು. ಅಲ್ಲದೆ ಈ ಸಂಸ್ಥೆಯು ಇದನ್ನು ದಿನಾಂಕ ೧೫.೧೨.೯೯ ರಿಂದ ೨೧.೧೨.೯೯ರವರೆಗೆ ಬೆಂಗಳೂರು, ಗುಲ್ಬರ್ಗಾ, ಬಳ್ಳಾರಿ, ಮೈಸೂರು ಜಿಲ್ಲೆಗಳಲ್ಲಿ ಅಶ್ಲೀಲ ಸಿನಿಮಾ ಸಾಹಿತ್ಯಗಳ ವಿರುದ್ಧ ಪ್ರತಿರೋಧ ವ್ಯಕ್ತಪಡಿಸಿತ್ತು. ಇಡೀ ಸ್ತ್ರೀ ಸಮುದಾಯವನ್ನು ಅವಹೇಳನ ಮಾಡಿದ್ದ 'ಉಪೇಂದ್ರ' ಚಿತ್ರವನ್ನು ಖಂಡಿಸಿ ಪ್ರತಿಭಟಿಸಿತು. ಸಿನಿಮಾ ಹಾಗೂ ವಿವಿಧ ಚಾನೆಲ್‌ಗಳಲ್ಲಿ ಹೆಚ್ಚುತ್ತಿರುವ ಅಶ್ಲೀಲತೆಯ ಪ್ರಚಾರವನ್ನು ವಿರೋಧಿಸಿತು. ಈ ಪ್ರತಿಭಟನೆಯಲ್ಲಿ ಖ್ಯಾತ ಸಾಹಿತಿಗಳಾದ ವ್ಯಾಸರಾಯಬಲ್ಲಾಳ, ಟಿ.ಎಸ್.ನಾಗಾಭರಣ, ಜಿ.ಕೆ.ಗೋವಿಂದರಾವ್ ಮೊದಲಾದವರೂ ಭಾಗವಹಿಸಿದ್ದರು.[೬] ಅಲ್ಲದೆ ಚಲನಚಿತ್ರ ನಟರಾದ ರಾಜಕುಮಾರರ ಅಪಹರಣವನ್ನು ಮಹಿಳಾ ಸಂಘಟನೆಗಳು ಖಂಡಿಸಿ ಪ್ರತಿಭಟಿಸಿದವು.

೨೦೦೨ರಲ್ಲಿ ಬಳ್ಳಾರಿ ಜಿಲ್ಲೆಯ ವರ್ಣೇನೂರಿನಲ್ಲಿ ದಲಿತ ಮಹಿಳೆಯಾದ ಎರಿಯಮ್ಮನನ್ನು ಬೆತ್ತಲೆಗೊಳಿಸಿ, ಗ್ರಾಮಪಂಚಾಯತಿಗೆ ಕಟ್ಟಿ ಹಾಕಿದರು. ಎರಿಯಮ್ಮನ ಸಹಾಯಕ್ಕೆಂದು ಹೋದ ಆಕೆಯ ಗಂಡ, ಮಗ, ಮಗಳ ಮೇಲೂ ಹಲ್ಲೆ ನಡೆಸಿದರು. ಈ ಘಟನೆಯನ್ನು ಬಳ್ಳಾರಿಯ ಮಹಿಳಾ ಸಂಘಟನೆಗಳು ರಾಜ್ಯದ ಇತರೆ ಮಹಿಳಾ ಸಂಘಟನೆಗಳು ಪ್ರತಿಭಟಿಸಿ, ನೊಂದ ಮಹಿಳೆಗೆ ಚಿಕಿತ್ಸೆ ಕೊಡಿಸಿ, ಆಕೆ ಮತ್ತೆ ಮೊದಲಿನಂತೆ ಬಾಳುವಂತೆ ಮಾಡಲು ಸರಕಾರ ಸಹಾಯ ಮಾಡಬೇಕೆಂದು ಒತ್ತಡ ತಂದಿದ್ದವು.

೨೦೦೨ರಲ್ಲಿ ಮಂಗಳೂರಿನ ಒಂದು ವಿವಾಹ ಸಮಾರಂಭದಲ್ಲಿ ವರದಕ್ಷಿಣೆಯ ಮೊತ್ತ ಕಡಿಮೆ ನೀಡಿದ್ದನ್ನು ಕಂಡು 'ವರ'ನ ತಂದೆ-ತಾಯಿಂದಿರು ಇತರೆ ಬಂಧುಗಳು ವಿವಾಹವನ್ನು ತಡೆದಿದ್ದರು. ವಧುವಿನ

ಸಂಬಂಧಿಕರು ಎಷ್ಟು ಬೇಡಿದರೂ ಅವರ ಬಗ್ಗೆ ಕನಿಕರ ತೋರಿಸಲಿಲ್ಲ. ಹೀಗಾಗಿ ವಿವಾಹ ಸಮಾರಂಭವು ವಾದ-ಗದ್ದಲಗಳಿಂದ ಕೂಡಿತು. ಇದನ್ನು ತಿಳಿದ ಮಂಗಳೂರಿನ ಮಹಿಳಾ ಸಂಘಟನೆಗಳು ತಕ್ಷಣವೇ ವಿವಾಹದ ಸ್ಥಳಕ್ಕೆ ಆಗಮಿಸಿ ವರದಕ್ಷಿಣೆ ಕೊಡುವಂತೆ ಒತ್ತಾಯಿಸಿದ್ದನ್ನು ಖಂಡಿಸಿ, ಅವರಿಗೆಲ್ಲಾ ಹೊಡೆದು ಪೋಲೀಸರ ವಶಕ್ಕೆ ಒಪ್ಪಿಸಿದರು. ಅದೇ ವಿವಾಹದ ಅಲ್ಲದೆ ವೇದಿಕೆಯಲ್ಲಿ ವಧುವಿಗೆ ಬೇರೆ ಹುಡುಗನೊಂದಿಗೆ ವಿವಾಹವನ್ನು ಸಹ ಮಾಡಿಸಿದ್ದವು.[೭]

೨೦೦೩ರಲ್ಲಿ ಕಾವೇರಿ ನೀರು ಹಂಚಿಕೆ ಸಂದರ್ಭದಲ್ಲಿ ಮಂಡ್ಯ, ಮೈಸೂರು ಜಿಲ್ಲೆಗಳ ಮಹಿಳೆಯರು, ಮಹಿಳಾ ಸಂಘಟನೆಗಳು ಭಾಗವಹಿಸಿ, ತಮಿಳುನಾಡಿಗೆ ಹೆಚ್ಚುವರಿ ನೀರನ್ನು ಬಿಡದಂತೆ ಆಗ್ರಹಿಸಿ ಮೆರವಣಿಗೆಯನ್ನು ನಡೆಸಿದ್ದವು. ಅಲ್ಲದೆ ಮಾಜಿ ಸಚಿವರಾದ ಹೆಚ್.ನಾಗಪ್ಪನವರ ಅಪಹರಣ, ಹತ್ಯೆಯನ್ನು ಖಂಡಿಸಿವೆ.

ಮಡಿಕೇರಿಯ ವಿದ್ಯಾರ್ಥಿ ನಿಲಯದಲ್ಲಿರುವ ದಲಿತ ಹುಡುಗಿಯರ ಮೇಲೆ ಅತ್ಯಾಚಾರ ಬಹು ದಿನಗಳಿಂದ ನಡೆಯುತ್ತಿತ್ತು. ಓದು-ಬರೆಹ-ಆಟ-ಪಾಠಗಳಲ್ಲಿ ತೊಡಗಬೇಕಾದ ಹುಡುಗಿಯರು ಬಾಲ್ಯದಲ್ಲಿಯೇ ತಾಯಂದಿರಾಗಿ ಮಕ್ಕಳ ಲಾಲನೆ-ಪಾಲನೆಯಲ್ಲಿ ತೊಡಗಿದ್ದರು. ಇದನ್ನು ೨೦೦೩ರಲ್ಲಿ ಮಡಿಕೇರಿಯ ಮಹಿಳಾ ಸಂಘಟನೆಗಳು ಗುರುತಿಸಿ, ಬಾಲಕಿಯರ ಮನೆಗೆ ತೆರಳಿ ಅವರ ಅತ್ಯಾಚಾರಕ್ಕೆ ಕಾರಣರಾದವರ ವಿವರ ತಿಳಿದು, ಅತ್ಯಾಚಾರಿಗಳಿಗೆ ಶಿಕ್ಷೆ ನೀಡಬೇಕೆಂದೂ, ಇನ್ನು ಮುಂದೆ ಇಂಥ ಘಟನೆಗಳಿಗೆ ಅವಕಾಶ ಕೊಡದೆ ವಿದ್ಯಾರ್ಥಿನಿಲಯದ ಅಧಿಕಾರಿಗಳ ಮೇಲೆ ಗಮನಹರಿಸಬೇಕೆಂದು[೮] ಒತ್ತಡ ತಂದಿವೆ.

ರಾಜ್ಯದ ಆದಾಯಕ್ಕಾಗಿ ಜನತೆಯ ಬದುಕನ್ನು ಬಲಿಕೊಡುತ್ತಿರುವ ರಾಜ್ಯದ ಲಾಟರಿಗೆ ಅನೇಕರು ಬಲಿಯಾಗಿ ಕೆಲವರು ಹುಚ್ಚರಾಗಿದ್ದಾರೆ, ಮತ್ತೆ ಕೆಲವರು ಆತ್ಮಹತ್ಯೆ ಮಾಡಿಕೊಂಡಿದ್ದಾರೆ. ಇದರ ವಿರುದ್ಧ ಮಹಿಳಾ ಸಂಘಟನೆಗಳು ಪ್ರತಿಭಟನೆ ಮಾಡಿದವು. ಮಂಡ್ಯದ 'ಸ್ಪಂದನ' ಮಹಿಳಾ ಸದಸ್ಯರು ಫ್ಲೇವಿನ್ ಲಾಟರಿಯ ಅಂಗಡಿಗಳಿಗೆ ನುಗ್ಗಿ ಪ್ರತಿಭಟನೆ, ಧರಣಿ ಸತ್ಯಾಗ್ರಹ ಮಾಡಿದ್ದಾರೆ. ಈ ಮಹಿಳೆಯರನ್ನು ಕುರಿತಂತೆ ಮುಖ್ಯಮಂತ್ರಿಗಳಾದ ಎಸ್.ಎಂ.ಕೃಷ್ಣ ಅವರು ಲಘುವಾಗಿ ಮಾತನಾಡಿದ್ದರು. ಮುಖ್ಯಮಂತ್ರಿಗಳ ಮಾತುಗಳಿಗೆ ಪ್ರತಿಭಟನೆ ವ್ಯಕ್ತಪಡಿಸಿದ್ದಲ್ಲದೆ, ಬೆಂಗಳೂರಿನ ವಿವಿಧ ಮಹಿಳಾ ಸಂಘಟನೆಗಳು ಈ ಕುರಿತು ಮುಖ್ಯಮಂತ್ರಿಗಳಿಗೆ ಪತ್ರ ಬರೆದವು. "ಕುಟುಂಬದಲ್ಲಿ ಮಹಿಳೆಯರ ಪಾತ್ರ ಕುರಿತು ನಿಮ್ಮ ಮಾತು ಬೇಜವಾಬ್ದಾರಿತನದಿಂದ ಕೂಡಿದ್ದು, ಮಹಿಳೆಯರ ಗೌರವಕ್ಕೆ ಚ್ಯುತಿ ತಂದಿದೆ. ಅದಕ್ಕಾಗಿ ನೀವು ಕೂಡಲೆ ಸಾರ್ವಜನಿಕವಾಗಿ ಹೇಳಿಕೆಯನ್ನು ಹಿಂತೆಗೆದುಕೊಳ್ಳಬೇಕು ಎಂದು ಬರೆದಿದ್ದವು. ಅಷ್ಟೇ ಅಲ್ಲದೆ ಆನ್ ಲೈನ್ ಲಾಟರಿಯ ಪಿಡುಗನ್ನು ತೊಡೆದುಹಾಕಲು ತಕ್ಷಣವೇ ಅದನ್ನು ರದ್ದು ಮಾಡುವ ಕ್ರಮ ಕೈಗೊಳ್ಳಬೇಕು, ಮದ್ಯದ ಮಾರಾಟವನ್ನು ಸಮರ್ಥಿಸಿಕೊಳ್ಳುವುದನ್ನು ಬಿಟ್ಟು ನಿಷೇಧಿಸಬೇಕೆಂದು ತಿಳಿಸಿದವು. ರಾಯಚೂರಿನಲ್ಲಿ ನಡೆದ ಸಾಮೂಹಿಕ ವಿವಾಹದಲ್ಲಿ ಬಾಲ್ಯವಿವಾಹಗಳು ನಡೆದಿದ್ದು, ಆ ಸಮಾರಂಭದಲ್ಲಿ ಜನಪ್ರತಿನಿಧಿಗಳು, ಸಚಿವರು, ನೀವು ಭಾಗವಹಿಸಿದ್ದು ತಿಳಿದುಬಂದಿದೆ. ಅಂಥವರ ಮೇಲೆ ಕ್ರಮ ತೆಗೆದುಕೊಳ್ಳಬೇಕು ಇಲ್ಲವಾದರೆ ರಾಜ್ಯವ್ಯಾಪಿ ಹೋರಾಟ ಹಮ್ಮಿಕೊಳ್ಳುತ್ತೇವೆ''[೯] ಎಂದು ಜಾಗೃತಿ ಮಹಿಳಾ ಅಧ್ಯಯನ ಕೇಂದ್ರ, ಜನವಾದಿ ಮಹಿಳಾ ಸಂಘಟನೆ, ಸುಮಂಗಲಿ ಸೇವಾಶ್ರಮ, ನ್ಯಾಷನಲ್ ಫೆಡರೇಷನ್ ಆಫ್ ಇಂಡಿಯನ್ ವುಮೆನ್ ಮೊದಲಾದ ಸಂಘಟನೆಗಳು ಪ್ರತಿರೋಧವನ್ನು ವ್ಯಕ್ತಪಡಿಸಿದ್ದವು.

ಮುಖ್ಯಮಂತ್ರಿಗಳಾದ ಎಸ್.ಎಂ.ಕೃಷ್ಣ ಅವರು ಎಲ್ಲಾ ದಿನಸಿ ಅಂಗಡಿಗಳಲ್ಲಿ ಬಿಯರ್ ಮಾರಾಟ ಮಾಡಲು ಪರವಾನಿಗೆ ನೀಡಿದ್ದರು. ಇದನ್ನು ಬೆಂಗಳೂರಿನ ಮಹಿಳಾ ಸಂಘಟನೆಗಳಾದ ಜಾಗೃತಿ ಮಹಿಳಾ ಅಧ್ಯಯನ ಕೇಂದ್ರ, ಬೆಂಗಳೂರು ನಗರ ಜಿಲ್ಲಾ ಮಹಿಳಾ ಮಹಾಮಂಡಲ, ಎನ್.ಎಫ್.ಓ.ಐ. ಮಹಿಳಾ ಸಂಘಟನೆ, ಎಂ.ಎಸ್.ಎಸ್. ಜನವಾದಿ ಮಹಿಳಾ ಸಂಘಟನೆಗಳು ಬಹಿರಂಗ ಪತ್ರ ಬರೆದು "ಮದ್ಯಪಾನ ಇಡೀ ಸಮಾಜದ ನೆಮ್ಮದಿಯನ್ನು ಸುಡುತ್ತಿದ್ದು, ಅನೇಕ ಕುಟುಂಬಗಳನ್ನು ಒಡೆಯುತ್ತಿವೆ. ಮಹಿಳೆಯರ ಪಾಲಿಗೆ ದುಸ್ವಪ್ನವೇ ಆಗಿರುತ್ತದೆ. ಈಗಾಗಲೇ ಮಹಿಳೆಯರು, ಮಹಿಳಾ ಸಂಘಟನೆಗಳು ಮದ್ಯಪಾನ ನಿಷೇಧಕ್ಕೆ ಮನವಿ, ಹೋರಾಟ, ಧರಣಿ ಮಾಡಿರುತ್ತವೆ. ಇಂಥ ಸಂದರ್ಭದಲ್ಲಿಯೂ ಬಿಯರ್‌ನ್ನು ಎಲ್ಲ ದಿನಸಿ ಅಂಗಡಿಗಳಲ್ಲಿ ಮಾರಾಟ ಮಾಡಿದರೆ ಮಕ್ಕಳು ಸಹ ಕುಡಿಯಲು ತೊಡಗಿ, ಹಣಕ್ಕಾಗಿ ಕಳ್ಳತನ ದರೋಡೆಗಳಲ್ಲಿ ತೊಡಗಿ ಅಪರಾಧಿಗಳಾಗುತ್ತಾರೆ. ಅಂತೆಯೇ ಸರಕಾರ ತನ್ನ ಆದೇಶವನ್ನು ಹಿಂತೆಗೆದುಕೊಳ್ಳಬೇಕೆಂದು"[೧೦] ತಿಳಿಸಿದ್ದಲ್ಲದೆ, ಅದನ್ನು ನಿಲ್ಲಿಸುವಲ್ಲಿ ಯಶಸ್ಸನ್ನು ಪಡೆದವು. ಟಿ.ವಿ.ಯಲ್ಲಿ ಪ್ರಸಾರವಾಗುತ್ತಿದ್ದ ಜಾಹೀರಾತುಗಳಲ್ಲಿ ಮಹಿಳೆಯರು ಅಸಹ್ಯ ಉಡುಗೆ-ತೊಡುಗೆಯನ್ನು ಧರಿಸಿ ಪ್ರಚಾರ ಕೈಗೊಳ್ಳುತ್ತಿದ್ದರೆ ಅಂಥವುಗಳ ವಿರುದ್ಧ ಹೋರಾಟ ಮಾಡಿ ಅವುಗಳನ್ನು ಸ್ವಲ್ಪಮಟ್ಟಿಗೆಯಾದರೂ ತಡೆಯುವಲ್ಲಿ ಸಫಲತೆ ಪಡೆದಿವೆ. ಉದಾಹರಣೆಗೆ 'FA' ಸೋಪಿನ ಜಾಹೀರಾತನ್ನು ನಿಲ್ಲಿಸಿದ್ದು.

ಸವದತ್ತಿ, ಬಿಜಾಪುರ, ಬಾಗಲಕೋಟೆ, ಉಚ್ಚಂಗಿದುರ್ಗ, ಮೊದಲಾದ ಹೆಣ್ಣು ದೇವತೆಗಳಿಗೆ ಮಹಿಳೆಯರನ್ನು ದಾಸಿಯರನ್ನಾಗಿ ಬಿಡುವ, ಮುತ್ತುಕಟ್ಟಿಸುವ, ಜಾತ್ರೆ ಸಂದರ್ಭದ ಬೆತ್ತಲೆ ಸೇವೆಗಳನ್ನು ನಿಲ್ಲಿಸಲು ಹೋರಾಟ ಮಾಡುತ್ತಿವೆ. ಹೀಗೆ ಹಲವು ಬಗೆಯ ಹೋರಾಟಗಳನ್ನು ಮಹಿಳಾ ಸಂಘಟನೆಗಳು ಹಮ್ಮಿಕೊಂಡಿವೆ. ಸ್ತ್ರೀವಾದಿ ನೆಲೆಯಿಂದ ಸಮಕಾಲೀನ ಮಹಿಳಾ ಹೋರಾಟಗಳನ್ನು ಕುರಿತಂತೆ ವಿಸ್ತೃತ ಅಧ್ಯಯನ ಮಾಡಲು ಅವಕಾಶಗಳಿವೆ.

### ೬.೩. ಮಹಿಳಾ ಸವಾಲುಗಳು

ಇಪ್ಪತ್ತೊಂದನೆಯ ಶತಮಾನದಲ್ಲಿ ಹೆಜ್ಜೆ ಇಟ್ಟ ಮಹಿಳೆ ಇಂದು ಎಲ್ಲಾ ಕ್ಷೇತ್ರಗಳಲ್ಲಿಯೂ ಪ್ರವೇಶ ಪಡೆದಿದ್ದಾಳೆ. ಅಲ್ಲದೆ ಈ ಶತಮಾನದ ಪ್ರಧಾನ ಚರ್ಚೆಗಳಲ್ಲಿ 'ಮಹಿಳೆ'ಯೂ ಒಬ್ಬಳು. ಮಹಿಳೆಯ ಪರವಾಗಿ ಅನೇಕ ಸಂಘ-ಸಂಸ್ಥೆಗಳು, ಸಂಘಟನೆಗಳು ಅಸ್ತಿತ್ವದಲ್ಲಿವೆ. ಸರಕಾರ, ಸಂವಿಧಾನಗಳು ಸಹ ಮಹಿಳೆಯರ ಪರ ಚಿಂತಿಸಿ, ಸ್ತ್ರೀಯರಿಗೆಂದೇ ಅನೇಕ ಕಾನೂನು ಯೋಜನೆ, ಘೋಷಣೆಗಳನ್ನು ತಂದಿವೆ. ಸಂವಿಧಾನವು ಮಹಿಳೆಯರಿಗೆಂದು ಹಲವು ಬಗೆಯ ಕಾನೂನುಗಳನ್ನು ಪಾಸು ಮಾಡಿ, ಇದುವರೆಗೆ ಆಕೆ ಅನುಭವಿಸಿದ ಅನಿಷ್ಟ ಪದ್ಧತಿ, ಆಚರಣೆಗಳಿಂದ, ಲಿಂಗ ತಾರತಮ್ಯಗಳಿಂದ ಪಾರುಮಾಡಿದೆ. ಮಹಿಳೆಯರ ಅಭಿವೃದ್ಧಿ, ಆರೋಗ್ಯ, ಶಿಕ್ಷಣ ಮೊದಲಾದ ವಿಷಯಗಳು ಕುರಿತಂತೆ ವಿಚಾರ ಸಂಕಿರಣಗಳು, ಚರ್ಚೆಗಳು ಜರುಗುತ್ತಲಿವೆ. ಅಲ್ಲದೆ ಮಹಿಳೆಯರನ್ನು ಕುರಿತಂತೆ ಮಹಿಳಾ ಅಧ್ಯಯನ ಕೇಂದ್ರಗಳು ಹುಟ್ಟಿಕೊಂಡಿವೆ. 'ಸ್ತ್ರೀವಾದಿ' ನೆಲೆಯಲ್ಲಿ ಮಹಿಳೆಯನ್ನು ಕುರಿತಂತೆ ಸಾಹಿತ್ಯ, ಚರಿತ್ರೆ, ರಾಜಕಾರಣ ಮೊದಲಾದವುಗಳಲ್ಲಿ ಪ್ರಧಾನವಾಗಿ ಚರ್ಚಿಸಲಾಗುತ್ತಿದ್ದು, ಸಮಕಾಲೀನ ಸಾಹಿತ್ಯದ ಕಾಲಘಟ್ಟವನ್ನು 'ಸ್ತ್ರೀವಾದ' ಎಂದು ಕರೆಯುತ್ತಿದ್ದಾರೆ.

ಮಹಿಳೆಯು ನಾಲ್ಕುಗೋಡೆಗಳ ಆಚೆ ಬಂದು ಹಲವು ಬಗೆಯ ಕಾರ್ಯ-ಚಟುವಟಿಕೆಗಳಲ್ಲಿ ತೊಡಗಿದ್ದಾಳೆ. ಎಂದಾದರೂ ಆಕೆ ನವೀನ ಬಗೆಯ ಸವಾಲುಗಳನ್ನು ಎದುರಿಸಬೇಕಾಗಿದೆ. "ಒಂದು ಸಮಸ್ಯೆಯನ್ನು ತಡೆಯಲು ಪ್ರಯತ್ನಿಸಿ ಅದರಿಂದ ಮುಕ್ತಳಾದೆ" ಎಂದು ಸ್ತ್ರೀಯರು ಭಾವಿಸುವಂತಿಲ್ಲ. ಒಂದು ಸಮಸ್ಯೆ ಹೋಗಿ ಸ್ವಲ್ಪ ಅನುಕೂಲಗಳಾದರೂ, ಅದಕ್ಕೆ ಹೊಂದಿಕೊಂಡಂತೆ ವಿವಿಧ ಬಗೆಯ ಹೊಸ ಸವಾಲುಗಳು ಹುಟ್ಟಿಕೊಳ್ಳುತ್ತಿವೆ. ಅಂಥ ಕೆಲವು ಸವಾಲುಗಳನ್ನು ಈ ಕೆಳಗಿನಂತೆ ಪರಿಶೀಲಿಸಬಹುದು.

### ೧. ಹೆಣ್ಣು ಭ್ರೂಣ ಹತ್ಯೆ

ಸಮಕಾಲೀನ ಸಂದರ್ಭದಲ್ಲಿ ಸ್ತ್ರೀವಾದಿ ಅಧ್ಯಯನ ಸ್ತ್ರೀಯರನ್ನು ಕುರಿತಂತೆ ಚರ್ಚೆ ನಡೆಸುತ್ತಿದೆ. ಹೀಗಿದ್ದರೂ ಹೆಣ್ಣು ಭ್ರೂಣಹತ್ಯೆ ನಡೆಯುತ್ತಿದೆ ಎಂದು ಕೇವಲ ಸ್ತ್ರೀವಾದಿಗಳು ಮಾತ್ರ ಅಭಿಪ್ರಾಯಪಟ್ಟಿದ್ದಾರೆ ಎಂಬ ಆರೋಪಗಳು ಸಾಕಷ್ಟು ಕೇಳಿಬರುತ್ತಿವೆ. ಸಂವಿಧಾನದ ಪ್ರಕಾರ ಯಾವುದೇ ಬಗೆಯ ಲಿಂಗ ತಾರತಮ್ಯ ಮಾಡಲಾಗದು. ಆದರೆ ಅನೇಕ ತಾಯಂದಿರು ಹೆಣ್ಣುಮಕ್ಕಳಿಗೆ ಜನ್ಮನೀಡುವ ಸ್ವಾತಂತ್ರ್ಯವನ್ನು ಪಡೆದಿಲ್ಲದಿರುವುದರಿಂದ ಹೆಣ್ಣು ಎಂದು ಗೊತ್ತಾದರೆ ಸಾಕು ಭ್ರೂಣವನ್ನು ತೆಗೆದುಹಾಕಲು ಮುಂದಾಗುತ್ತಿರುವುದನ್ನು ಗಮನಿಸಬಹುದು. ಮಹಿಳೆಯರು ಇಂಥ ಪಾಶವೀಕೃತ್ಯದಲ್ಲಿ ತೊಡಗಲು ಪ್ರಧಾನ ಕಾರಣಗಳೆಂದರೆ, ಮೊದಲನೆಯದು ಹೆಣ್ಣಿನ ಬಗ್ಗೆ ಪುರುಷ ಪ್ರಧಾನ ಸಮಾಜ ತಾಳಿರುವ ಪಕ್ಷಪಾತ ಧೋರಣೆ. ಎರಡನೆಯದು ಗಂಡುಮಗುವಿನ ಹಂಬಲ ಎನ್ನಬಹುದು. ಪ್ರಾಚೀನ ಕಾಲದಿಂದ ಸಮಕಾಲೀನ ಸಂದರ್ಭದವರೆಗೂ ಗಂಡುಮಗುವಿನ ಹುಟ್ಟಿಗೆ ಅಪೇಕ್ಷೆ ಸ್ವಲ್ಪವೂ ಕಡಿಮೆಯಾಗಿಲ್ಲ. ಎಷ್ಟೋ ವಿದ್ಯಾವಂತರು ಸಹ ಗಂಡು-ಹೆಣ್ಣು ಎಂಬ ಪದಗಳನ್ನು ಲಾಭ-ನಷ್ಟ, ನಮ್ಮದು-ಪರರ ಒಡವೆ ಎಂಬ ಸಂಕೇತ ಪದಗಳನ್ನಾಗಿ ಬಳಸುತ್ತಿರುವುದುಂಟು. ಗಂಡು ಹುಟ್ಟಿದರೆ ಸಂತೋಷ ವ್ಯಕ್ತಪಡಿಸಿ ಸಿಹಿ ಹಂಚುವ ಎಷ್ಟೋ ಜನ ಇಂದಿಗೂ ಇದ್ದಾರೆ. ಪ್ರಾಚೀನ ಕಾಲದಲ್ಲಿ ಗಂಡು ಮಗುವಿಗಾಗಿ ಪ್ರಾರ್ಥಿಸುವ ಶ್ಲೋಕಗಳು, ಆಚರಿಸುವ ಪದ್ಧತಿಗಳಿದ್ದರೆ, ಇಂದು ಗಂಡು ಮಗುವನ್ನು ಪಡೆಯಲು ಹೋಮ, ಪೂಜೆ ಮೊದಲಾದವುಗಳ ಜೊತೆಗೆ ವಿಜ್ಞಾನದ ಸಹಾಯವನ್ನು ಪಡೆಯಲಾಗುತ್ತಿದೆ. ಭ್ರೂಣಾವಸ್ಥೆಯಲ್ಲಿಯೇ ಮಗುವಿನಲ್ಲಿ ಇರಬಹುದಾದ ದೈಹಿಕ ತೊಂದರೆಗಳನ್ನು ಗುರುತಿಸಿ, ನಂತರದಲ್ಲಿ ಸಂಭವಿಸಬಹುದಾದ ಸಮಸ್ಯೆಗಳನ್ನು ಸರಿಪಡಿಸಲು ಅನುವು ಮಾಡಿಕೊಡಲು ಅಸ್ತಿತ್ವಕ್ಕೆ ಬಂದಂಥ ವೈದ್ಯಕೀಯ ಪರೀಕ್ಷೆಗಳನ್ನು (ಅಮ್ನಿಯೋ ಸಿಂಥಿಸಿಸ್) ದುರುಪಯೋಗ ಮಾಡಿಕೊಂಡು ಕೇವಲ ಹೆಣ್ಣು ಭ್ರೂಣಗಳ ಹತ್ಯೆಗೆ ಬಳಸಿಕೊಳ್ಳಲಾಗುತ್ತಿದೆ. ಹೆಣ್ಣು ಭ್ರೂಣಗಳ ಹತ್ಯೆಯಲ್ಲಿ ವೈದ್ಯರು, ಪೋಷಕರು, ವೈದ್ಯಕೀಯ ಸಿಬ್ಬಂದಿಯೂ ಭಾಗಿಗಳಾಗಿದ್ದು, ಹೆರಿಗೆ ಆಸ್ಪತ್ರೆಗಳು ಭ್ರೂಣಹತ್ಯೆಗೆಂದು ನಡೆಸಲಾಗುವ ಆಸ್ಪತ್ರೆಗಳಾಗಿವೆ. ಗಂಡುಮಗುವಾದರೆ ಹೆರಿಗೆ ಮಾಡಿಸುವ, ಹೆಣ್ಣು ಮಗುವಾದರೆ ಭ್ರೂಣ ತೆಗೆಯುವ ಎರಡು ಕಾರ್ಯಗಳಿಂದ ಆಸ್ಪತ್ರೆಗಳಿಗೆ ಅಧಿಕ ಲಾಭವುಂಟು. ಆದರೆ ಇಂಥ ಆಸ್ಪತ್ರೆಗಳಲ್ಲಿ ನುರಿತ ವೈದ್ಯರಾಗಲಿ, ದಾದಿಯರಾಗಲಿ ಇರುವುದಿಲ್ಲ. ಭ್ರೂಣ ಪರೀಕ್ಷೆಗೆ ಎಂದು ತನ್ನ ದೇಹವನ್ನು ಒಪ್ಪಿಸುವ ತಾಯಂದಿರು ಭವಿಷ್ಯದಲ್ಲಿ ಹಲವಾರು ಬಗೆಯ ತೊಂದರೆಗಳನ್ನು ಎದುರಿಸಬೇಕಾಗಿದೆ. ಇಂಥ ಪರೀಕ್ಷೆಯ ಸಂದರ್ಭದಲ್ಲಿ ಒಮ್ಮೆಲೆ ಇಬ್ಬರು ಹೆಣ್ಣುಮಕ್ಕಳ ಶೋಷಣೆ ನಡೆಯುತ್ತಿದೆ. ಆದರೆ ಅದನ್ನು ಶೋಷಣೆ ಎಂದು ಯಾರು ಪರಿಗಣಿಸದಿರುವುದು ಹೊಸಬಗೆಯ ಸವಾಲಾಗಿದೆ. "ಹೆಣ್ಣು ಭ್ರೂಣವನ್ನು ಇಂದು ಬಹಳ ಸಹಜ ಮೊತ್ತದಲ್ಲಿ

ತೆಗೆಯಿಸಿದರೆ, ಭವಿಷ್ಯದಲ್ಲಿ ವೆಚ್ಚವಾಗುವ ಬಾರಿ ಮೊತ್ತವನ್ನು ಉಳಿಸಬಹುದು’’ ಎಂಬ ಜಾಹೀರಾತುಗಳು, ಪತ್ರಿಕೆ, ಕರಪತ್ರಗಳು ಮೂಡಿ ಬರುತ್ತಿವೆ. ಹೀಗೆ ಪ್ರಚಾರ ಮಾಡುವ ಮುಖೇನ ಹೆಣ್ಣು ಭ್ರೂಣಹತ್ಯೆಗೆ ಪ್ರೋತ್ಸಾಹ ಕೊಡಲಾಗುತ್ತಿದೆ. ಆದರೆ ಇತ್ತೀಚಿಗೆ ಮಹಿಳಾ ಸಂಘಟನೆಗಳು ಅಮ್ನಿಯೋ ಸಿಂಥಿಸಿಸ್ ವಿರುದ್ಧ ಹೋರಾಟ ಮಾಡಿ ನಿಲ್ಲಿಸಿವೆ ಎನ್ನುವುದು ಸ್ವಲ್ಪ ಸಮಾಧಾನಕರ ಸಂಗತಿಯಾಗಿದೆ. ಆದರೆ ಇಂದಿಗೂ ಗುಪ್ತವಾಗಿ ಹೆಣ್ಣು ಭ್ರೂಣ ಹತ್ಯೆ ನಡೆಯುತ್ತಿದೆ. ಇದರ ಪ್ರಮಾಣದ ಬಗ್ಗೆ ಪತ್ರಿಕೆಯೊಂದು ವರದಿ ಮಾಡುತ್ತ ‘‘೧೯೮೧-೮೨ರಲ್ಲಿ ಹೆಣ್ಣು ಭ್ರೂಣ ಪರೀಕ್ಷೆಯಿಂದ ೭೮,೦೦೦ ಹೆಣ್ಣು ಭ್ರೂಣಗಳ ಹತ್ಯೆಯಾಗಿವೆ’’ ಎಂದು ತಿಳಿದು ಬಂದಿದೆ. ಇಂಥ ಹತ್ಯೆಗಳಿಂದ ಸ್ತ್ರೀ-ಪುರುಷ ಅನುಪಾತದ ಭಿನ್ನತೆ ಈ ರೀತಿ ಇದೆ.

೧೯೮೧ರಲ್ಲಿ ಪ್ರತಿ ೧೦೦೦ ಪುರುಷರಿಗೆ ೯೭೨ರಷ್ಟು ಮಹಿಳೆಯರು

೧೯೯೧ರಲ್ಲಿ ಪ್ರತಿ ೧೦೦೦ ಪುರುಷರಿಗೆ ೯೨೯ರಷ್ಟು ಮಹಿಳೆಯರು

೨೦೦೧ರಲ್ಲಿ ಪ್ರತಿ ೧೦೦೦ ಪುರುಷರಿಗೆ ೯೩೧ರಷ್ಟು ಮಹಿಳೆಯರು

ಅನೇಕರು ಹೆಣ್ಣು ಭ್ರೂಣಗಳ ಹತ್ಯೆಯಿಂದ ಭವಿಷ್ಯದಲ್ಲಿ ಸ್ತ್ರೀಯರಿಗೆ ಅಪಾರ ಬೇಡಿಕೆ ಬರುತ್ತದೆ ಎಂದಿದ್ದಾರೆ. ಆದರೆ ಇವರಿಗೆ ಹೆಣ್ಣಿನ ಮೇಲೆ ಆಗುತ್ತಿರುವ ಅನ್ಯಾಯ-ದೌರ್ಜನ್ಯಗಳು ಕಾಣುವುದಿಲ್ಲ. ಆದರೆ ವಾಸ್ತವವಾಗಿ ಚಿಂತಿಸಿದಾಗ ಹೆಣ್ಣುಗಳ ಜನನ ಪ್ರಮಾಣ ಕಡಿಮೆಯಾದರೆ ಹೆಣ್ಣಿಗೆ ಬೇಡಿಕೆ ಬರುವುದರ ಬದಲು ಅನೇಕ ಪುರುಷರು ಒಂದು ಹೆಣ್ಣಿನ ಬದುಕಿನ ಮೇಲೆ ನಿಯಂತ್ರಣ ಪಡೆಯುತ್ತಾರೆ. ಇದರಿಂದ ಮತ್ತೆ ಹೆಣ್ಣು ಶೋಷಣೆಗೆ ಒಳಗಾಗುತ್ತಾಳೆ. ಅಲ್ಲದೆ ಎಲ್ಲ ಮಹಿಳೆಯರು ದ್ರೌಪದಿಯ ಪಾತ್ರ ಮಾಡಬೇಕಾಗುತ್ತದೆ. ಹೀಗೆ ಹೆಣ್ಣು ಎಂದಿಗೂ ಸವಾಲುಗಳಿಲ್ಲದೆ ಬದುಕು ನಡೆಸಲು ಸಾಧ್ಯತೆಗಳಿಲ್ಲ.

**೨. ಹೆಣ್ಣು ಕೂಸುಗಳ ಮಾರಾಟ**

ಬಡತನ, ಅನಕ್ಷರತೆಯಂಥ ಸಾಮಾಜಿಕ ಸಮಸ್ಯೆಗಳ ಅಂತಿಮ ಬಲಿಪಶು ಮಹಿಳೆಯಾಗಿದ್ದಾಳೆ. ಪ್ರಗತಿಯ ಹಾದಿಯಲ್ಲಿ ನಡೆಯುತ್ತಿದ್ದೇವೆ ಎನ್ನುವಾಗ ಹೆಣ್ಣು ಭ್ರೂಣಗಳ ಹತ್ಯೆ ಒಂದೆಡೆಯಾದರೆ, ಇನ್ನೊಂದು ಕಡೆ ಹೆಣ್ಣು ಕೂಸುಗಳ ಮಾರಾಟ ನಡೆಯುತ್ತಿರುವುದು ಪ್ರಧಾನ ಸವಾಲಾಗಿದೆ. ಗುಲ್ಬರ್ಗಾ ಜಿಲ್ಲೆಯ ಚಿಂಚೋಳಿ ತಾಲೂಕಿನ ಲಂಬಾಣಿ ತಾಂಡಗಳಲ್ಲಿ ಹೆಣ್ಣು ಹಸುಳೆಗಳ ಮಾರಾಟ ನಡೆದ ದಾಖಲೆಗಳು ಕಂಡುಬರುತ್ತಿವೆ. ಚಿಂಚೋಳಿಯ ೫೨ಕ್ಕೂ ಅಧಿಕ ಲಂಬಾಣಿ ತಾಂಡಗಳಲ್ಲಿ ದಶಕದಿಂದಲೇ ಈ ಅಕ್ರಮ ದಂಧೆ ನಡೆದಿತ್ತು. ಆದರೆ ಇತ್ತೀಚಿಗೆ ೪೫ ತಾಂಡಗಳಿಂದ ೧೯ ಪ್ರಕರಣಗಳನ್ನು ಮಾತ್ರ ಪೋಲೀಸರು ದಾಖಲಿಸಿದ್ದಾರೆ. ಮಾರಾಟವಾಗುವ ಹೆಣ್ಣು ಕೂಸುಗಳು ೧೫ ದಿನಗಳಿಂದ ೪ ವರುಷದವರು ಮಾತ್ರ ಆಗಿರುತ್ತಾರೆ. ಈ ಕೂಸುಗಳಿಗೆ ೫೦೦ ರೂಪಾಯಿಗಳಿಂದ ೨೦೦೦ ರೂಪಾಯಿಗಳವರೆಗೆ ಬೆಲೆ ಕಟ್ಟುತ್ತಿದ್ದರು. ಹಣಕ್ಕಾಗಿ ತಾವು ಹೆತ್ತ ಮಕ್ಕಳನ್ನು ತಾಯಂದಿರು ಮಾರಬೇಕಾದರೆ ಅವರ ಸ್ಥಿತಿಗತಿಗಳು ಯಾವ ಪರಿಯಲ್ಲಿ ಇರುತ್ತವೆ ಎಂದು ಊಹಿಸಬಹುದು. ಕುತೂಹಲದ ಸಂಗತಿ ಎಂದರೆ ಹೆರಿಗೆ ಮಾಡಿಸುವ ಸೂಲಗಿತ್ತಿಯರು ಸಹ ಹಣದ ಆಸೆಗಾಗಿ ಮಾರಾಟದಲ್ಲಿ ಶಾಮೀಲಾಗಿರುವುದು. ಇಂಥವುಗಳು ಪ್ರಚಲಿತ ಸವಾಲುಗಳಾಗಿ ಪರಿಗಣಿತವಾಗಿರುತ್ತವೆ.

### ೩. ಜಾತಿ ವ್ಯವಸ್ಥೆ

ಮಹಿಳೆಯರು ಲಿಂಗ, ವರ್ಗಗಳಿಂದ ಶೋಷಣೆಗೆ ಒಳಗಾದಂತೆ, ಜಾತಿ ವ್ಯವಸ್ಥೆಯಿಂದಲೂ ಶೋಷಣೆಗೆ ಒಳಗಾಗಿ ಸಮಾಜದ ಎಲ್ಲ ಮಹಿಳೆಯರಲ್ಲಿ ಐಕ್ಯತೆ ಉಂಟಾಗದೆ ಬಿರುಕುಗಳು ಸೃಷ್ಟಿ ಆಗಿವೆ. ಜಾತಿ ವ್ಯವಸ್ಥೆಯು ಮಹಿಳೆಯರು ಎಲ್ಲ ಒಂದಾಗಿ ತಮ್ಮ ಸ್ವಾತಂತ್ರ್ಯ, ಸಮಾನತೆಗೆ ಹೋರಾಡಲು ತಡೆ ನೀಡಿದೆ. ಇಷ್ಟೇ ಅಲ್ಲದೆ ಮೇಲ್ಜಾತಿಗೆ ಸೇರಿದ ಅನೇಕ ಮಹಿಳೆಯರು ಆರ್ಥಿಕವಾಗಿ ಹಾಗೂ ಸಾಮಾಜಿಕವಾಗಿ ತಮಗಿಂತ ಕೆಳಸ್ತರಗಳಲ್ಲಿ ಇರುವ ಜಾತಿಗಳ ಮಹಿಳೆಯರನ್ನು ತಮ್ಮ ಸಮಾನರಂತೆ ಪರಿಗಣಿಸುವುದಿಲ್ಲ. ಅವರ ಮನೆಗೆ ಕೆಲಸಕ್ಕಾಗಿ ಬರುವ ಮಹಿಳೆಯರನ್ನು ನಡೆಸಿಕೊಳ್ಳುವ ರೀತಿ ಸ್ತ್ರೀ ಸಂಘಟನೆಯ ಬಗ್ಗೆ ತೀವ್ರ ಸ್ವರೂಪದ ಅನುಮಾನಗಳನ್ನು ಸೃಷ್ಟಿಸುತ್ತಿದೆ. ಅವರಲ್ಲಿ ಸ್ವಜಾತಿ ಪ್ರೇಮವನ್ನು ಪ್ರೋತ್ಸಾಹಿಸುತ್ತದೆ. ಅಲ್ಲದೆ ಲಿಂಗ ತಾರತಮ್ಯವನ್ನು ಮತ್ತಷ್ಟು ಬಲಗೊಳಿಸುತ್ತದೆ. ಜಾತಿಯಿಂದ ಕೆಳಜಾತಿಗಳ ಮಹಿಳೆಯರು ದ್ವಂದ್ವ, ಅಸಮಾನತೆಗಳನ್ನು ಎದುರಿಸುತ್ತಾರೆ. ಜಾತಿ ಲಿಂಗ ಆಧಾರಿತ ಅಸಮಾನತೆಯನ್ನು ಪುಷ್ಠೀಕರಿಸುತ್ತದೆ. ಜಾತಿವ್ಯವಸ್ಥೆಯು ಮಹಿಳಾ ಚಳವಳಿಯ ಒಳಗೆ ಆಗಾಗ್ಗೆ ಬಿರುಕುಗಳನ್ನು ಉಂಟು ಮಾಡುವುದುಂಟು. ಮೇಲ್ಜಾತಿಗಳ ಮಹಿಳೆಯರು, ದಲಿತ, ಹಿಂದುಳಿದ ಗಿರಿಜನ ಮಹಿಳೆಯರ ಸಮಸ್ಯೆಗಳು ಹಾಗೂ ನೋವುಗಳನ್ನು ಸ್ವತಃ ಅನುಭವಿಸಿಲ್ಲವಾದ್ದರಿಂದ ಅವರಿಗೆ ಈ ನೋವುಗಳಿಗೆ ಸ್ಪಂದಿಸಲು ಸಾಧ್ಯವಾಗುವುದಿಲ್ಲ. ಜಾತಿಯ ಹೆಸರಿನಲ್ಲಿ ಮಹಿಳಾ ಚಳವಳಿಯಲ್ಲಿ ಬಿರುಕುಗಳನ್ನು ಸೃಷ್ಟಿಸಲು ಕೂಡ ಪುರುಷ ಪ್ರಧಾನ ಶಕ್ತಿಗಳು ಯತ್ನಿಸುತ್ತಿವೆ. ಉದಾಹರಣೆಗೆ ಮಹಿಳಾ ಮೀಸಲಾತಿ ಮಸೂದೆಯನ್ನು ಗಮನಿಸಬಹುದಾಗಿದೆ. ಜಾತಿಯ ಹೆಸರಿನಲ್ಲಿ ಮಹಿಳೆಯರನ್ನು ಒಡೆದು ಮಸೂದೆಗೆ ತಡೆಯನ್ನು ಮಾಡಲಾಗಿದೆ. ಇದರಿಂದ ಜಾತಿಯ ಪ್ರಾಬಲ್ಯ ಎಷ್ಟಿದೆ ಎಂಬುದರ ಅರಿವು ನೀಡುತ್ತದೆ. ಜಾತಿಯು ಒಂದು ಸಂಕೋಲೆ, ಸ್ತ್ರೀ ಶೋಷಣೆಯ ವಿರುದ್ಧದ ಹೋರಾಟ ಯಶಸ್ವಿಯಾಗಬೇಕಾದರೆ, ಮಹಿಳೆಯರು ಮೊದಲು ಜಾತಿ ವ್ಯವಸ್ಥೆಗಳು ಸೃಷ್ಟಿಸಿರುವ ಅಸಮಾನತೆಯನ್ನು ಎದುರಿಸುವ ಹೋರಾಟ ಮಾಡಬೇಕಾಗಿದೆ.

### ೪. ಕೋಮುಗಲಭೆ

'ಧರ್ಮ' ಎನ್ನುವುದು ಶಾಂತಿ ಮತ್ತು ಅಹಿಂಸಾ ಮಾರ್ಗಗಳನ್ನು ಬೋಧಿಸುವ ಒಂದು ಸಾಧನೆ ಎಂಬ ಒಂದು ನಂಬಿಕೆ. ಆದರೆ ವಾಸ್ತವದಲ್ಲಿ ಅದು ಬೇರೆಯೇ ಆಗಿದೆ. ವಿಶ್ವದೆಲ್ಲೆಡೆ ಮಾನವ ಸಮಾಜ ತಲೆ ತಗ್ಗಿಸುವಂಥ ಹಿಂಸಾಚಾರ, ದೌರ್ಜನ್ಯಗಳು ಧರ್ಮದ ಹೆಸರಿನಲ್ಲಿ ಜರುಗುತ್ತಿವೆ. ಕೋಮು ಗಲಭೆಗಳ ಸಮಯದಲ್ಲಿ ಸಾಮೂಹಿಕ ಅತ್ಯಾಚಾರ ನಡೆಯುವುದಂತೂ ಸಮಕಾಲೀನ ಜಮಕಿನ ಒಂದು ಭಾಗವೇನೊ ಎನ್ನುವಂತಾಗಿದೆ. ಯಾವ ಧರ್ಮ ಮಹಿಳೆಯರನ್ನು ಗೌರವಿಸಿ ದೇವತೆ ಎಂದಿರುವುದೋ ಅದೇ ಧರ್ಮ ಕೋಮುಗಲಭೆಗಳ ಸಮಯದಲ್ಲಿ ಮಹಿಳೆಯರ ವಿರುದ್ಧದ ದೌರ್ಜನ್ಯವನ್ನು ಬೆಂಬಲಿಸಿ, ಧರ್ಮದ ಸಾಮಾಜಿಕ ಕಳಕಳಿಯ ಬಗ್ಗೆಯೇ ತೀವ್ರ ಸ್ವರೂಪದ ಅನುಮಾನಗಳನ್ನು ಉಂಟುಮಾಡಿದೆ. ಭಾರತ ವಿಭಜನೆಯಾದ ಕಾಲದಿಂದ ಹಿಡಿದು ಇಂದಿನವರೆಗೂ ಕೋಮುಗಲಭೆಗಳು ನಡೆದಾಗಲೆಲ್ಲ ಮಹಿಳೆಯರನ್ನು ದೈಹಿಕ, ಮಾನಸಿಕ ಶೋಷಣೆಗಳಿಗೆ ಗುರಿಪಡಿಸುವಂಥ ಒಂದು ಪರಂಪರೆಯೇ ನಮ್ಮಲ್ಲಿ ಸೃಷ್ಟಿಯಾಗಿದೆ. ಜಗತ್ತಿನ ಎಲ್ಲ ಧರ್ಮಗಳಲ್ಲೂ ಮಹಿಳೆಯನ್ನು ಕುರಿತಂತೆ ದ್ವಂದ್ವ ನಿಲುವುಗಳನ್ನು ಹೊಂದಿರುವವು. ಇವುಗಳಲ್ಲಿ ಕೆಲವು

ಮಹಿಳಾ ಸಮಾನತೆ, ಮಹಿಳಾ ಸ್ವಾತಂತ್ರ್ಯ ಮೊದಲಾದ ಉದಾತ್ತಭಾವನೆಗಳನ್ನು ಎತ್ತಿ ಹಿಡಿದರೆ, ಮತ್ತೆ ಹಲವು ಮಹಿಳೆಯರ ವಿಚಾರದಲ್ಲಿ ತೀರಾ ಪ್ರತಿಗಾಮಿ ಎನ್ನಬಹುದಾದ ಮೌಲ್ಯಗಳನ್ನು ಪ್ರತಿಪಾದಿಸುತ್ತವೆ. ಧರ್ಮದ ಹೆಸರಿನಲ್ಲಿ ಮಹಿಳೆಯರ ಮೇಲೆ ದೌರ್ಜನ್ಯಗಳನ್ನೇ ಎಸಗುತ್ತಿದ್ದಾರೆ. ಮಹಿಳೆಯನ್ನು ಕುಟುಂಬದ ನಾಲ್ಕು ಗೋಡೆಗೆ ಬಂದಿಸಬೇಕು, ಆಕೆಗೆ ಜ್ಞಾನದ ಹಕ್ಕನ್ನು ನಿರಾಕರಿಸಬೇಕು, ಸದಾ ಪುರುಷನ ಅಧೀನದಲ್ಲಿ ಇರಬೇಕು, ಹೆಂಡತಿಯನ್ನು ದಂಡಿಸುವುದು ಗಂಡನ ಹಕ್ಕು ಮೊದಲಾದ ಮೌಲ್ಯಗಳನ್ನೇ ಧರ್ಮದ ಸಾಂಸ್ಥಿಕ ಚೌಕಟ್ಟಿನಲ್ಲಿ ಕಾರ್ಯ ನಿರ್ವಹಿಸುವ ಅನೇಕ ವ್ಯಕ್ತಿಗಳು ಬಳಸಿಕೊಳ್ಳುತ್ತಾರೆ. ಸತಿ, ಆಸ್ತಿ ಹಕ್ಕಿನ ನಿರಾಕರಣೆ, ಬಲತ್ಕಾರದ ದಾಸ್ಯ, ಪರದಾ ಪದ್ಧತಿ, ದೇವದಾಸಿ ಪದ್ಧತಿ ಮೊದಲಾದವು ಧರ್ಮದ ಸ್ತ್ರೀ ವಿರೋಧಿ ಧೋರಣೆಗಳಾಗಿರುತ್ತವೆ. ಕೋಮು ದ್ವೇಷ ಸಮಕಾಲೀನ ಸಮಾಜದಲ್ಲಿ ಮಹಿಳೆ ಎದುರಿಸಬೇಕಾದ ಮತ್ತೊಂದು ಸವಾಲಾಗಿದೆ. ಧರ್ಮದ ಹೆಸರಿನಲ್ಲಿ ಮನೆಯ ಒಳಗೆ ಮಹಿಳೆಯನ್ನು ಹಿಂಸಿಸುವುದು ಮೂಲಭೂತವಾದದ ಒಂದು ಮುಖವಾದರೆ, ಸಾರ್ವಜನಿಕ ಬದುಕಿನಲ್ಲಿ ಆಕೆಯ ಮೇಲೆ ಅತ್ಯಾಚಾರ ಮಾಡುವುದು ಅವರ ಇನ್ನೊಂದು ಮುಖ. ಇಂದು ಪ್ರಗತಿಪರ ಧ್ವನಿಗಳು ದಮನವಾಗುತ್ತಿವೆ. ಅಲ್ಲದೆ ಪ್ರತಿಗಾಮಿ ಶಕ್ತಿಗಳು ಬೆಳೆಯುತ್ತಿವೆ. ಇಂಥ ಪರಿಸ್ಥಿತಿಯಲ್ಲಿ ಅತ್ಯಂತ ಘೋರವಾದ ಪರಿಣಾಮಗಳನ್ನು ಎದುರಿಸುವವರು ಸಹ ಮಹಿಳೆಯರೇ ಆಗಿದ್ದಾರೆ. ಮಹಿಳಾ ಹೋರಾಟಗಳಿಗೆ ಕೋಮುವಾದ ಒಂದು ಬೃಹತ್ ಸವಾಲನ್ನೇ ಎಸೆದಿದೆ. ಅಲ್ಲದೆ ನ್ಯಾಯಬದ್ಧವಾದ ಹೋರಾಟಕ್ಕೂ ಅಡ್ಡಿಯನ್ನುಂಟು ಮಾಡುತ್ತಿದೆ. ಧರ್ಮ ದಾರಿ ತಪ್ಪಿದಾಗ ನಡೆಯುವ ಕೋಮುಗಲಭೆಗಳ ಅತ್ಯಂತ ಪ್ರಕ್ಷುಬ್ಧ ರೂಪವೆಂದರೆ ಮಹಿಳೆಯರ ಮೇಲಿನ ದೌರ್ಜನ್ಯವೇ ಸರಿ.

### ೫. ಅತ್ಯಾಚಾರ

ಪತ್ರಿಕೆಗಳಲ್ಲಿ ನಿತ್ಯವೂ ಅತ್ಯಾಚಾರದ ಸುದ್ದಿಗಳನ್ನು ಓದುತ್ತೇವೆ. ಅತ್ಯಾಚಾರದ ಸುದ್ದಿಗಳಿಲ್ಲದ ಪತ್ರಿಕೆಗಳು ಇಲ್ಲವೆನ್ನಬಹುದಾಗಿದೆ. ಹೆಣ್ಣಿನ ದೇಹವನ್ನು ಘಾಸಿಗೊಳಿಸುವುದೇ ಅಲ್ಲದೆ ಆಕೆಯ ಮನಸ್ಸು ಮತ್ತು ಆಕೆಯ ಕುಟುಂಬದ ಗೌರವ-ಪ್ರತಿಷ್ಠೆಗಳನ್ನು ತೀವ್ರವಾಗಿ ಕಾಡುವ ಸಮಸ್ಯೆಯೆಂದರೆ ಅತ್ಯಾಚಾರ. ಅತ್ಯಾಚಾರಕ್ಕೆ ಕಾರಣಗಳು ಭಿನ್ನವಾಗಿರುತ್ತವೆ. ಶತಮಾನಗಳಿಂದಲೂ ಮಹಿಳೆಯ ದೇಹವನ್ನು ಲೈಂಗಿಕ ಶೋಷಣೆಗೆ ಒಳಪಡಿಸುವ ಪ್ರವೃತ್ತಿ ಎಲ್ಲ ಸಮಾಜಗಳಲ್ಲೂ ಬಹು ಹಿಂದಿನಿಂದಲೂ ಕಂಡುಬಂದಿರುತ್ತದೆ. ಹೆಣ್ಣು ದೈಹಿಕವಾಗಿ ದುರ್ಬಲಳು ಎಂಬ ನೆಪ ಮುಂದಿಟ್ಟುಕೊಂಡು ಆಕೆಯ ದೇಹವನ್ನು ಹಿಂಸೆ, ಕ್ರೌರ್ಯಗಳಿಗೆ ಒಳಪಡಿಸಿ, ಅವಳ ಮೇಲೆ ಪ್ರಭುತ್ವವನ್ನು ಸಾಧಿಸಲು ಪುರುಷಪ್ರಧಾನ ಸಮಾಜ ಬಯಸಿ, ಅಂಥ ಕಾರ್ಯಗಳಲ್ಲಿ ತೊಡಗಿದೆ. ಜೊತೆಗೆ ಪುರುಷನಿಗೆ ಹೆಣ್ಣಿನ ದೇಹ, ಮನಸ್ಸುಗಳೆರಡರ ಮೇಲೂ ಅಧಿಕಾರವಿದೆ ಎಂದು ನಂಬಿಕೆ ಪ್ರಾಚೀನ ಕಾಲದಿಂದಲೂ ಪ್ರಸ್ತುತ ಸಂದರ್ಭದವರೆಗೂ ಇರುತ್ತದೆ. ಹೆಣ್ಣನ್ನು ಅವಮಾನಿಸಲು, ದಮನ ಮಾಡಲು ಬಹುತೇಕವಾಗಿ ಪುರುಷರಿಗೆ ಕಾಣುವುದು ಮಹಿಳೆಯ ದೇಹ. ಪಾತಿವ್ರತ್ಯ, ಪಾವಿತ್ರ್ಯತೆ ಎಂಬುವುಗಳು ಹೆಣ್ಣಿಗೆ ಮಾತ್ರ ಇರುವುದರಿಂದ ಮಹಿಳೆಯರು ಸಹ ತಮ್ಮ ದೇಹವನ್ನು ಲೈಂಗಿಕ ಶೋಷಣೆಗೆ ಒಳಗಾಗದಂತೆ ಎಚ್ಚರಿಕೆಯಿಂದ ಇರಬೇಕಾಗುತ್ತದೆ. ಆದರೆ ಪುರುಷ ಪ್ರಧಾನ್ಯತೆ ಇದನ್ನೇ ಒಂದು ಅಸ್ತ್ರವನ್ನಾಗಿ ಬಳಸಿಕೊಂಡು ಹೆಣ್ಣನ್ನು ದಮನ ಮಾಡುತ್ತಿದೆ. ಬಹುತೇಕವಾಗಿ ಅತ್ಯಾಚಾರ ಮಾಡುವ ಪುರುಷರು ಮೇಲ್ಜಾತಿಯವರಾಗಲಿ, ಉನ್ನತ ಅಧಿಕಾರ, ಅಂತಸ್ತಿನಲ್ಲಿ ಇರುವವರು, ವಿಚಾರವಂತರು, ಬುದ್ಧಿವಂತರು ಹಾಗೂ ವಿದ್ಯಾವಂತರು

ಎನ್ನಬಹುದು. ಇಂಥವರಿಂದಲೇ ಸ್ತ್ರೀಪರ ಚಿಂತನೆಗಳು ನಡೆಯುತ್ತಿದ್ದಾರೆ. ಇನ್ನೊಂದೆಡೆ ಇವರಿಂದಲೇ ಸ್ತ್ರೀ ಶೋಷಣೆ ಆಗುತ್ತಿರುವುದು ಪ್ರಧಾನ ಸವಾಲಾಗಿದೆ.

ಮಹಿಳೆಯ ಮೇಲಿನ ದ್ವೇಷ ಇಲ್ಲವೆ ಕುಟುಂಬದ ಮೇಲಿರುವ ದ್ವೇಷದಿಂದಲೂ ಅತ್ಯಾಚಾರಗಳು ಜರುಗುತ್ತಲಿವೆ. ಇಂದಿಗೂ ಗ್ರಾಮ, ನಗರಗಳಲ್ಲಿ ಪ್ರಬಲ ಜಾತಿಯ, ಪ್ರಬಲ ಕೋಮಿನ ಪುರುಷರ ಕೈಯಲ್ಲಿ ಸಿಲುಕಿಹಾಕಿಕೊಂಡು ಲೈಂಗಿಕ ಶೋಷಣೆಯನ್ನು ಅನುಭವಿಸುತ್ತಿರುವವರು ಮಹಿಳೆಯರೆ. ಅಲ್ಲದೆ ಪುರುಷನ ಕಾಮುಕ ಪ್ರವೃತ್ತಿಗೆ ನಾಲ್ಕು ವರ್ಷದ ಬಾಲಕಿಯಿಂದ ಹಿಡಿದು ಅರವತ್ತು ವರ್ಷದ ಮುದುಕಿಯರು ಸಹ ಬಲಿಯಾಗುತ್ತಿದ್ದಾರೆ. ಅತಿ ಆಪ್ತರು, ಕುಟುಂಬದ ಸದಸ್ಯರಿಂದಲೂ ಅತ್ಯಾಚಾರಗಳು ವ್ಯಾಪಾಕವಾಗಿವೆ. ಒಮ್ಮೊಮ್ಮೆ ಕುಡಿತದ ಅಮಲಿನಲ್ಲಿರುವ ಪುರುಷರಿಂದಲೂ ಇಂಥ ದೌರ್ಜನ್ಯಗಳು ಸಂಭವಿಸುತ್ತವೆ. ಅತ್ಯಾಚಾರಕ್ಕೆ ನಿರ್ದಿಷ್ಟ ಪ್ರದೇಶಗಳೇನೂ ಸೀಮಿತವಾಗಿಲ್ಲ. ಕುಟುಂಬದಿಂದ ಹಿಡಿದು ಉದ್ಯೋಗದ ಸ್ಥಳಗಳಲ್ಲಿ, ಶಿಕ್ಷಣ ಸಂಸ್ಥೆಗಳಲ್ಲಿ, ಬೀದಿ, ನೆರೆಹೊರೆ ಮೊದಲಾದ ಕಡೆಗಳಲ್ಲಿ ದೌರ್ಜನ್ಯಕ್ಕೆ ಒಳಗಾಗುತ್ತಾರೆ. ಅತ್ಯಾಚಾರಿಗಳು ಕೂಡ ಸಮಾಜದ ಎಲ್ಲಾ ಸ್ತರಗಳಲ್ಲೂ ಕಂಡುಬರುತ್ತಿದ್ದಾರೆ. ಮಹಿಳೆಯರು ನಿತ್ಯದ ಬದುಕಿಗೆ ಹೊಲಗದ್ದೆಗಳಲ್ಲಿ, ತೋಟಗಳಲ್ಲಿ ದುಡಿಯುವ, ಕಚೇರಿ ಕಾರ್ಯಾಲಯಗಳಲ್ಲಿ ದುಡಿಯುವ ಮಹಿಳೆಯರು, ವಿದ್ಯಾರ್ಥಿನಿಯರು ಮೊದಲಾದವರು ದೌರ್ಜನ್ಯಕ್ಕೆ ಗುರಿ ಆಗಿದ್ದಾರೆ. ಮಹಿಳೆಯರ ಕಾರ್ಯಕ್ಷೇತ್ರ ಯಾವುದೇ ಇರಲಿ ಆಕೆಯ ಮೇಲೆ ಸಹೋದ್ಯೋಗಿಗಳು, ಅಧಿಕಾರಿಗಳು, ಭೂಮಾಲೀಕರು, ದಲ್ಲಾಳಿಗಳು ದೌರ್ಜನ್ಯ ಮಾಡುವ ಪ್ರಕರಣಗಳು ಕಂಡುಬಂದಿರುತ್ತವೆ. ಇಂಥ ದೌರ್ಜನ್ಯಗಳನ್ನು ಕುರಿತಂತೆ ಲಘುವಾಗಿ ಮಾತನಾಡುತ್ತಾರೆ. ಮಥುರಾಳ ಮೇಲಿನ ಅತ್ಯಾಚಾರದ ಮೊಕದ್ದಮೆಯು ಸುಪ್ರೀಂಕೋರ್ಟಿನಲ್ಲಿ ಚರ್ಚೆಗೆ ಬಂತು. ಆಗ ನ್ಯಾಯಾಧೀಶರು "ಹೆಂಗಸರು ಬೀದಿಗಿಳಿದು ಪ್ರದರ್ಶನ ಮಾಡಿದರೆಂದ ಮಾತ್ರಕ್ಕೆ ನಾವು ಅವರ ಪರವಾಗಿ ನಿರ್ಣಯ ನೀಡಲು ಸಾಧ್ಯವಿಲ್ಲ. ನಾವು ಇದಕ್ಕೆಲ್ಲಾ ಹೆದರುವುದಿಲ್ಲ" ಎಂದಿದ್ದರು. ಹೆಂಗಸರ ಬೇಡಿಕೆ ಎಂದರೆ ಲಘುವಾದುದೆಂದು ಪುರುಷ ಪ್ರಧಾನ್ಯತೆ ಭಾವಿಸುತ್ತಿರುವುದು ಇಂದಿನ ಅತ್ಯಂತ ಮುಖ್ಯ ಸವಾಲಾಗಿದೆ. ಅತ್ಯಾಚಾರ ವ್ಯಾಪಕಗೊಳ್ಳಲು ಕಾರಣ ಅದನ್ನು ತಡೆಯಲು ಗಂಭೀರ ಪ್ರಯತ್ನಗಳು ಅಷ್ಟಾಗಿ ಆಗುತ್ತಿಲ್ಲದಿರುವುದು. ಇಂಥ ದೌರ್ಜನ್ಯಗಳು ಹೊಸದಾಗಿ, ಬಹು ದಿನಗಳಿಂದಲೂ ಇರುತ್ತವೆ ಎನ್ನುವವರಿಗೆ ಕೊರತೆಯೇನು ಇಲ್ಲ ಎನ್ನಬಹುದು.

ಪುರುಷರು ಮಹಿಳೆಯರನ್ನು ಭೋಗದ ವಸ್ತುವಿನಂತೆ ಕಂಡಿದ್ದಾರೆ. ಉದಾಹರಣೆಗೆ ೧೯೮೩ರ ಸಂದರ್ಭದಲ್ಲಿ ಜೆ.ಆರ್.ಡಿ. ಟಾಟಾರವರು ಏರ್ ಇಂಡಿಯಾದವರಿಗೆ ಪತ್ರ ಬರೆದು ವ್ಯವಸ್ಥೆ ಸರಿಯಿಲ್ಲ ಎಂದು ದೂರುತ್ತಾ "ಗಗನಸಖಿಯು ಆರು ತಿಂಗಳ ಗರ್ಭಿಣಿಯಂತೆ ಕಾಣುತ್ತಿದ್ದಳು" ಎಂದು ಆಪಾದಿಸಿದ್ದರು. ಅಲ್ಲದೆ ೧೯೮೧ರಲ್ಲಿ ಮಹಿಳಾ ಪ್ರಧಾನಿಯವರು ಸಹ ಗಗನಸಖಿಯರ ನಿವೃತ್ತಿ ವಯಸ್ಸು ಕುರಿತಂತೆ "ಗಗನಸಖಿಯರಿಗೆ ನಲವತ್ತು ವರ್ಷ ತುಂಬಾ ಜಾಸ್ತಿಯಾಗಿದೆ. ಅಪವಾದವಾಗಿ ಮಾತ್ರ ಎಲ್ಲೋ ಮಹಿಳೆಯರು ಕೆಲವರು ತಮ್ಮ ಸೌಂದರ್ಯ, ಮೈಮಾಟವನ್ನು ಉಳಿಸಿಕೊಂಡಿರುವರು" ಎಂದು ಹೇಳಿದ್ದರು. ಇದರಿಂದ ಹೆಣ್ಣಿನ ಬಾಹ್ಯ ಸೌಂದರ್ಯಕ್ಕೆ ಕೊಡುವ ಒತ್ತು ಅವಳು ಭೋಗವಸ್ತುವಿನಂತೆ ಪರಿಗಣಿತವಾದ್ದರಿಂದ ಎನ್ನಬಹುದು. ಸಮೀಕ್ಷೆಯೊಂದರಿಂದ ಶೇಕಡ ೮೦ರಷ್ಟು ವೇಶ್ಯೆಯರು ಮೊದಲು ಅತ್ಯಾಚಾರಕ್ಕೆ ಒಳಗಾದವರು

ಎಂದು ತಿಳಿದು ಬಂದಿದೆ. ಅವಿವಾಹಿತ ಮಹಿಳೆ ಇಂಥ ದೌರ್ಜನ್ಯಕ್ಕೆ ಒಳಗಾದರೆ ಆಕೆಗೆ ಮದುವೆ ಆಗುವುದು ಕನಸೇ ಆಗುತ್ತದೆ. ವಿವಾಹಿತಳು ಇಂಥ ದೌರ್ಜನ್ಯಕ್ಕೆ ಒಳಗಾಗಿದ್ದರೆ ಆಕೆಗೆ ಕುಟುಂಬ, ಸಮಾಜದಲ್ಲಿ ಅವಹೇಳನ, ಅಪಮಾನ ಮುಂತಾದ ಸಂದರ್ಭಗಳು ಹಿಂಸೆಯನ್ನು ನೀಡುತ್ತವೆ. ಕುಟುಂಬದ ಬೆಂಬಲವಿದ್ದರೂ ಧೈರ್ಯವಂತರು ಮಾತ್ರ ಅತ್ಯಾಚಾರದ ವಿರುದ್ಧ ನ್ಯಾಯಾಲಯದಲ್ಲಿ ಮೊರೆ ಹೋಗಬಹುದು. ಒಂದು ವೇಳೆ ಹೋದರು ನ್ಯಾಯ ದೊರಕಲು ವಿಳಂಬವಾಗುತ್ತದೆ. ಅಪರಾಧಿಗಳಿಗೆ ಶಿಕ್ಷೆಯನ್ನು ನೀಡುವ ಬದಲು, ಅವರನ್ನು ಶಿಕ್ಷೆಯಿಂದ ಪಾರುಮಾಡುವ ಪ್ರಯತ್ನಗಳು ಜಾಸ್ತಿ ಇರುತ್ತವೆ. ಇಂಥ ಅತ್ಯಾಚಾರಗಳಿಂದ ಭಯಗೊಂಡ ತಂದೆ ತಾಯಂದಿರು ಗ್ರಾಮೀಣ ಭಾಗದಲ್ಲಿ ಹೆಣ್ಣು ಮಕ್ಕಳನ್ನು ಶಾಲೆಗೆ ಕಳಿಸಲು ಒಪ್ಪದೇ ಬೇಗನೆ ವಿವಾಹ ಮಾಡಿ ತಮ್ಮ ಜವಾಬ್ದಾರಿಯನ್ನು ಕಡಿಮೆ ಮಾಡಿಕೊಳ್ಳುತ್ತಾರೆ. ಇಂಥ ದೌರ್ಜನ್ಯಗಳಿಗೆ ಹೆದರಿ ಹೆಣ್ಣುಮಕ್ಕಳನ್ನು ಸಾರ್ವಜನಿಕ ಬದುಕಿನಿಂದ ದೂರವಿರಿಸುತ್ತಾರೆ. ಅಲ್ಲದೆ ಪ್ರಗತಿ ವಿರೋಧಿ ಕಾರ್ಯಗಳಿಗೆ ಪ್ರೇರಣೆ ನೀಡುವುದೂ ಕೂಡ ಕಂಡುಬರುತ್ತದೆ. ಈ ಬಗೆಯ ಸ್ತ್ರೀ ವಿರೋಧಿ ಭಾವನೆಗಳು ಹಾಗೂ ಧೋರಣೆಗಳು ಇಂದು ಮುಖ್ಯ ಸವಾಲುಗಳಾಗಿ ಮುಖಾಮುಖಿಯಾಗುತ್ತಿವೆ.

ಈಚೆಗೆ ಸಮೂಹ ಮಾಧ್ಯಮಗಳ ಆಕರ್ಷಣೆಯನ್ನು ತೋರಿಸಿ ಹೆಣ್ಣನ್ನು ತಾರೆಯಾಗಿಸುವ ಭರವಸೆಯ ಮೂಲಕ ಒಂದು ಮಾದಕ, ಭೋಗದ ಗೊಂಬೆಯಂತೆ ಅಂಗ ಪ್ರದರ್ಶಿಸಲು ಬಳಸಿಕೊಳ್ಳಲಾಗುತ್ತದೆ. ಆ ಮೂಲಕ ಹೆಣ್ಣನ್ನು ಮಾರುಕಟ್ಟೆಯ ಮುಖ್ಯ ಸರಕಾಗಿ ಬಳಸಲಾಗುತ್ತಿದೆ. ಇದರಿಂದ ಮುಗ್ಧ ಹುಡುಗಿಯರು ಸಹ ನಂಬಿಕೆಯಿಂದ ಮೋಸಹೋಗುವ ಸಾಧ್ಯತೆಗಳು ವಿಪುಲವಾಗಿವೆ. ಇಂಥ ಸಂದರ್ಭದಲ್ಲಿಯೂ ಯುವತಿಯರು ಅತ್ಯಾಚಾರದಂಥ ದೌರ್ಜನ್ಯಕ್ಕೆ ಒಳಗಾಗುತ್ತಿದ್ದಾರೆ. ಒಟ್ಟಾರೆಯಾಗಿ ಅತ್ಯಾಚಾರಗಳು ವ್ಯಾಪಕವಾಗಿ ಮಹಿಳೆಯರ ಮುನ್ನಡೆಗೆ ತಡೆಯನ್ನು ಉಂಟುಮಾಡಿವೆ. ಉದಾಹರಣೆಗೆ "ಭಾರತದಲ್ಲಿ ೫೪ ನಿಮಿಷಗಳಿಗೊಮ್ಮೆ ಒಂದು ಹೆಣ್ಣಿನ ಮೇಲೆ ಅತ್ಯಾಚಾರ ನಡೆಯುತ್ತದೆ ಎಂದೂ ೨೦೦೦ರಲ್ಲಿ ೧೬,೪೯೬ ಅತ್ಯಾಚಾರ ಪ್ರಕರಣಗಳು ನ್ಯಾಯಾಲಯದ ಕಟ್ಟೆ ಹತ್ತಿದ್ದರೆ ಕೇವಲ ೫೧೭ ಪ್ರಕರಣಗಳಿಗೆ ಮಾತ್ರ ಶಿಕ್ಷೆ ಆಗಿದೆ" ಎಂದು ಅಂಕಿ-ಅಂಶಗಳು ಹೇಳುತ್ತಿವೆ.

## ೬. ವಿವಾಹ, ವರದಕ್ಷಿಣೆ

ಸಮಕಾಲೀನ ಸಂದರ್ಭದಲ್ಲಿ 'ವಿವಾಹ'ವು ತನ್ನ ಮೊದಲಿನ ಅರ್ಥ-ನಂಬಿಕೆಗಳನ್ನು ಕಳೆದುಕೊಂಡಿದೆ. 'ವಿವಾಹ' ಮಾರುಕಟ್ಟೆಯಾಗಿದ್ದು, ಇದರಲ್ಲಿ ಸ್ತ್ರೀ-ಪುರುಷರಿಬ್ಬರೂ ಕೊಂಡು-ಕೊಳ್ಳುವ, ಮಾರುವ ಸರಕುಗಳಂತೆ ಪಾತ್ರ ನಿರ್ವಹಿಸುತ್ತಿದ್ದಾರೆ. ಹೆಣ್ಣು ಮಗು ಹುಟ್ಟಿತೆಂದರೆ ಅದನ್ನು ಬಾಲ್ಯದಿಂದಲೇ ಬದುಕಿಗೆ ತಯಾರಿಸುವ ಬದಲು, ವಿವಾಹಕ್ಕೆಂದು ತಯಾರಿಸುವುದನ್ನು ನೋಡಬಹುದು. ವಿವಾಹ ಹೆಣ್ಣಿನ ಬದುಕಿನ ಅನಿವಾರ್ಯ ಅಂಗವೆಂದೂ ವಿವಾಹವೇ ವೃತ್ತಿ, ಗಂಡನ ಆಸರೆ ಇರದೆ ಸ್ತ್ರೀಯರು ಬದುಕುವುದು ಅಸಾಧ್ಯವಾದದ್ದು ಎಂಬ ರೂಢಿ ಇಂದಿಗೂ ಬದಲಾವಣೆಗೆ ಒಳಪಡದೆ ಮುಂದುವರೆಯುತ್ತಿದೆ. ಇಪ್ಪತ್ತೊಂದನೆಯ ಶತಮಾನದಲ್ಲಿ ಮುಂದುವರೆದಿದ್ದೇವೆ ಎಂದಾದರೆ ಸಾಕಷ್ಟು ವಿಶಾಲ ಮನೋಭಾವನೆ ಬೆಳೆಸಿಕೊಳ್ಳದೆ ಸಂಕುಚಿತ ಬುದ್ಧಿಯನ್ನು ರೂಢಿಸಿಕೊಳ್ಳಲಾಗುತ್ತಿದೆ. ಸಮಕಾಲೀನ ಸಂದರ್ಭದಲ್ಲಿ ವ್ಯಾಪಕವಾಗುತ್ತಿರುವ ಅತ್ಯಾಚಾರ, ದೌರ್ಜನ್ಯ,

ಹಿಂಸೆಗಳಿಂದ ಹೆಣ್ಣಿನ ತಂದೆತಾಯಂದಿರು ಬೇಗನೆ ಮದುವೆ ಮಾಡಿಸಲು ಚಿಂತಿಸುವರೇ ವಿನಹ, ಆಕೆಯ ಮುಂದಿನ ಭವಿಷ್ಯದ ಬಗ್ಗೆ ಆಲೋಚಿಸದೆ ಇರುವ ಹೆತ್ತವರಿಗೆ ಏನೂ ಕೊರತೆಯಿಲ್ಲ. ಕೆಲವು ಬಾರಿ ಹೆಣ್ಣುಮಕ್ಕಳ ಶಿಕ್ಷಣಕ್ಕೆಂದು ಹಣ ವ್ಯಯ ಮಾಡದೆ, ಆಕೆಯ ಮದುವೆಗೆಂದು ಹಣ ಸಂಗ್ರಹಿಸಿ ಇಟ್ಟು, ಹಣ ಎಷ್ಟಾದರೂ ಹೋಗಲಿ, ವರದಕ್ಷಿಣೆ ನೀಡಿ ವೈಭವವಾಗಿ ಮದುವೆ ಮಾಡಿದರೆ ಅವರ ಕರ್ತವ್ಯ ಮುಗಿಯಿತು ಎನ್ನುವ ಎಷ್ಟೊ ವಿದ್ಯಾವಂತರನ್ನು ಕಾಣುತ್ತೇವೆ. ಅಂತೆಯೆ ಇಂದು ನಾಯಿಕೊಡೆಗಳಂತೆ ವಧು-ವರರ ಅನ್ವೇಷಣಾ ಕೇಂದ್ರಗಳು ಅಸ್ತಿತ್ವಕ್ಕೆ ಬರುತ್ತಿವೆ. ಜೊತೆಗೆ ಹೆಣ್ಣನ್ನು ಆಕೆಯ ತಂದೆ-ತಾಯಂದಿರನ್ನು ಮತ್ತಷ್ಟು ಶೋಷಣೆ, ಹಣ ಸುಲಿಗೆ ಮಾಡುತ್ತಿವೆ. ಒಮ್ಮೊಮ್ಮೆ ಇಂಥ ಕೇಂದ್ರಗಳಿಂದ ಮೋಸಗಳು ಜರುಗುವ ಸಾಧ್ಯತೆಗಳು ಉಂಟು. ಹೀಗಾಗಿ ಇಂದು ನಂಬಿಕೆಯೇ ಒಂದು ಸವಾಲಾಗಿದೆ ಎಂದರೆ ತಪ್ಪಲ್ಲ. ಉದ್ಯೋಗ ನಿರತ ಮಹಿಳೆಯರು ಕೂಡಾ ವರದಕ್ಷಿಣೆ ನೀಡಿ ವಿವಾಹವಾಗುತ್ತಿರುವುದು ಹಿಂದಿನ ಸಂಪ್ರದಾಯಗಳನ್ನು ಚಾಚು ತಪ್ಪದೆ ಪಾಲಿಸಿಕೊಂಡು ಹೋಗುತ್ತಿರುವುದಕ್ಕೆ ಸಾಕ್ಷಿ ಆಗಿವೆ. ಇಂಥವುಗಳಿಂದಲೇ ವರದಕ್ಷಿಣೆ, ವರೋಪಚಾರಗಳು ವ್ಯಾಪಕವಾಗುತ್ತಿವೆ. ವರದಕ್ಷಿಣೆ ನೀಡದೆ ವಿವಾಹವಾಗುವ ಹುಡುಗಿಯರ ಬದುಕುಗಳು ಅನೇಕ ಸಂಕಷ್ಟಗಳಿಗೆ ಈಡಾಗಿವೆ. ವರದಕ್ಷಿಣೆಯೆಂಬುದು ಆರಂಭದಲ್ಲಿ ಕೆಲವೊಂದು ವರ್ಗ, ಜಾತಿಗಳಲ್ಲಿ ಮಾತ್ರ ಅಸ್ತಿತ್ವದಲ್ಲಿ ಇತ್ತು. ಆದರೆ ಇಂದು ಎಲ್ಲಾ ವರ್ಗ, ಜಾತಿಗಳಲ್ಲಿ ವರೋಪಚಾರ, ವರದಕ್ಷಿಣೆಯು ಒಂದು ಸಾಮಾಜಿಕ ಅನಿವಾರ್ಯವಾಗಿದೆ. ಜೊತೆಗೆ ಇಂದು ಹುಡುಗಿಯರ ರೂಪ, ರೂಪಾಯಿ, ಅಂತಸ್ತು, ಮನೆತನಗಳ ಜೊತೆಗೆ ಉದ್ಯೋಗವು ಸಹ ಪ್ರಧಾನಪಾತ್ರ ವಹಿಸಿದೆ. ವರದಕ್ಷಿಣೆಗೆ ಬೇರೆ ಕಾರಣಗಳು ಇರಬಹುದು. ಆದರೆ ಬಹಳಷ್ಟು ಸಾರಿ ಕನ್ಯೆಯರು ಆಕೆಯ ತಂದೆತಾಯಂದಿರು ಕೂಡ ಪರೋಕ್ಷವಾಗಿ ವರದಕ್ಷಿಣೆಗೆ ಕಾರಣರಾಗಿದ್ದಾರೆ. ಇಂಥ ಉದ್ಯೋಗದಲ್ಲಿ ಇರುವವನನ್ನು ವಿವಾಹವಾಗಬೇಕು, ಅಂಥವನನ್ನೇ ಅಳಿಯನನ್ನಾಗಿ ಮಾಡಿಕೊಳ್ಳಬೇಕು ಎಂಬ ಆಯ್ಕೆಯ ಮನೋಭಾವ ಕೂಡ ಸಮಸ್ಯೆಯನ್ನು ಮತ್ತಷ್ಟು ಬೆಳೆಸಲು ಕಾರಣವಾಗುತ್ತಿದೆ.

ಇಂದಿಗೂ ಸಹ ವಧುಪರೀಕ್ಷೆಗಳು ನಡೆಯುತ್ತಿದ್ದು, ಅವುಗಳು ಮಹಿಳೆಯರಿಗೆ ಮತ್ತಷ್ಟು ಮುಜುಗರವನ್ನು ಉಂಟುಮಾಡಿವೆ. ಇಂಥ ಪರೀಕ್ಷೆಗಳಲ್ಲಿ ಹೆಣ್ಣು ಮೂಕಪ್ರಾಣಿಯಂತೆ ಇರಬೇಕಾಗಿರುವುದು ಒಂದು ಸವಾಲಾಗಿದೆ. ಸಮಕಾಲೀನ ಸಂದರ್ಭದಲ್ಲಿ ಸ್ತ್ರೀಪರ ಚರ್ಚೆಗಳು, ವಿಚಾರಗಳು ನಡೆಯುತ್ತಿದ್ದಾಗ ಹೆಣ್ಣಿಗೆ ಮಾನಸಿಕ ಹಿಂಸೆ ನೀಡುವ ವಧುಪರೀಕ್ಷೆಗಳು ಎಷ್ಟು ಅಗತ್ಯ ಎಂದು ಚಿಂತಿಸಬೇಕಾಗಿದೆ. ಜೊತೆಗೆ ಇಂದಿಗೂ ಬಾಳ ಸಂಗಾತಿಯ ಆಯ್ಕೆ ಸ್ವಾತಂತ್ರ್ಯ ಬಹುಪಾಲು ಮಹಿಳೆಯರಿಗೆ ಸಿಕ್ಕಿಲ್ಲ. ಅಲ್ಲದೆ ಒಂದು ವೇಳೆ ಅಂಥ ಅವಕಾಶ ಸಿಕ್ಕರೂ ಆಕೆಗೆ ಪ್ರೇರಣೆ, ಪ್ರೋತ್ಸಾಹ ನೀಡಿ ಬೆಳೆಸುವವ ಸಿಗುತ್ತಾನೆಯೇ ಎಂಬುದು ಸಹ ಪ್ರಶ್ನೆಯಾಗಿಯೆ ಉಳಿದಿದೆ. ಹೀಗಾಗಿ ಮಹಿಳೆ ಹಿಂದೆಂದಿಗಿಂತಲೂ ಇಂದು ಹೆಚ್ಚು ಸಮಸ್ಯೆಗಳ ಸುಳಿಯಲ್ಲಿ ಸಿಲುಕಿದ್ದಾಳೆ. ಪುರುಷನೊಬ್ಬ ತಾನು ವಿವಾಹವಾಗುವ ಮಹಿಳೆ ತನಗಿಂತ ವಯಸ್ಸು, ವಿದ್ಯೆ, ಉದ್ಯೋಗದಲ್ಲಿ ಕಡಿಮೆ ಇರಬೇಕು, ಇಲ್ಲವೇ ಸರಿ ಸಮವಾಗಿರಬೇಕು ಎಂದು ಬಯಸುತ್ತಾನೆಯೇ ಹೊರತು, ಹೆಣ್ಣಿನ ಅಭಿವೃದ್ಧಿಯನ್ನು ಎಂದೂ ಸಹಿಸಲಾರ. ಶ್ರೀಮಂತರಾದರೆ ವರದಕ್ಷಿಣೆ ನೀಡುತ್ತಾರೆ. ಆದರೆ ಅಂಥ ಸಾಮರ್ಥ್ಯ ಎಲ್ಲರಿಗೂ ಇರದೆ, ವರದಕ್ಷಿಣೆಗೆ ಸಾಲ ಮಾಡಿ ಮದುವೆ ಮಾಡುತ್ತಿದ್ದಾರೆ. ಒಮ್ಮೊಮ್ಮೆ ವರದಕ್ಷಿಣೆ ನೀಡಲು

ಆಗದೆ ಹೆತ್ತವರು ತಮ್ಮ ಹೆಣ್ಣುಮಕ್ಕಳನ್ನು ಮದುವೆ ಮಾಡಲು ಬಯಸಿ ಆಕೆಯ ಭವಿಷ್ಯವನ್ನು ಯೋಚಿಸದೆ, ಆಕೆಗೆ ಯಾವುದೇ ರೀತಿಯಲ್ಲಿ ಸ್ವಾತಂತ್ರ್ಯ ನೀಡದೆ ತಾವು ಯಾರ ಜೊತೆ ವಿವಾಹ ನಿಶ್ಚಯಿಸುವೆವೋ ಅವನನ್ನೇ ವಿವಾಹವಾಗಬೇಕು ಎಂಬ ಒತ್ತಡವನ್ನು ತರುತ್ತಾರೆ. ಇಂಥವುಗಳಿಗೆಲ್ಲಾ ಹೆಣ್ಣು ಬಲಿಪಶು ಆಗುತ್ತಿದ್ದಾಳೆ. ವಿವಾಹ ಅನಿವಾರ್ಯ ಎಂಬ ಕಾರಣದಿಂದಾಗಿ ವರದಕ್ಷಿಣೆ ಮೊದಲಾದ ಸಮಸ್ಯೆಗಳು ಉಂಟಾಗುತ್ತಿವೆ. ಈ ವರದಕ್ಷಿಣೆ ನೀಡಿದ್ದರೂ ಎಷ್ಟು ಜನ ಮಹಿಳೆಯರು ನೆಮ್ಮದಿಯಿಂದ ಇದ್ದಾರೆ ಎಂಬುದೂ ಇಂದಿನ ಮುಖ್ಯ ಸವಾಲುಗಳಲ್ಲಿ ಒಂದಾಗಿದೆ. ವರದಕ್ಷಿಣೆ ನೀಡಿ ಮದುವೆ ಆಗುವವರು ವ್ಯಾಪಕವಾಗಿ ಅದನ್ನು ವಿರೋಧಿಸುವವರು ವಿರಳವಾಗಿದ್ದಾರೆ. ವರದಕ್ಷಿಣೆ ನಿಷೇಧ ಕಾನೂನು ಇದ್ದರೂ ಎಷ್ಟು ಜನರಿಗೆ ವರದಕ್ಷಿಣೆ ಅಪರಾಧದಲ್ಲಿ ಶಿಕ್ಷೆಗೆ ಗುರಿಪಡಿಸಲಾಗಿದೆ. ಇಂಥ ಕಾನೂನು ಮಹಿಳೆಯರಿಗೆ ಎಷ್ಟು ಉಪಯುಕ್ತ ಎಂದು ಗಮನಿಸಬೇಕಾದ ತುರ್ತು ಉಂಟಾಗಿದೆ. ಒಂದರ್ಥದಲ್ಲಿ ಭಾರತೀಯ ವರದಕ್ಷಿಣೆ ನಿಷೇಧ ಕಾಯ್ದೆಯು ವಿಫಲವಾಗಿದೆಯೆಂದು ಹೇಳಬೇಕಾಗಿದೆ. ಪರೋಕ್ಷ ನೆಲೆಯಲ್ಲಿ ಕಾನೂನು ವರದಕ್ಷಿಣೆಯನ್ನು ಮತ್ತೊಂದು ಬಗೆಯಲ್ಲಿ ಪ್ರೋತ್ಸಾಹಿಸುವ ನಿಟ್ಟಿನಲ್ಲಿದೆಯೆನ್ನಬಹುದು.

**೭. ಅಂತರ್ಜಾತಿಯ ವಿವಾಹಗಳು**

ಜಾತಿವ್ಯವಸ್ಥೆಯ ಬಿಗಿಭದ್ರತೆ ಇಂದಿನ ಯುವಕ-ಯುವತಿಯರಿಗೆ ಉದ್ಯೋಗದ ಆರ್ಥಿಕ ಭದ್ರತೆ, ರಕ್ಷಣೆ ಇರದೇ ಇದ್ದುದರಿಂದ ಬಹಳಷ್ಟು ವಿವಾಹಗಳು ಸ್ವಜಾತಿ ವಿವಾಹಗಳೇ ಆಗುತ್ತಿವೆ. ಅಲ್ಲದೇ ಅಂತರ್ಜಾತಿಯ ವಿವಾಹಗಳು ಬೆರಳೆಣಿಕೆಯಷ್ಟು ಮಾತ್ರ ಸುಖವಾಗಿವೆ. ಇದರಿಂದಾಗಿ ಅಂತರ್ಜಾತಿಯ ವಿವಾಹಗಳು ಅಷ್ಟಾಗಿ ನಡೆಯುತ್ತಿಲ್ಲ. ಇವುಗಳಿಗೆ ಸಹ ಹೆಣ್ಣು ಬಲಿಯಾಗುತ್ತಾಳೆಯೆ ಹೊರತು ಪುರುಷನಲ್ಲ.

**೮. ಬಾಲ್ಯವಿವಾಹಗಳು**

ಇಂದಿಗೂ ಹಿರಿಯರ ಆಸೆ, ಮೂಢನಂಬಿಕೆ ಮೊದಲಾದವುಗಳಿಂದ ಬಾಲ್ಯವಿವಾಹಗಳು ನಡೆಯುತ್ತಿವೆ. ಅದರಲ್ಲೂ ಗ್ರಾಮೀಣಭಾಗದಲ್ಲಿ ಕೆಳಜಾತಿಗಳಲ್ಲಿ ಸಾಮೂಹಿಕ ವಿವಾಹಗಳ ಸಂದರ್ಭದಲ್ಲಿ ಬಾಲ್ಯವಿವಾಹಗಳು ನಡೆಯುತ್ತಲಿವೆ. ಬಾಗಲಕೋಟೆ ಜಿಲ್ಲೆಯಲ್ಲಿ ಕೃಷ್ಣಾ ಮೇಲ್ದಂಡೆ ಯೋಜನೆಯಡಿ ಮುಳುಗಡೆಯಾಗುವ ಗ್ರಾಮಗಳ ಸರ್ವೇಕ್ಷಣೆ ಮಾಡುತ್ತಿದ್ದಾಗ ಸಾಕಷ್ಟು ಬಾಲ್ಯವಿವಾಹಗಳು ನಡೆಯುತ್ತಿರುವುದು ಕಂಡುಬಂದಿದೆ. ಅಷ್ಟೇ ಅಲ್ಲದೆ ಮಂತ್ರಿಗಳು, ಶಾಸಕರು ಸಹ ಇಂಥ ವಿವಾಹಗಳಲ್ಲಿ ಭಾಗಿಯಾಗಿ ಏನನ್ನು ಪ್ರಶ್ನಿಸದೆ ಮೌನ ತಳೆದಿರುವುದರಿಂದ ಮತ್ತೆ ಹೆಣ್ಣೆ ಈ ಸವಾಲಿಗೆ ಒಳಗಾಗುತ್ತಿದ್ದಾಳೆ.

**೯. ಮರುವಿವಾಹ**

ಹೆಂಡತಿ ಸತ್ತರೆ ಗಂಡು ಸಾಮಾನ್ಯವಾಗಿ ಮರುಮದುವೆ ಆಗುತ್ತಾನೆ. ಅವನಿಗೆ ಮಕ್ಕಳನ್ನು ಸಾಕುವುದಾಗಲಿ, ಬೆಳೆಸುವುದಾಗಲಿ ಕೌಟುಂಬಿಕ ಸಮಸ್ಯೆಗಳಾಗಿ ಕಂಡು ಮರುವಿವಾಹವಾಗಲು ಏರ್ಪಾಟು ನಡೆದು ವಿವಾಹವು ಆಗುತ್ತದೆ. ಆದರೆ ಸಮಕಾಲೀನ ಸಂದರ್ಭದಲ್ಲಿ ಯುವ ಗಂಡನನ್ನು ಕಳೆದುಕೊಂಡ ಸತಿಯರು ಮರುವಿವಾಹದ ಬಗ್ಗೆ ಚಿಂತಿಸದೆ ಇದ್ದಾರೆ. ಇವರು ಮರಿಮಕ್ಕಳೊಂದಿಗೆ ಕುಟುಂಬದವರ, ಹೊರಗಿನವರ

ನಿಂದನೆಗೆ ಅವಹೇಳನಕ್ಕೆ ಗುರಿಯಾಗುವವರು. ಇವರ ಸಮಸ್ಯೆಗಳು ಮಾತ್ರ ವೈಯಕ್ತಿಕ ಸಮಸ್ಯೆಗಳಾಗಿವೆ. ವಿಧವೆಯರು ಇಂದಿಗೂ ಶೋಷಣೆಗೆ ಒಳಗಾಗುತ್ತಿರುವುದು ಸವಾಲಾಗಿದೆ. ಜೊತೆಗೆ ವಿಧವೆಯರ ರೂಪ, ಉಡುಗೆ-ತೊಡುಗೆಗಳಲ್ಲಿ ನಿಯಂತ್ರಣಗಳು ಇರುತ್ತವೆ. ವಿದುರ ಗಂಡಿಗೆ ನೀಡಿದ ಸ್ವಾತಂತ್ರ್ಯ ವಿಧವೆ ಹೆಣ್ಣಿಗೆ ದೊರೆಯುತ್ತಿಲ್ಲ ಎನ್ನುವುದು ಹೆಣ್ಣಿನ ಬದುಕಿನ ದುರಂತವೇ ಆಗಿದೆ.

### ೧೦. ತಾಯಿತನ

ವಿವಾಹದ ಕಾರಣದಿಂದಾಗಿ ತಾಯಿತನ ಸಹ ಆಚರಣೆಯಲ್ಲಿದೆ. ಬಹುತೇಕ ಮಹಿಳೆಯರಿಗೆ ಇಂದಿಗೂ ಅವರ ಇಚ್ಛೆಯಂತೆ ತಾಯಿತನವನ್ನು ಆಯ್ಕೆ ಮಾಡಿಕೊಳ್ಳುವ ಅವಕಾಶ ದೊರೆತಿಲ್ಲ. ಇಂದಿಗೂ ಕುಟುಂಬಗಳಲ್ಲಿ ತಾಯಿತನ ಹೊಂದಿದವರನ್ನು ನೋಡುವ ದೃಷ್ಟಿ ಭಿನ್ನವಾದದ್ದು ಮತ್ತು ಗೌರವದ್ದೂ ಆಗಿದೆ. ಜೊತೆಗೆ ಗಂಡು ಮಗುವಿನ ತಾಯಂದಿರಿಗೆ ವಿಶೇಷ ಗೌರವವು ಉಂಟು. ಆದರೆ ವಿವಾಹಿತಗಳಿಗೆ ಹಲವು ಕಾರಣಗಳಿಂದ ಮಕ್ಕಳಾಗದೆ ಇದ್ದಾಗ, ಆಕೆಯ ಹೊರತುಪಡಿಸಿ ಪತಿ ಬೇರೆ ಕನ್ಯೆಯನ್ನು ವಿವಾಹವಾಗುತ್ತಾನೆ. ಅದು ಅವನು ವಿವಾಹವಾಗುವ ಹುಡುಗಿ ಕನ್ಯೆ ಆಗಿರಬೇಕೆ ಹೊರತು ಎರಡನೆಯ ದರ್ಜೆಯ ಹೆಣ್ಣಲ್ಲ ಎಂದು ಹೇಳುತ್ತಾನೆ. ಹೀಗಿರುವಾಗ ಗಂಡಿನ ದುರ್ಬಲತೆಯಿಂದಾಗಿಯೂ ಮಕ್ಕಳಾಗದೇ ಇದ್ದಾಗ ಹೆಣ್ಣಿಗೆ ಏಕೆ ಮರುವಿವಾಹದ ಅವಕಾಶ ನೀಡಿಲ್ಲ ಎಂದು ಕೇಳುವುದರ ಮೂಲಕ ಮಹಿಳಾಪರ ಹೋರಾಟ ಮಾಡುವುದು ಇಂದಿನ ಅಗತ್ಯಗಳಲ್ಲಿ ಒಂದಾಗಿದೆ.

### ೧೧. ಮಹಿಳೆಯರ ಆರೋಗ್ಯದ ಪ್ರಶ್ನೆ

ಗೃಹಿಣಿಯರಿಗೆ ಮಕ್ಕಳು ಆಗದ್ದು ಒಂದು ಸಮಸ್ಯೆಯನ್ನು ಸೃಷ್ಟಿಸಿದರೆ, ಮಕ್ಕಳು ಆಗುತ್ತಿರುವುದು ಸಹ ಸಮಸ್ಯೆಯನ್ನು ಉಂಟುಮಾಡಿದೆ. ಕುಟುಂಬ ಯೋಜನೆಯ ಬಹುಪಾಲು ಭಾರ ಮಹಿಳೆಯರ ಮೇಲಿದೆ. ಇದು ಅವರ ಆರೋಗ್ಯದ ಮೇಲೆ ತನ್ನದೇ ಆದ ಪರಿಣಾಮವನ್ನು ಬೀರುತ್ತದೆ. ಮಿತಸಂತಾನಕ್ಕೆ ಅತಿಯಾದ ಒತ್ತು ನೀಡುತ್ತಿರುವುದರಿಂದ ಮಹಿಳೆಯರು ಹಲವು ಬಗೆಯ ಗರ್ಭ ನಿರೋಧಕಗಳನ್ನು ಬಳಸಿಕೊಳ್ಳುತ್ತಿರುವುದು ಅನಿವಾರ್ಯ ಕೂಡ. ಅಲ್ಲದೆ ಗರ್ಭಪಾತಗಳಿಗೂ ದೇಹವನ್ನು ನೀಡುತ್ತಿದ್ದಾರೆ. ಇವುಗಳಲ್ಲದೆ ಸಿಸೇರಿಯನ್ ಹೆರಿಗೆಗಳು ಸಹ ಹೆಣ್ಣಿನ ದೇಹದ ಮೇಲೆ ಸಾಕಷ್ಟು ಪರಿಣಾಮವನ್ನುಂಟುಮಾಡಿ ಮಹಿಳೆಯರ ಅಶಕ್ತತೆ, ಅತಿಯಾದ ರಕ್ತಸ್ರಾವ, ರಕ್ತಹೀನತೆ, ಸ್ಥೂಲಕಾಯ, ಸ್ತನಗಳಲ್ಲಿನ ಅಹಿತತೆ, ಗರ್ಭಕೋಶದ ಸಮಸ್ಯೆ, ಬೆನ್ನು ಸೊಂಟ ನೋವು, ಸುಸ್ತು, ಸಂಕಟ ಮೊದಲಾವುಗಳಿಗೆ ಬಲಿಯಾಗುತ್ತಿದ್ದು, ಅವುಗಳಿಂದ ಯಾತನೆಗಳಿಗೆ ಒಳಗಾಗುತ್ತಿದ್ದಾರೆ. ಜೊತೆಗೆ ಕುಟುಂಬ ಯೋಜನೆಯ ಶಸ್ತ್ರಕ್ರಿಯೆಗಳಿಗೆ ಪುರುಷರು ಒಳಪಡುವುದಿಲ್ಲ. ಇಲ್ಲಿಯೂ ಮತ್ತೆ ಹೆಣ್ಣೇ ಶಸ್ತ್ರ ಚಿಕಿತ್ಸೆಗೆ ಗುರಿಯಾಗುವವಳು. ಗಂಡು ಹೊರಗೆ ದುಡಿಯುವವನು ಎಂದೂ, ಹೆಣ್ಣಿಗೆ ಸಂಕಟ-ಸಂಕಷ್ಟಗಳು ತಿಳಿದಿದ್ದರಿಂದ ಆಕೆಯೇ ಶಸ್ತ್ರ ಚಿಕಿತ್ಸೆಗೆ ಒಳಗಾಗಲಿ ಎಂಬ ಭಾವನೆ ಇದೆ.

ಆಘಾತದ ವಿಷಯವೆಂದರೆ ವಿವಾಹಿತ ಮಹಿಳೆಯರು ಏಡ್ಸ್ ಕಾಯಿಲೆಗೆ ಒಳಗಾಗುತ್ತಿರುವುದು. ಕಾರಣ ಹತ್ತು ಹಲವು ಬಗೆಯಲ್ಲಿ ಏಡ್ಸ್ ಪಡೆದ ಪುರುಷರು, ಪತ್ನಿಯರಿಗೆ ತಮ್ಮ ರೋಗದ ಬಗ್ಗೆ ತಿಳಿಸದೆ, ಲೈಂಗಿಕ

ಸಂಬಂಧದಲ್ಲಿ ಸುರಕ್ಷಣಾ ವಿಧಾನವನ್ನು ಉಪಯೋಗಿಸದೆ ಇದ್ದು, ತನ್ನ ರೋಗವನ್ನು ಹೆಂಡತಿಗೂ ವರ್ಗಾಯಿಸುತ್ತಿರುವುದು. ಇದರಿಂದಾಗಿ ಗೃಹಿಣಿಯರು ರೋಗವನ್ನು ಮಕ್ಕಳಿಗೂ ಅಂಟಿಸಿ ಅವನ್ನು ವಂಶವಾಹಿನಿಯಾಗಿಸುವ ಮೂಲಕ ಜೀವಕ್ಕೆ ಕುತ್ತನ್ನು ತಂದುಕೊಳ್ಳುತ್ತಿದ್ದಾರೆ.

ಒಟ್ಟಾರೆ ಹೇಳಬೇಕೆಂದರೆ ನಮ್ಮ ಸಮಾಜದಲ್ಲಿ ಮಹಿಳೆಗೆ ಅದರಲ್ಲೂ ವಿದ್ಯಾವಂತ ಮಹಿಳೆಯರಿಗೂ ಲೈಂಗಿಕತೆ, ಕುಟುಂಬ ಯೋಜನೆ ಕುರಿತಂತೆ ಮಾತನಾಡುವುದು ಸಾಧ್ಯವಾಗುತ್ತಿಲ್ಲ. ಇದಕ್ಕೆ ಕಾರಣ ಹೆಣ್ಣು ಲೈಂಗಿಕತೆ ಕುರಿತು ಮುಕ್ತವಾಗಿ ಮಾತನಾಡಬಾರದು ಎಂಬ ಹುನ್ನಾರಗಳನ್ನು ಹುಟ್ಟುಹಾಕಲಾಗಿದೆ. ಇದರಿಂದಾಗಿ ಹೆಣ್ಣು ತನ್ನ ಆರೋಗ್ಯದ ಬಗ್ಗೆ, ದೇಹದ ಬಗ್ಗೆ ನಿಯಂತ್ರಣ ಪಡೆಯದೆ ಇದ್ದು ರೋಗಗಳಿಗೆ ಆಹ್ವಾನ ನೀಡುತ್ತಿದ್ದಾಳೆ. ಇವುಗಳು ಸಹ ಪ್ರಧಾನ ಸವಾಲುಗಳೆ.

ಮಹಿಳೆಯರು ಕುಟುಂಬದಲ್ಲಿ ಎಲ್ಲರ ಯೋಗಕ್ಷೇಮ ವಿಚಾರಿಸುತ್ತ ತಮ್ಮ ಆರೋಗ್ಯ-ಆಹಾರ-ನಿದ್ರೆಗಳ ಬಗ್ಗೆ ಅಲಕ್ಷಿಸಿ, ಮನೆಯ ಕೆಲಸಕಾರ್ಯಗಳ ಒತ್ತಡಗಳಿಂದ ಆಸ್ಪತ್ರೆಗಳಿಗೆ ಹೋಗದೆ, ಆರೋಗ್ಯವನ್ನು ಅಲಕ್ಷಿಸುತ್ತಾರೆ. ಇದು ಸಹ ಮಹಿಳೆಯರ ಆರೋಗ್ಯದ ಮೇಲೆ ಪ್ರತಿಕೂಲ ಪರಿಣಾಮ ಬೀರುತ್ತದೆ.

### ೧೨. ಕ್ಲೋನಿಂಗ್‌ನಂಥ ಅಲೈಂಗಿಕ ವಿಧಾನ

ವ್ಯಕ್ತಿಗಳ ಜೀವಕೋಶಗಳನ್ನು ಕಸಿಮಾಡಿ ಮಗುವಿಗೆ ಜನ್ಮನೀಡುವ ಅಲೈಂಗಿಕ ವಿಧಾನವೇ "ಕ್ಲೋನಿಂಗ್". ಫ್ರಾನ್ಸ್‌ನ ಪ್ಲೋರಿಡಾದಲ್ಲಿ ೨೬.೧೨.೨೦೦೨ರಂದು ತದ್ರೂಪಿ ಶಿಶು 'ಈವ್‌ಳ' ಜನನ ಆಯಿತು. ಇದರ ನಂತರ ಇಂಥವೇ ಪ್ರಯೋಗಗಳ ಸರಮಾಲೆ ಮುಂದೆಯೂ ಜರುಗಬಹುದು. ವಿಜ್ಞಾನದ ಕ್ಷೇತ್ರಕ್ಕೆ ಹೆಮ್ಮೆಯ ಕೀರ್ತಿ ತರುವ ವಿಷಯವಾದರೂ ಸಮಾಜದ ನೆಮ್ಮದಿಯ ಬದುಕಿಗೆ ಭಂಗ ಉಂಟಾಗುತ್ತದೆ. ಕ್ಲೋನಿಂಗ್ ವಿಧಾನದ ಬಳಕೆಯಿಂದ ಹುಟ್ಟುವ ಮಗುವಿಗೆ ತಾಯಿಯ ಒಂದು ಅಂಶವು ಇರುವುದಿಲ್ಲ. ಈ ವಿಧಾನದಿಂದ ತಮಗೆ ಬೇಕಾದಂಥ ಲಿಂಗದ ಮಗುವನ್ನು ಪಡೆಯಬಹುದು. ಅಲ್ಲದೆ ತಮಗೆ ಬೇಕಾದವರ ವ್ಯಕ್ತಿಯ ತದ್ರೂಪದ ಮಗುವನ್ನು ಪಡೆಯಬಹುದು. ಇದರಿಂದ ಮತ್ತೆ ಗಂಡು ಮಗುವಿನ ಹುಟ್ಟನ್ನೆ ಬಯಸುವುದರಿಂದ ಹೆಣ್ಣು ಮಗು ಮತ್ತೆ ನಿರ್ಲಕ್ಷ್ಯಕ್ಕೆ ಒಳಗಾಗುತ್ತದೆ. ತದ್ರೂಪ ಶಿಶುಗಳನ್ನು ವಾಣಿಜ್ಯ ದೃಷ್ಟಿಯಲ್ಲಿ ನೋಡುವ ಚಿಂತನೆಯ ಹಿಂದೆ ಬಡ ತಾಯಂದಿರ ಗರ್ಭಗಳು ಮಾರುಕಟ್ಟೆಗೆ ಬರುವ ಸಾಧ್ಯತೆಗಳಿವೆ. ಜಾಗತೀಕರಣದ ನೆಪದಲ್ಲಿ ಅಧಿಪತ್ಯ ಸ್ಥಾಪನಾ ಪ್ರವೃತ್ತಿಯ ದೇಶಗಳಿಗೆ ಸಾಂಸ್ಕೃತಿಕವಾಗಿ ದಬ್ಬಾಳಿಕೆ ನಡೆಸಲು ಸುಲಭವಾಗುತ್ತದೆ. ಬಿಳಿಯ ಪಾಶ್ಚಾತ್ಯ ಪುರುಷನೇ ಸುಂದರ ಎಂಬ ಕಲ್ಪನೆ ಇರುವುದರಿಂದ ಇತರರ ಸೌಂದರ್ಯ ಕಲ್ಪನೆಗೆ ಧಕ್ಕೆ ಬರಬಹುದು. ರೋಬೋಟ್‌ನಂಥ ವ್ಯಕ್ತಿಗಳನ್ನು ಸೃಷ್ಟಿಸಿ ಅವರನ್ನು ಗುಲಾಮರಂತೆ ಉಪಯೋಗಿಸಬಹುದು. ಕ್ಲೋನಿಂಗ್ ವಿಧಾನವು ಹೆಣ್ಣಿನ ಪ್ರಾಮುಖ್ಯತೆ, ಗೌರವವನ್ನು ಅಲ್ಪವಾಗಿಸುತ್ತದೆ. ಜೊತೆಗೆ ಹೆಣ್ಣಿನ ಬಗ್ಗೆ ಅನಾಗರಿಕವಾಗಿ ಆಲೋಚಿಸಲು ಅವಕಾಶ ನೀಡಿದೆ. ಇಂಥ ವಿಜ್ಞಾನದ ಕೊಡುಗೆಗಳು ಮಹಿಳೆಯರಿಗೆ ಇನ್ನಷ್ಟು ಸವಾಲಾಗಿವೆ.

## ೧೩. ಅಸಮಾನ ಕಾನೂನುಗಳು

ವಿವಾಹಿತ ಮಹಿಳೆಯರೆಲ್ಲರಿಗೆ ಏಕರೀತಿಯ ಕಾನೂನು ಇಲ್ಲವಾಗಿದೆ. ವಿವಾಹಿತ ಹೆಣ್ಣಿಗೆ ಆಕೆ ಯಾವ ಧರ್ಮಕ್ಕೆ ಸೇರಿದವಳೆಂಬುದರ ಮೇಲೆ ಕಾನೂನುಗಳಿವೆ. ವೈವಾಹಿಕ ಸಮಸ್ಯೆ, ವಿವಾಹ ವಿಚ್ಛೇದನ, ಜೀವನಾಂಶ, ಮಕ್ಕಳ ಪೋಷಣೆಯ ಹಕ್ಕು ಮೊದಲಾದವುಗಳ ಸಂಬಂಧವಾಗಿ, ನ್ಯಾಯಕ್ಕಾಗಿ ಮಹಿಳೆ ವೈಯಕ್ತಿಕ ಕಾನೂನುಗಳನ್ನು ಅವಲಂಬಿಸಬೇಕಾಗಿದೆ. ಈ ವೈಯಕ್ತಿಕ ಕಾನೂನುಗಳು ಪುರುಷ ಪ್ರಧಾನ್ಯತೆಯ ಹಿನ್ನೆಲೆಯಲ್ಲಿ ರೂಪಿತವಾಗಿದ್ದು, ಸ್ತ್ರೀ ವಿರೋಧಿ ಧೋರಣೆಗಳಿಂದಲೆ ಕೂಡಿರುತ್ತವೆ. ವೇಶ್ಯಾ ವೃತ್ತಿಗೆ ನಿಷೇಧ ಕಾನೂನುಗಳಿದ್ದರೂ ಅದು ನಿರ್ಮೂಲನೆಗೆ ಒಳಪಟ್ಟಿಲ್ಲ. ವೇಶ್ಯೆಯರನ್ನು ಆಪಾದಿತರನ್ನಾಗಿ ನ್ಯಾಯಾಲಯದ ಮುಂದೆ ನಿಲ್ಲಿಸಲಾಗುತ್ತದೆ. ಆದರೆ ಅವರ ಬಳಿ ಬರುವ ಪುರುಷರನ್ನು ನ್ಯಾಯಾಲಯದ ಮುಂದೆ ಅಪರಾಧಿಗಳನ್ನಾಗಿ ನಿಲ್ಲಿಸಿರುವ ಉದಾಹರಣೆಗಳು ಅಪರೂಪವಾಗಿವೆ.

ಕಾನೂನಿನ ಮುಖೇನ ಹಕ್ಕುಗಳನ್ನು ಪಡೆಯುವುದರಿಂದ ಸ್ತ್ರೀಯರಿಗೆ ಸಮಾನತೆಯುತ್ತ ಬದುಕಲು ಸಾಧ್ಯವಾಗುತ್ತದೆಯೇ ಎನ್ನುವುದು ಚರ್ಚಾಸ್ಪದ ಸಂಗತಿಯಾಗಿದೆ. ಅಲ್ಲದೆ ಸ್ವಾತಂತ್ರ್ಯ-ಸಮಾನತೆ ದೊರೆತರೆ ತಮ್ಮ ಪರಿಸ್ಥಿತಿ ಬದಲಾಗುತ್ತದೆ ಎಂಬ ನಂಬಿಕೆ ಇಲ್ಲವಾಗಿದೆ. ಪುರುಷರೊಂದಿಗಿನ ಮಹಿಳೆಯರ ಸಮಾನತೆಯ ಹಕ್ಕು ಸಾಂಪ್ರದಾಯಿಕ ಮೌಲ್ಯಗಳಿಗೆ ವಿರುದ್ಧವಾಗಿರುತ್ತದೆ. ಕೆಲವೊಮ್ಮೆ ಸಮಾನತೆಯ ಹಕ್ಕು ಕೊಟ್ಟಿರುವಂತೆ ಕಂಡುಬಂದರೂ ನಿಜವಾದ ಅರ್ಥದಲ್ಲಿ ಹೆಚ್ಚಿನ ಮಹಿಳೆಯರಿಗೆ ಉಪಯೋಗವೇನು ಆಗುತ್ತಿಲ್ಲ. ಉದಾಹರಣೆಗೆ ಸಮಾನ ಕೆಲಸಕ್ಕೆ ಸಮಾನ ವೇತನ ದೊರೆಯಬೇಕು ಎಂಬ ಕಾನೂನು ಜಾರಿಗೆ ಬಂದಿದೆ. ಆದರೆ ಸಾಮಾನ್ಯವಾಗಿ ಗಂಡಸರು ಮಾಡದ ಕೆಲಸಗಳನ್ನು ಮಹಿಳೆಯರು ಮಾಡುತ್ತಿರುತ್ತಾರೆ. ಆಗ ಮಾತ್ರ ಕಾನೂನು ಮಹಿಳೆಯರ ವೇತನದ ಬಗ್ಗೆ ಮೌನವಾಗಿ ಉಳಿಯುತ್ತದೆ. ಮಹಿಳೆಯರ ಹಕ್ಕಿನ ಸಮಾನತೆಯ ಪ್ರಶ್ನೆ ಅಂತರಾಷ್ಟ್ರಿಯ ಮಟ್ಟದಲ್ಲಿ ಹಲವಾರು ಸವಾಲುಗಳನ್ನು, ಸಂದೇಹಗಳನ್ನು ಹುಟ್ಟಿಸಿದೆ. ಒಂದು ಕಡೆ ಮಹಿಳೆಯರ ವಿರುದ್ಧದ ಎಲ್ಲಾ ತಾರತಮ್ಯತೆಯ ನಿರ್ಮೂಲನೆಗಾಗಿ ಸಮಾನತೆ ನೀಡುವಂತೆ ಘೋಷಣೆಯಾದರೆ, ಇನ್ನೊಂದೆಡೆ ಕುಟುಂಬದ ಸಾಂಪ್ರದಾಯಿಕ ಮೌಲ್ಯಗಳನ್ನು ರಕ್ಷಿಸುವಂತೆ ಹೇಳುವ ಒಪ್ಪಂದಗಳು ಜಾರಿಯಲ್ಲಿವೆ. ಅಭಿವೃದ್ಧಿಶೀಲ ರಾಷ್ಟ್ರಗಳ ಮಹಿಳೆಯರಿಗೆ ಸಂಬಂಧಿಸಿದಂತೆ, ಮಾನವ ಹಕ್ಕುಗಳ ಬಗ್ಗೆಯ ಗಂಭೀರ ಚರ್ಚೆಯನ್ನು ಮಾಡಲಾಗುತ್ತಿದೆ. ಎಲ್ಲಾ ವ್ಯಕ್ತಿಗಳಿಗೂ ಸಮಾನವಾಗಿ ಮಾನವ ಹಕ್ಕುಗಳನ್ನು ಘೋಷಿಸಲಾಗಿದ್ದರೂ ಸ್ತ್ರೀಯರು ಇರುವ ಅಧೀನ ಪರಿಸ್ಥಿತಿಯಲ್ಲಿ ಅವುಗಳನ್ನು ಅನುಭವಿಸುವುದು ಅವರಿಗೆ ಅಸಾಧ್ಯವಾಗುತ್ತದೆ. ಆದರೂ ಹಕ್ಕುಗಳು ತಕ್ಷಣಕ್ಕೆ ಮಹಿಳೆಯರ ಪ್ರಗತಿಗೆ, ಸಮಾನತೆಗೆ ಕಾರಣವಾಗಿರದಿದ್ದರೂ ಅವುಗಳಿಗೆ ಎಷ್ಟೇ ಪರಿಮಿತಿಗಳಿದ್ದರೂ, ಮಹಿಳೆಯರಿಗಾಗಿ ಇರುವ ಹಕ್ಕುಗಳು, ಅವರ ಸಮಸ್ಯೆಗಳನ್ನು ಗುರುತಿಸುತ್ತವೆ. ಅಲ್ಲದೆ ಮುಂದಿನ ಬೆಳವಣಿಗೆಗೆ ಕಾರಣವಾಗಿವೆ. ಈ ಹಕ್ಕುಗಳು ಮಹಿಳೆಯರ ಅನುಭವ ಹಾಗೂ ಅವಶ್ಯಕತೆಗೆ ಸಂವಾದಿಯಾಗಿರುವಂತೆ ಮಾಡುವುದೇ ಸಮಕಾಲೀನ ಸವಾಲು.

ಒಟ್ಟಿನಲ್ಲಿ ನಮ್ಮ ಕಾನೂನುಗಳು, ನ್ಯಾಯಾಂಗಗಳು ಕೂಡಾ ಲಿಂಗ ತಾರತಮ್ಯವನ್ನು ಪ್ರೋತ್ಸಾಹಿಸಿವೆ. ಅವುಗಳು ನೀಡುವ ತೀರ್ಪುಗಳಲ್ಲಿ, ಧೋರಣೆಗಳಲ್ಲಿ ಪುರುಷ ಪ್ರಧಾನ್ಯತೆ ಇರುತ್ತದೆ. ಇಂಥ ಎಷ್ಟೋ ಕಾನೂನುಗಳು ಇಂದು ಬದಲಾಗಬೇಕಾಗಿದೆ. ಅಲ್ಲದೆ ಅವುಗಳು ವಾಸ್ತವವಾಗಿ ಮಹಿಳೆಯರ ಬದುಕಿಗೆ ಸಂಬಂಧಿಸುವಂತೆ ಮಾಡಬೇಕಾಗಿದೆ.

## ೧೪. ಉದ್ಯೋಗ, ಆರ್ಥಿಕತೆ

ಮಹಿಳೆಯರು ಉದ್ಯೋಗಕ್ಕೆ ಹೋಗಲು ಕಾರಣಗಳು ಹಲವು ಇರಬಹುದು. ಆದರೆ ಬಹಳಷ್ಟು ಬಾರಿ ಆಕೆ ಯಾವ ಉದ್ಯೋಗ ಮಾಡಬೇಕು. ಯಾವ ತರಬೇತಿ ಪಡೆಯಬೇಕು. ಯಾವ ಸಂಸ್ಥೆಗಳಲ್ಲಿ ಕಾರ್ಯ ನಿರ್ವಹಿಸಬೇಕು ಎಂಬುದನ್ನು ಕುಟುಂಬವೇ ನಿರ್ಧರಿಸುತ್ತದೆ. ಇಂಥ ಸಂದರ್ಭದಲ್ಲಿ ಹೆಣ್ಣಿನ ವೈಯಕ್ತಿಕ ಆಯ್ಕೆಗೆ ಸ್ವಾತಂತ್ರ್ಯ ವಿರಳ. ಪುರುಷ ಪ್ರಧಾನ ಸಮಾಜ ಹೆಣ್ಣನ್ನು ಸಮಾಜೀಕರಣಗೊಂಡ ಪಾತ್ರ ಗುಣಗಳಿಂದಲೇ ನೋಡಲು ಬಯಸುತ್ತದೆ. ಮನೆ ಮತ್ತು ಹೊರ ದುಡಿಮೆಯನ್ನು ಮಾಡುವುದರಿಂದ ಬಹುತೇಕ ಮಹಿಳೆಯರು ಮಾನಸಿಕವಾಗಿ, ದೈಹಿಕವಾಗಿ ಅನೇಕ ಯಾತನೆಗಳನ್ನು ಅನುಭವಿಸುತ್ತಾರೆ. ಆದರೂ ಆಕೆ ತನ್ನ ಉದ್ಯೋಗದಲ್ಲಿ ಯಶಸ್ಸನ್ನು ಕಾಣಲು ಹೋರಾಟ ಮಾಡುತ್ತಾಳೆ. ಉದ್ಯೋಗಕ್ಕೆಂದು ಮನೆಯ ಕಡೆಗೆ ಗಮನವನ್ನು ಹರಿಸದೆ ಇದ್ದಾಗ ಅನೇಕರ ನಿಂದನೆ-ಆರೋಪಗಳಿಗೆ ಬಲಿಯಾಗುತ್ತಾಳೆ. ಸಂಘಟಿತ, ಅಸಂಘಟಿತ ವಲಯಗಳಲ್ಲಿ ದುಡಿಯುವ ಮಹಿಳೆಯರಿಗೆ ಸವಾಲುಗಳು ಭಿನ್ನವಾಗಿರುತ್ತವೆ. ಅಧ್ಯಯನವೊಂದರ ಪ್ರಕಾರ ಮಹಿಳಾ ದುಡಿಮೆಗಾರರಲ್ಲಿ ಶೇಕಡ ೬೪ರಷ್ಟು ಅಸಂಘಟಿತ ವಲಯದಲ್ಲಿ ಇರುವರು ಎಂದೂ, ಇದಕ್ಕೆ ಮಹಿಳೆಯರ 'ಫ್ಲೆಕ್ಸಿಬಿಲಿಟಿ' ಗುಣ, ಮಹಿಳೆಯರಿಗೆ ಸ್ವಾತಂತ್ರ್ಯ ಮತ್ತು ಸ್ವಾಯತ್ತತೆಯನ್ನು ನೀಡದ ಪುರುಷಶಾಹಿಯೆ ಕಾರಣ ಎನ್ನಬಹುದು.

ಬಹುತೇಕ ಮಹಿಳೆಯರು ಉದ್ಯೋಗದಲ್ಲಿ ಇದ್ದರೂ ಅವರಿಗೆ ಆರ್ಥಿಕ ಸ್ವಾತಂತ್ರ್ಯ ಇರುವುದಿಲ್ಲ. ಶೋಷಣೆಯಿಂದ ಮುಕ್ತರಾದರು ಎನ್ನುವಂತಿಲ್ಲ. ಅನೇಕರು ವೇತನ ತಾರತಮ್ಯವನ್ನೂ ಎದುರಿಸುತ್ತಾರೆ. ಮಹಿಳೆಯರು ದುಡಿಯುವ ಸ್ಥಳಗಳಲ್ಲಿ ಸರಿಯಾದ ವ್ಯವಸ್ಥೆಗಳು ಇರದೆ ಇದ್ದು ಆಕೆಯು ಉದ್ಯೋಗದಲ್ಲಿ ಸಂಪೂರ್ಣವಾಗಿ ತೊಡುಗುವಂತೆ ಆಗುತ್ತಿಲ್ಲ. ಆಕೆ ತನ್ನ ಸಹೋದ್ಯೋಗಿಗಳ ಜೊತೆ ಅನೇಕ ಸಮಸ್ಯೆಗಳನ್ನು ಎದುರಿಸುತ್ತಾಳೆ. ಅದರಲ್ಲೂ ಗ್ರಾಮೀಣ ಭಾಗದಲ್ಲಿ ಕೆಲಸ ಮಾಡುವ ದಾದಿಯರು, ಗ್ರಾಮ ಸೇವಕಿಯರು ಬಹು ಬಗೆಯ ಸಮಸ್ಯೆಗಳನ್ನು ಎದುರಿಸುತ್ತಾರೆ. ಇವುಗಳೆಲ್ಲದರಿಂದಾಗಿ ಮಹಿಳೆಯರು ಸಂಪೂರ್ಣವಾಗಿ ತಮ್ಮನ್ನು ಕೆಲಸ ಕಾರ್ಯಗಳಲ್ಲಿ ತೊಡಗಿಸಿಕೊಳ್ಳಲು ಹಿಂಜರಿಕೆಯುಂಟಾಗಿದೆ.

## ೧೫. ಅಪರಾಧದ ಕೂಪದಲ್ಲಿ ನಲುಗುತ್ತಿರುವ ಮಾನಿನಿಯರು

ಸಮಕಾಲೀನ ಕಾಲಘಟ್ಟದಲ್ಲಿ ಮಹಿಳೆಯರ ಅಪರಾಧಗಳು ದಿನೇ ದಿನೇ ವ್ಯಾಪಕವಾಗುತ್ತಿವೆ. ಇವುಗಳೇ ಗಂಭೀರ ಸವಾಲಾಗಿ ಪರಿಗಣಿತವಾಗಿವೆ. ಭಯೋತ್ಪಾದಕ ಪುರುಷಶಾಹಿಯು ತನ್ನ ಚಟುವಟಿಕೆಗಳಲ್ಲಿ ಮಹಿಳೆಯರನ್ನು ಬಳಸಿಕೊಳ್ಳುತ್ತಿದೆ. ಇಂಥವರ ಸಂಘಕ್ಕೆ ಬಲಿಯಾಗುವ ಮಹಿಳೆಯರು ಸಮಾಜದ ನಿಂದನೆ-ಆಪಾದನೆಗೆ ಒಳಗಾದವರು, ಹೆತ್ತವರಿಂದ ತಿರಸ್ಕರಿಸಲ್ಪಟ್ಟವರು, ಮಲತಾಯಿಂದಿರ ಕಾಟದಿಂದ ಮನೆಬಿಟ್ಟು ಬಂದವರು, ಅನೈತಿಕ ಪರಿಸರದಲ್ಲಿ ಬೆಳೆದವರು, ಅನಾಥರು, ಬಡವರು ಮೊದಲಾದ ಗುಂಪಿನ ಮಹಿಳೆಯರಿಗೆ ಸಮಾಜದಲ್ಲಿ ಯಾರಾದರೂ ಅನುಕಂಪ, ಪ್ರೀತಿ, ಸ್ನೇಹ ವ್ಯಕ್ತಪಡಿಸಿದರೆ ಸಾಕು ಅವರ ಜೊತೆ ಹೋಗುತ್ತಾರೆ. ಇಂಥವರನ್ನು ಭಯೋತ್ಪಾದಕ ಚಟುವಟಿಕೆ, ದರೋಡೆ, ಕೊಲೆ, ಸುಲಿಗೆಗಳಿಗೆ ಬಳಸಿಕೊಳ್ಳುತ್ತಿದ್ದಾರೆ. ಉದಾಹರಣೆಗೆ ಅತಿ ಭದ್ರತೆಯ ವ್ಯವಸ್ಥೆ ಇದ್ದಾಗಲೂ ರಾಜೀವಗಾಂಧಿಯವರನ್ನು ಹತ್ಯೆಗೈಯಲು ಹೆಣ್ಣನ್ನು

ಉಪಯೋಗಿಸಿದ್ದನ್ನು ಗಮನಿಸುವಂಥದ್ದು. ಹೀಗೆ ಹೆಣ್ಣು ಭಯೋತ್ಪಾದಕ ಚಟುವಟಿಕೆಗಳಲ್ಲಿ ತೊಡಗಿರುವುದು ಒಂದು ಹೊಸ ಸವಾಲಾಗಿದೆ.

**೧೬. ಮಹಿಳಾ ಕಲ್ಯಾಣಾಭಿವೃದ್ಧಿ ಕಾರ್ಯಗಳ ವಿಫಲತೆ**

ಸ್ತ್ರೀಯರ ಕಲ್ಯಾಣಾಭಿವೃದ್ಧಿಯ ದೃಷ್ಟಿಯಿಂದ ಕೇಂದ್ರ-ರಾಜ್ಯ ಸರಕಾರಗಳು ಹತ್ತಾರು ಯೋಜನೆಗಳನ್ನು, ಕಾರ್ಯಕ್ರಮಗಳನ್ನು ಕೈಗೊಂಡಿದ್ದರೂ ಅವು ನಿರೀಕ್ಷಿಸಿದಷ್ಟು ಫಲವನ್ನು ನೀಡದೆ ವಿಫಲವಾಗಿವೆ. ಇದಕ್ಕೆ ಅನೇಕ ಬಗೆಯ ಕಾರಣಗಳಿವೆ. ಅವುಗಳಲ್ಲಿ ಭಾರತದ ರಾಜಕೀಯ ವ್ಯವಸ್ಥೆಯು ಒಕ್ಕೂಟದ ರಚನೆ ಹೊಂದಿರುವುದರಿಂದ ಕೆಲವು ತೊಡುಕುಗಳಾಗಿವೆ. ಉದಾಹರಣೆಗೆ ಸಾಮಾಜಿಕ ಧೋರಣೆಗಳನ್ನು ಅಥವಾ ಕಾರ್ಯನೀತಿಯನ್ನು ಮತ್ತು ಕಾರ್ಯಕ್ರಮಗಳನ್ನು ಜಾರಿಗೆ ತರುವ ಹೊಣೆ ರಾಜ್ಯ ಸರಕಾರಗಳ ಮತ್ತು ಸ್ಥಳೀಯಾಡಳಿತ ಸಂಸ್ಥೆಗಳ ಮೇಲಿದ್ದರೆ ಈ ಕಾರ್ಯಕ್ರಮಗಳ ಯೋಜನೆ ಮಾಡುವ ಮತ್ತು ಅವುಗಳಿಗೆ ಆರ್ಥಿಕ ಸಹಾಯ ನೀಡುವ ಜವಾಬ್ದಾರಿ ಕೇಂದ್ರ ಸರಕಾರದ ಮೇಲಿದೆ. ಕೇಂದ್ರ, ರಾಜ್ಯ ಸರಕಾರ ಮತ್ತು ಸ್ಥಳೀಯಾಡಳಿತ ಸಂಸ್ಥೆಗಳ ನಡುವಿನ ಹೊಂದಾಣಿಕೆಯ ಕೊರತೆಯಿಂದಾಗಿ ಯೋಜನೆಗಳು ವಿಫಲವಾಗಿರುವುದುಂಟು. ಅಲ್ಲದೆ ಮಹಿಳಾ ಪರ ಯೋಜನೆಗಳಿಗೆ ಮಂತ್ರಿಗಳ ಹಾಗೂ ಅಧಿಕಾರಿಗಳ ಅನಾಸಕ್ತಿಯೂ ಕಾರಣವಾಗಿದೆ. ಪಂಚವಾರ್ಷಿಕ ಯೋಜನೆಗಳಲ್ಲಿ ಮಹಿಳೆಯರಿಗೆ ನಿಗಧಿಪಡಿಸಿದಷ್ಟು ಗುರಿ ತಲುಪುವುದೇ ಇಲ್ಲ. ಸ್ಥಳೀಯ ಆಡಳಿತ ಸಂಸ್ಥೆಗಳ ಅಸಡ್ಡೆಯು ಯೋಜನೆಗಳ ವಿಫಲತೆಗೆ ಕಾರಣವಾಗಿದೆ. ಒಟ್ಟಿನಲ್ಲಿ ಸರಕಾರದ ಯೋಜನೆಗಳು ನಿರೀಕ್ಷಿಸಿದಷ್ಟು ಪ್ರಮಾಣದಲ್ಲಿ ಗುರಿ ತಲುಪದೆ ವಿಫಲವಾಗಿರುವುದು ಪ್ರಮುಖ ಸವಾಲು.

**೧೭. ಸ್ತ್ರೀ ಶಿಕ್ಷಣದ ಸಮಸ್ಯೆಗಳು**

ಸ್ತ್ರೀಯರು ಸಾಕಷ್ಟು ಶಿಕ್ಷಣ ಪಡೆಯುತ್ತಿದ್ದಾರೆ ಎಂದರೂ, ಗ್ರಾಮೀಣ ಪ್ರದೇಶಗಳಲ್ಲಿ ನಿರೀಕ್ಷಿಸಿದಷ್ಟು ಮಹಿಳೆಯರು ಶಿಕ್ಷಣ ಪಡೆಯುತ್ತಿಲ್ಲ. ಗ್ರಾಮೀಣ ಭಾಗದಲ್ಲಿನ ಹುಡುಗಿಯರು ತಾಯಿಯ ಅನಾರೋಗ್ಯ, ಹೊಲ-ಗದ್ದೆಗಳಲ್ಲಿ ದುಡಿಯಲು, ಆರ್ಥಿಕ ಲಾಭ ತರುವ ಕುಶಲ ಕಲೆ, ಗುಡಿ ಕೈಗಾರಿಕೆಗಳಲ್ಲಿ ತೊಡಗಿರುತ್ತಾರೆ. ಅಲ್ಲದೆ ಶಾಲಾ ಸೌಲಭ್ಯ ಹತ್ತಿರದಲ್ಲಿ ಇರದೆ, ಬಡತನ ಮೊದಲಾದವುಗಳಿಂದ ಇಂದಿಗೂ ಗ್ರಾಮೀಣ ಭಾಗದ ಮಹಿಳೆಯರು ಶಿಕ್ಷಣದಿಂದ ವಂಚಿತರಾಗಿದ್ದಾರೆ. ಇತ್ತೀಚಿಗೆ ಮಹಿಳೆಯರಿಗೆ ಪ್ರತ್ಯೇಕ ವಿಶ್ವವಿದ್ಯಾಲಯವನ್ನೆ ಬಿಜಾಪುರದಲ್ಲಿ ಸ್ಥಾಪಿಸಲಾಗಿದೆ. ಇದರ ಸಾಧಕ-ಬಾಧಕಗಳನ್ನು ಮುಂದಿನ ದಿನಗಳಲ್ಲಿ ನಿರೀಕ್ಷಿಸಬೇಕಾಗಿದೆ. "ಸ್ತ್ರೀಯರು ಏಕೆ ಬರೆಯಬೇಕು? ಓದುತ್ತಾರೆ ಏಕೆ? ಹೇಗೆ ಗ್ರಹಿಸುವರು? ಓದಿನ ಆಚೆಗೆ ಏನಿದೆ? ಸ್ತ್ರೀ ಎಂದರೆ ಏನು? ಸ್ತ್ರೀಯರ ಸಮಸ್ಯೆಗೂ, ಸ್ತ್ರೀಯರ ಓದಿಗೂ ಯಾವ ರೀತಿಯ ಸಂಬಂಧಗಳಿವೆ? ಇವೆಲ್ಲಾ ಸ್ತ್ರೀವಾದದ ಸವಾಲುಗಳಾಗಿವೆ"[೧೩] ಎನ್ನಬಹುದು.

**೧೮. ಮಾಧ್ಯಮಗಳಲ್ಲಿ ಸ್ತ್ರೀ ಶೋಷಣೆ**

ಬಂಡವಾಳಶಾಹಿ ಮುಕ್ತ ಮಾರುಕಟ್ಟೆಯ ವ್ಯವಸ್ಥೆಯು ಹೆಣ್ಣನ್ನು ಬಂಡವಾಳದ ಸರಕನ್ನಾಗಿ

ಉಪಯೋಗಿಸುತ್ತಿದೆ. ನೀರಿನ ಬಳಕೆಯಿಂದ ದಿನನಿತ್ಯದ ಉಪಯೋಗಿ ವಸ್ತು, ಆಹಾರ, ಪಾನೀಯ ಮೊದಲಾದವುಗಳಿಗೆ ಹೆಣ್ಣನ್ನು ಜಾಹೀರಾತುಗಳಿಗೆ ಒಳಪಡಿಸಲಾಗಿದೆ. ಅರೆಬೆತ್ತಲೆ ಉಡುಪು ಮೊದಲಾದವುಗಳಿಂದ ಹೆಣ್ಣು ಕಾಣಿಸಿಕೊಳ್ಳುತ್ತಿದ್ದಾಳೆ. ಅತಿಯಾದ ಜಾಹೀರಾತುಗಳಿಂದ ಯಾವುದನ್ನು ಬಳಸಬೇಕು? ಹೇಗೆ? ಎಂಬ ಪ್ರಶ್ನೆಗಳು ಗೃಹಿಣಿಯರಿಗೆ ಕಾಡತೊಡಗಿವೆ. ಕೆಲವೊಮ್ಮೆ ಮಹಿಳೆಯರ ಮನಸ್ಸು ಸಹ ಜಾಹೀರಾತುಗಳಿಗೆ ಒಳಗಾಗಿ ಅದೇ ರೀತಿ ವರ್ತಿಸುವವರು ಆಗಿರುತ್ತಾರೆ. ಇವೆಲ್ಲಾ ಸಮಕಾಲೀನ ಸವಾಲುಗಳಾಗಿವೆ.

ಚಲನಚಿತ್ರಗಳಲ್ಲಿ ಹೆಣ್ಣನ್ನು ಅರೆಬೆತ್ತಲೆ, ಅಶ್ಲೀಲ ನುಡಿ, ಅಸಹ್ಯವಾಗಿ ಚಿತ್ರಿಸುತ್ತವೆ. ಚಲನಚಿತ್ರಗಳಲ್ಲಿನ ಅಪಹರಣ, ಅತ್ಯಾಚಾರ, ಲೈಂಗಿಕ ಹಿಂಸೆ, ಕ್ರೌರ್ಯ, ಕುಡಿತ ಮೊದಲಾದವುಗಳು ಸಮಾಜದ ಮೇಲೆ ಪರಿಣಾಮ ಬೀರಿ ಮಹಿಳೆಯರ ಮುನ್ನಡೆಗೆ ತಡೆಯಾಗಿವೆ. ಜೊತೆಗೆ ಸಮಕಾಲೀನ ಸಂದರ್ಭದಲ್ಲಿಯೂ ಹೆಣ್ಣನ್ನು ಸಂಪ್ರದಾಯವಾಗಿ ಕಾಣುವ, ಆಕೆಯ ಶೀಲದ ಪಾವಿತ್ರ್ಯತೆಯ ಬಗ್ಗೆಯೇ ನಿರ್ಮಾಣವಾಗುತ್ತಿವೆಯೆ ಹೊರತು ಸಮಕಾಲೀನ ಸಂದರ್ಭಕ್ಕೆ ಸ್ತ್ರೀಯರು ಹೇಗೆ ಸ್ಪಂದಿಸಬೇಕು? ಅವರ ಸಮಸ್ಯೆಗಳೇನು? ಮೊದಲಾದ ಪ್ರಗತಿಪರ ಧೋರಣೆಗಳಾಗಲಿ, ಚಿಂತನೆಗಳಾಗಲಿ ಮೂಡಿಬರುತ್ತಿಲ್ಲ. ಉದಾಹರಣೆಗೆ ಇತ್ತೀಚೆಗೆ ಬಿಡುಗಡೆಯಾಗಿ ತೆರೆ ಕಂಡ 'ತವರಿಗೆ ಬಾ ತಂಗಿ' ಎಂಬ ಚಲನಚಿತ್ರದಲ್ಲಿ ಹೆಣ್ಣಿನ ಶೀಲದ ಬಗ್ಗೆ ಅಪನಂಬಿಕೆ ವ್ಯಕ್ತಪಡಿಸಿದ ಪತಿ, ಅವನ ಕುಟುಂಬದಿಂದ ಮಹಿಳೆ ಶೋಷಣೆ ಚಿತ್ರಹಿಂಸೆಗಳಿಗೆ ಒಳಗಾಗಿ, ಕೊನೆಗೆ ಆಕೆಗೆ ಸಾವೇ ಅಂತಿಮ ದಾರಿ ಎಂದು ಕಂಡುಕೊಳ್ಳುತ್ತಾಳೆ. ಇಂದು ಡಿ.ಎನ್.ಎ. ಪರೀಕ್ಷೆಗಳಂಥವು ಇರುವಾಗ ಏಕೆ ಹೆಣ್ಣಿನ ಸಾವನ್ನು ಚಿತ್ರಿಸಬೇಕು? ಎಂದು ವಿಚಾರಿಸಬಹುದು. ಅತ್ಯಾಚಾರ, ಪಾತಿವ್ರತ್ಯ ಮೊದಲಾದವುಗಳನ್ನು ಚಿತ್ರಿಸಿ, ಹೆಣ್ಣು ಅಂಥವುಗಳು ಅಕಸ್ಮಾತ್ ಸಂಭವಿಸಿದ್ದರೆ ಆಕೆಗೆ 'ಮೃತ್ಯು' ಒಂದೇ ಪರಿಹಾರ ಎನ್ನುವ ಬದಲಾಗಿ ಆಕೆಗೂ ಬದುಕಲು ಸಾಧ್ಯತೆಗಳಿವೆ ಎಂಬಂಥ ಚಿತ್ರಗಳು ಮೂಡಿಬರಬೇಕಾಗಿದೆ. ಇದಕ್ಕೆ ವ್ಯತಿರಿಕ್ತವಾಗಿ 'ಆಧುನಿಕತೆ' ಎಂಬ ನೆಪದಲ್ಲಿ, ಸ್ತ್ರೀ ಸ್ವಾತಂತ್ರ್ಯ ಕುರಿತಂತೆ ಹೆಣ್ಣನ್ನು ಮತ್ತಷ್ಟು ಭಿನ್ನವಾಗಿ ಚಿತ್ರಿಸಲಾಗುತ್ತಿದೆ. ಆಧುನಿಕತೆ, ಸ್ವಾತಂತ್ರ್ಯ ಎಂದರೆ ಜೀನ್ಸ್ ಪ್ಯಾಂಟ್, ಎತ್ತರವಾದ ಚಪ್ಪಲಿಗಳು, ಅರೆಬೆತ್ತಲೆ ಉಡುಗೆ-ತೊಡುಗೆ, ಪುರುಷದ್ವೇಷಿ ಎಂಬಂತೆ ಚಿತ್ರಿಸಲಾಗುತ್ತಿದೆ. ಇಂಥವುಗಳಿಂದ ಹೆಣ್ಣು ಯಾವುದನ್ನು ಅನುಸರಿಸಬೇಕು ಎಂಬ ಚಿಂತನೆಯಲ್ಲಿದ್ದಾಳೆ. ಇದಕ್ಕೆ ಅಪವಾದವಾಗಿ 'ಮುದುಡಿದ ತಾವರೆ ಅರಳಿತು' ಎಂಬ ಚಿತ್ರವನ್ನು ಗಮನಿಸಬೇಕು.

ದೂರದರ್ಶನದಲ್ಲಿ ಪ್ರಸಾರವಾಗುತ್ತಿರುವ ಧಾರವಾಹಿಗಳಾದ ಪುಣ್ಯ, ಕವಲುದಾರಿ, ಕಾವ್ಯಾಂಜಲಿ, ಚಂದ್ರಿಕಾ, ಸುಮತಿ ಮೊದಲಾದವು 'ಹೆಣ್ಣಿಗೆ ಹೆಣ್ಣೇ ಶತ್ರು' ಎನ್ನುವಂತೆ, ಬಹುಪತ್ನಿತ್ವ, ವಿಧವಾ ಆಚರಣೆ, ಅನೈತಿಕ ಸಂಬಂಧ, ಹೆಣ್ಣಿನ ಪಾವಿತ್ರ್ಯತೆ ಮೊದಲಾಗಿ ಹೆಣ್ಣಿನ ಸುತ್ತ ಹೆಣೆದುಕೊಂಡಿವೆ. ಇವುಗಳು ಆರಂಭದಲ್ಲಿ ಸ್ತ್ರೀಪರ ಇರುತ್ತವೆ ಎಂದು ಕಂಡುಬಂದರೂ ಕೊನೆಗೊಳ್ಳುವುದು ಪುರುಷಪ್ರಧಾನ ಆಲೋಚನೆಯಲ್ಲಿ. ಅಲ್ಲದೆ ಪ್ರತಿಗಾಮಿ ಸಂಸ್ಕೃತಿ, ಆಚಾರ-ವಿಚಾರ ಆಚಾರಣೆಗಳೇ ಮೂಡಿಬರುತ್ತಿವೆ. ಸಮಕಾಲೀನ ಸಂದರ್ಭಕ್ಕೆ ಹೆಣ್ಣಿನ ಬದುಕು ಹೇಗೆ ಸ್ಪಂದಿಸಬೇಕು? ಸಮಸ್ಯೆಗಳೇನು? ಅವುಗಳಿಗೆ ಪರಿಹಾರ ಹೇಗೆ? ಎಂದು ತಿಳಿಸುವ ಅಗತ್ಯ ಜರೂರಿನದಾಗಿದೆ.

## ೧೯. ಬಡತನ

ಬಡತನ ನಿವಾರಣೆಗೆಂದು ಹತ್ತಾರು ಯೋಜನೆಗಳಿವೆ. ಆದರೆ ಅವುಗಳು ಯಾವ ಸಫಲತೆ ಹೊಂದಿಲ್ಲ. ಸ್ತ್ರೀವಾದದ ವಿಚಾರಗಳು ವ್ಯಾಪಕವಾಗಿವೆ ನಿಜ. ಆದರೆ ಬಹುತೇಕ ಗ್ರಾಮಗಳಲ್ಲಿ, ನಗರಗಳಲ್ಲಿನ ಮಹಿಳೆಯರು ದಿನನಿತ್ಯದ ಜೀವನಕ್ಕಾಗಿ ಕೆಲಸ-ಕಾರ್ಯಗಳಿಗೆ ಹೋಗುತ್ತಾರೆ. ದಣಿದು ಮನೆಗೆ ಬಂದು, ಮತ್ತೆ ನಾಳೇ ಏನೂ ಎಂಬ ಚಿಂತೆಯಲ್ಲಿ ಇರುತ್ತಾರೆ. ಅಂಥವರಿಗೆ ಸ್ತ್ರೀ ಸಂಘಟನೆ, ಹೋರಾಟ ಮೊದಲಾದವು ಅನ್ವಯಿಸಲು ಸಾಧ್ಯವಿಲ್ಲ. "ಕೂಲಿ-ನಾಲಿ ಮಾಡಿದರೆ ನಾಲ್ಕು ಕಾಸು ಸಿಗುವುದು. ಸಂಘಟನೆಯ ಹೋರಾಟಗಳಿಗೆ ಹೋದರೆ, ನಮಗೇನು ಊಟ. ಸಂಸಾರಕ್ಕೆ ಹಣ ಸಿಗುವುದಿಲ್ಲ" ಎಂಬ ನಿಲುವು ಉಳ್ಳವರಾಗಿದ್ದಾರೆ. ಹಾಗಾಗಿ ಅಂಥವುಗಳಿಂದ ದೂರವಿರುತ್ತಾರೆ. ಗ್ರಾಮೀಣ ಭಾಗದಲ್ಲಿ ಎನ್.ಜಿ.ಓ.ಗಳು ಕಾರ್ಯನಿರ್ವಹಿಸುತ್ತವೆ ಎಂದಾದರೂ ಅವುಗಳಿಗೆ ಅತಿಯಾದ ಅಧಿಕಾರವಿಲ್ಲ ಜೊತೆಗೆ ನಿರ್ದಿಷ್ಟ ಕಾಲದ ಮಿತಿಯನ್ನು ಹೇರಲಾಗಿರುತ್ತದೆ. ಆ ಯೋಜನೆಗಳ ಕಾಲಾವಧಿಯು ಮುಗಿದ ನಂತರ ಅವುಗಳು ಮತ್ತೆ ಸ್ಥಗಿತವಾಗುತ್ತವೆ. ಅಲ್ಲದೆ ಗ್ರಾಮೀಣ ಭಾಗದವರಿಗೆ ಅವರ ಭಾಷೆಯಲ್ಲಿಯೇ ಸ್ತ್ರೀವಾದಿ ಪರಿಕಲ್ಪನೆಗಳನ್ನು ಕುರಿತಂತೆ ತಿಳಿಸಬೇಕಾಗಿದೆ. ಆದರೆ ಸರಿಯಾದ ಸಂವಹನವಾಗದೆ ಅವರಿಗೆ ಹೇಗೆ ಸ್ತ್ರೀವಾದಿ ಚಿಂತನೆಗಳನ್ನು ತಿಳಿಸಬೇಕು? ಸ್ತ್ರೀಪರ ಚಿಂತನೆ-ಹೋರಾಟಗಳಲ್ಲಿ ಹೇಗೆ ಅವರನ್ನು ತೊಡಗಿಸಬೇಕು? ಎಂಬುವುಗಳು ಸಹ ಸಮಕಾಲೀನ ಸವಾಲುಗಳೇ ಆಗಿವೆ.

## ೨೦. ಅಜ್ಞಾನ - ಮೂಢನಂಬಿಕೆ - ಮಾಟ - ಮಂತ್ರ

ಇಪ್ಪತ್ತೊಂದನೆಯ ಶತಮಾನದಲ್ಲಿ ಇದ್ದೇವೆ ಎಂದರೂ ಅಜ್ಞಾನದಿಂದಾಗಿ ಅರ್ಥಹೀನ ಆಚರಣೆಗಳನ್ನು ಬಿಟ್ಟಿಲ್ಲ. ಅಲ್ಲದೆ ಅನೇಕ ಮೂಢನಂಬಿಕೆಗಳಿಗೆ ಬಲಿಯಾಗುತ್ತಿರುವವರು ಮಹಿಳೆಯರೇ. ಉದಾಹರಣೆಗೆ ಸತಿ, ದೇವದಾಸಿ, ಬೆತ್ತಲೆಸೇವೆ, ಮೈಯಲ್ಲಿ ದೇವರು ಬರುವುದು, ಮಾಟ-ಮಂತ್ರಗಳು ಇನ್ನೂ ವ್ಯಾಪಕವಾಗುತ್ತಿವೆ. ಇವೆಲ್ಲಾ ಇಂದಿನ ಸವಾಲುಗಳಾಗಿವೆ.

## ೨೧. ಮಹಿಳಾ ಮೀಸಲಾತಿ

ಲೋಕಸಭೆ, ವಿಧಾನಸಭೆಗಳಲ್ಲಿ ಮಹಿಳೆಯರಿಗೆ ಶೇಕಡ ೩೩ರಷ್ಟು ಮೀಸಲಾತಿ ನೀಡಬೇಕೆ? ಬೇಡವೆ? ಎನ್ನುವುದು ಚರ್ಚೆಗೆ ಒಳಗಾಗಿದೆ. ಜೊತೆಗೆ ಮೀಸಲಾತಿ ಕುರಿತಂತೆ ಪರ-ವಿರೋಧ ಅಭಿಪ್ರಾಯಗಳು ವ್ಯಕ್ತವಾಗಿರುತ್ತವೆ. ಒಂದು ಅಭಿಪ್ರಾಯದಂತೆ ಮಹಿಳಾ ಮೀಸಲಾತಿ ಜಾರಿಗೆ ಬಂದರೆ ಅದರ ಲಾಭ ಬಿ.ಜೆ.ಪಿ. ಪಕ್ಷಕ್ಕೆ ಹೋಗುತ್ತದೆ ಎನ್ನುವ ಅಭಿಪ್ರಾಯವೂ ಸಹ ಉಂಟು. ಲೋಕಸಭೆ ಹಾಗೂ ವಿಧಾನಸಭೆಯ ಸ್ಥಾನಗಳಲ್ಲಿ ಅಷ್ಟೊಂದು ಸ್ಥಾನಗಳು ಮಹಿಳೆಯರನ್ನು ತುಂಬಿದರೆ ಅನೇಕ ಹಾಲಿ ಸದಸ್ಯರು ತಮ್ಮ ಮತಕ್ಷೇತ್ರಗಳನ್ನು ಕಳೆದುಕೊಳ್ಳುತ್ತಾರೆ ಎಂಬ ಭೀತಿಯು ಉಂಟು. ಕೆಲವು ಕ್ಷೇತ್ರಗಳನ್ನು ಮಹಿಳೆಯರಿಗೆ ಎಂದು ಮೀಸಲಾಗಿಟ್ಟರೆ ಅಂಥ ಕ್ಷೇತ್ರಗಳಲ್ಲಿ ತಮಗೆ ಆಗದ ವ್ಯಕ್ತಿಗಳನ್ನು ನಿಲ್ಲಿಸದಂತೆ ಉಪಯೋಗಿಸಿಕೊಳ್ಳಲು ಸಹಾಯಕ ಎಂಬ ಮಾತುಗಳಿವೆ. ಅಲ್ಲದೆ ಮಹಿಳೆಯರಿಗೆ ರಾಜಕೀಯ ಜ್ಞಾನ ಅಷ್ಟಾಗಿ ಇರುವುದಿಲ್ಲ. ಅಂಥವರು ೧/೩ ರಷ್ಟು ಸಂಖ್ಯೆಯಲ್ಲಿ ಲೋಕಸಭೆ-ವಿಧಾನಸಭೆಗೆ ಕಾಲಿರಿಸಿದರೆ ಅನಾಹುತಗಳಾಗುತ್ತವೆ ಎಂಬ ಅಭಿಪ್ರಾಯವೂ ಇದೆ. ಮತ್ತೆ ಕೆಲವರು ಮಹಿಳೆಯರಿಗೆ ಮೀಸಲಾತಿ ನೀಡಿದರೆ ಮೇಲ್ವರ್ಗದ ಈಗಾಗಲೇ ರಾಜಕಾರಣಿಗಳೇ

ಹೆಸರಾದವರ ಹೆಂಡತಿ, ಮಗಳು, ಸೊಸೆಯರು ಪ್ರವೇಶ ಪಡೆಯುತ್ತಾರೆ ಎನ್ನಲಾಗಿದೆ. ಮಹಿಳಾ ಮೀಸಲಾತಿ ಬಂದಿದ್ದೇ ಆದರೆ ಅದನ್ನು ಮಹಿಳೆಯರ ಶೋಷಣೆಯನ್ನು ನಿಲ್ಲಿಸುವಂತಹ ಅಸ್ತ್ರವನ್ನಾಗಿ ಬಳಸಬಹುದಾಗಿದೆ. ಮೀಸಲಾತಿ ವಿಚಾರ ಮಹಿಳೆಯರಲ್ಲಿನ ಐಕ್ಯತೆಯನ್ನು ಒಡೆದು ಮಹಿಳಾ ಹೋರಾಟಗಳಿಗೆ ಪೆಟ್ಟು ನೀಡಬಹುದು. ಮೀಸಲಾತಿ ಕೆಳವರ್ಗದ ಮಹಿಳೆಯರಿಗೆ ಎಷ್ಟರಮಟ್ಟಿಗೆ ಉಪಯೋಗ? ಎನ್ನುವ ಪ್ರಶ್ನೆಯೂ ಉಂಟು. ಒಟ್ಟಿನಲ್ಲಿ ಮೀಸಲಾತಿಯನ್ನು ಕುರಿತಂತೆ ಚರ್ಚಿಸುವಂಥ ಅಭಿಪ್ರಾಯಗಳು ಹಲವು. ಒಟ್ಟಾರೆ ಅಧಿಕಾರವಹಿಸಿಕೊಳ್ಳುವಂಥ ಸ್ತ್ರೀಯರು ಮಹಿಳೆಯರ ಅಭಿವೃದ್ಧಿಗೆ ಮಹಿಳಾ ಪರ ಚಿಂತಿಸುವವರು ಅಧಿಕಾರಕ್ಕೆ ಬರಬೇಕಾಗಿದೆ. ಮಹಿಳಾ ಮೀಸಲಾತಿಯು ಸಾಕಷ್ಟು ಚರ್ಚೆಯಾಗುತ್ತಿದ್ದು, ಅದು ಮಹಿಳೆಯರನ್ನು ಕುರಿತಂತೆ ಸಮಕಾಲೀನ ಸಮಾಜ ತಳೆದಿರುವ ಮಹಿಳಾ ಪರ-ವಿರೋಧದ ಅಭಿಪ್ರಾಯಗಳನ್ನು ತಿಳಿಸುತ್ತದೆ. ಇಂಥ ಮೀಸಲಾತಿಗಳು ಸಹ ಸಮಕಾಲೀನ ಸವಾಲುಗಳಾಗಿವೆ.

### ೨೨. ವೇಶ್ಯಾವಾಟಿಕೆ

ಹತ್ತು ಹಲವು ಕಾರಣಗಳಿಂದ ವೇಶ್ಯೆಯರು ವ್ಯಾಪಕವಾಗುತ್ತಿದ್ದಾರೆ. ಅದರಲ್ಲೂ ಬಾಲ್ಯ ವೇಶ್ಯೆಯರ ಸಂಖ್ಯೆ ಜಾಸ್ತಿಯಾಗುತ್ತಿದೆ. ಜಾಗತೀಕರಣ, ಬಂಡವಾಳಶಾಹಿತ್ವಗಳಿಂದ ಸರಕಾರದ ಪ್ರವಾಸೋದ್ಯಮ ನೀತಿಗಳಿಂದಲೂ, ಹೆದ್ದಾರಿಯ ಬಳಿ ನಿರ್ಮಾಣವಾಗುವ ಡಾಬಾಗಳಿಂದಲೂ ವೇಶ್ಯೆಯರು ಹೆಚ್ಚಾಗುತ್ತಿದ್ದಾರೆ. ಇವರು 'ವೇಶ್ಯೆ' ಎಂದು ಕರೆದುಕೊಳ್ಳದೆ, 'ಲೈಂಗಿಕ' ಕಾರ್ಯಕರ್ತೆಯರು ಎಂಬ ಪದದಿಂದ ಕರೆದುಕೊಳ್ಳುತ್ತಿದ್ದಾರೆ. ಸರಕಾರವು ವೇಶ್ಯೆವಾಟಿಕೆಗಳಿಗೆ ಪರೋಕ್ಷವಾಗಿ ಪ್ರೋತ್ಸಾಹಿಸುತ್ತಿದೆ.

ಕೆಲವು ಊರುಗಳಿಂದ ಮಹಿಳೆಯರನ್ನು ಕೆಲಸಕ್ಕೆಂದು ಕರೆದುಕೊಂಡು ಬಂದು ಅವರನ್ನು ವೇಶ್ಯಾವಾಟಿಕೆಗಳಿಗೆ ದೂಡಲಾಗುತ್ತಿದೆ. ಬೆಳಗಾಂ, ಧಾರವಾಡ ಜಿಲ್ಲೆಗಳಲ್ಲಿ 'ಗುಜ್ಜರಿ' ಪದ್ಧತಿ ಎಂಬುದು ರೂಢಿಯಲ್ಲಿದೆ. ಈ ಪದ್ಧತಿಯನ್ವಯ ಗುಜರಾತಿ, ಮಾರವಾಡಿ ಕಡೆಯ ಜೈನರು ಈ ಭಾಗದ ಹಳ್ಳಿಗಳಿಗೆ ಬಂದು ಹೆಣ್ಣುಮಕ್ಕಳನ್ನು ಒಪ್ಪಿ ಮದುವೆ ಮಾಡಿಕೊಂಡು ಹೋಗಿ, ಆ ಮಹಿಳೆಯರನ್ನು ಮುಂಬಯಿಯಂಥ ನಗರಗಳಲ್ಲಿ ವೇಶ್ಯಾವಾಟಿಕೆಗೆ ಬಳಸಿಕೊಳ್ಳುತ್ತಿದ್ದಾರೆ. ಇವೆಲ್ಲವೂ ಸಮಕಾಲೀನ ಸವಾಲುಗಳೆ.

### ಅಡಿಟಿಪ್ಪಣಿಗಳು

೧. ಮಹಿಳಾ ವಿಜಯ ಪತ್ರಿಕೆ
೨. ಅದೇ
೩. ಕರ್ನಾಟಕ ರಾಜ್ಯ ಗ್ಯಾಜೆಟಿಯರ್, ಭಾಗ-೨
೪. ಗೈಲ್ ಒಮ್ ವೆಡ್ಟ್, **Reinventing Revolution**, ಪು. ೭೬-೭೭
೫. ಪ್ರೀತಿ ಶುಭಚಂದ್ರ, ಮಹಿಳಾ ಅಧ್ಯಯನ ತಾತ್ವಿಕ ನೆಲೆಗಳು ಮತ್ತು ಮಹಿಳಾ ಚಳುವಳಿಗಳು, ಪು.
೬. ಅಖಿಲಭಾರತದ ಎಂ.ಎಸ್.ಎಸ್.ನ ಸ್ತ್ರೀಮುಕ್ತಿ ಪತ್ರಿಕೆ (ಡಿಸೆಂಬರ್ ೯೯)
೭. ಪ್ರಜಾವಾಣಿ ಪತ್ರಿಕೆ, ೨೦೦೨
೮. ಉದಯ ಸುದ್ದಿ ವಾರ್ತೆಗಳು, ೨೦೦೩
೯. ಅಚಲ ಪತ್ರಿಕೆ
೧೦. ಅಚಲ ಪತ್ರಿಕೆ, ಏಪ್ರಿಲ್ ೨೦೦೩
೧೧. Times of India Editiorial, June ೧೯೮೨
೧೨. ಗಾಯಿತ್ರಿ ಎನ್, ಮಹಿಳೆ ಬಿಡುಗಡೆಯ ಹಾದಿಯಲ್ಲಿ, ಪು. ೧೦೬
೧೩. ಚಂದ್ರಶೇಖರ ಪಾಟೀಲ, ಸಂಕ್ರಮಣ, ಗ್ರೀಷ್ಮ ಸಂಚಿಕೆ, ಸಂಚಿಕೆ - ೩

ಅಧ್ಯಾಯ - ೭

# ತಳೆದ ನಿಲುವುಗಳು

ಮಾತೃಪ್ರಧಾನ ಕುಟುಂಬಗಳು ಕಣ್ಮರೆಯಾಗಿ ಪಿತೃಪ್ರಧಾನ ಕುಟುಂಬಗಳು ಅಸ್ತಿತ್ವಕ್ಕೆ ಬಂದಾಗಿನಿಂದಲೇ ಹೆಣ್ಣಿನ ಶೋಷಣೆಯೂ ಆರಂಭವಾಯಿತು. ಅಂದಿನಿಂದ ಅದು ಬೇರೆ ಬೇರೆ ಕಾಲಘಟ್ಟಗಳಲ್ಲಿ ಹಲವು ಬಗೆಯ ರೂಪಗಳಲ್ಲಿ ಕಾಣಿಸಿಕೊಂಡು ಹೆಣ್ಣನ್ನು ಶೋಷಣೆಗೆ ಒಳಗು ಮಾಡಿತು. ಹೀಗೆ ಶೋಷಣೆ-ದಬ್ಬಾಳಿಕೆಗೆ ಒಳಗಾದ ಮಹಿಳೆಯು ತನ್ನದೆ ಆದ ನೆಲೆಗಳಲ್ಲಿ ಪ್ರತಿಕ್ರಿಯಿಸಿದ್ದಾಳೆ. ಆದರೆ ಅಂಥ ಪ್ರತಿಕ್ರಿಯೆಗಳು ಕತ್ತಲಲ್ಲಿಯೇ ಉಳಿದಿವೆ. ಹೆಣ್ಣು ತಾನು ಒಳಗಾದ ಶೋಷಣೆ, ಅದರ ರೂಪ ಮೊದಲಾದವುಗಳನ್ನು ಹೇಳಿಕೊಳ್ಳುವ ವೇದಿಕೆಯಾಗಿ 'ಸ್ತ್ರೀವಾದ' ಹುಟ್ಟಿಕೊಂಡಿದೆ. ಸ್ತ್ರೀವಾದವು ಶೋಷಣೆಗೆ ಒಳಗಾಗಿ ಶಕ್ತಿಯನ್ನು ಕಳೆದುಕೊಂಡು, ಕಿವುಡರಾಗಿ, ಮೂಕರಾಗಿ ಇರುವವರಿಗೆ ಹುರುಪನ್ನು ತುಂಬಿ ಅವರನ್ನು ಎಲ್ಲರಂತೆ ಜೀವಿಸುವುದಕ್ಕೆ ಮಾರ್ಗದರ್ಶನ ನೀಡುತ್ತಿದೆ. ಅಲ್ಲದೆ ಸಮಾಜದಲ್ಲಿನ ಲಿಂಗಾಧಾರಿತ ಅಸಮಾನತೆಯನ್ನು ಕಂಡುಕೊಂಡು ಸಮಾಜದ ವಿವಿಧ ಕ್ಷೇತ್ರಗಳಲ್ಲಿ ಸ್ತ್ರೀಯರು ಎದುರಿಸುತ್ತಿರುವ ತಾರತಮ್ಯದ ಧೋರಣೆ-ದೌರ್ಜನ್ಯ-ಶೋಷಣೆಗಳನ್ನು ಗುರುತಿಸುತ್ತಾ ಈ ಪ್ರವೃತ್ತಿಗಳನ್ನು ನಿವಾರಣೆ ಮಾಡಲು ನಡೆಸುವ ಪ್ರಜ್ಞಾಪೂರ್ವಕವಾದ ಪ್ರಮಾಣಿಕ ಪ್ರಯತ್ನವನ್ನು ಈ ಸ್ತ್ರೀವಾದ ಮಾಡುತ್ತಿದೆ. ಸ್ತ್ರೀವಾದವು ಒಂದೆಡೆ ವಿಚಾರಧಾರೆಯೂ ಹೌದು, ಇನ್ನೊಂದೆಡೆ ಸಾಮಾಜಿಕ ಚಳವಳಿಯು ಹೌದು. ಸ್ತ್ರೀ ಪರವಾದ ವಿಚಾರಗಳ ಬಗ್ಗೆ ಕಾಳಜಿ ಹೊಂದಿದ್ದು ಪ್ರತಿಸ್ಪಂದಿಸುವವರನ್ನು, ಆ ನಿಟ್ಟಿನಲ್ಲಿ ಕ್ರಿಯಾಶೀಲರಾಗುವವರನ್ನು 'ಸ್ತ್ರೀವಾದಿ'ಗಳೆಂದು ತಿಳಿಯಬಹುದು. ಈ ಅರ್ಥದಲ್ಲಿ ಪುರುಷರು ಸ್ತ್ರೀವಾದಿಗಳಾಗಬಹುದು. ಅಂತೆಯೆ ಸ್ತ್ರೀಪರವಾದ ಆಲೋಚನೆ ಇರದ ಸ್ತ್ರೀಯರು ಸ್ತ್ರೀವಾದಿಗಳಾಗಿ ಇರಲು ಸಾಧ್ಯವಿಲ್ಲ.

